# ಅಸಂಘಟಿತ ವಲಯದಲ್ಲಿ ಮಹಿಳೆಯ ದುಡಿಮೆ ಮತ್ತು ಆರ್ಥಿಕತೆಯ ಸ್ವರೂಪ

(ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಹಾಗೂ ಕಟ್ಟಡ
ನಿರ್ಮಾಣ ಕಾರ್ಮಿಕರನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ. ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗಕ್ಕೆ
ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕ

ಹುಲಗಪ್ಪ ಎಚ್.



391 - 395



ಮಾರ್ಗದರ್ಶಕರು

ಡಾ. ಎಚ್. ಎಸ್. ಶ್ರೀಮತಿ

ಪ್ರಾಧ್ಯಾಪಕರು





ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೦



395

# ಅಸಂಘಟಿತ ವಲಯದಲ್ಲಿ ಮಹಿಳೆಯ ದುಡಿಮೆ ಮತ್ತು ಆರ್ಥಿಕತೆಯ ಸ್ವರೂಪ

## (ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಹಾಗೂ ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಅನುಲಕ್ಷಿಸಿ)

**(ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ.ಪದವಿಗಾಗಿ ಮಹಿಳಾ ಅಧ್ಯಯನ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)**

ಸಂಶೋಧಕ
**ಹುಲಗಪ್ಪ ಎಚ್.**

ಮಾರ್ಗದರ್ಶಕರು
**ಡಾ.ಎಚ್.ಎಸ್.ಶ್ರೀಮತಿ**
ಪ್ರಾಧ್ಯಾಪಕರು



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

# ಪ್ರಮಾಣ ಪತ್ರ

**ಅಸಂಘಟಿತ ವಲಯದಲ್ಲಿ ಮಹಿಳೆ ದುಡಿಮೆ ಮತ್ತು ಆರ್ಥಿಕತೆಯ ಸ್ವರೂಪ** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಡಾ.ಎಚ್.ಎಸ್.ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರು ವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಹುಲಗಪ್ಪ ಎಚ್.
ಸಂಶೋಧಕ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 1/05/10

## ದೃಢೀಕರಣ ಪತ್ರ

ಶ್ರೀ ಹುಲಗಪ್ಪ ಎಚ್. ಅವರು, ಅಸಂಘಟಿತ ವಲಯದಲ್ಲಿ ಮಹಿಳೆ ದುಡಿಮೆ ಮತ್ತು ಆರ್ಥಿಕತೆಯ ಸ್ವರೂಪ ಎಂಬ ಶೀರ್ಷಿಕೆಯ ಸಂಶೋಧನ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಚ್.ಎಸ್.ಶ್ರೀಮತಿ
ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ :
ದಿನಾಂಕ : ೧, ಮೇ, ೨೦೧೦

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ.ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಅವರಿಗೆ, ಈಗಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರಿಗೆ ಹಾಗೂ ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ.ವೀರೇಶ ಬಡಿಗೇರ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಭಾಷಾ ನಿಕಾಯದ ಡೀನರು, ಅಧ್ಯಯನಕ್ಕೆ ಸಲಹೆ, ಸೂಚನೆಗಳನ್ನು ನೀಡಿದ ಮೇಷ್ಟ್ರು ಪ್ರೊ.ರಮಹತ್ ತರೀಕೆರೆ ಅವರಿಗೆ, ಪ್ರೀತಿಯಿಂದ ಮಾರ್ಗದರ್ಶನ ಮಾಡಿದ ಡಾ.ಎಚ್.ಎಸ್.ಶ್ರೀಮತಿ ಅವರಿಗೆ, ವಿಭಾಗದ ಮುಖ್ಯಸ್ಥರಾದ ಡಾ.ಶಿವಾನಂದ ಎಸ್.ವಿರಕ್ತಮಠ ಅವರಿಗೆ, ಅಧ್ಯಯನದ ಕಾಲಕ್ಕೆ ಚರ್ಚೆಗೆ ಸಹಕರಿಸಿ ಮುಗೀತಾ ಪಿಎಚ್.ಡಿ ಎನ್ನುತ್ತಿದ್ದ ಡಾ.ಶೈಲಜಾ ಇಂ.ಹಿರೇಮಠ ಅವರಿಗೆ ಮತ್ತು ವಿಭಾಗದ ಆಡಳಿತ ಸಿಬ್ಬಂದಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಸಮಯದಲ್ಲಿ ಚರ್ಚೆಗೆ ಸಹಕರಿಸಿದ ಹಿರಿಯ ಪ್ರಾಧ್ಯಾಪಕರಾದ ಡಾ.ಕೆ.ವಿ.ನಾರಾಯಣ ಅವರಿಗೆ, ಗುಲಬರ್ಗಾ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ಪ್ರಾಧ್ಯಾಪಕರಾದ ಡಾ.ಛಾಯಾ ದೇಗೌಂಕರ್ ಅವರಿಗೆ, ಡಾ.ಚಿನ್ನಸ್ವಾಮಿ ಸೋಸಲೆ, ಡಾ.ಚಂದ್ರಪೂಜಾರಿ, ಡಾ.ಟಿ.ಆರ್.ಚಂದ್ರಶೇಖರ, ಡಾ.ಎ.ಶ್ರೀಧರ, ಡಾ.ಕೆ.ಎಂ.ಮೇತ್ರಿ, ಡಾ.ಚಲುವರಾಜು, ಡಾ.ಡಿ.ಪಾಂಡುರಂಗ ಬಾಬು, ಡಾ.ಜೆ.ಕೃಷ್ಣ ಅವರಿಗೆ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ನೀಡಿದ ಮಹನೀಯರುಗಳಾದ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆ ಸಂಸ್ಥೆ, ಬೆಂಗಳೂರು ಇಲ್ಲಿನ ಡಾ.ಎ.ಎಸ್.ಸೀತಾರಾಮ್ ಅವರಿಗೆ, ಸಂಸ್ಥೆಯ ಗ್ರಂಥಪಾಲಕರಿಗೆ, ಗುಲಬರ್ಗಾ ವಿಶ್ವವಿದ್ಯಾಲಯದ ಗ್ರಂಥಪಾಲಕರು ಮತ್ತು ಸಿಬ್ಬಂದಿವರ್ಗದವರಿಗೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದ ಗ್ರಂಥಪಾಲಕರು ಮತ್ತು ಸಿಬ್ಬಂದಿವರ್ಗದವರಿಗೆ ಹಾಗೂ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಆಯುಕ್ತರು, ಸಿಬ್ಬಂದಿ ವರ್ಗದವರಿಗೆ, ಕನ್ನಡ ವಿಶ್ವವಿದ್ಯಾಲಯದ ಅಕ್ಷರ ಗ್ರಂಥಾಲಯ ಮತ್ತು ಸಿರಿಗನ್ನಡ ಗ್ರಂಥಾಲಯದ ಗ್ರಂಥಪಾಲಯಕರಿಗೆ ಮತ್ತು ಸಿಬ್ಬಂದಿರ್ಗದವರಿಗೆ

ಪ್ರಬಂಧ ಸಿದ್ಧತೆಯ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಕಾರ ನೀಡಿದ ಗೆಳೆಯರಾದ ನಾಗೇಂದ್ರಪ್ಪ ಬೊಕಲ್, ಭಾಸ್ಕರ್, ಹುಸೇನಪ್ಪ ಅವರಿಗೆ, ಅಧ್ಯಯನದ ಅವಧಿಯಲ್ಲಿ ಸಲಹೆ ಸೂಚನೆ,

ಚರ್ಚೆಗಳನ್ನು ಮಾಡಿದ ಓ.ದೇವರಾಜ, ಹಣಮಂತರಾಯ ದೊಡ್ಡಮನಿ, ಕೆ.ಓಬಯ್ಯ, ಕುಮಾರ್, ಹುಲಿಯಪ್ಪ ಸಂಡೂರು, ವೀರೇಶ ಜಾನಕಲ್, ಮಾಣಿಕಪ್ಪ, ಧರ್ಮವೀರ ಎಚ್.ಕೆ., ಬಸವರಾಜ ಎ.ಡಿ., ಶ್ರೀದೇವಿ ಆಲೂರು, ಜಯಶ್ರೀ ಮತ್ತು ಜ್ಯೋತಿ, ಸುಕನ್ಯಾ ಅವರಿಗೆ,

ಸ್ವಂತ ಸಹೋದರರಂತೆ ನನ್ನ ವಿದ್ಯಾಭ್ಯಾಸಕ್ಕೆ ಸಹಾಯ ಸಹಕಾರ ಮಾಡಿದ ಗೆಳೆಯ ಡಾ.ಸೋಮಣ್ಣ ಛಲವಾದಿ, ಭಾರತೀಯ ಆಡಳಿತ ಸೇವೆ ಅವರಿಗೆ ಮತ್ತು ಯಶಸ್ಸನ್ನು ಕೋರಿದ ಗೆಳೆಯರಾದ ನಾಗೇಶ ಬಡಿಗೇರ, ನಾಗರಾಜ ಅಳಿಗನೂರು, ಶ್ಯಾಮಪ್ಪ ಮಾದರ್, ನಾಗೇಶ್ ಪೂಜಾರ್, ಕನಕಪ್ಪ ಮಾದರ್ ಹುಸೇನಪ್ಪ ಹಂಚಿನಾಳ, ಸೋದರರಾದ ಉಮೇಶ ಟಿ. ಮತ್ತು ಶಾಮೂರ್ತಿ ಟಿ. ಅವರಿಗೆ,

ನನ್ನ ವಿದ್ಯಾಭ್ಯಾಸಕ್ಕೆ ಸದ ಸಹಕಾರ ನೀಡಿದ ಅಕ್ಕ ಅಮರಮ್ಮ ಅವರಿಗೆ, ಚಿಕ್ಕಮ್ಮನವರಾದ ಕುಸುಮಮ್ಮ ಟಿ., ಚಿಕ್ಕಪ್ಪನವರಾದ ಹುಲಗಪ್ಪ ಟಿ., ಮಾವನವರಾದ ಕಂಟೆಪ್ಪ ಛಲವಾದಿ ಮತ್ತು ಕನಕಪ್ಪ ಛಲವಾದಿ ಅವರಿಗೆ,

ನನ್ನ ಅಧ್ಯಯನ ಮುಗಿಯುವವರೆಗೆ ಮನೆ ಜವಾಬ್ದಾರಿಯನ್ನು ಹೊತ್ತು ತಮ್ಮ ಆಸೆಗಳನ್ನು ತ್ಯಾಗ ಮಾಡಿ ನನ್ನ ಯಶಸ್ಸಿಗೆ ಶ್ರಮಿಸುತ್ತಿರುವ ತಂಗಿ ರೇಣುಕಾ, ತಮ್ಮ ಕನಕಪ್ಪ ಮತ್ತು ಮುದ್ದು ಸೊಸೆ ಶಕುಂತಲಾ ಸಿ.ಅವರಿಗೆ

ನನ್ನ ವ್ಯಾಸಾಂಗಕ್ಕಾಗಿ ತಮ್ಮ ಬದುಕನ್ನೇ ಮೀಸಲಿಟ್ಟ ತಮ್ಮ ಇಳಿ ವಯಸ್ಸಿನಲ್ಲೂ ನನ್ನಿಂದ ಏನನ್ನೂ ನಿರೀಕ್ಷಿಸಿದ ಪೂಜ್ಯ ತಂದೆ ತಾಯಿ ಅವರಿಗೆ,

ಬರವಣಿಗೆಯನ್ನು ಪ್ರೋತ್ಸಾಹಿಸಿ ಕರಡು ತಿದ್ದಿದ ಶ್ರೀ ಸುಜ್ಞಾನಮೂರ್ತಿ ಅವರಿಗೆ, ತಾಳ್ಮೆಯಿಂದ ಅಕ್ಷರ ಸಂಯೋಜನೆ ಮಾಡಿದ ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್‌ನ ಶ್ರೀಮತಿ ರಶ್ಮಿಕೃಪಾಶಂಕರ್ ಅವರಿಗೆ, ಗ್ರಂಥವನ್ನು ಬೈಂಡಿಂಗ್ ಮಾಡಿದ ರಾಜೂ ಗುಲಬರ್ಗಾ ಮತ್ತು ಶ್ರೀ ಮಾಂತೇಶ್ ಬೈಂಡಿಂಗ್ ವರ್ಕ್ಸ್, ಧಾರವಾಡ ಅವರಿಗೆ,

*ಕೃತಜ್ಞತೆಗಳು*

**ಹುಲಗಪ್ಪ ಎಚ್.**

# ಪರಿವಿಡಿ

# ಭಾರತದ ನಕಾಶೆಯಲ್ಲಿ ಕರ್ನಾಟಕ



# ಕರ್ನಾಟಕ ರಾಜ್ಯ



ಬೀದರ್
ಕಲ್ಬುರ್ಗಿ
(ಗುಲಬರ್ಗಾ)
ವಿಜಾಪುರ
(ಬಿಜಾಪುರ)
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಕರ್ನಾಟಕ
ತುಮಕೂರು
ಶಿವಮೊಗ್ಗ
ಚಿತ್ರದುರ್ಗ
ಉಡುಪಿ
ಚಿಕ್ಕಮಗಳೂರು
ತುಮಕೂರು
ಚಿಕ್ಕಬಳ್ಳಾಪುರ
ಗ್ರಾಮಾಂತರ
ಬೆಂಗಳೂರು
ನಗರ
ಕೋಲಾರ
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ

# ಕ್ಷೇತ್ರಕಾರ್ಯ ಅಧ್ಯಯನಕ್ಕೆ ಆಯ್ದು ಕೊಂಡ
# ಜಿಲ್ಲೆ : ಕೊಪ್ಪಳ



## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಿ-ವಿಧಾನಗಳು ಮತ್ತು ಸ್ವರೂಪ

೧.೧ ಪ್ರಸ್ತಾವನೆ

೧.೨ ಇದುವರೆಗೂ ನೆಡೆದ ಅಧ್ಯಯನಗಳು

೧.೩ ಅಧ್ಯಯನದ ಉದ್ದೇಶ

೧.೪ ಅಧ್ಯಯನದ ವ್ಯಾಪ್ತಿ

೧.೫ ಅಧ್ಯಯನದ ವಿದಿ-ವಿಧಾನಗಳು

೧.೬ ಅಧ್ಯಯನದ ಹಂತಗಳು

೧.೭ ಅಧ್ಯಯನದ ಮಹತ್ವ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನಗಳು ಮತ್ತು ಅಧ್ಯಯನದ ಸ್ವರೂಪ

## ೧. ಪ್ರಸ್ತಾವನೆ

ಪ್ರಪಂಚದ ಬಹುತೇಕ ರಾಷ್ಟ್ರಗಳನ್ನು ಗಮನಿಸಿದರೆ ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ಅರ್ಥವ್ಯವಸ್ಥೆಯನ್ನು ಹೊಂದಿರುವುದು ಕಂಡುಬರುತ್ತದೆ. ಯಾವುದೇ ಒಂದು ರಾಷ್ಟ್ರವು ತನ್ನ ಆರ್ಥಿಕ ಚಟುವಟಿಕೆಗಳ ಮುನ್ನಡೆಗೆ ಮತ್ತು ಸರಕು ಸೇವೆಗಳ ಉತ್ಪಾದನೆಗೆ ಕೆಲವು ವಿಧಾನಗಳನ್ನು ಅನುಸರಿಸುತ್ತವೆ. ಈ ವಿಧಾನಗಳನ್ನು ಅರ್ಥವ್ಯವಸ್ಥೆ ಎಂದು ಕರೆಯಲಾಗುತ್ತದೆ. ಈ ಆರ್ಥಿಕ ವ್ಯವಸ್ಥೆಯ ಮುಖ್ಯ ಉದ್ದೇಶ ನೈಸರ್ಗಿಕ ಸಂಪತ್ತನ್ನು ಬಳಸಿಕೊಂಡು ಬಯಕೆಗಳ ಈಡೇರಿಕೆಗೆ ಬೇಕಾದ ಅಗತ್ಯ ವಸ್ತುಗಳನ್ನು ಪೂರೈಸುವುದೇ ಆಗಿರುತ್ತದೆ.

ಪ್ರತಿಯೊಂದು ರಾಷ್ಟ್ರವು ತನ್ನಲ್ಲಿ ಲಭ್ಯವಿರುವ ಮಾನವ ಮತ್ತು ನೈಸರ್ಗಿಕ ಸಂಪತ್ತಿನ ಲಭ್ಯತೆ ಹಾಗೂ ಉತ್ಪಾದನಾ ಒಡೆತನವನ್ನು ಆಧರಿಸಿ ತನ್ನದೇ ಆದ ಅರ್ಥವ್ಯವಸ್ಥೆಯನ್ನು ರಚಿಸಿಕೊಂಡಿದೆ. 'ಒಬ್ಬ ವ್ಯಕ್ತಿ ಅಥವಾ ಹಲವು ವ್ಯಕ್ತಿಗಳು ಬಂಡವಾಳ ತೊಡಗಿಸಿ ಉತ್ಪಾದನಾ ವ್ಯವಸ್ಥೆಯನ್ನು ನಡೆಸುತ್ತಿದ್ದರೆ ಅದನ್ನು 'ಬಂಡವಾಳಶಾಹಿ ಅರ್ಥವ್ಯವಸ್ಥೆ' (ಉದಾಹರಣಗೆ ಅಮೆರಿಕದ ಅರ್ಥವ್ಯವಸ್ಥೆ) ಎಂದು ಹಾಗೂ ಉತ್ಪಾದನಾಂಗಗಳೆಲ್ಲವು ಸರಕಾರದ ಒಡೆತನದಲ್ಲಿದ್ದು ಎಲ್ಲಾ ಆರ್ಥಿಕ ಚಟುವಟಿಕೆಗಳು ಸರಕಾರದ ತೀರ್ಮಾನಕ್ಕೆ ಅನುಸಾರವಾಗಿ ನಡೆಯುತ್ತಿದ್ದರೆ ಅದನ್ನು 'ಸಮಾಜವಾದಿ ಅರ್ಥವ್ಯವಸ್ಥೆ' (ಉದಾಹರಣೆಗೆ ರಷ್ಯಾ ಮತ್ತು ಚೀನಾ ಅರ್ಥವ್ಯವಸ್ಥೆ) ಎಂದು ಹಾಗೂ ಉತ್ಪಾದನಾಂಗಗಳು ಸರಕಾರ ಮತ್ತು ಖಾಸಗಿ ಸಂಸ್ಥೆಗಳ ನಿರ್ದೇಶನದಂತೆ ನಡೆಯುತ್ತಿದ್ದರೆ ಅಂತಹ ಅರ್ಥವ್ಯವಸ್ಥೆಯನ್ನು 'ಮಿಶ್ರ ಅರ್ಥವ್ಯವಸ್ಥೆ' ಎಂದು ಕರೆಯುತ್ತಾರೆ. ಮಿಶ್ರ ಅರ್ಥವ್ಯವಸ್ಥೆಗೆ ಭಾರತ ಅತ್ಯುತ್ತಮ ಉದಾಹರಣೆಯಾಗಿದ್ದು ತನ್ನದೇ ಆದ ಆರ್ಥಿಕ ಸ್ವರೂಪ ಅಥವಾ ಸಂರಚನೆಯನ್ನು ಹೊಂದಿದೆ.

ಪ್ರಪಂಚದ ಅಭಿವೃದ್ಧಿಯ ದರದಲ್ಲಿ ಶೇಕಡ ೭.೭೫ರ ಪ್ರಗತಿಯ ದರವನ್ನು ಸಾಧಿಸಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಪಟ್ಟಿಯಲ್ಲಿ ಅಗ್ರಸ್ಥಾನದಲ್ಲಿರುವ ಭಾರತ ತನ್ನದೇ ಆದ ಆರ್ಥಿಕ

ಸಂರಚನೆಯನ್ನು ಅಥವಾ ಅರ್ಥವ್ಯವಸ್ಥೆಯ ಸ್ವರೂಪವನ್ನು ಹೊಂದಿದೆ. ವಿವಿಧ ವೃತ್ತಿಗಳಲ್ಲಿ ಜನರ ಭಾಗವಹಿಸುವಿಕೆ ಮತ್ತು ಅವರು ಪಡೆಯುವ ಆದಾಯವನ್ನು ಆಧರಿಸಿ ಆರ್ಥಿಕ ಸಂರಚನೆಯನ್ನು ಪ್ರಥಮ ವಲಯ, ದ್ವಿತೀಯ ವಲಯ ಮತ್ತು ತೃತೀಯ ವಲಯವೆಂದು ವಿಂಗಡಿಸಲಾಗಿದೆ. ಕೃಷಿ ಮತ್ತು ಕೃಷಿ ಸಂಬಂಧಿ ಚಟುವಟಿಕೆಗಳಾದ ಪಶು ಸಂಗೋಪನೆ, ಮೀನುಗಾರಿಕೆ, ಅರಣ್ಯೋದ್ಯಮ, ಗಣಿಗಾರಿಕೆ, ಮತ್ತು ಹೈನುಗಾರಿಕೆ ಇತ್ಯಾದಿ ವೃತ್ತಿಗಳನ್ನೊಳಗೊಂಡ ವಲಯವನ್ನು ಪ್ರಥಮ ವಲಯವೆಂದು. ಸಿದ್ಧವಸ್ತುಗಳ ತಯಾರಿಕೆ, ಗೃಹ(ಚಿಕ್ಕ) ಕೈಗಾರಿಕೆ ಮತ್ತು ದೊಡ್ಡ ಕೈಗಾರಿಕೆಗಳನ್ನೊಳಗೊಂಡ ವಲಯಗಳನ್ನು ದ್ವಿತೀಯ ವಲಯವೆಂದು, ಈ ಎರಡು ವಲಯಗಳಿಗೆ ಸಹಾಯಕವಾಗಿ ಕಾರ್ಯ ನಿರ್ವಹಿಸುವ ಬ್ಯಾಂಕಿಂಗ್, ಶಿಕ್ಷಣ, ವೈದ್ಯಕೀಯ, ಸಾರಿಗೆ-ಸಂಪರ್ಕ ರಕ್ಷಣೆ ಮತ್ತು ಆಡಳಿತ ಸೇವೆ ಇತ್ಯಾದಿ ಸೇವೆಗಳನ್ನೊಳಗೊಂಡ ವಲಯಗಳನ್ನು ಸೇವಾವಲಯವೆಂದು ಕರೆಯಲಾಗುತ್ತದೆ. ನಿಸರ್ಗವನ್ನು ಅವಲಂಬಿಸಿದ ಮತ್ತು ಮಾನವನ ಅತೀ ಅವಶ್ಯಕತೆಯನ್ನು ಈಡೇರಿಸುವ ವಸ್ತುಗಳನ್ನು ತಯಾರಿಸುವ ಉತ್ಪಾದನಾ ವಲಯವನ್ನು ಪ್ರಥಮ ವಲಯವೆಂದು ಪರಿಗಣಿಸಲಾಗಿದೆ.[೧]

ಕೂಲಿನ್ ಕ್ಲರ್ಕ್ ಎಂಬ ಅರ್ಥಶಾಸ್ತ್ರಜ್ಞರು ತಮ್ಮ "ಕಂಡಿಷನ್ ಆಪ್ ಎಕಾನಮಿಕ್ ಪ್ರೋಗ್ರೆಸಸ್" ಎಂಬ ಕೃತಿಯಲ್ಲಿ ಆರ್ಥಿಕ ಬೆಳವಣಿಗೆ ಮತ್ತು ವೃತ್ತಿ ಸಂರಚನೆಯ ಸಂಬಂಧವನ್ನು ಸಮರ್ಥಿಸಿದ್ದಾರೆ. "ತೃತೀಯ ವಲಯದ ಉನ್ನತ ಮಟ್ಟದ ವೃತ್ತಿಗಳಲ್ಲಿ ನಿರತರಾಗಿರುವ ಜನರ ಉತ್ಪನ್ನವು ಅಧಿಕವಾಗಿದ್ದು ಅವರ ಸರಾಸರಿ ತಲಾ ನೈಜ ಆದಾಯ ಉನ್ನತ ಮಟ್ಟದಲ್ಲಿರುತ್ತದೆ. ಪ್ರಥಮ ವಲಯದ ಕೆಳ ಮಟ್ಟದ ವೃತ್ತಿಯಲ್ಲಿ ನಿರತರಾದ ಜನರ ಉತ್ಪನ್ನವು ತೃತೀಯ ಮಟ್ಟದಲ್ಲಿ ಮತ್ತು ಪ್ರಾಥಮಿಕ ಉತ್ಪನ್ನಗಳನ್ನು ಉತ್ಪಾದಿಸುವವರ ತಲಾ ನೈಜ ಆದಾಯವು ಕಡಿಮೆ ಇರುತ್ತದೆ" ಎಂಬುದನ್ನು ತಿಳಿಸುತ್ತಾರೆ. ಅಲ್ಲದೆ ಕಡಿಮೆ ಆದಾಯ ಪಡೆಯುವ ಮತ್ತು ಕೆಳ ಮಟ್ಟದ ಉದ್ಯೋಗದಲ್ಲಿ ತೊಡಗಿರುವವರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೨] ಇಂತಹ ವಲಯಗಳಲ್ಲಿ ದುಡಿಯುವ ದುಡಿಮೆಗಾರರು ತಮ್ಮ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಮಾಡಿಕೊಂಡ ಸಂಘಟನೆಯ ಆಧಾರದ ಮೇಲೆ ರಚಿಸಿಕೊಂಡ ಆರ್ಥಿಕ ವಲಯಗಳನ್ನು 'ಸಂಘಟಿತ ವಲಯ' ಮತ್ತು ಅಸಂಘಟಿತ ವಲಯವೆಂದು ಎರಡು ವಿಧದಲ್ಲಿ ವಿಂಗಡಿಸಲಾಗಿದೆ. "ಉದ್ಯೋಗ ಭದ್ರತೆಯನ್ನು ಒದಗಿಸುವ ಮತ್ತು ಸೇವಾ ನಿಯಮಗಳನ್ನು ಪಾಲಿಸುವ ಸರಕಾರ ರೂಪಿಸಿದ ಶಾಸನ ಮತ್ತು ಕಾನೂನು ಚೌಕಟ್ಟಿಗೆ ಒಳಪಡುವ ಉತ್ಪಾದನಾ ಘಟಕಗಳ ಸಂಘಟನೆಯನ್ನು ಸಂಘಟಿತ ವಲಯವೆಂದು, ಇಲ್ಲಿ ದುಡಿಯುವ ದುಡಿಮೆಗಾರರನ್ನು ಸಂಘಟಿತ ವಲಯದ ದುಡಿಮೆಗಾರರು ಎಂದು ಕರೆಯಲಾಗುತ್ತದೆ."[೩] ಈ ಕಾರ್ಮಿಕರು ಕಾಲಕ್ಕೆ ತಕ್ಕಂತೆ ನಿಯಮಿತ ವೇತನ, ಉದ್ಯೋಗಕ್ಕೆ ಸಂಬಂಧಿಸಿದ ಉತ್ತಮ ನಿಯಮ ಮತ್ತು ನಿರ್ಬಂಧನೆಗಳು, ಖಚಿತ ಹಕ್ಕು ಕರಾರುಗಳನ್ನು ಹಾಗೂ ಅನುಕೂಲಕರ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುವವರಾಗಿರು

ತ್ತಾರೆ. ತಮ್ಮ ಹಕ್ಕು ಮತ್ತು ಉದ್ಯೋಗಕ್ಕೆ ಚ್ಯುತಿ ಉಂಟಾದರೆ ಸಂಘಟನೆಯ ಮೂಲಕ ಹೋರಾಟ ಮಾಡಿ ತಮ್ಮ ಹಕ್ಕು ಮತ್ತು ಉದ್ಯೋಗವನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದವರಾಗಿದ್ದಾರೆ.[೪] ಸರಕಾರಿ ನೌಕರರು, ಎಚ್.ಎಂ.ಟಿ. ಬಿ.ಎಚ್.ಎ.ಎಲ್, ಹಿರೋ ಹೊಂಡಾ ಕಂಪನಿ, ಬ್ಯಾಂಕ್, ವಿಮಾ ಸಂಸ್ಥೆ ಮತ್ತು ದೊಡ್ಡ ಕೈಗಾರಿಕೆ ಇತ್ಯಾದಿ ಸಂಸ್ಥೆಗಳಲ್ಲಿ ದುಡಿಯುವ ದುಡಿಮೆಗಾರರು ಸಂಘಟಿತ ವಲಯದ ವ್ಯಾಪ್ತಿಗೆ ಒಳಪಡುವವರಾಗಿದ್ದಾರೆ. ದೇಶದಲ್ಲಿ ಈ ವಲಯದಲ್ಲಿ ದುಡಿಯುವ ದುಡಿಮೆಗಾರರ ಪ್ರಮಾಣ ಶೇಕಡ ೬ರಷ್ಟಿದ್ದು ಉಳಿದ ಶೇಕಡ ೯೪ರಷ್ಟು ಜನರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. “ಉದ್ಯೋಗ ಭದ್ರತೆಯನ್ನು ಒದಗಿಸುವ ಮತ್ತು ಸೇವಾನಿಯಮಗಳನ್ನು ಪಾಲಿಸುವ, ಸರಕಾರ ರೂಪಿಸುವ ಶಾಸನ ಮತ್ತು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ ಹಾಗೂ ಕಾರ್ಮಿಕ ಸಂಘಗಳು ಗೈರುಹಾಜರು ಇರುವ ಉತ್ಪಾದನಾ ಘಟಕವನ್ನು ಅಸಂಘಟಿತ ಅಥವಾ ಅನೌಪಚಾರಿಕ ಘಟಕಗಳೆಂದು ಕರೆಯಲಾಗುತ್ತದೆ.” ಅಂದರೆ ಕಾರ್ಮಿಕ ಸಂಘಟನೆಗಳು ಇಲ್ಲದ ಅಸಂಘಟಿತರಾದ ಕಾರ್ಮಿಕರನ್ನೊಳಗೊಂಡ ಉತ್ಪಾದನಾ ಘಟಕಗಳನ್ನು ಅಸಂಘಟಿತ ವಲಯವೆಂದು ಕರೆಯುತ್ತಾರೆ.[೫] ಕೃಷಿ ಕಾರ್ಮಿಕರು ಚಿಕ್ಕ ಮತ್ತು ಅತೀ ಚಿಕ್ಕ ರೈತರು, ಅರಣ್ಯ ಕಾರ್ಮಿಕರು, ಮೀನುಗಾರರು, ಬೀಡಿ ಕಟ್ಟುವವರು, ಊದುಬತ್ತಿ ತಯಾರಿಸುವವರು, ಗಾರ್ಮೆಂಟ್ ಕೆಲಸಗಾರರು, ನಿರ್ಮಾಣ ಕಾರ್ಮಿಕರು ರದ್ದಿ ಆರಿಸುವವರು ಮೊದಲಾದವರು ಅಸಂಘಟಿತ ವಲಯ ಒಳಗೊಂಡಿರುವ ವೃತ್ತಿಯಲ್ಲಿ ದುಡಿಯುವವರಾಗಿದ್ದಾರೆ. ಇವರು ನಿರ್ದಿಷ್ಟ ಉದ್ಯೋಗವಿಲ್ಲದೆ ಸಾಂದರ್ಭಿಕ(ಕ್ಯಾಸುವೆಲ್) ಕಾರ್ಮಿಕರಾಗಿ, ಗುತ್ತಿಗೆ ಕಾರ್ಮಿಕರಾಗಿ, ವಲಸೆ ಬಂದ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಹಾಗೂ ಈ ವಲಯದಲ್ಲಿರುವ ಬಹುತೇಕ ಮಹಿಳೆಯರು ಗೃಹ ಆಧರಿತ ವೃತ್ತಿ ಸಂಬಂಧಿ ಉದ್ಯೋಗ ಮತ್ತು ಸ್ವಯಂ ಉದ್ಯೋಗ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ.[೬]

ದೇಶದ ಒಟ್ಟು ಜನಸಂಖ್ಯೆಯ ಸರಾಸರಿ ದುಡಿಮೆಗಾರರಲ್ಲಿ ಶೇಕಡ ೯೦ರಷ್ಟು ಜನರು ಅಸಂಘಟಿತವಲಯದಲ್ಲಿ ದುಡಿಯುತ್ತಿದ್ದಾರೆ.ಇವರ ಪ್ರಮಾಣ ದಶಕದಿಂದ ದಶಕಕ್ಕೆ ಹೆಚ್ಚುತ್ತಿದೆ. ೧೯೭೧ರಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರ ಪ್ರಮಾಣ ಶೇಕಡ ೮೯ರಷ್ಟು ೧೯೯೫ರಲ್ಲಿ ಶೇಕಡ ೯೨.೫ರಷ್ಟು ಮತ್ತು ೨೦೦೧ರಲ್ಲಿ ಶೇಕಡ ೯೪ರಷ್ಟು ಜನರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ.[೭] ದೇಶದ ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರಲ್ಲಿ ಶೇಕಡ ೯೬ರಷ್ಟು ಜನರು ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಅನಕ್ಷರಸ್ಥರು, ಅಕುಶಲಿಗಳು, ಕಡಿಮೆ ಸಾಮಾಜಿಕ ಸ್ಥಾನಮಾನ ಹೊಂದಿದವರು ಬಡವರು ಮತ್ತು ಅಸಂಘಟಿತರಾದ ಇವರು ಕಡಿಮೆ ಕೂಲಿಗೆ ತಮ್ಮ ಶ್ರಮವನ್ನು ಮಾರಿಕೊಂಡು ಮಾಲೀಕರು ಅಥವಾ ಉದ್ದಿಮೆದಾರರಿಂದ ನಾನಾ ರೀತಿಯ ಶೋಷಣೆ ಮತ್ತು ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ. ಸರಕಾರ

ಇವರ ರಕ್ಷಣೆಗೆ ಕಾಯ್ದೆ, ಕಾನೂನುಗಳನ್ನು ಜಾರಿಗೆ ತಂದರು ಇವರ ಶೋಷಣೆ ನಿರಂತರವಾಗಿ ನಡೆಯುತ್ತಿದೆ. ಇಂತಹ ಅಸಹಾಯಕ ಶ್ರಮಜೀವಿಗಳ ಸಮಸ್ಯೆಗಳಿಗೆ ಸ್ಪಂದಿಸುವುದು ಅವಶ್ಯವೆನಿಸುತ್ತದೆ. ಆ ಒಂದು ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಅಸಂಘಟಿತ ವಲಯದ ಸ್ವರೂಪವು ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ಸ್ವರೂಪದಲ್ಲಿ ಕಂಡುಬರುತ್ತಿದೆ. ಮುಂದುವರೆದ ರಾಷ್ಟ್ರಗಳಾದ ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್, ಜಪಾನ್ ಮುಂತಾದ ರಾಷ್ಟ್ರಗಳಲ್ಲಿ ಆನ್‌ಡಾಕ್ಯುಮೆಂಟೆಡ್ ವರ್ಕರ್(ದಾಖಲಾತಿ ರಹಿತ ಕೆಲಸಗಾರರು) ಇಮಿಗ್ರೆಂಟ್ಸ್ (ವಲಸಿಗರು), ಗೆಸ್ಟ್‌ವರ್ಕರ್(ಅತಿಥಿ ಕೆಲಸಗಾರರು), ಕಾಂಟ್ರ್ಯಾಕ್ಟರ್ ವರ್ಕರ್ಸ್ (ಗುತ್ತಿಗೆ ಕೆಲಸದವರು) ಮತ್ತು ಟೈಮ್‌ಬಾಂಡ್ ಕೆಲಸಗಾರರು ಎಂದು ವಿವಿಧ ಹೆಸರುಗಳಿಂದ ವಿವಿಧ ಸ್ವರೂಪದಲ್ಲಿ ಕಂಡುಬರುತ್ತಿವೆ.[೮] ಮುಂದುವರೆಯುವ ರಾಷ್ಟ್ರಗಳಲ್ಲಿ ದುಡಿಯುವ ಕಾರ್ಮಿಕರ ವೇತನ ಹೆಚ್ಚುತ್ತಿದೆ. ಆದರು ಇವರಿಗೆ ಕೆಲಸದ ಭದ್ರತೆಯಾಗಲಿ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯದಲ್ಲಿ ಉನ್ನತ ಸ್ಥಾನಮಾನವಾಗಲಿ ಸಿಗುತ್ತಿಲ್ಲ. ಮುಂದುವರೆಯುತ್ತಿರುವ ರಾಷ್ಟ್ರಗಳಿಂದ ಬಂದ ಈ ಕೆಲಸಗಾರರನ್ನು ಎರಡನೆ ದರ್ಜೆಯ ಪ್ರಜೆಯಾಗಿ ಕಾಣಲಾಗುತ್ತಿದೆ. ಅಮೆರಿಕದ ಹೌಸ್ ಆಫ್ ರೆಪ್ರಸೆಂಟೆಟೀವ್ಸ್ ಡಿಸೆಂಬರ್ ೧೬, ೨೦೦೬ರಂದು "ಗಡಿರಕ್ಷಣೆ, ಭಯೋತ್ಪಾದನಾ ನಿಷೇಧ ಮತ್ತು ಕಾನೂನುಬಾಹಿರ ವಲಸೆ ನಿಯಂತ್ರಣ ಆ್ಯಕ್ಟ್ ೨೦೦೫"ನ್ನು ಜಾರಿಗೆ ತಂದಿತು. ಇದರಿಂದ ಅಮೆರಿಕಕ್ಕೆ ವಲಸೆ ಹೋದ ಮೆಕ್ಸಿಕೋ ಮತ್ತು ಸೆಂಟ್ರಲ್ ಅಮೆರಿಕದ ಕಾರ್ಮಿಕರು ತೊಂದರೆ ಅನುಭವಿಸುವಂತಾಯಿತು.[೯] ೨೦೦೮ರ ಅಕ್ಟೋಬರ್ ತಿಂಗಳ ಆರಂಭದಲ್ಲಿ ಸಂಭವಿಸಿದ 'ಆರ್ಥಿಕ ಕುಸಿತ'ದಿಂದ ಮುಂದುವೆರೆದ ರಾಷ್ಟ್ರಗಳಾದ ಅಮೆರಿಕ, ಬ್ರಿಟನ್, ಫ್ರಾನ್ಸ್ ಮತ್ತು ಡೆನ್ಮಾರ್ಕಿನ ಹಣಕಾಸಿನ ಸಂಸ್ಥೆಗಳು ಮತ್ತು ಕಂಪನಿಗಳು ದಿವಾಳಿ ಎದ್ದು ತಮ್ಮಲ್ಲಿ ದುಡಿಯುವ ಕಾರ್ಮಿಕರನ್ನು ಮನೆಗೆ ಕಳುಹಿಸಿದವು. ಇವರಲ್ಲಿ ಎಂಜಿನಿಯರ್‌ಗಳು ಮತ್ತು ಮ್ಯಾನೆಜ್‌ಮೆಂಟ್ ಪದವೀಧರರು ಹೆಚ್ಚಿನ ಸಂಖ್ಯೆಯಲ್ಲಿದ್ದು, ವೈದ್ಯರು ಮತ್ತು ಶಿಕ್ಷಕರು ಕಡಿಮೆ ಸಂಖ್ಯೆಯಲ್ಲಿ ಇರುವುದು ಪತ್ರಿಕೆಯಲ್ಲಿ ಪ್ರಕಟವಾದ ವರದಿಯಿಂದ ಕಂಡುಬಂದಿದೆ. ಒಟ್ಟು ೨,೫೦,೦೦೦ ಉದ್ಯೋಗಿಗಳು ನಿರುದ್ಯೋಗಿಗಳಾಗಿ ತಮ್ಮ ತಾಯ್ನಾಡಿಗೆ ಮರಳಿರುವುದನ್ನು ಗಮನಿಸಿದರೆ ಅಸಂಘಟಿತ ವಲಯದ ಸ್ವರೂಪ ಕಾಲ ಮತ್ತು ದೇಶ ಬದಲಾಗುತ್ತಿರುವುದು ತಿಳಿದುಬರುತ್ತಿದೆ.[೧೦]

ಕೊಲ್ಲಿ ಮತ್ತು ಅರಬ್ ರಾಷ್ಟ್ರಗಳಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವವರು 'ಮನೆಕೆಲಸದ' ಮಹಿಳೆಯರೆ ಆಗಿದ್ದಾರೆ. ಬಡಕುಟುಂಬದ ಮತ್ತು ಅನಕ್ಷರಸ್ಥರಾದ ಇವರು ಭಾರತ, ಶ್ರೀಲಂಕಾ, ಬಾಂಗ್ಲಾದೇಶ, ಇಂಡೋನೇಷ್ಯ ಮತ್ತು ಪಾಕಿಸ್ತಾನ ರಾಷ್ಟ್ರಗಳಿಂದ ವಲಸೆ ಬಂದವರಾಗಿದ್ದಾರೆ.[೧೧] ಕಾನೂನಿನ ರಕ್ಷಣೆ ಇಲ್ಲದೆ ಮನೆಗೆಲಸದ ಆಳುಗಳಾಗಿ ದುಡಿಯುತ್ತಿದ್ದಾರೆ.[೧೨] ಈ ಮಹಿಳೆಯರು ಕಡಿಮೆ ಕೂಲಿ ಮತ್ತು ೮ ಗಂಟೆಗಳಿಗಿಂತಲೂ ಅಧಿಕ ಅವಧಿಯವರೆಗೆ ದುಡಿಯುತ್ತಿದ್ದಾರೆ. ಅಲ್ಲದೆ ಮನೆಯ

ಯಜಮಾನರಿಂದ ದೈಹಿಕ, ಮಾನಸಿಕ ದೌರ್ಜನ್ಯದ ಜೊತೆಗೆ ಲೈಂಗಿಕ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಇವರ ರಕ್ಷಣೆಗೆ ಕಾನೂನುಗಳಿದ್ದರೂ ಇವರ ಮೇಲೆ ನಡೆಯುತ್ತಿರುವ ಶೋಷಣೆ ಕಡಿಮೆಯಾಗುತ್ತಿಲ್ಲ. ಈ ಸಮಸ್ಯೆ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಗಮನಕ್ಕೆ ಬಂದರೂ ಈ ಮಹಿಳೆಯರ ರಕ್ಷಣೆ ಸಾಧ್ಯವಾಗುತ್ತಿಲ್ಲವಾಗಿದೆ.

ಭಾರತದಂತಹ ಸಾಂಪ್ರದಾಯಿಕ ಸಮಾಜದಲ್ಲಿ ಮಹಿಳಾ ಕಾರ್ಮಿಕರನ್ನು ಹೆಚ್ಚು ನಿರ್ಲಕ್ಷಿಸಲಾಗುತ್ತಿದೆ. ಭಾರತವನ್ನು ಒಳಗೊಂಡಂತೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿಯೂ ಸಹ ಮಹಿಳಾ ಕಾರ್ಮಿಕರು ಉದ್ಯೋಗಾವಕಾಶಗಳಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ. ಸಮಾಜ ಜೀವನದ ಆರಂಭದಿಂದಲೂ ಪುರುಷ ರೊಂದಿಗೆ ಅವಳು ದುಡಿಯುತ್ತಿದ್ದರೂ ಅವಳನ್ನು ಸಮಾನವಾಗಿ ಕಾಣಲಾಗುತ್ತಿಲ್ಲ. ಮಾನವ ಸಮಾಜದಲ್ಲಿ ಪ್ರಾರಂಭದಿಂದಲೂ ಪುರುಷ ಮತ್ತು ಮಹಿಳೆಯರ ನಡುವೆ ಮೂಲಭೂತವಾಗಿ ಅಸಮಾನ ಶ್ರಮವಿಭಜನೆ ಏರ್ಪಟ್ಟು ಅವಳ ದುಡಿಮೆಯನ್ನು ಮನೆಯಲ್ಲಿಯೇ ಕುಳಿತು ಮಾಡುವ ಕೆಲಸಗಳಿಗೆ ಸೀಮಿತ ಗೊಳಿಸಲಾಗಿದೆ. ಅಲ್ಲದೆ ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿದ್ದ ಸಂಪ್ರದಾಯ, ರೂಢಿ, ಪದ್ಧತಿ, ಮತ್ತು ಪರಂಪರೆಗಳು ಮಹಿಳೆ ಪುರುಷನ ಅಧೀನಳೆಂಬ ಭಾವನೆಯನ್ನು ಜಾಗೃತಿಗೊಳಿಸಿ ಅವಳ ವ್ಯಕ್ತಿತ್ವದ ಸರ್ವಾಂಗೀಣ ಪ್ರಗತಿಗೆ ಅಡ್ಡಿಯನ್ನು ಉಂಟುಮಾಡಿವೆ.[೧೩]

ಆರ್ಯರ ಕಾಲದಲ್ಲಿ ಮಹಿಳೆಯರಿಗೆ ಗೌರವಯುತವಾದ ದೇವರ ಸ್ಥಾನವನ್ನು ನೀಡಲಾಗಿತ್ತು 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇತತ್ರೆ ದೇವತಾ' ಅಂದರೆ ಎಲ್ಲಿ ಸ್ತ್ರೀಯನ್ನು ಗೌರವಿಸಲಾಗುತ್ತದೋ ಅಲ್ಲಿ ದೇವತೆಗಳು ನೆಲೆಸುತ್ತಾರೆ ಎಂದು ನಂಬಲಾಗಿತ್ತು. ಅಲ್ಲದೆ ಪಂಜರದಲ್ಲಿನ ಗಿಳಿಯಂತೆ ಅವಳಿಗೆ ಸ್ವಾತಂತ್ರ್ಯ ನೀಡದೆ ಸಾಮಾಜಿಕ ಕಟ್ಟುಪಾಡುಗಳಿಂದ ಅವಳನ್ನು ಬಂಧಿಸಲಾಯಿತು, ಅವಳ ಸ್ವಾತಂತ್ರ್ಯವನ್ನು ಹರಣ ಮಾಡಿ, ಹೆಣ್ಣು ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯೌವ್ವನದಲ್ಲಿ ಪತಿಯ ಆಶ್ರಯದಲ್ಲಿ ಮತ್ತು ವೃದ್ಧ್ಯಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿ ಇರಬೇಕೆಂದು ಮನು ಹಾಗೂ ಇತರ ಧರ್ಮಶಾಸ್ತ್ರಜ್ಞರು ನಿರ್ಬಂಧ ಹೇರಿದರು. ಇದರ ಪರಿಣಾಮವಾಗಿ ಮಹಿಳೆಯನ್ನು ನಾಲ್ಕು ಗೋಡೆಗಳ ಮಧ್ಯೆ ಇರುವ ವಸ್ತುವನ್ನಾಗಿ ಮಾಡಲಾಯಿತು.[೧೪]

ಪುರುಷಪ್ರಧಾನ ಸಮಾಜ ಮಹಿಳೆಯನ್ನು ಅನೇಕ ಅಂಶಗಳಿಂದ ವಂಚಿತಳನ್ನಾಗಿ ಮಾಡಿ ಅವಳನ್ನು ದ್ವಿತೀಯ ದರ್ಜೆಯ ಪ್ರಜೆಯನ್ನಾಗಿ ಕಾಣುತ್ತಿದೆ. ಅಲ್ಲದೆ ಅವಳನ್ನು ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪುರುಷರ ಅವಲಂಬಿಯಾಗುವಂತೆ ಮಾಡಿತು. ಹಾಗೂ ಮಹಿಳೆಯ ಜೈವಿಕ ಕ್ರಿಯೆಗಳಾದ ಬಸಿರು, ಹೆರಿಗೆ ಮತ್ತು ಮಕ್ಕಳ ಲಾಲನೆ ಮತ್ತು ಪಾಲನೆ ಇತ್ಯಾದಿ ಕ್ರಿಯೆಗಳಿಂದ ಅವಳನ್ನು ಅಧೀನತೆಗೆ ಒಳಪಡಿಸಿ ಶೋಷಿಸಲಾಗುತ್ತಿದೆ. ಬಡತನ ಮತ್ತು ಕುಟುಂಬ ಪೋಷಣೆಯ ಉದ್ದೇಶದಿಂದ

ಕೂಲಿ ಕೆಲಸಕ್ಕೆ ಹೋದರೂ ಅಲ್ಲಿ ಸಹೋದ್ಯೋಗಿಗಳು ಮತ್ತು ಪುರುಷರಿಂದ ತಾರತಮ್ಯ ಮತ್ತು ದೌರ್ಜನ್ಯಕ್ಕೆ ಒಳಗಾಗುವಂತಹ ಪರಿಸ್ಥಿತಿಯನ್ನು ತಂದೊಡ್ಡಿದೆ. ಈ ಪುರುಷ ಪ್ರಧಾನ ಸಮಾಜ.[೧೫]

ಸಮಾಜದ ಜಂಜಾಟದಲ್ಲಿ ಬದುಕುವ ಮಹಿಳೆ ಆರ್ಥಿಕ ನಿರ್ವಹಣೆ ಮತ್ತು ಗಳಿಕೆಗೆಂದು ಮನೆಯಿಂದ ಹೊರನಡೆದು ಹೊಲಗದ್ದೆ, ಕಾರ್ಖಾನೆ, ಶಾಲೆ, ಕಾಲೇಜು, ಬಸ್ಸು, ರೈಲು, ಬ್ಯಾಂಕ್ ಮತ್ತು ವಿಮಾಸಂಸ್ಥೆ ಹಾಗೂ ಐಟಿ-ಬಿಟಿಯಂತಹ ಉನ್ನತ ಸಂಸ್ಥೆಗಳಲ್ಲಿ ದುಡಿಯುತ್ತಿದ್ದಾಳೆ. ಸಂಘಟಿತ ವಲಯದಲ್ಲಿ ಬರುವಂತಹ ಇಂತಹ ವೃತ್ತಿಯಲ್ಲಿ ತೊಡಗಿರುವ ಮಹಿಳೆಯ ಮೇಲೆ ತಾರತಮ್ಯ ಮತ್ತು ದೌರ್ಜನ್ಯದ ಜೊತೆಗೆ ಕೊಲೆ, ವರದಕ್ಷಿಣೆ ಕಿರುಕುಳ, ಸಾವು ಮತ್ತು ಅತ್ಯಾಚಾರದಂತಹ ಘಟನೆಗಳು ನಿರಂತರವಾಗಿ ನಡೆಯುತ್ತಿವೆ. ಸರಕಾರ ಇವರ ರಕ್ಷಣೆ ಮತ್ತು ಭದ್ರತೆಗೆ ಕಾನೂನು ಜಾರಿಗೊಳಿಸಿದರೂ (ಕನಿಷ್ಠ ಕೂಲಿಕಾಯ್ದೆ-೧೯೪೮, ವರದಕ್ಷಿಣೆ ನಿಷೇಧ ಕಾಯ್ದೆ-೧೯೬೧, ಕೌಟುಂಬಿಕ ಹಿಂಸೆಕಾಯ್ದೆ-೨೦೦೫ ಇತ್ಯಾದಿ) ಇಂತಹ ಕೃತ್ಯಗಳಿಗೆ ಕೊನೆ ಇಲ್ಲದಾಗಿದೆ.

ಕಾಯ್ದೆಯ ರಕ್ಷಣೆ ಇಲ್ಲದೆ ಅಸಂಘಟಿತರಾಗಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಸಂಘಟಿತ ವಲಯದ ಉದ್ಯೋಗಿಗಳಿಗಿಂತಲೂ ಅನೇಕ ವಿಧದ ಸಮಸ್ಯೆ ತೊಂದರೆ ಮತ್ತು ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಸಮಾಜದಲ್ಲಿ ತಲತಲಾಂತರಗಳಿಂದ ಶೋಷಣೆಗೆ ಒಳಗಾಗಿದ್ದ ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡದ ದಲಿತರು ಮತ್ತು ಮಹಿಳೆಯರು ಈ ವಲಯದಲ್ಲಿ ದುಡಿಯುತ್ತಿದ್ದು, ವೇತನ ತಾರತಮ್ಯ, ಕೆಲಸದಲ್ಲಿ ಅಸಮಾನತೆ ಮತ್ತು ನಿಕೃಷ್ಟ ಜೀವನ ಸಾಗಿಸುವುದರ ಜೊತೆಗೆ ಸಮಾಜದಲ್ಲಿ ಕಡಿಮೆ ಸ್ಥಾನಮಾನ ಹೊಂದಿದ್ದಾರೆ.

ಇಂತಹ ಶ್ರಮಜೀವಿಗಳ ಬದುಕಿನ ಸ್ಥಿತಿಗತಿಯನ್ನು ಮೊದಲ ಬಾರಿಗೆ ಭಾರತ ಸರಕಾರದ ಸಮಾಜಕಲ್ಯಾಣ ಇಲಾಖೆ ಮತ್ತು ಶಿಕ್ಷಣ ಮಂತ್ರಾಲಯ ೧೯೭೪ರಲ್ಲಿ ಹೊರಡಿಸಿದ "ರಿಪೋರ್ಟ್ ಆಫ್ ದ ಕಮಿಟಿ ಆನ್ ದ ಸ್ಟೇಟಸ್ ಆಫ್ ವುಮೆನ್ ಇನ್ ಇಂಡಿಯಾ" ಎಂಬ ವರದಿಯಲ್ಲಿ ವಿವರಿಸಲಾಗಿದೆ. ದೇಶದ ಮಹಿಳೆಯರ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಆರೋಗ್ಯ, ಸಾಂಸ್ಕೃತಿಕ, ಸಂಘಟಿತ ಮತ್ತು ಅಸಂಘಟಿತ ವಲಯದಲ್ಲಿನ ಅವರ ಸ್ಥಿತಿಗತಿಯನ್ನು ತಿಳಿಸುವುದರ ಜೊತೆಗೆ ಮಹಿಳೆಯರೇ ಹೆಚ್ಚಾಗಿ ದುಡಿಯುತ್ತಿರುವ ಅಸಂಘಟಿತ ವಲಯದ ಸ್ವರೂಪ, ಲಕ್ಷಣ ಮತ್ತು ವಿವಿಧ ವೃತ್ತಿಗಳ ಬಗ್ಗೆ ಮಾಹಿತಿಯನ್ನು ಈ ವರದಿಯು ಒಳಗೊಂಡಿದೆ. ಇದರ ಪರಿಣಾಮವಾಗಿ ಈ ವರದಿಯು ಸರಕಾರದ ನೀತಿ ನಿರೂಪಕರ ಮತ್ತು ಅರ್ಥಶಾಸ್ತ್ರಜ್ಞರ ಗಮನವನ್ನು ಸೆಳೆದು ಸರಕಾರ ಅಸಂಘಟಿತ ವಲಯದ ಪರವಾಗಿ ಯೋಜನೆ ರೂಪಿಸಲು ಸಹಕಾರಿಯಾಯಿತು. ೧೯೮೮ರಲ್ಲಿ ಪ್ರಕಟವಾದ "ದಿ ನ್ಯಾಷನಲ್ ಕಮಿಟಿ ಆನ್ ವುಮನ್ ಇನ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಇನ್‌ಫಾರ್ಮಲ್ ಸೆಕ್ಟರ್" ಎಂಬ ವರದಿಯು ಈ ವಲಯದ ಮಹಿಳೆಯರ ಬಗ್ಗೆ ಮತ್ತಷ್ಟು ಅಂಕಿ ಅಂಶಗಳನ್ನು ಬೆಳಕಿಗೆ ತಂದು ಅವುಗಳ

ವಿಶ್ಲೇಷಣೆ ನೀಡಿ ಸರಕಾರವು ನಿರ್ದಿಷ್ಟ ಕ್ರಮ ಕೈಗೊಳ್ಳುವಂತೆ ಮಾಡಿತು. ಅದರ ಫಲವಾಗಿ ೧೯೯೧ರ ಜನಗಣತಿಯಲ್ಲಿ ಮೊದಲಬಾರಿಗೆ ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರನ್ನು ಸೇರಿಸಲಾಯಿತು. ಸರಕಾರವೇ ಈ ವಲಯದ ದುಡಿಮೆಗಾರರ ಕಲ್ಯಾಣಕ್ಕಾಗಿ ಸಾಮಾಜಿಕ ಭದ್ರತಾ ಕಾರ್ಯಕ್ರಮವನ್ನು ಜಾರಿಗೊಳಿಸಿತು.[೧೬]

ಕರ್ನಾಟಕದಲ್ಲಿ ಅಸಂಘಟಿತ ವಲಯ ತನ್ನದೇ ಆದ ಕೆಲವೇ ವೃತ್ತಿಗಳಲ್ಲಿ ಕಂಡುಬರುತ್ತಿದೆ. ಅಂದರೆ ರಾಜ್ಯದಲ್ಲಿ ಕೃಷಿ, ನಿರ್ಮಾಣ ಕಾರ್ಯ ಮತ್ತು ಮನೆಗೆಲಸದ ಕೆಲಸಗಾರರು ಹೆಚ್ಚು ಕೇಂದ್ರೀಕೃತವಾಗಿರುವುದು ಕೆಲವು ಅಧ್ಯಯನಗಳಿಂದ ತಿಳಿದುಬರುತ್ತದೆ.[೧೭] ಕರ್ನಾಟಕ ರಾಜ್ಯದ ಕಾರ್ಮಿಕರ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಅದರ ಸಂಖ್ಯೆ ದಶಕದಿಂದ ದಶಕಕ್ಕೆ ಹೆಚ್ಚುತ್ತಿರುವುದು ಕಂಡುಬರುತ್ತಿದೆ. ರಾಜ್ಯದ ಒಟ್ಟು ಕಾರ್ಮಿಕರ ಪ್ರಮಾಣ ೧೮೮೧ರಲ್ಲಿ ೧.೪೯ ಕೋಟಿಯಷ್ಟು, ೧೯೯೧ರಲ್ಲಿ ೧.೮೯ ಕೋಟಿಯಷ್ಟು ಮತ್ತು ೨೦೦೧ರಲ್ಲಿ ೨.೩೫ ಕೋಟಿಯಷ್ಟು ಹೆಚ್ಚಿದೆ. ೧೯೮೧-೨೦೦೧ರ ಅವಧಿಯಲ್ಲಿ ೨.೨೯ ಕೋಟಿಯಷ್ಟು ಬೆಳೆದಿದೆ.

ರಾಜ್ಯದಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಪ್ರಮಾಣ ತೀವ್ರಗತಿಯಲ್ಲಿ ಬೆಳೆಯುತ್ತಿದೆ. ೧೯೮೧ರಲ್ಲಿ ೦.೯೭ ಕೋಟಿ ಇದ್ದ ಈ ಕಾರ್ಮಿಕರ ಪ್ರಮಾಣ ೧೯೯೧ರಲ್ಲಿ ೧.೩೦ ಕೋಟಿಯಷ್ಟು ಮತ್ತು ೨೦೦೧ರಲ್ಲಿ ೧.೭೩ ಕೋಟಿಯಷ್ಟು ಹೆಚ್ಚಾಗಿದೆ. ಅಂದರೆ ರಾಜ್ಯದ ಒಟ್ಟು ೫ ಕೋಟಿ ಜನರಲ್ಲಿ ೧.೭೩ ಕೋಟಿ ಜನರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ.[೧೮]

ರಾಜ್ಯದಲ್ಲಿ ಕೃಷಿಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದ್ದು ೧೯೮೧ರಲ್ಲಿ ೩೬.೫೫ರಷ್ಟಿದ್ದ ಕೃಷಿಕಾರ್ಮಿಕರ ಸಂಖ್ಯೆ ೧೯೯೧ರಲ್ಲಿ ೫೦ ಲಕ್ಷಕ್ಕೆ ಹೆಚ್ಚಿದೆ. ಅಂದರೆ ಕೃಷಿ ಕಾರ್ಮಿಕರ ಸಂಖ್ಯೆ ೧೯೮೧ರಲ್ಲಿ ಶೇಕಡ ೨೪.೪೪ ರಷ್ಟಿದ್ದದ್ದು ೧೯೯೧ರಲ್ಲಿ ಶೇಕಡ ೨೬.೪೪ರಷ್ಟು ಹೆಚ್ಚಳವಾಗಿದೆ. ಮುಂದುವರಿದ ಜಿಲ್ಲೆಗಳಾದ ಬೆಂಗಳೂರು, ಮೈಸೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೃಷಿಕಾರ್ಮಿಕರ ಸಂಖ್ಯೆ ಕಡಿಮೆ ಇದ್ದು ಹಿಂದುಳಿದ ಜಿಲ್ಲೆಗಳಾದ ಗುಲಬರ್ಗ, ರಾಯಚೂರು, ಬಳ್ಳಾರಿ, ಕೊಪ್ಪಳ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೃಷಿಕಾರ್ಮಿಕರು ಕಂಡುಬರುತ್ತಿದ್ದಾರೆ. ಈ ಕೃಷಿ ಕಾರ್ಮಿಕರಲ್ಲಿ ಶೇಕಡ ೭೦ರಷ್ಟು ಜನರು ಮಹಿಳಾ ಕಾರ್ಮಿಕರಾಗಿದ್ದು ಕೃಷಿ ಚಟುವಟಿಕೆ ಮಹಿಳೆಯರನ್ನು ಅವಲಂಬಿಸಿದೆ. ಇದರಿಂದಾಗಿ ಕೃಷಿ ಕಾರ್ಮಿಕ ಮಾರುಕಟ್ಟೆ ಮಹಿಳೀಕರಣಗೊಳ್ಳುತ್ತಿದೆ.[೧೯]

ರಾಜ್ಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿದೆ. ಮುಂದುವರೆದ ನಗರಗಳಾದ ಬೆಂಗಳೂರು, ದಕ್ಷಿಣ ಕನ್ನಡ ಮತ್ತು ಮೈಸೂರು ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಈ ಕಾರ್ಮಿಕರು ಕಂಡುಬರುತ್ತಿದ್ದಾರೆ. ಇದೊಂದು ಬೆಳೆಯುತ್ತಿರುವ

ಉದ್ಯಮವಾಗಿದ್ದರಿಂದ ಗ್ರಾಮೀಣ ಪ್ರದೇಶದ ಜನರು ಕೂಲಿ ಅರಸಿ ನಗರಕ್ಕೆ ವಲಸೆ ಬಂದು ಈ ಉದ್ಯೋಗದಲ್ಲಿ ನಿರತರಾಗುತ್ತಿರುವುದರಿಂದ ನಗರಗಳಲ್ಲಿ ಈ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದೆ. ಕರ್ನಾಟಕದಲ್ಲಿ ನಿರ್ಮಾಣ ಕಾರ್ಮಿಕರ ಸಂಖ್ಯೆ ೧೯೮೧ರಲ್ಲಿ ಶೇಕಡ ೨.೦೧ರಷ್ಟಿದ್ದದು ೨೦೦೧ರಲ್ಲಿ ಶೇಕಡ ೨.೨೬ರಷ್ಟು ಹೆಚ್ಚಳವಾಗಿದೆ. ಈ ಉದ್ಯೋಗದಲ್ಲಿ ಶೇಕಡ ೬೦ರಷ್ಟು ಮಹಿಳೆಯರು ಕಾರ್ಮಿಕರಾಗಿ ದುಡಿಯುತ್ತಿರುವುದು ಅಂಕಿ ಸಂಖ್ಯೆಗಳಿಂದ ತಿಳಿದುಬರುತ್ತಿದೆ.

ರಾಜ್ಯದಲ್ಲಿ ಮನೆಗೆಲಸದವರ ಸಂಖ್ಯೆ ಏರಿಳಿತಕ್ಕೆ ಒಳಗಾಗುತ್ತಿರುವದು ದ್ವಿತೀಯ ಆಕರ ಸಾಮಗ್ರಿಗಳಿಂದ ತಿಳಿದು ಬರುತ್ತಿದೆ. ಕೆಲವು NGOಗಳು ನಡೆಸಿದ ಸರ್ವೆ ಮತ್ತು ದಿನಪತ್ರಿಕೆಯಲ್ಲಿ ಪ್ರಕಟವಾದ ವರದಿಗಳು ಇದನ್ನು ದೃಢಪಡಿಸುತ್ತಿವೆ. ರಾಜ್ಯದಲ್ಲಿ ೬೮೦.೦೦೦ ಮನೆಗೆಲಸದ ಕಾರ್ಮಿಕರು ಮನೆಗೆಲಸದಲ್ಲಿ ನಿರತರಾಗಿದ್ದಾರೆಂದು 'ಅಖಿಲ ಕರ್ನಾಟಕ ಮನೆಗೆಲಸ ಮಾಡುವವರ ಸಂಘ' ನಡೆಸಿದ ಅಧ್ಯಯನದಿಂದ ತಿಳಿದುಬರುತ್ತಿದೆ.[೨೦] ಬೆಂಗಳೂರು ಒಂದರಲ್ಲಿಯೇ ಒಂದುಲಕ್ಷ ಮನೆಗೆಲಸದ ಕಾರ್ಮಿಕರು ಇದ್ದಾರೆ ಎಂದು ಮೇ ೫ ೨೦೦೪ರಲ್ಲಿ ಡೆಕನ್ ಹೆರಾಲ್ಡ್‌ನಲ್ಲಿ ಪ್ರಕಟವಾದ ವರದಿಯಿಂದ ತಿಳಿದುಬರುತ್ತದೆ. ಈ ಮೇಲಿನ ಸಮೀಕ್ಷೆ ಮತ್ತು ವರದಿಗಳು ಬೆಳೆಯುತ್ತಿರುವ ನಗರಗಳಾದ ಬೆಂಗಳೂರು, ಮಂಗಳೂರು ಮತ್ತು ಮೈಸೂರು ನಗರಗಳಲ್ಲಿ ಮನೆಗೆಲಸದ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿರುವುದರ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಎಲ್ಲ ತಾಲೂಕು ಮತ್ತು ಪಟ್ಟಣದಂತಹ ಪ್ರದೇಶದಲ್ಲಿ ಮನೆಗೆಲಸದ ಕಾರ್ಮಿಕರು ಕಂಡುಬರುತ್ತಿದ್ದಾರೆ. ಇವರು ಸಂಘಟನೆ ಇಲ್ಲದೆ ಒಂಟಿಯಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ. ನಾಲ್ಕು ಗೋಡೆಗಳ ನಡುವೆ ಕೆಲಸ ಮಾಡುವ ಈ ಕಾರ್ಮಿಕರು ಮನೆಮಾಲೀಕರು ಹಾಕುವ ಹಳಸಿದ ಅನ್ನ ತಿಂದು ಕಡಿಮೆ ಸಂಬಳಕ್ಕೆ ೮ ಗಂಟೆಗೂ ಹೆಚ್ಚು ಸಮಯ ದುಡಿಯುತ್ತಿದ್ದಾರೆ. ಅಲ್ಲದೆ ಅವರಿಂದ ಅವಾಚ್ಯ ಶಬ್ದಗಳಿಂದ ಬೈಸಿಕೊಳ್ಳುತ್ತ ದೈಹಿಕ ಮತ್ತು ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಸರಕಾರ ಇವರ ರಕ್ಷಣೆಗೆ ಕೌಟುಂಬಿಕ ಹಿಂಸೆ ಕಾಯ್ದೆ ೨೦೦೫(ಡೊಮೆಸ್ಟಿಕ್ ವೈಲೆನ್ಸ್ ಆ್ಯಕ್ಟ್ ೨೦೦೫)ನ್ನು ಜಾರಿಗೊಳಿಸಿದರು. ಆದರೂ ಇವರ ಮೇಲೆ ದಬ್ಬಾಳಿಕೆ ನಿರಂತರವಾಗಿ ನಡೆಯುತ್ತಿದೆ.[೨೧]

ನೀರಾವರಿ ಮತ್ತು ಒಣಭೂಮಿ ಪ್ರದೇಶದಿಂದ ಕೂಡಿದ ಕೊಪ್ಪಳ ಜಿಲ್ಲೆಯು ತೀವ್ರಗತಿಯಲ್ಲಿ ಬೆಳೆಯುತ್ತಿರುವ ಒಂದು ಜಿಲ್ಲೆಯಾಗಿದೆ. ಹೈದರಾಬಾದ್ ಕರ್ನಾಟಕದ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಗಳಲ್ಲಿ ನಾಲ್ಕನೇ ಸ್ಥಾನದಲ್ಲಿರುವ ಕೊಪ್ಪಳ ಜಿಲ್ಲೆಯು ಕೃಷಿ, ಕೈಗಾರಿಕೆ ಮತ್ತು ಶೈಕ್ಷಣಿಕವಾಗಿ ಮುಂದುವರೆಯುತ್ತಿದೆ. ಅಭಿವೃದ್ಧಿಯ ಪಥದಲ್ಲಿ ಸಾಗುತ್ತಿರುವ ಕೊಪ್ಪಳ ಜಿಲ್ಲೆಯು ಶೇಕಡ ೬೦ಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಕಾರ್ಮಿಕರನ್ನು ಹೊಂದಿದೆ. ಇದರಲ್ಲಿ ಶೇಕೆಡ ೪೨.೪ರಷ್ಟು ಜನ ಕೃಷಿ ಕಾರ್ಮಿಕರು ಶೇಕಡ ೩೩ರಷ್ಟು ಜನ ನಿರ್ಮಾಣ ಉದ್ಯಮದ ಕಾರ್ಮಿಕರು ಮತ್ತು ಶೇಕಡ ೨೪ರಷ್ಟು ಜನ ಇತರ

ಉದ್ಯೋಗದಲ್ಲಿ ನಿರತವಾದ ಕಾರ್ಮಿಕರು ಕಂಡುಬರುತ್ತಿದ್ದಾರೆ. ಜಿಲ್ಲೆಯಲ್ಲಿ ಒಟ್ಟು ಕೆಲಸಗಾರರಲ್ಲಿ ಶೇಕಡ ೨೨.೮ರಷ್ಟು ಜನ ಮಹಿಳೆಯರು ಮುಖ್ಯ ಕೆಲಸಗಾರರಾಗಿ ಮತ್ತು ಶೇಕಡ ೧೬.೧ರಷ್ಟು ಜನ ಮಹಿಳೆಯರು ಸೀಮಾಂತ ಕೆಲಸಗಾರರಾಗಿ ದುಡಿಯುತ್ತಿದ್ದಾರೆ.[೨೨]

ಕೊಪ್ಪಳ ಜಿಲ್ಲೆಯು ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಯಾಗಿದ್ದರೂ ಶೇಕಡ ೫೦ರಷ್ಟು ಜನ ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆ. ಇವರಲ್ಲಿ ಬಹುತೇಕರು ಕೂಲಿ ಕಾರ್ಮಿಕರಾಗಿ, ಕೃಷಿ, ನಿರ್ಮಾಣ ಕೆಲಸ, ಮನೆಗೆಲಸಗಳಲ್ಲಿ, ಕುಲಕಸುಬುಗಳಾದ ಚಾಪೆ ಎಣೆಯುವುದು, ಕೌದಿ ತಯಾರಿಕೆ, ಬಡಗಿತನ ಮತ್ತು ಡೋಬಿಗಳಾಗಿ ಹಾಗೂ ಚಿಲ್ಲರೆ-ಸಣ್ಣ ವ್ಯಾಪಾರಿಗಳಾಗಿ ಮತ್ತು ಸ್ವಯಂ ಉದ್ಯೋಗ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಈ ಎಲ್ಲ ವೃತ್ತಿಗಳು ಅಸಂಘಟಿತ ವಲಯದಲ್ಲಿ ಜರುಗುವ ವೃತ್ತಿಗಳಾಗಿವೆ. ಇವರೆಲ್ಲರೂ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಈ ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರ ಸ್ಥಿತಿಯನ್ನು, ಅವರ ಸಮಸ್ಯೆ ಮತ್ತು ಸವಾಲುಗಳನ್ನು ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶವಾಗಿದ್ದು ಈ ಸಮಸ್ಯೆಯ ವಿಶ್ಲೇಷಣೆಯನ್ನು ಕೊಪ್ಪಳ ಜಿಲ್ಲೆಯಲ್ಲಿ ನಡೆಸಿದ ಕ್ಷೇತ್ರಕಾರ್ಯದ ಆಧಾರದ ಮೇಲೆ ಈ ಪ್ರಬಂಧದ ಆರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಇಂದು ಆರ್ಥಿಕತೆಯಲ್ಲಿ ಕೇನ್ಸ್‌ರವರ ರಾಷ್ಟ್ರೀಯ ಆದಾಯದ ಪರಿಕಲ್ಪನೆ ತುಂಬ ಮಹತ್ವ ಪಡೆದಿದೆ. ಈ ಕಲ್ಪನೆ ಆಧುನಿಕ ಅರ್ಥವ್ಯವಸ್ಥೆಯ ದಿಕ್ಕನ್ನೇ ಬದಲಿಸಿದೆ. 'ರಾಷ್ಟ್ರದಲ್ಲಿ ಒಂದು ವರ್ಷದ ಅವಧಿಯಲ್ಲಿ ಉತ್ಪಾದಿಸಿದ ಎಲ್ಲ ಸರಕು ಸೇವೆಗಳ ಹಣದ ಮೌಲ್ಯಕ್ಕೆ ರಾಷ್ಟ್ರೀಯ ವರಮಾನ ಎಂದು ಕರೆಯುತ್ತಾರೆ.' ಈ ರಾಷ್ಟ್ರೀಯ ವರಮಾವನ್ನು ಮಾಪನ ಮಾಡುವಾಗ ಅನೇಕ ಆರ್ಥಿಕ ಅಂಶಗಳನ್ನು ಮಾಪನದಿಂದ ಕೈಬಿಡಲಾಗುತ್ತಿದೆ. ಅಂದರೆ ಮಹಿಳೆಯರು ಮಾಡುವ ಅನೇಕ ಸೇವೆಗಳು ಕುಟುಂಬಕ್ಕೆ ಆದಾಯ ತಂದುಕೊಡುವಲ್ಲಿ ಪರೋಕ್ಷವಾಗಿ ನೆರವಾದರೂ ಅವರ ಸೇವೆಯನ್ನು ರಾಷ್ಟ್ರೀಯ ಆದಾಯದ ಲೆಕ್ಕಾಚಾರದಿಂದ ಕೈಬಿಡಲಾಗುತ್ತದೆ. ಉದಾಹರಣೆಗೆ ಮಕ್ಕಳ ಲಾಲನೆ ಪಾಲನೆ, ಕುಟುಂಬದಲ್ಲಿನ ಹಿರಿಯರ ಆರೈಕೆ ಮತ್ತು ಅಡಿಗೆ ಮಾಡುವುದು ಇತ್ಯಾದಿ ಕೆಲಸಗಳನ್ನು ಹೆಂಗಸು ಮಾಡಿದರೂ ಅವರಿಗೆ ವೇತನ ನೀಡುವುದಿಲ್ಲ. ಆ ಕೆಲಸವನ್ನು ಒಂದು ಕಡ್ಡಾಯ ಸೇವೆ ಎಂದು ಪರಿಗಣಿಸಿ ಅವಳ ದುಡಿಮೆಯನ್ನು ಅಗೋಚರ ಮಾಡಲಾಗುತ್ತದೆ.[೨೩]

ಅರ್ಥಶಾಸ್ತ್ರದಲ್ಲಿ 'ದುಡಿಮೆ' ಅಥವಾ 'ಕೆಲಸ' ಎಂಬ ಪದಕ್ಕೆ ವಿಶಿಷ್ಟವಾದ ವ್ಯಾಖ್ಯಾನವನ್ನು ನೀಡಲಾಗುತ್ತಿದೆ. "ಪ್ರತಿಫಲ ನಿರೀಕ್ಷೆಯಿಂದ ಮಾಡಲಾಗುವ ಎಲ್ಲ ದೈಹಿಕ ಅಥವಾ ಮಾನಸಿಕ ಮಾನವನ ಪ್ರಯತ್ನಗಳನ್ನು ದುಡಿಮೆ" ಎಂದು ಅರ್ಥಶಾಸ್ತ್ರದಲ್ಲಿ ಪರಿಭಾವಿಸಲಾಗುತ್ತದೆ. ಈ ರೀತಿಯ ದುಡಿಮೆಯು

ಪುರುಷರ ದುಡಿಮೆಯಾಗಿದ್ದು ಮಹಿಳೆಯರ ದುಡಿಮೆಯನ್ನು ಸೇವೆ ಎಂದು ಪರಿಗಣಿಸಲಾಗುತ್ತದೆ. ಹೀಗೆ ಆರ್ಥಿಕ ಪರಿಕಲ್ಪನೆಗಳಲ್ಲಿಯೇ ಮಹಿಳೆಯನ್ನು, ಅವಳ ದುಡಿಮೆಯನ್ನು ನಿರ್ಲಕ್ಷಿಸಲಾಗುತ್ತಿರುವುದು ಕಂಡುಬರುತ್ತಿದೆ. ನಿರ್ಲಕ್ಷ್ಯತೆಗೆ ಒಳಗಾದ ಮಹಿಳೆಯ ದುಡಿಮೆ, ಬದುಕು ಮತ್ತು ಅದಕ್ಕೆ ಕಾರಣವಾದ ಸಾಮಾಜಿಕ ಆರ್ಥಿಕ ಅಂಶಗಳನ್ನು ತಿಳಿಯುವುದು ಇಂದು ಅವಶ್ಯವಿದ್ದು ಆ ಒಂದು ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಇದಕ್ಕೆ ಆಧಾರವಾಗಿ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯ ಆರ್ಥಿಕ ಸ್ಥಿತಿಗತಿಯನ್ನು ಪರಿಗಣಿಸಲಾಗಿದೆ.

## ೧.೨ ಇದುವರೆಗೆ ನಡೆದ ಅಧ್ಯಯನಗಳು

ಅಸಂಘಟಿತ ವಲಯದ ಸ್ವರೂಪ ಮತ್ತು ಮುಖ್ಯ ಲಕ್ಷಣವಾದ ಬಡತನ, ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ನ್ಯಾಯದ ಕುರಿತು ಅನೇಕ ಅರ್ಥಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಧ್ಯಯನ ಮಾಡಿದ್ದಾರೆ. ಬಡತನದ ಆ್ಯಡಂ ಸ್ಮಿತ್ ಎಂದು ಖ್ಯಾತರಾದ ಸ್ವೀಡನ್ನಿನ ಅರ್ಥಶಾಸ್ತ್ರಜ್ಞ ಗುನ್ನರ್ ಮಿರ್ಡಾಲ್ ಅವರು ತಮ್ಮ ಕೃತಿಯಾದ 'ಏಸಿಯನ್ ಡ್ರಾಮ' ಎಂಬ ಕೃತಿಯಲ್ಲಿ ಬಡತನ, ಹಸಿವು ಮತ್ತು ಆರ್ಥಿಕ ಅಸಮಾನತೆಯ ಬಗ್ಗೆ ಚರ್ಚಿಸಿದ್ದಾರೆ. ಈ ಒಂದು ವಿಚಾರವು ಬಡತನದ ಮಹಿಳೀಕರಣ ಪರಿಕಲ್ಪನೆಯ ಬೆಳವಣಿಗೆಗೆ ಸಹಕಾರಿಯಾಗಿದೆ.[೨೪]

ಬಡರಾಷ್ಟ್ರಗಳಲ್ಲಿ ದಾರಿದ್ರ್ಯದ ವಿಷವರ್ತುಲಗಳು ಅಭಿವೃದ್ಧಿಯನ್ನು ತಡೆಯುತ್ತವೆ ಎಂಬ ಅಂಶವನ್ನು ಆಧರಿಸಿ 'ರಾಗ್ನಾರ್ ನರ್ಕ್ಸ್ ಅವರು' "ಅಭಿವೃದ್ಧಿಶೀಲ ದೇಶಗಳ ಬಡತನಕ್ಕೆ ಕಾರಣ ಅವುಗಳ ಬಡತನವೇ ಆಗಿದೆ" ಎಂಬ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಈ ಅಭಿಪ್ರಾಯವು ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರ ಹಿಂದುಳಿಯುವಿಕೆಗೆ ಅವರ ದಾರಿದ್ರ್ಯ ಅಥವಾ ಬಡತನವೇ ಕಾರಣ ಎಂಬ ಅಂಶವನ್ನು ವಿಶ್ಲೇಷಿಸಲು ಸಹಾಯಕಾರಿಯಾಗಿದೆ.[೨೫]

ಭಾರತದ ಖ್ಯಾತ ಅರ್ಥಶಾಸ್ತ್ರಜ್ಞ 'ಅಮರ್ತ್ಯ ಕುಮಾರ್ ಸೇನ್' ಅವರು ತಮ್ಮ ಹೆಸರಾಂತ ಕೃತಿಯಾದ 'ಪಾರ್ವಟಿ ಆ್ಯಂಡ್ ಫೀಮ್ಮೈನ್'ದಲ್ಲಿ ಬಡತನ ಮತ್ತು ಮಹಿಳೆಯರ ಸ್ಥಿತಿಗತಿಯ ಕುರಿತು ವಿವರಿಸಿದ್ದಾರೆ. ಇದು ಮಹಿಳೆಯರ ಆರ್ಥಿಕ ಸ್ಥಿತಿಗತಿಯ ಬಗ್ಗೆ ಮಾಹಿತಿ ಪಡೆಯಲು ಸಹಾಯಕವಾಗಿದೆ.[೨೬]

ಭಾರತದಲ್ಲಿ ೧೯೭೪ರ ನಂತರ ಅಸಂಘಟಿತ ವಲಯದಲ್ಲಿ ದುಡಿಯುವ ಶ್ರಮಜೀವಿಗಳ ಸಮಸ್ಯೆಗಳ ಬಗ್ಗೆ 'ಟುವರ್ಡ್ ಈಕ್ವಾಲಿಟಿ ವರದಿ'ಯು ಬೆಳಕು ಚೆಲ್ಲಿದ ನಂತರ ಅಸಂಘಟಿತ ವಲಯದ ದುಡಿಮೆಗಾರರ ಬಗ್ಗೆ ಅನೇಕ ಅಧ್ಯಯನಗಳು ನಡೆದವು. ಅವುಗಳಲ್ಲಿ ಪ್ರಮುಖವಾದ ಕೆಲವೊಂದನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

೧. ನಿರ್ಮಲ ಬ್ಯಾನರ್ಜಿಯವರು ಕಲ್ಕತ್ತ ಪ್ರದೇಶದಲ್ಲಿ ದುಡಿಯುವ ಅಸಂಘಟಿತ ವಲಯದ ಕಾರ್ಮಿಕರ ಬದುಕನ್ನು ಆಧರಿಸಿ "ವುಮನ್ ವರ್ಕರ್ಸ್ ಇನ್ ದ ಅನ್ಆರ್ಗನೈಸ್ಡ್ ಸೆಕ್ಟರ್" ಎಂಬ ಸಂಶೋಧನಾ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯು ಕಾರ್ಮಿಕರ ಹಿನ್ನೆಲೆ, ಮಹಿಳೆಯರು ಎಂದರೆ ಯಾರು? ಉದ್ಯೋಗದ ಸ್ವರೂಪ, ಆದಾಯ ಮತ್ತು ಕೂಲಿ, ಕೆಲಸದ ಸ್ಥಿತಿಗತಿ, ಮನೆಗೆಲಸದ ಮಹಿಳಾ ಕಾರ್ಮಿಕರು, ಕುಟುಂಬ ಮತ್ತು ಸಮಾಜದಲ್ಲಿ ಮಹಿಳೆಯರ ಸ್ಥಾನಮಾನ ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಈ ಎಲ್ಲ ಅಂಶಗಳು ಮಹಿಳೆಯ ದುಡಿಮೆಯ ಸ್ವರೂಪ ಮತ್ತು ಆರ್ಥಿಕ ಸ್ಥಿತಿಗತಿಯನ್ನು ತಿಳಿಯಲು ಸಹಾಯಕಾರಿಯಾಗಿವೆ.

೨. ಎಸ್.ಎನ್.ರಾನಡೆ ಮತ್ತು ಜಿ.ಪಿ.ಸಿನ್ಹ ಅವರು ದೆಹಲಿ ಮತ್ತು ಬಿಹಾರದಲ್ಲಿ ನಡೆಸಿದ ಸಮೀಕ್ಷೆಯನ್ನು ಆಧರಿಸಿ "ವುಮನ್ ಕನ್‌ಸ್ಟ್ರಕ್ಷನ್ ವರ್ಕರ್ಸ್" ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯು ಉದ್ಯೋಗ, ಕೂಲಿ ಮತ್ತು ಕಲ್ಯಾಣ ಸೌಲಭ್ಯಗಳು, ಆರ್ಥಿಕ ಸ್ಥಿತಿ, ಸಾಮಾಜಿಕ ಪರಿವರ್ತನಾ ಲಕ್ಷಣಗಳು, ಕುಟುಂಬ ಮತ್ತು ಜೀವನ ಸ್ಥಿತಿಯನ್ನು, ಮಹಿಳಾ ಕಾರ್ಮಿಕರ ಜೀವನ ಮತ್ತು ಬದುಕನ್ನು ಆಧರಿಸಿದ ಅಂಶಗಳನ್ನು ಒಳಗೊಂಡಿದೆ. ಈ ಕೃತಿಯಲ್ಲಿನ ಉದ್ಯೋಗ, ಕೂಲಿ ಮತ್ತು ಕಲ್ಯಾಣ ಸೌಲಭ್ಯಗಳು ಆರ್ಥಿಕ ಸ್ಥಿತಿಗತಿಯ ಅಂಶಗಳು ಈ ಪ್ರಬಂಧದ ನಾಲ್ಕನೆಯ ಅಧ್ಯಾಯ ರಚಿಸಲು ಪೂರಕವಾದ ಮಾಹಿತಿಯನ್ನು ನೀಡಿದೆ.

೩. ರೇನನ್ ಜಹಾಬ್‌ವಾಲ ಮತ್ತು ಆರ್.ಕೆ.ಎ.ಸುಬ್ರಮಣ್ಯ ಅವರು "ದ ಅನ್ಆರ್ಗನೈಸ್ಡ್ ಸೆಕ್ಟರ್ ವರ್ಕ್ ಸೆಕ್ಯುರಿಟಿ ಆ್ಯಂಡ್ ಸೋಸಿಯಲ್ ಪ್ರೊಟೆಕ್ಷನ್" ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯು ಅಸಂಘಟಿತ ವಲಯದ ಕಾರ್ಮಿಕರಿಗೆ ಜಾರಿಯಲ್ಲಿರುವ ಸಾಮಾಜಿಕ ಭದ್ರತಾ ಕಾರ್ಯಕ್ರಮದ ಬಗ್ಗೆ ಮಾಹಿತಿ ನೀಡುತ್ತದೆ.

೪. ಜವಹರ್‌ಲಾಲ್ ಸಿನ್ಹಾ ಮತ್ತು ಆರ್.ಕೆ.ಪಾಂಡ್ಯ ಅವರು ಲಕ್ನೋ ಪ್ರದೇಶದ ವ್ಯಕ್ತಿ ಅಧ್ಯಯನ ಸಮೀಕ್ಷೆಯನ್ನು ಆಧರಿಸಿ "ವುಮನ್ ಇನ್ ಅನ್ ಆರ್ಗನೈಸ್ಡ್ ಸೆಕ್ಟರ್ ಪ್ರಾಬ್ಲಮ್ಸ್ ಆ್ಯಂಡ್ ಪ್ರಾಸ್ ಪೆಕ್ಟಸ್" ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯು ಅಸಂಘಟಿತ ವಲಯದಲ್ಲಿ ಮಹಿಳಾ ಭಾಗವಹಿಸುವಿಕೆ ಕೃಷಿವಲಯದಲ್ಲಿ ಮಹಿಳಾ ಕಾರ್ಮಿಕರು, ಅಸಂಘಟಿತ ವಲಯದಲ್ಲಿ ಲಿಂಗ ದೌರ್ಜನ್ಯ ಮತ್ತು ಕೆಲಸ, ಭಾರತೀಯ ಮಹಿಳೆಯ ಆರ್ಥಿಕ, ಸಾಮಾಜಿಕ ಮತ್ತು ಕಾನೂನು ಸ್ಥಾನಮಾನ ಹಾಗೂ ಅಸಂಘಟಿತ ವಲಯ, ಭಾರತದಲ್ಲಿ ಮಹಿಳಾ ಉದ್ಯೋಗದ ಸಮಸ್ಯೆ ಮತ್ತು ನೋಟ, ಭಾರತದಲ್ಲಿ ಮಹಿಳಾ ದುಡಿಮೆಯ ಸಹಭಾಗಿತ್ವ, ಅಸಂಘಟಿತ ವಲಯದಲ್ಲಿ ಮಹಿಳೆ ಮತ್ತು ಹೊಸ ಆರ್ಥಿಕ ಸುಧಾರಣೆಗಳು ಹಾಗೂ ಅಸಂಘಟಿತ ವಲಯದಲ್ಲಿ ಮಹಿಳೆಯ ದುಡಿಮೆ ಮತ್ತು ಮಾನಸಿಕ ಆರೋಗ್ಯ ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ. ಈ ಎಲ್ಲ ಅಂಶಗಳು ಅಧ್ಯಯನಕ್ಕೆ ಪೂರಕವಾಗಿ ಸಹಕಾರಿಯಾಗಿವೆ.

೫. ಡಾ.ರಾಜಶೇಖರ್ ಮತ್ತು ಸುಚಿತ್ರಾ ಜೆ.ವಾಯ್ ಅವರು "ಎಂಪ್ಲಾಯ್‌ಮೆಂಟ್ ಸೆಕ್ಯುರಿಟಿ ಫರ್ ದ ಅನ್‌ಆರ್ಗನೈಸ್ಡ್ ಸೆಕ್ಟರ್ ವರ್ಕರ್ಸ್ ಇನ್ ಕರ್ನಾಟಕ" ಎಂಬ ವರ್ಕಿಂಗ್ ಪೇಪರ್‌ನಲ್ಲಿ ಕರ್ನಾಟಕದ ಅಸಂಘಟಿತ ವಲಯದ ಸ್ವರೂಪವನ್ನು ವಿವರಿಸಿದ್ದಾರೆ. ಇದು ಬೆಂಗಳೂರು, ಮೈಸೂರು, ದಕ್ಷಿಣ ಕನ್ನಡ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ನಡೆಸಿದ ಸಮೀಕ್ಷೆಯನ್ನು ಆಧರಿಸಿ ಮಹಿಳಾ ಕೃಷಿಕಾರ್ಮಿಕರು, ನಿರ್ಮಾಣ ಕಾರ್ಮಿಕರು ಮತ್ತು ಮನೆಗೆಲಸದ ಕಾರ್ಮಿಕರ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನು ನೀಡುತ್ತಿದ್ದು. ಒಂದನೇ ಅಧ್ಯಾಯ ನಾಲ್ಕನೆ ಅಧ್ಯಾಯ ರಚಿಸಲು ಸಹಕಾರಿ ಯಾಗಿದೆ.

೬. ಸುಪ್ರೀಯಾ ರಾಯ್ ಚ್ಯೋದುರ‍್ಯ ಅವರು ಲೇಬರ್ ಆ್ಯಕ್ಟಿವಿಸಂ ಆ್ಯಂಡ್ ವುಮನ್ ಇನ್ ಅನ್‌ಆರ್ಗನೈಸ್ಡ್ ಸೆಕ್ಟರ್" ಎಂಬ ಲೇಖನದಲ್ಲಿ ಅಸಂಘಟಿತ ವಲಯದ ಸ್ವರೂಪವನ್ನು ವಿವರಿಸಿದ್ದಾರೆ. ಬೆಂಗಳೂರಿನ ಗಾರ್ಮೆಂಟ್ ಎಕ್ಸ್‌ಪೋರ್ಟ್ ಇಂಡಸ್ಟ್ರಿಸ್‌ನ ಅಧ್ಯಯನವನ್ನು ಆಧರಿಸಿ ಗಾರ್ಮೆಂಟ್ ಕೆಲಸದಲ್ಲಿ ನಿರತಳಾದ ಮಹಿಳೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಹಾಗೂ ಕೂಲಿ ತಾರತಮ್ಯವನ್ನು ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇಂದು ಮಹಿಳೆಯ ಆರ್ಥಿಕ ಸ್ಥಿತಿಗತಿ ತಿಳಿಯಲು ಸಹಕಾರಿಯಾಗಿದೆ.

೭. ಉಪಾ ಡಿ, ಇವರು "ಡಿರ್ಟಮಿಂಟ್ಸ್ ಆ್ಯಂಡ್ ಕಾನ್‌ಸಿಕ್ವನ್ಸ್ ಆಫ್ ವುಮೆನ್ಸ್ ವರ್ಕ್ ಇನ್ ದ ಅನ್‌ಆರ್ಗನೈಸ್ಡ್ ಸೆಕ್ಟರ್" ಕೃತಿಯಲ್ಲಿ ತ್ರಿವೇಂದ್ರಂ ಕಾರ್ಪೊರೇಷನ್ ಏರಿಯಾದ ಟೆಕ್ಸ್‌ಟೈಲ್ ಸೇಲ್ಸ್ ವಲಯದ ಮಹಿಳೆಯರ ಬದುಕನ್ನು ಆಧರಿಸಿ ಅಸಂಘಟಿತ ವಲಯದ ಸಮಸ್ಯೆಗಳನ್ನು ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಕೃತಿಯು ಉದ್ಯೋಗಸ್ಥ ಮಹಿಳೆಯರ ಸಮಸ್ಯೆಗಳನ್ನು ವಿಶ್ಲೇಷಿಸಲು ಪೂರಕವಾದ ಮಾಹಿತಿಯನ್ನು ನೀಡಿದೆ.

೮. ಸಂತೋಷ್ ಎಲ್. ಅವರು "ಮುಂದುವರೆದ ತಾರತಮ್ಯ" ಎಂಬ ಲೇಖನದಲ್ಲಿ ರಸ್ತೆ ನಿರ್ಮಾಣ ಕಾರ್ಯದಲ್ಲಿ ನಿರತರಾದ ಮಹಿಳೆಯರ ಸಮಸ್ಯೆಗಳನ್ನು ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಲೇಖನವು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ನಿರತರಾದ ಮಹಿಳೆಯರ ಸಮಸ್ಯೆಯ ವಿಶ್ಲೇಷಣೆಗೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ.

೯. ಈ ಮೇಲಿನ ಕೃತಿಗಳು ಅಲ್ಲದೆ "ರಿಪೋರ್ಟ್ ಆಫ್ ದ ನ್ಯಾಷನಲ್ ಕಮಿಟಿ ಆನ್ ಲೇಬರ್ ವಾಲ್ಯುಮ್ ೧, ಆ್ಯನುವಲ್ ರಿಪೋರ್ಟ್ ೨೦೦೫-೦೬ ಮತ್ತು ರಿಪೋರ್ಟ್ ಆಫ್ ನ್ಯಾಷನಲ್ ಕಮಿಷನ್ ಆನ್ ಲೇಬರ್ ೨೦೦೨;" ೧೯೯೧-೧೯೯೭ರ ವರದಿಗಳು ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರ ಬಗ್ಗೆ, ಅವರ ಸಮಸ್ಯೆಗಳ ಬಗ್ಗೆ ಮತ್ತು ಅವರ ಕಲ್ಯಾಣದ ಕುರಿತು

ಇರುವ ಕಾರ್ಯಕ್ರಮಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತವೆ. ಈ ಎಲ್ಲ ಮಾಹಿತಿಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

## ೧.೩ ಅಧ್ಯಯನದ ಉದ್ದೇಶ

ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ನನಗೆ ಪದವಿ ಮತ್ತು ಸ್ನಾತಕೋತ್ತರ ಪದವಿಯಲ್ಲಿ ಅಭ್ಯಾಸ ಮಾಡುವಾಗ ಬಡತನ, ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರು, ಚಿಕ್ಕ, ಅತೀ ಚಿಕ್ಕ ರೈತರ ಸಮಸ್ಯೆಗಳ ಬಗ್ಗೆ ಆಸಕ್ತಿ ಬೆಳೆಯಿತು. ಚಿಕ್ಕ, ಅತೀ ಚಿಕ್ಕ ರೈತರ ಸಮಸ್ಯೆಗಳ ಕುರಿತು ಅಧ್ಯಯನ ಮಾಡುವ ಚಿಂತನೆ ಮೂಡಿತು. ಆದರೆ ಅವರಿಗಿಂತಲೂ ಹೀನಾಯ ಬದುಕು ಸಾಗಿಸುವ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು, ಅವರ ಬದುಕನ್ನು ಹತ್ತಿರದಿಂದ ನೋಡಿದ ನನಗೆ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಬಗ್ಗೆ ಅಧ್ಯಯನ ಕೈಗೊಳ್ಳುವುದು ಅತೀ ಅವಶ್ಯವೆನಿಸಿತು. ಅದಕ್ಕಾಗಿ ಕಾರ್ಮಿಕರ ಸಮಸ್ಯೆಯನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸುವ ಉದ್ದೇಶದಿಂದ ಮಹಿಳಾ ಅಧ್ಯಯನದೊಂದಿಗೆ ಸಂಬಂಧೀಕರಿಸಿ ಸಮಸ್ಯೆಯನ್ನು ವಿಶ್ಲೇಷಣೆಗೆ ಒಳಪಡಿಸುವುದಕ್ಕಾಗಿ ಅಧ್ಯಯನವನ್ನು ಕೈಗೊಂಡಿದ್ದೇನೆ.

ಅಸಂಘಟಿತ ವಲಯ ಎಂಬುದು ತುಂಬ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ೬ ಕೋಟಿ ಜನರನ್ನು ತನ್ನ ಒಡಲಲ್ಲಿ ತುಂಬಿಕೊಂಡು ಸಲಹುತ್ತಿದೆ. ಇಂತಹ ಆರ್ಥಿಕ ವ್ಯವಸ್ಥೆಯ ಸ್ವರೂಪ ಮತ್ತು ಲಕ್ಷಣಗಳನ್ನು ತಿಳಿಯುವುದು ಅವಶ್ಯವಿದೆ. ಆದ್ದರಿಂದ ಅಸಂಘಟಿತ ವಲಯ ಎಂದರೇನು? ಆ ವಲಯದ ಲಕ್ಷಣ ಮತ್ತು ವಿವಿಧ ವೃತ್ತಿಗಳಾವುವು? ಮಹಿಳಾ ಕಾರ್ಮಿಕರೇ ಯಾಕೆ ಹೆಚ್ಚಾಗಿ ಈ ವಲಯದಲ್ಲಿ ದುಡಿಯುತ್ತಿದ್ದಾರೆ? ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯ ದುಡಿಮೆಯನ್ನು ಯಾವ ರೀತಿಯಾಗಿ ಪರಿಭಾವಿಸಲಾಗಿದೆ? ಅವಳ ದುಡಿಮೆಯ ಮೇಲೆ ಪ್ರಭಾವ ಬೀರುವ ಸಾಮಾಜಿಕ ಅಂಶಗಳು ಯಾವುವು? ಆರ್ಥಿಕ ಮತ್ತು ಅಭಿವೃದ್ಧಿ ಸಿದ್ಧಾಂತಗಳು ಮಹಿಳಾ ಪ್ರಗತಿಗೆ ಹೇಗೆ ಸಹಾಯಕವಾಗಿವೆ ಎಂಬ ಹಲವಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

ಸರಕಾರ ಇತ್ತೀಚಿನ ದಿನಗಳಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಕಾರ್ಮಿಕರ ಬಗ್ಗೆ ವಿಶೇಷ ಆಸಕ್ತಿಯನ್ನು ತಳೆಯುತ್ತಿದೆ. ಆ ಕಾರ್ಮಿಕರ ರಕ್ಷಣೆಗೆ ಅನೇಕ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ಈ ಕಾರ್ಯಕ್ರಮಗಳ ಪ್ರಯೋಜನ ಈ ದುಡಿಮೆಗಾರರಿಗೆ ಎಷ್ಟರ ಮಟ್ಟಿಗೆ ದೊರೆಯುತ್ತಿದೆ? ಸರಕಾರದ ಯೋಜನೆಗಳು ಫಲಾನುಭವಿಗಳನ್ನು ತಲುಪುವ ಯಾವ ಹಂತದಲ್ಲಿ ವಿಫಲವಾಗುತ್ತಿವೆ? ಇದಕ್ಕೆ ಕಾರಣಗಳೇನು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಈ ಸಂಶೋಧನೆಯ ಉದ್ದೇಶವಾಗಿದೆ.

## ೧.೪ ಅಧ್ಯಯನದ ವ್ಯಾಪ್ತಿ

ಈ ಸಂಶೋಧನೆಯ ಅಧ್ಯಯನ ವ್ಯಾಪ್ತಿಯನ್ನು ಎರಡು ವಿಧದಲ್ಲಿ ವಿಂಗಡಿಸಲಾಗಿದೆ. ಒಂದು ಭಾಗದಲ್ಲಿ ವಿಷಯವ್ಯಾಪ್ತಿಯನ್ನು ಮತ್ತೊಂದು ಭಾಗದಲ್ಲಿ ಕ್ಷೇತ್ರ ವ್ಯಾಪ್ತಿಯನ್ನು ಒಳಗೊಂಡಿದೆ.

ಈ ಅಧ್ಯಯನದ ವಿಷಯ ವ್ಯಾಪ್ತಿಯು ಅಸಂಘಟಿತ ವಲಯವಾಗಿದೆ. ಈ ವಲಯದಲ್ಲಿ ಕೃಷಿವಲಯ, ಕಟ್ಟಡ ಮತ್ತು ರಸ್ತೆ ನಿರ್ಮಾಣ, ಗೃಹಕೈಗಾರಿಕೆ, ಸ್ವಯಂ ಉದ್ಯೋಗ, ಹಣ್ಣು, ತರಕಾರಿ ಮಾರಾಟ ಮಾಡುವುದು, ಬುಟ್ಟಿ ಚಾಪೆ ಎಣೆಯುವುದು, ಬಟ್ಟೆ ಹೊಲಿಯುವುದು, ಮನೆಗೆಲಸ, ನೂಲು ತೆಗೆಯುವುದು, ಬಟ್ಟೆ ನೇಯುವುದು, ಅಗರಬತ್ತಿ ತಯಾರಿಕೆ, ಆಹಾರ ಸಂರಕ್ಷಣೆ ಮತ್ತು ಇತರ ಉತ್ಪನ್ನ ಘಟಕಗಳಲ್ಲಿ ದುಡಿಯುವುದು ಇತ್ಯಾದಿ ವೃತ್ತಿಗಳಲ್ಲದೆ ಸರಕಾರ ಗುರುತಿಸಿದ ೬ ವೃತ್ತಿಗಳು ಕಂಡುಬರುತ್ತವೆ.

ಅಸಂಘಟಿತ ವಲಯದ ಈ ಎಲ್ಲ ವೃತ್ತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳುವುದು ತೊಂದರೆದಾಯಕ ಕೆಲಸ ಮಾತ್ರವಲ್ಲದೆ ಸಂಶೋಧನಾ ಪರಿಮಿತಿ ವಿಶಾಲವಾಗಿ ಸಮಸ್ಯೆಯ ಸ್ಥಿರಚಿತ್ರಣ ಮಾಡುವಲ್ಲಿ ತೊಂದರೆಯಾಗುತ್ತದೆ. ಅದಕ್ಕಾಗಿ ಅಧ್ಯಯನದ ವಿಷಯ ವ್ಯಾಪ್ತಿಯನ್ನು ಅಸಂಘಟಿತ ವಲಯದ ವೃತ್ತಿಗಳನ್ನು ಪ್ರತಿನಿಧಿಸುವ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಮಸ್ಯೆಗಳಿಗೆ ಅಧ್ಯಯನ ವ್ಯಾಪ್ತಿಯನ್ನು ಸೀಮಿತಗೊಳಿಸಿದ್ದೇನೆ. ಈ ಕಾರ್ಮಿಕರು ಆರ್ಥಿಕ, ಸಾಮಾಜಿಕ ಹಾಗೂ ಕೌಟುಂಬಿಕ ನೆಲೆಗಳ ಜೊತೆಗೆ ಸರಕಾರದ ಯೋಜನೆಗಳ ಸಫಲತೆ, ವಿಫಲತೆಯನ್ನು ಅಧ್ಯಯನ ಮಾಡುವುದು ವಿಷಯವ್ಯಾಪ್ತಿಗೆ ಸೇರಿಸಲಾಗಿದೆ.

### ಕ್ಷೇತ್ರಕಾರ್ಯದ ವ್ಯಾಪ್ತಿ

ಅಸಂಘಟಿತ ವಲಯವು ದೇಶದ ನಾನಾ ಭಾಗಗಳಲ್ಲಿ ವಿವಿಧ ರೂಪದಲ್ಲಿ ಕಂಡುಬರುತ್ತಿದೆ. ಪ್ರಾದೇಶಿಕ ಭಿನ್ನತೆ ಮತ್ತು ಜನರ ವೃತ್ತಿ ಬದುಕನ್ನು ಆಧರಿಸಿ ಈ ವಲಯದ ಸ್ವರೂಪ ಮತ್ತು ಸಮಸ್ಯೆಗಳೂ ಸಹ ಭಿನ್ನವಾಗಿರುತ್ತವೆ. ಆದ್ದರಿಂದ ಅಧ್ಯಯನದ ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ಕೊಪ್ಪಳ ಜಿಲ್ಲೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

ಕೊಪ್ಪಳ ಜಿಲ್ಲೆಯು ಗಂಗಾವತಿ, ಕೊಪ್ಪಳ, ಕುಷ್ಟಗಿ ಮತ್ತು ಯಲಬುರ್ಗ ಎಂಬ ನಾಲ್ಕು ತಾಲುಕುಗಳನ್ನು ಹೊಂದಿದೆ. ಇದು ಒಟ್ಟು ೫೫೫೯ ಚದರು ಕಿಲೋಮೀಟರ್ ವಿಸ್ತೀರ್ಣವನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ಒಟ್ಟು ೧೧,೯೬.೦೮೯ ಜನಸಂಖ್ಯೆ ಇದೆ. ಇದರಲ್ಲಿ ೬,೦೩.೩೧೨ ಜನ ಪುರುಷರು ಮತ್ತು ೫,೯೨.೭೭೭ ಜನ ಮಹಿಳೆಯರು ಇದ್ದಾರೆ. ಜಿಲ್ಲೆಯಲ್ಲಿ ೫,೫೪.೫೦೬ ಜನ ಒಟ್ಟು ಕೆಲಸಗಾರರಿದ್ದು ಇದರಲ್ಲಿ ೩,೨೩,೭೩೨ ಜನ ಪುರುಷ ಕೆಲಸಗಾರರು ಮತ್ತು ೨,೩೦.೭೭೪ ಜನ ಮಹಿಳಾ

ಕೆಲಸಗಾರರು ಇದ್ದಾರೆ. ಹಾಗೂ ಜಿಲ್ಲೆಯಲ್ಲಿ ಒಟ್ಟು ೨,೩೪.೯೭೨ ಜನ ಕೃಷಿ ಕಾರ್ಮಿಕರಿದ್ದು ಅದರಲ್ಲಿ ೮೪,೨೩೯ ಜನ ಪುರುಷರು ಮತ್ತು ೧,೫೦.೭೫೩ ಜನ ಮಹಿಳೆಯರು ಇದ್ದಾರೆ.[೨೭]

ನೀರಾವರಿ ಮತ್ತು ಒಣಭೂಮಿ ಪ್ರದೇಶದಿಂದ ಕೂಡಿದ ಕೊಪ್ಪಳ ಜಿಲ್ಲೆಯಲ್ಲಿ ಕೃಷಿ ಪ್ರಮುಖ ಉದ್ಯೋಗವಾಗಿದ್ದು ಈ ವಲಯದಲ್ಲಿ ಅತೀ ಹೆಚ್ಚಿನ ಸಂಖ್ಯೆಯ ಮಹಿಳಾ ಕಾರ್ಮಿಕರು ಅಂದರೆ ೧,೫೦.೭೫೩ ಜನರು ಕೃಷಿ ಚಟುವಟಿಕೆಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ನಿರ್ಮಾಣ ಉದ್ಯಮವು ಇತ್ತೀಚೆಗೆ ಬೆಳೆಯುತ್ತಿರುವ ಉದ್ಯಮವಾಗಿದ್ದು ಇದು ಮುಖ್ಯವಾಗಿ ತಾಲೂಕು ಪ್ರದೇಶದಲ್ಲಿ ಕೇಂದ್ರೀಕೃತವಾಗಿದೆ. ಈ ಉದ್ಯೋಗದಲ್ಲಿ ೨೯.೦೧೧ ಜನ ಮಹಿಳೆಯರು ದುಡಿಯುತ್ತಿದ್ದಾರೆ. ಜಿಲ್ಲೆಯಲ್ಲಿ ಮಹಿಳಾ ಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದು, ಅವರೆಲ್ಲರೂ ಅಸಂಘಟಿತ ವಲಯದ ವೃತ್ತಿಗಳಾದ ಕೃಷಿ ಮತ್ತು ನಿರ್ಮಾಣಕಾರ್ಯ ಹಾಗೂ ಇತರ ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ. ಇವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಹಿಂದುಳಿದ ಸಮುದಾಯಕ್ಕೆ ಸೇರಿದವರಾಗಿದ್ದು, ಕೆಲಸದ ಸಮಯದಲ್ಲಿ ನಾನಾ ವಿಧದ ತೊಂದರೆ, ತಾರತಮ್ಯ ಮತ್ತು ಶೋಷಣೆಯನ್ನು ಅನುಭವಿಸುವುದರ ಜೊತೆಗೆ ಕೆಳಮಟ್ಟದ ಸಾಮಾಜಿಕ ಸ್ಥಾನಮಾನವನ್ನು ಹೊಂದಿದವರಾಗಿದ್ದಾರೆ. ಇಂತಹ ದುಡಿಮೆಗಾರರ ಬದುಕಿನ ಆಧಾರದ ಮೇಲೆ ಅಸಂಘಟಿತ ವಲಯದಲ್ಲಿನ ದುಡಿಮೆ, ದುಡಿಮೆಯ ಸ್ವರೂಪ ಮತ್ತು ಸಮಸ್ಯೆಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶದಿಂದ ಅಧ್ಯಯನದ ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ಕೊಪ್ಪಳ ಜಿಲ್ಲೆಗೆ ಸೀಮಿತಗೊಳಿಸಿದ್ದೇನೆ.

## ೧.೫ ಅಧ್ಯಯನದ ವಿಧಿ-ವಿಧಾನಗಳು

ಈ ಸಂಶೋಧನಾ ವಿಷಯವು ಮಹಿಳಾ ಬದುಕು ಮತ್ತು ಅವಳ ಆರ್ಥಿಕತೆಗೆ ಸಂಬಂಧಿಸಿದ್ದಾಗಿದೆ. ಆದ್ದರಿಂದ ಸಮಾಜ ವಿಜ್ಞಾನಗಳ ಸಂಶೋಧನಾ ವಿಧಿ-ವಿಧಾನದ ಜೊತೆಗೆ ಸ್ತ್ರೀವಾದಿ ಸಂಶೋಧನಾ ವಿಧಿ-ವಿಧಾನವನ್ನು ಅಳವಡಿಸಿಕೊಂಡಿದ್ದೇನೆ. ಸಮಾಜ ವಿಜ್ಞಾನಗಳ ಸಂಶೋಧನಾ ವಿಧಾನವು ಪ್ರಧಾನವಾಗಿ ಪರಿಮಾಣಾತ್ಮಕ ವಿಧಾನವಾದರೆ ಸ್ತ್ರೀವಾದಿ ಸಂಶೋಧನಾ ವಿಧಾನವು ಪ್ರಧಾನವಾಗಿ ಗುಣಾತ್ಮಕ ವಿಧಾನವಾಗಿದೆ. ಪರಿಮಾಣಾತ್ಮಕ ವಿಧಾನದಲ್ಲಿ ವಿಷಯವನ್ನು ಅಂಕಿ ಸಂಖ್ಯೆಗಳ ಆಧಾರದ ಮೇಲೆ ಸಮಸ್ಯೆಯನ್ನು 'ವ್ಯಕ್ತಿನಿಷ್ಠ'ವಾಗಿ ವಿಶ್ಲೇಷಿಸಿದರೆ ಗುಣಾತ್ಮಕ ವಿಧಾನದಲ್ಲಿ ಸಮಸ್ಯೆಯನ್ನು 'ವಸ್ತುನಿಷ್ಠ'ವಾಗಿ ವಿಶ್ಲೇಷಿಸಲಾಗುತ್ತದೆ. ಉದಾಹರಣೆಗೆ: ದೇಶದಲ್ಲಿನ ಮಹಿಳಾ ಸಾಕ್ಷರತೆಯನ್ನು ತೆಗುದುಕೊಂಡರೆ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೫೪.೭೫ರಷ್ಟು ಮಹಿಳೆಯರು ಮಾತ್ರ ಸಾಕ್ಷರರಾಗಿದ್ದಾರೆ ಎಂದು ಅಂಕಿ ಸಂಖ್ಯೆ ನೀಡುವುದು 'ವಸ್ತುನಿಷ್ಠ' ವಿಶ್ಲೇಷಣೆಯಾದರೆ, ಅನಕ್ಷರತೆಗೆ ಮುಖ್ಯ ಕಾರಣ ಬಡತನ ಮತ್ತು ಜನರ ಮೌಢ್ಯತೆಯಾಗಿದ್ದು, ಇವರು 'ಅಕ್ಷರ ಜ್ಞಾನ' ಇಲ್ಲದೆ ಕೇವಲ ತಮ್ಮ 'ಹಸ್ತಾಕ್ಷರ' ಮಾಡು

ವುದನ್ನು ಕಲಿತವರಾಗಿದ್ದಾರೆ. ಹೀಗಾಗಿ ದೇಶದಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ ವಾಸ್ತವಿಕವಾಗಿ ಶೇಕಡ ೪೫ಕ್ಕಿಂತ ಕಡಿಮೆ ಇದೆ ಎಂಬ ಅಂಶವು 'ವ್ಯಕ್ತಿನಿಷ್ಠ' ವಿಷಯವಾಗಿದೆ.

ಸಮಸ್ಯೆಯನ್ನು ಸಮಾಜ ವಿಜ್ಞಾನಗಳ ಅಧ್ಯಯನ ವಿಧಾನವಾದ ಪರಿಮಾಣಾತ್ಮಕ ವಿಧಾನದ ಮೂಲಕ ಅಧ್ಯಯನ ಮಾಡಿದರೆ ಮಹಿಳೆಯರ ಸ್ಥಿತಿಗತಿ ಬಗ್ಗೆ ನೈಜ ಚಿತ್ರಣ ದೊರೆಯುವುದಿಲ್ಲ. ಅಲ್ಲದೆ ಸಮಸ್ಯೆಯನ್ನು ಅಂಕಿ ಸಂಖ್ಯೆಗಳ ಆಧಾರದ ಮೇಲೆ ಸಮಸ್ಯೆಯನ್ನು ವಿಶ್ಲೇಷಿಸಿ ಸಾಮಾನ್ಯೀಕರಣ ಗೊಳಿಸಲಾಗುತ್ತದೆ. ಇದರಿಂದಾಗಿ ಮಹಿಳಾ ಬದುಕಿನ ನೈಜ ಸಮಸ್ಯೆಯ ಕುರಿತು ವಿಶ್ಲೇಷಣೆ ಸಾಧ್ಯವಾಗುವುದಿಲ್ಲ. ಉದಾಹರಣೆಗೆ "ತಲಾ ಆದಾಯದಲ್ಲಿ ಹೆಚ್ಚಳ" ಎಂಬ ಸಮಸ್ಯೆಯನ್ನು ತೆಗೆದುಕೊಂಡರೆ ೨೦೦೧ರ ಜನಗಣತಿಯ ಪ್ರಕಾರ ಭಾರತದ ತಲಾ ಆದಾಯ ೧೭,೪೫೦ರಷ್ಟು ಹೆಚ್ಚಳವಾಗಿದೆ ಎಂಬ ಮಾಹಿತಿ ಅಂಕಿ ಸಂಖ್ಯೆಗಳಿಂದ ತಿಳಿದು ಬರುತ್ತಿದೆ. ಆದರೆ ವಾಸ್ತವಿಕವಾಗಿ ನೋಡಿದರೆ ಮಹಿಳೆಯರಿಗೆ ತಲಾ ಆದಾಯ ಎಂಬುದೇ ಇರುವುದಿಲ್ಲ. ಯಾಕೆಂದರೆ ಅವಳ ದುಡಿಮೆ ಅವಳದಾಗಿರುವುದಿಲ್ಲ. ಅದು ಅತ್ತೆ, ಮಾವ ಅಥವಾ ಗಂಡನ ಕೈ ಸೇರುತ್ತಿರುತ್ತದೆ. ಒಂದು ವೇಳೆ ಆದಾಯ ಅವಳದಾದರೂ ಅದರ ವ್ಯಯ ಮಾತ್ರ ಅವಳ ಹಿತಕ್ಕಾಗಿ ಆಗಿರುವುದಿಲ್ಲ ಎಂಬುದು ಅತೀ ಮುಖ್ಯವಾದ ವಿಷಯವಾಗಿದೆ. ಇಂತಹ ಸೂಕ್ಷ್ಮ ಅತೀ ಸೂಕ್ಷ್ಮ ವಿಷಯವನ್ನು ತಿಳಿಯಲು 'ಗುಣಾತ್ಮಕ ವಿಧಾನ' ಅತೀ ಅವಶ್ಯವಾಗಿದೆ. ಅದಕ್ಕಾಗಿ ಈ ಅಧ್ಯಯನದಲ್ಲಿ ಸ್ತ್ರೀವಾದಿ ಸಂಶೋಧನಾ ವಿಧಾನವಾದ 'ಗುಣಾತ್ಮಕ ವಿಧಾನ'ವನ್ನು ಅಳವಡಿಸಿ ಕೊಳ್ಳಲಾಗಿದೆ.

ಈ ಸಂಶೋಧನಾ ಪ್ರಬಂಧವು ಮುಖ್ಯವಾಗಿ ಕ್ಷೇತ್ರಕಾರ್ಯ ಆಧರಿತ ವಿಷಯವಾಗಿದೆ. ಅದಕ್ಕಾಗಿ ರಚಿತ ಮತ್ತು ಅರಚಿತ ಪ್ರಶ್ನೆಗಳ ಮೂಲಕ ಕಾರ್ಮಿಕರನ್ನು ಸಂದರ್ಶಿಸಿ ಮಾಹಿತಿ ಪಡೆದ ಪ್ರಥಮ ಆಕರಗಳನ್ನು ಒಳಗೊಂಡು, ದ್ವಿತೀಯ ಆಕರಗಳನ್ನು ಹೆಚ್ಚಾಗಿ ಬಳಸಿಕೊಂಡು ರಚಿಸಲಾಗಿದೆ. ಇಂಥ ರಚನೆಯಲ್ಲಿ ಸಾಧ್ಯವಾದಷ್ಟು ಮೂಲ ಕೃತಿಯನ್ನು ಬಳಸಿಕೊಳ್ಳಲಾಗಿದ್ದು, ಮೂಲಕೃತಿ ದೊರೆಯದಿದ್ದಲ್ಲಿ ಅನುವಾದಿತ ಕೃತಿಯನ್ನು ಬಳಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದ ಮಾಹಿತಿಯನ್ನು ಪಡೆಯುವಾಗ 'ಶಾಂಪಲಿಂಗ್ ಮೆಥೆಡ್'(ಮಾದರಿ ಅಯ್ಕೆ ವಿಧಾನ)ನ್ನು ಅನುಸರಿಸಲಾಗಿದೆ. ಅಂದರೆ ಇಡೀ ಜಿಲ್ಲೆಯಲ್ಲಿ ದುಡಿಯುವ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರನ್ನು ಸಂದರ್ಶಿಸುವ ಬದಲಾಗಿ ಜಿಲ್ಲೆಯ ನಾಲ್ಕು ತಾಲೂಕು ಕೇಂದ್ರದ ಆಯ್ದ ೧೦ ಗ್ರಾಮಗಳಿಂದ ಒಟ್ಟು ೩೦೦ ಜನರನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆದು ವಿಷಯವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.[೨೮]

ಅಧ್ಯಯನಕ್ಕೆ ಬೇಕಾದ ಅವಶ್ಯಕ ಮಾಹಿತಿಯನ್ನು ಪಡೆಯಲು ಈ ಕೆಳಗಿನ ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ.

೧. ರಚಿತ-ಅರಚಿತ ಪ್ರಶ್ನೆಗಳು

ವಕ್ತೃಗಳಿಂದ ಮಾಹಿತಿಯನ್ನು ಪಡೆಯಲು ರಚಿತ-ಅರಚಿತ ಪ್ರಶ್ನೆಗಳನ್ನು ಒಳಗೊಂಡ ಪ್ರಶ್ನಾವಳಿಯನ್ನು ತಯಾರಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ರಚಿತ ಪ್ರಶ್ನೆಗಳು ಕಾರ್ಮಿಕರ ಉದ್ಯೋಗದ ಬಗ್ಗೆ ಅಂಕೆ ಸಂಖ್ಯೆಗಳ ಬಗ್ಗೆ ಮಾಹಿತಿಯನ್ನು ನೀಡಿದರೆ, ಅರಚಿತ ಪ್ರಶ್ನೆಗಳು ಮಹಿಳಾ ಕಾರ್ಮಿಕರ ವೈಯಕ್ತಿಕ ಬದುಕಿನ ಬಗ್ಗೆ ಮಾಹಿತಿ ಪಡೆಯಲು ಸಹಕಾರಿಯಾಗಿವೆ.

೨. ಸಂದರ್ಶನ

ರಚಿತ-ಅರಚಿತ ಪ್ರಶ್ನೆಗಳ ಸಹಾಯದಿಂದ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಸಂದರ್ಶಿಸಿ ಅವರಿಂದ ಮಾಹಿತಿಯನ್ನು ಪಡೆಯಲಾಗಿದೆ.

೩. ಧ್ವನಿಮುದ್ರಣ ಯಂತ್ರ

ವಿಶೇಷ ವ್ಯಕ್ತಿ ಅಧ್ಯಯನ ಮಾಡಲು ಹಾಗೂ ಅರಚಿತ ಪ್ರಶ್ನೆಗಳಿಂದ ಬಂದ ಉತ್ತರವನ್ನು ಧ್ವನಿ ಮುದ್ರಣದಲ್ಲಿ ಸಂಗ್ರಹಿಸಿ, ಈ ಮಾಹಿತಿಯಿಂದ ವಿಷಯ ವಿಶ್ಲೇಷಣೆ ಮಾಡಲು ಸಹಾಯಕವಾಯಿತು.

೪. ಕ್ಯಾಮರ

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಛಾಯಾಚಿತ್ರ ಪಡೆಯಲು ಸಂಶೋಧನಾ ಆಕಾರ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ.

೫. ಆಕರಗ್ರಂಥಗಳು ಮತ್ತು ಪ್ರಭಾವಿ ಲೇಖನಗಳು

ಆಕರಗ್ರಂಥ ಮತ್ತು ಪ್ರಭಾವಿ ಲೇಖನಗಳಿಂದ ದ್ವಿತೀಯ ಆಕರ ಸಾಮಗ್ರಿಗಳನ್ನು ಪಡೆದು ಅವುಗಳ ಸಹಾಯದಿಂದ ವಿಷಯ ವಿಶ್ಲೇಷಣೆಯನ್ನು ಮಾಡಲಾಗಿದೆ.

ಈ ಮೇಲಿನ ಎಲ್ಲ ವಿಧಾನಗಳನ್ನು ಬಳಸಿಕೊಂಡು ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸ ಲಾಗಿದೆ.

೧.೬ ಅಧ್ಯಯನದ ಹಂತಗಳು

ಈ ಸಂಶೋಧನಾ ಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರತಿಯೊಂದು ಅಧ್ಯಾಯವು ಭಿನ್ನವಾಗಿ ಕಂಡರೂ ಅವು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ.

ಮೊದಲನೇ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ ಅಧ್ಯಯನದ ವಿಧಿ-ವಿಧಾನ, ಮಹತ್ವ ಮತ್ತು ಸ್ವರೂಪವನ್ನು ಒಳಗೊಂಡಿದೆ.

ಎರಡನೇ ಅಧ್ಯಾಯವು ಮಹಿಳೆಯ ಆರ್ಥಿಕ ಸ್ಥಿತಿಗತಿಯ ಮೇಲೆ ಸಾಮಾಜಿಕ ಅಂಶಗಳ ಪ್ರಭಾವವನ್ನು ವಿವರಿಸುತ್ತದೆ. ಈ ಅಧ್ಯಾಯದಲ್ಲಿ ಮಹಿಳಾ ಬದುಕಿನ ಚಾರಿತ್ರಿಕ ಹಿನ್ನೆಲೆ ಮತ್ತು ಮಹಿಳಾ ಆರ್ಥಿಕತೆಯ ಮೇಲೆ ಪ್ರಭಾವ ಬೀರುವ ಸಾಮಾಜಿಕ ಅಂಶಗಳಾದ ಕುಟುಂಬ, ವಿವಾಹ, ಧರ್ಮ ಮತ್ತು ಶಿಕ್ಷಣದ ಪ್ರಭಾವವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಮೂರನೇ ಅಧ್ಯಾಯವು ಅರ್ಥಶಾಸ್ತ್ರದ ಪರಿಕಲ್ಪನೆಗಳನ್ನು ಸ್ತ್ರೀವಾದಿ ವಿರ್ಮಶೆಗೆ ಒಳಪಡಿಸುವ ವಿಷಯವನ್ನು ಒಳಗೊಂಡಿದೆ. ಅಂದರೆ ಅರ್ಥಶಾಸ್ತ್ರದ ಮುಖ್ಯ ಹಾಗೂ ಮೂಲಭೂತ ಪರಿಕಲ್ಪನೆಗಳಾದ ಉತ್ಪಾದನೆ, ಉಪಭೋಗ, ವಿತರಣೆ, ಸೇವೆ, ದುಡಿಮೆ ಮತ್ತು ಬಡತನ, ಬಡತನದ ಮಹಿಳೀಕರಣದ ನಿರ್ವಚನ, ಇತ್ಯಾದಿ ಅಂಶಗಳನ್ನು ಮಹಿಳೆಯ ದೃಷ್ಟಿಯಲ್ಲಿ ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಪ್ರಚಲಿತ ಅಭಿವೃದ್ಧಿ ಸಿದ್ಧಾಂತಗಳನ್ನು ಸ್ತ್ರೀವಾದಿ ದೃಷ್ಟಿಯಲ್ಲಿ ವಿಶ್ಲೇಷಿಸಲಾಗಿದೆ. ಈ ಅಧ್ಯಾಯವು ಸಂಪ್ರದಾಯ ಪಂಥದ ಅಭಿವೃದ್ಧಿ ಸಿದ್ಧಾಂತಗಳು, ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತಗಳು, ಶ್ರಮ ಮಾರುಕಟ್ಟೆ ಸಿದ್ಧಾಂತಗಳು ಮತ್ತು ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆಯ ಪ್ರಗತಿ ಎಂಬ ವಿಷಯಗಳನ್ನು ಒಳಗೊಂಡಿದೆ.

ಐದನೇ ಅಧ್ಯಾಯದಲ್ಲಿ ಅಸಂಘಟಿತ ವಲಯ ಮತ್ತು ಮಹಿಳೆಯ ದುಡಿಮೆಯನ್ನು ವಿವರಿಸಲಾಗಿದೆ. ಈ ಅಧ್ಯಾಯವು ಅಸಂಘಟಿತ ವಲಯದ ಹುಟ್ಟು, ವಿವಿಧ ವೃತ್ತಿಗಳು, ಮಹಿಳೆಯ ದುಡಿಮೆ, ಸಮಸ್ಯೆಗಳು, ಅಸಂಘಟಿತ ವಲಯದ ಕಾರ್ಮಿಕರ ರಕ್ಷಣೆಗೆ ಸರಕಾರದ ಯೋಜನೆ ಮತ್ತು ಸಾಮಾಜಿಕ ಭದ್ರತಾ ಕಾರ್ಯಕ್ರಮಗಳನ್ನು ಒಳಗೊಂಡಿದೆ.

ಆರನೆಯ ಅಧ್ಯಾಯವು ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದ್ದು ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರ ಕ್ಷೇತ್ರ ಅಧ್ಯಾಯನವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಮಹಿಳಾ ದುಡಿಮೆಗಾರರ ಸಂಖ್ಯೆ, ದುಡಿಮೆಯ ಸಹಭಾಗಿತ್ವ, ಕೆಲಸದ ಸ್ವರೂಪ, ಸಾಕ್ಷರತೆ, ಆರೋಗ್ಯ ಮತ್ತು ದುಡಿಮೆಗಾರರ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ.

ಕೊನೆಯ ಅಧ್ಯಾಯವು ಉಪಸಂಹಾರವನ್ನು ಒಳಗೊಂಡಿದ್ದು ಅದರಲ್ಲಿ ಅಧ್ಯಯನದ ಮಹತ್ವ ಮತ್ತು ಅಧ್ಯಯನದ ಫಲಿತಗಳನ್ನು ಒಳಗೊಂಡಿದೆ.

### ೧.೭ ಅಧ್ಯಯನದ ಮಹತ್ವ

ಈ ಒಂದು ಅಧ್ಯಯನವು ಸಲಹಾತ್ಮಕ ಸಂಶೋಧನಾ ವಿಧಾನವನ್ನು ಅಳವಡಿಸಿಕೊಂಡಿದೆ. ಸಮಸ್ಯೆಯ ಅಧ್ಯಯನದ ಜೊತೆಗೆ ಸಮಸ್ಯೆಗೆ ಪರಿಹಾರಾತ್ಮಕ ಸಲಹೆಗಳನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ.

ಸರಕಾರ ಬಡವರ ಮತ್ತು ಕಾರ್ಮಿಕರ ಪ್ರಗತಿಗಾಗಿ ಅನೇಕ ಯೋಜನೆ ಹಾಗೂ ಕಾರ್ಯಕ್ರಮಗಳನ್ನು ರೂಪಿಸಿದೆ(ಉದಾಹರಣೆಗೆ IRDP, NREGP, SJRY, PMRY, TRYSM ಮತ್ತು ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಇತ್ಯಾದಿ). ಆದರೆ ಈ ಯೋಜನೆಗಳ ಪ್ರಯೋಜನ ಬಡಜನರಿಗೆ ತಲುಪುವಲ್ಲಿ ವಿಫಲವಾಗುತ್ತಿವೆ. ಇದಕ್ಕೆ ಕಾರಣವಾದ ಅಂಶಗಳನ್ನು ತಿಳಿಸುವ ಮೂಲಕ ಈ ಕಾರ್ಯಕ್ರಮಗಳ ಯಶಸ್ಸಿಗೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ಮಾಹಿತಿಯನ್ನು ನೀಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಸರಕಾರ ಕಾರ್ಮಿಕರ ರಕ್ಷಣೆಗೆ ಮತ್ತು ಕಲ್ಯಾಣದ ಕುರಿತು ಶಾಸನಾತ್ಮಕ ಮತ್ತು ಸಂವಿಧಾನಾತ್ಮಕ ಕ್ರಮ ಕೈಗೊಂಡರೂ ಕಾರ್ಮಿಕರ ಮೇಲೆ ದಬ್ಬಾಳಿಕೆ, ದೌರ್ಜನ್ಯ, ಶೋಷಣೆ ನಿರಂತರವಾಗಿ ನಡೆಯುತ್ತಿದೆ. ಇದಕ್ಕೆ ಕಾರಣ ಮತ್ತು ಶಾಸನಗಳ ಜಾರಿಯಲ್ಲಿನ ತೊಡಕುಗಳ ಕುರಿತು ಮಾಹಿತಿಯನ್ನು ಈ ಅಧ್ಯಯನ ನೀಡುವುದರ ಜೊತೆಗೆ ಈ ಸಮಸ್ಯೆ ನಿವಾರಣೆಗೆ ಸಲಹೆಗಳನ್ನು ನೀಡುವ ಪ್ರಯತ್ನ ಈ ಅಧ್ಯಯನದ್ದಾಗಿದೆ.

ಮಹಿಳೆಯರ ಆರ್ಥಿಕ ಸಬಲತೆಗೆ ಅವಳ ದುಡಿಮೆ ಮತ್ತು ಹಣಕಾಸಿನ ನಿಯಂತ್ರಣ ಅವಳ ಹಿಡಿತದಲ್ಲಿರುವುದು ಅತಿ ಮುಖ್ಯ. ಅದಕ್ಕಾಗಿ ಅವರು ಸ್ತ್ರೀಶಕ್ತಿ, ಸ್ವಸಹಾಯ ಗುಂಪು, ಮತ್ತು ಸ್ವಯಂ ಉದ್ಯೋಗ ಸಂಘದ ಮೂಲಕ ಹಣಕಾಸಿನ ಆರ್ಥಿಕ ಭದ್ರತೆ ಹೊಂದುವುದಕ್ಕಾಗಿ ಸೇವಾ ಎಂಬ ಸಂಸ್ಥೆಯ ಮಾಹಿತಿಯನ್ನು ನೀಡಲಾಗಿದೆ. ಆ ಸಂಸ್ಥೆಯು ಮಹಿಳೆಯರು ಆರ್ಥಿಕ ಸಬಲತೆ ಗಳಿಸಲು ಬೇಕಾದ ಸಲಹೆಗಳನ್ನು ನೀಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಿದೆ.

ಆರ್ಥಿಕತೆಯಲ್ಲಿ 'ದುಡಿಮೆ' ಎಂಬ ಕಲ್ಪನೆಯನ್ನು ಕೇವಲ ಆರ್ಥಿಕ ಅಂಶ 'ಹಣ'ದ ಮೂಲಕ ಅಳೆಯಲಾಗುತ್ತದೆ. ಆದರೆ ಮಹಿಳೆ ಈ ಹಣರೂಪಿ ದುಡಿಮೆಯ ಜೊತೆಗೆ ಕುಟುಂಬ ಸಂಬಂಧಿ ಮತ್ತು ಸಂತಾನ ಪ್ರಾಪ್ತಿ ದುಡಿಮೆಯನ್ನು ಮಾಡುತ್ತಿದ್ದಾಳೆ. ಇದನ್ನು ದುಡಿಮೆ ಎಂದು ಆರ್ಥಿಕ ಚಿಂತಕರು ಪರಿಗಣಿಸುತ್ತಿಲ್ಲ. ಆದ್ದರಿಂದ ಆರ್ಥಿಕ ಚಿಂತಕರಲ್ಲಿ ಸಹ 'ದುಡಿಮೆ' ಎಂಬ ಪರಿಭಾವನೆ ಬಗ್ಗೆ ವಿಶಾಲ ದೃಷ್ಟಿಕೋನ ಬೆಳೆಯುವುದು ಅಗತ್ಯವಿದೆ. ಅಂದಾಗ ಮಾತ್ರ 'ದುಡಿಮೆ' ಅಥವಾ ಉದ್ಯೋಗ ಎಂಬ ಪದಕ್ಕೆ ಅರ್ಥ ಬಂದು ಮಹಿಳೆಯ ದುಡಿಮೆಗೆ ನಿಜವಾದ ಮೌಲ್ಯ ದೊರೆಯುತ್ತದೆ. ,

**ಅಡಿಟಿಪ್ಪಣಿಗಳು**

೧. ಸುಂದರಂ ಕೆ.ಪಿ.ಎಂ. ಮತ್ತು ರುದ್ರದತ್ತ, ೨೦೦೧, ಇಂಡಿಯನ್ ಎಕಾನಮಿ, ಪು.೭೩

೨. ಅದೇ, ಪು.೭೩

೩. ರೇನನ್‌ಜಹಾಬ್‌ವಾಲ ಮತ್ತು ಆರ್.ಕೆ.ಎ.ಸುಬ್ರಹ್ಮಣ್ಯ, ೨೦೦೦, ದಿ ಅನ್‌ಆರ್ಗನೈಸ್ಡ್ ಸೆಕ್ಟರ್ ವರ್ಕ್ ಸೆಕ್ಯುರಿಟಿ ಆ್ಯಂಡ್ ಸೋಸಿಯಲ್ ಪ್ರೊಟೆಕ್ಷನ್, ಪು.೧೭-೧೮

೪. ಅದೇ, ಪು.೧೭

೫. ಟುವರ್ಡ್ಸ್ ಈಕ್ವಾಲಿಟಿ ವರದಿ ೧೯೭೪, ಪು.೧೫೭

೬. ನಿರ್ಮಲ ಬ್ಯಾನರ್ಜಿ, ೧೯೮೫, ವುಮನ್ ವರ್ಕ್ ಇನ್‌ದ ಅನ್‌ಆರ್ಗನೈಸ್ಡ್ ಸೆಕ್ಟರ್, ಪು.೩೯-೪೦

೭. ಅದೇ, ಪು.೧೭-೧೮

೮. ಶರತ್ ಜಿ.ಲೈನ್, ೨೦೦೬, ಅನ್‌ಡಾಕ್ಯುಮೆಂಟೆಡ್ ವರ್ಕರ್ ಇನ್ ದ ಯು.ಎಸ್, ಪು.೪೮೬೭-೪೮೭೧

೯. ಅದೇ, ಪು.೪೮೬೭

೧೦. ಮಹಾಬಲ ಸೀತಾಳಭಾವಿ, ಮರಳಿಮಣ್ಣಿಗೆ, ಕನ್ನಡ ಪ್ರಭ, ೧೩ನೇ ನವೆಂಬರ್, ೨೦೦೮

೧೧. ನಿತ್ಯವೂ ಶೋಷಣೆಯಿಂದ ನಲಗುವ ಮನೆಗೆಲಸದವರು, ಕನ್ನಡ ಪ್ರಭ, ೧ನೇ ಮೇ, ೨೦೦೬

೧೨. ಗೋಪಾಲ ಸುತರ್, ಕೊಲ್ಲಿಯಲ್ಲಿ ಮನೆಗೆಲಸದ ಮಹಿಳೆಯರ ಶೋಷಣೆ, ಪ್ರಜಾವಾಣಿ, ೮ನೇ ಸೆಪ್ಟೆಂಬರ್, ೨೦೦೭

೧೩. ಗಾಯತ್ರಿ ಎನ್., ೧೯೯೧, ಮಹಿಳೆ : ಬಿಡುಗಡೆಯ ಹಾದಿಯಲ್ಲಿ, ಪು.೧೨೧

೧೪. ಸಂಧ್ಯಾ ವೈ.ಕೆ., ೧೯೭೫, ಮಹಿಳೆ ಮತ್ತು ಉದ್ಯೋಗ, ಪು.೨

೧೫. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು ಹೆಂಗಸು, ಪು.೫೫

೧೬. ಹೇಮಲತಾ ಹೆಚ್.ಎಂ., ೨೦೦೬, ಮಹಿಳಾ ಅಧ್ಯಯನ ೨, ಪು.೩೯

೧೭. ರಾಜಶೇಖರ್ ಮತ್ತು ಸುಚಿತ್ರಾ ಜೆ.ವಾಯ್, ೨೦೦೬, ಎಂಪ್ಲಾಯ್‌ಮೆಂಟ್ ಸೆಕ್ಯುರಿಟಿ ಫರ್ ದ ಅನ್‌ಆರ್ಗನೈಸ್ಡ್ ಸೆಕ್ಟರ್ ವರ್ಕರ್ಸ್ ಇನ್ ಕರ್ನಾಟಕ, ಪು.೩-೫

೧೮. ಅದೇ, ಪು.೪

೧೯. ಅದೇ, ಪು.೫

೨೦. ಇಂಡಿಯನ್ ಎಕ್ಸಪ್ರೆಸ್, ಫೆಬ್ರವರಿ ೨೩, ೨೦೦೫

೨೧. ರಾಜಶೇಖರ್ ಮತ್ತು ಸುಚಿತ್ರಾ ಜೆ.ವಾಯ್, ೨೦೦೬, ಎಂಪ್ಲಾಯ್‌ಮೆಂಟ್ ಸೆಕ್ಯುರಿಟಿ ಫರ್ ದ ಅನ್‌ಆರ್ಗನೈಸ್ಡ್ ಸೆಕ್ಟರ್ ವರ್ಕರ್ಸ್ ಇನ್ ಕರ್ನಾಟಕ, ಪು.೩-೫

೨೨. ಸೆನ್ಸಸ್ ಆಫ್ ಇಂಡಿಯಾ-೨೦೦೧, ಪು.೫

೨೩. ಎಡ್ವರ್ಡ್ ಸಫೀರ್, ೨೦೦೯, ನ್ಯೂಕ್ರೋ ಎಕಾನಮಿಕ್ ಅನಾಲೀಸಿಸ್, ಪು.೧೯-೪೯

೨೪. ಜಿಂಗನ್ ಎಂ.ಎಲ್., ೨೦೦೯, ದ ಎಕಾನಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೨೧೨-೨೧೬

೨೫. ಅಗರವಾಲ್ ಎ.ಎನ್.ಆ್ಯಂಡ್ ಕುಂದನ್‌ಲಾಲ್, ೧೯೯೩, ಎಕಾನಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್ ಅಂಡರ್ ಡೆವಲಪ್‌ಮೆಂಟ್ ವಿಸಸ್ ಸರ್ಕಲ್ ಆಫ್ ಪಾವರ್ಟಿ ಆ್ಯಂಡ್ ಲೋ ಲೇವಲ್ ಈಕ್ವಾಲೀ ಬ್ರೀಮ್ ಟ್ರ್ಯಾಪ್, ಪು.೪-೧

೨೬. ಅಮರ್ತ್ಯಸೇನ್, ೨೦೦೨ ಪಾವರ್ಟಿ ಆ್ಯಂಡ್ ಫಿಮೈನ್, ಕಾನ್‌ಸೇಪ್ಟ್ ಆಫ್ ಪಾವರ್ಟಿ, ಪು.೯-೨೩

೨೭. ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ-೨೦೦೫-೦೬, ಪು.೧೦-೧೨

೨೮. ಚಂದ್ರಪೂಜಾರಿ ಎಂ., ೨೦೦೫, ಸಮಾಜ ಸಂಶೋಧನೆ, ಪು.೧೨

೨೯. ರಿಸರ್ಚ್ ಮೆಥಡಲಾಜಿ, ವಿನಾಯಕ ಮಿಸನ್ ಯುನಿವರ್ಸಿಟಿ, ಸೇಲಂ

# ಅಧ್ಯಾಯ ಎರಡು

# ಮಹಿಳಾ ಆರ್ಥಿಕತೆಯ ಮೇಲೆ ಸಾಮಾಜಿಕ ಅಂಶಗಳ ಪ್ರಭಾವ

# ಅಧ್ಯಾಯ ಎರಡು

## ಮಹಿಳಾ ಆರ್ಥಿಕತೆಯ ಮೇಲೆ ಸಾಮಾಜಿಕ ಅಂಶಗಳ ಪ್ರಭಾವ

ಮಾನವ ಸಮಾಜ ಜೀವಿ ಸಮಾಜ ಹೊರತಾಗಿ ಜೀವಿಸಲಾರ. ಅವನು ಹುಟ್ಟಿನಿಂದ ಸಾಯುವವರೆಗೂ ಸಮಾಜೀಕರಣ ಪ್ರಕ್ರಿಯೆಗೆ ಒಳಗಾಗುತ್ತಾನೆ. ಈ ಪ್ರಕ್ರಿಯೆ ಅವನ ಜೀವನದುದ್ದಕ್ಕೂ ನಿರಂತರವಾಗಿ ನಡೆಯುತ್ತದೆ. ಮಾನವನು "ಸಮಾಜ ಒಪ್ಪಿತ ಮತ್ತು ಸಮಾಜ ರೂಪಿಸಿದ ನೀತಿನಿಯಮಗಳನ್ನು ಮೀರದಂತೆ ತನ್ನ ನಡವಳಿಕೆಯನ್ನು ರೂಪಿಸಿಕೊಳ್ಳುವುದೇ ಸಮಾಜೀಕರಣ ಪ್ರಕ್ರಿಯೆಯಾಗಿದೆ." ಈ ಸಮಾಜೀಕರಣ ಪ್ರಕ್ರಿಯೆಯು ಪುರುಷಶಾಹಿ ಮನೋಧೋರಣೆಯನ್ನು ಒಳಗೊಂಡಿದ್ದು ಸಾಮಾಜಿಕ ವ್ಯವಸ್ಥೆಯ ಎಲ್ಲ ಸಂಸ್ಥೆಗಳ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಹೀಗಾಗಿ ಸಮಾಜ ಎಂದರೆ ಪುರುಷಶಾಹಿ ಸಮಾಜವೇ ಆಗಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕವಾಗಿ ಸಬಲರಾಗಿದ್ದವರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನ ದೊರೆಯುತ್ತದೆ. ಉದಾಹರಣೆಗೆ ಆರ್ಥಿಕವಾಗಿ ಸಬಲರಾಗಿದ್ದವರು ಮಕ್ಕಳಿಗೆ ಗುಣಮಟ್ಟದ ಶಿಕ್ಷಣವನ್ನು ಕೊಡಿಸಿ ಅವರಿಗೆ ಹೆಚ್ಚು ಹಣ ಸಂಪಾದಿಸುವ ಉನ್ನತ ಹುದ್ದೆಗೆ ಹಚ್ಚುತ್ತಾರೆ. ಇದರಿಂದಾಗಿ ಅವರ ಆರ್ಥಿಕ ಸ್ಥಿತಿ ಉತ್ತಮವಾಗುವುದರ ಜೊತೆಗೆ ಸಾಮಾಜಿಕ ಸ್ಥಿತಿಯು ಉತ್ತಮವಾಗುತ್ತದೆ. ಸಮಾಜದಲ್ಲಿ ಅವರನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಇದರಿಂದಾಗಿ ಅವರಿಗೆ ರಾಜಕೀಯವಾಗಿ ಮುಂದುವರೆಯಲು ಅವಕಾಶ ದೊರೆಯುತ್ತದೆ.

ದಲಿತರು ಮತ್ತು ಮಹಿಳೆಯರನ್ನು ಶಿಕ್ಷಣ ಮತ್ತು ಆರ್ಥಿಕ(ಉದ್ಯೋಗ) ಸಬಲತೆಯಿಂದ ದೂರ ಇಟ್ಟಿರುವುದು ಅವರನ್ನು ಸಮಾಜದಲ್ಲಿ ಕಡಿಮೆ ಸ್ಥಾನಮಾನ ಹೊಂದುವಂತೆ ಮಾಡಿದೆ. ಒಂದು ವೇಳೆ ಮಹಿಳೆ ಕೆಳಮಟ್ಟದ ಕಡಿಮೆ ಆದಾಯ ಬರುವಂತಹ ಕೂಲಿ ಕೆಲಸ ಮಾಡುತ್ತಿದ್ದರೂ ಅವಳ ದುಡಿಮೆ ಅವಳಿಗೆ ದೊರೆಯದೆ ಗಂಡಸರ ಕೈಸೇರಿ ಅವಳನ್ನು ಪುರುಷರ ಅವಲಂಬಿಯಾಗುವಂತೆ ಮಾಡಿದೆ. ಈ ಸಾಮಾಜಿಕ ವ್ಯವಸ್ಥೆ ರೂಪಿಸಿದ ರೂಢಿ, ಸಂಪ್ರದಾಯ ಪದ್ಧತಿ ಮತ್ತು ಆಚರಣೆಗಳು ಮಹಿಳಾ ಬದುಕಿನ ಮೇಲೆ ಪ್ರಭಾವವನ್ನು ಬೀರಿ ಅವಳನ್ನು ಪುರುಷರ ಅವಲಂಬಿಯನ್ನಾಗಿ ಮಾಡಿವೆ. ಅಲ್ಲದೆ ಅವಳ ಚಲನೆ ಮತ್ತು ಆರ್ಥಿಕತೆಯನ್ನು ನಿರ್ಬಂಧಿಸಿವೆ. ಈ ಒಂದು ಕಾರ್ಯಸಾಧನೆಗೆ ವಿವಾಹ, ಕುಟುಂಬ, ಶಿಕ್ಷಣ ಮತ್ತು ಧರ್ಮ ಎಂಬ ಸಾಮಾಜಿಕ ಸಂಸ್ಥೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಸಾಮಾಜಿಕ ಸಂಸ್ಥೆಗಳು

ಮಹಿಳೆಯನ್ನು ಆರ್ಥಿಕ ಅಂಶದಿಂದ ದೂರ ಇಡಲು ಕಾರಣವೇನು? ಅವುಗಳು ಅನುಸರಿಸಿದ ಹಂತಗಳಾವುವು? ಅದಕ್ಕಾಗಿ ಅವುಗಳು ರೂಪಿಸಿದ ತಂತ್ರಗಳೇನು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡರೆ, ಮಹಿಳಾ ಆರ್ಥಿಕತೆಯ ಮೇಲೆ ಸಾಮಾಜಿಕ ಸಂಸ್ಥೆಗಳು ವಿವಿಧ ಪ್ರಭಾವ ಕಂಡುಬರುತ್ತವೆ.

ಈ ಅಧ್ಯಯನವನ್ನು ಎರಡು ಭಾಗದಲ್ಲಿ ವಿಂಗಡಿಸಲಾಗಿದೆ. ಮೊದಲನೆಯ ಭಾಗದಲ್ಲಿ ಸಾಮಾಜಿಕ ವ್ಯವಸ್ಥೆಗಿಂತ ಪೂರ್ವದಲ್ಲಿನ ಮಹಿಳಾ ಬದುಕಿನ ಚಾರಿತ್ರಿಕ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ. ಹಾಗೂ ಎರಡನೇ ಭಾಗದಲ್ಲಿ ಮಹಿಳಾ ಆರ್ಥಿಕತೆಯ ಮೇಲೆ ಪ್ರಭಾವ ಬೀರುವ ಸಾಮಾಜಿಕ ಅಂಶಗಳನ್ನು ವಿವರಿಸಲಾಗಿದೆ.

## ೨.೧. ಮಹಿಳಾ ಬದುಕಿನ ಚಾರಿತ್ರಿಕ ಹಿನ್ನೆಲೆ

ಮಾನವನ ವಿಕಾಸ ಹಾಗೂ ನಾಗರಿಕತೆ ಬೆಳೆದು ಬಂದ ಹಾದಿಯನ್ನು ನೋಡಿದಾಗ ಮಹಿಳಾ ಬದುಕಿನ ಚಾರಿತ್ರಿಕ ಹಿನ್ನೆಲೆ ಮತ್ತು ಶೋಷಣೆಯ ಸ್ಥಿತಿಗಳ ಬಗ್ಗೆ ಮಾಹಿತಿ ದೊರೆಯುತ್ತದೆ. ನಾವು ವಾಸಿಸುವ ಭೂಮಿ ೪೬೦ ಶತಕೋಟಿ ವರ್ಷಗಳ ಹಿಂದೆ ಸೃಷ್ಟಿ ಆಯಿತೆಂದು ಇಲ್ಲಿನ ಜೀವ ಸೃಷ್ಟಿ ಸುಮಾರು ೭೦ ಕೋಟಿ ವರ್ಷಗಳ ಹಿಂದೆ ಆಯಿತೆಂದು ವಿಜ್ಞಾನ ತಿಳಿಸುತ್ತದೆ. ಅಮೀಬಾ ದಂತ ಏಕಕೋಶ ಜೀವಿಗಳು ೫೦ ಕೋಟಿ ವರ್ಷಗಳ ಹಿಂದೆ ಹಾಗೂ ಮಾನವರ ವಿಕಾಸ ೩೦ ಲಕ್ಷ ವರ್ಷಗಳ ಹಿಂದೆ ಆಯಿತೆಂದು ಮಾಹಿತಿ ಇದೆ. ಬೌದ್ಧಿಕ ಮಾನವರು(ಹೋಮೋಸೆಫಿಯೆಸ್ಸ್) ಕಾಣಿಸಿಕೊಂಡಿದ್ದು ಸುಮಾರು ೪೦.೦೦೦ ವರ್ಷಗಳ ಹಿಂದೆ ಎಂದು ಭೂಗೋಳ ವಿಜ್ಞಾನ ಮಾಹಿತಿಯನ್ನು ನೀಡುತ್ತದೆ.[೧] ಈ ಮಾಹಿತಿಯು ಅನಾಗರಿಕ ಸ್ಥಿತಿಯಲ್ಲಿದ್ದ ಮಾನವರ ಬದುಕನ್ನ ತಿಳಿಯಲು ಸಹಾಯಕವಾಗಿದೆ.

ಅನಾಗರಿಕ ಸ್ಥಿತಿಯಲ್ಲಿದ್ದ ಈ ಮಾನವರು ಅಲೆಮಾರಿ ಜೀವನವನ್ನು ಸಾಗಿಸುತ್ತ, ಆಹಾರಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆದಾಡುತ್ತಿದ್ದರು. ಗುಹೆ, ಕಲ್ಲಾಸರೆ ಹಾಗೂ ಮರದ ಟೊಂಗೆಗಳಲ್ಲಿ ವಾಸ ಮಾಡುತ್ತಿದ್ದ ಇವರು ಕಾಡಿನಲ್ಲಿ ಸಿಗುತ್ತಿದ್ದ ಗಡ್ಡೆ, ಗೆಣಸು, ಹಣ್ಣು ಮತ್ತು ಪ್ರಾಣಿಗಳ ಮಾಂಸವನ್ನು ಆಹಾರವಾಗಿ ಸೇವಿಸುತ್ತಿದ್ದರು. ಉಡುಗೆಗಾಗಿ ಮರದ ತೊಗಟೆ ಮತ್ತು ಪ್ರಾಣಿಗಳ ಚರ್ಮವನ್ನು ಬಳಸುತ್ತಿದ್ದರು. ಇವರು ತುಂಬ ಸರಳ ಜೀವನ ನಡೆಸುತ್ತಿದ್ದರು. ಚಿಕ್ಕಪುಟ್ಟ ಗುಂಪುಗಳಲ್ಲಿ ವಾಸಿಸುತ್ತಿದ್ದ ಈ ಜನರು ಗುಂಪಿನ ಎಲ್ಲಾ ಸದಸ್ಯರು ಸಮಾನರು ಎಂಬ ತತ್ವದ ಮೇಲೆ ಜೀವಿಸುತ್ತಿದ್ದರು.[೨] ಈ ಒಂದು ಹಂತದಲ್ಲಿ ಲಿಂಗತಾರತಮ್ಯವೆಂಬುದು ಅಷ್ಟಾಗಿ ಕಂಡುಬರುತ್ತಿರಲಿಲ್ಲ. ಆಹಾರಕ್ಕಾಗಿ ಮಾನವ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಮಾರಿ ಜೀವನ ಸಾಗಿಸುತ್ತಿದ್ದ ಈ ಕಾಲದಲ್ಲಿ ಮಹಿಳೆಯರು ಪುರುಷರಿಗೆ ಸರಿಸಮಾನವಾಗಿ ಜೀವಿಸುತ್ತಿದ್ದರು. ಈ ಹಂತದಲ್ಲಿ ಮಹಿಳೆಯರು ಗಂಡಸರಂತೆ ದೊಣ್ಣೆ, ಭರ್ಜಿ ಮತ್ತು ಕಲ್ಲಿನ ಆಯುಧ ಹಿಡಿದು ಕಾಡುಮೃಗಗಳ ವಿರುದ್ಧ

ಹೋರಾಡುತ್ತಿದ್ದರು. ಅಲ್ಲದೆ ತಮ್ಮ ಮೇಲೆ ಆಕ್ರಮಣ ಮಾಡುತ್ತಿದ್ದ ದಾಳಿಕೋರರ ವಿರುದ್ಧ ಧೈರ್ಯವಾಗಿ ಹೋರಾಡುತ್ತಿದ್ದರು. ಚಿಕ್ಕ ಚಿಕ್ಕ ಪಂಗಡಗಳಲ್ಲಿ ವಾಸಿಸುತ್ತಿದ್ದ ಈ ಹಂತದಲ್ಲಿ ಮಹಿಳೆ ಆ ಗುಂಪಿನ (ಪಂಗಡಕ್ಕೆ) ಸೇರಿದವಳಾಗಿದ್ದಳು. ಹಾಗೂ ಇವಳಿಗೆ ಜನಿಸಿದ ಮಕ್ಕಳು ಗುಂಪಿನ ಸದಸ್ಯರಾಗಿರುತ್ತಿದ್ದರು. ಈ ಹಂತದಲ್ಲಿ ವಿವಾಹ ಎಂಬ ವ್ಯವಸ್ಥೆ ಇಲ್ಲದಿದ್ದರಿಂದ ಲೈಂಗಿಕತೆಯ ಮೇಲೆ ನಿರ್ಬಂಧವೇ ಇಲ್ಲವಾಗಿತ್ತು.[೩] ಹೀಗಾಗಿ ಮಹಿಳೆ ಎಲ್ಲಾ ರೀತಿಯಿಂದಲೂ ಸರ್ವಸ್ವತಂತ್ರಳಾಗಿದ್ದಳು.

ಈ ಕಾಲದಲ್ಲಿ ದೊಣ್ಣೆ, ಭರ್ಜಿ ಮತ್ತು ಕಲ್ಲಿನ ಕೊಡಲಿ ಹಿಡಿದು ಕಾಡುಮೃಗಗಳನ್ನು ಎದುರಿಸುತ್ತಿದ್ದ ಗಂಡಿನ ಬಲಕ್ಕೆ ಮನ್ನಣೆ ದೊರೆಯಿತು. ಅವನು ಆ ಗುಂಪಿನ ನಾಯಕನಾದ ಹಾಗೂ ಆ ಗುಂಪಿನ ರಕ್ಷಕನಾದ. ಈ ಹಂತದಲ್ಲಿ ಗುಂಪಿಗೆ ಸಿಗುವ ಸಂಪನ್ಮೂಲಗಳು ಕಡಿಮೆ ಇದ್ದು ಗುಂಪಿನ ಸದಸ್ಯರ ಸಂಖ್ಯೆ ಹೆಚ್ಚುತಿತ್ತು. ಇಂತಹ ಸಂದರ್ಭದಲ್ಲಿ ಗುಂಪಿನ ಸದಸ್ಯರ ಹೆಚ್ಚಳ ಮತ್ತು ಸಂಪನ್ಮೂಲಗಳ ನಡುವೆ ಸಮತೋಲನವನ್ನು ರೂಪಿಸುವ ಹೊಣೆಗಾರಿಕೆಯು ಗಂಡಸಿನ ಮೇಲೆ ಬಿತ್ತು ಇದರಿಂದಾಗಿ ಅವನು ಸಮುದಾಯದ ಒಡೆಯನಾದ. ಇದರಿಂದಾಗಿ ಸಮುದಾಯದ ಎಲ್ಲ ಸಂಪತ್ತಿನ ಒಡೆತನ ಅಧಿಕಾರ ಮತ್ತು ಜವಾಬ್ದಾರಿಗಳು ಗಂಡಸಿಗೆ ದೊರೆತವು. ಹೆಂಗಸು ಎಷ್ಟು ಬಲಶಾಲಿಯಾಗಿದ್ದರು ಹೇರುವ ಹೊಣೆಗಾರಿಕೆಗೆ ಬಂಧಿತಳಾಗಿ ಹೋರಾಟ ಮಾಡದೇ ಕೈಕಟ್ಟಿ ಕುಳಿತುಕೊಳ್ಳುವಂತಾಯಿತು. ಹೆಣ್ಣಿನ ಸಹಜ ಕ್ರಿಯೆಗಳಾದ ಬಸಿರು, ಹೆರಿಗೆ, ಮುಟ್ಟುಗಳು ಮಹಿಳೆಯ ದುಡಿಯುವ ಸಾಮರ್ಥ್ಯವನ್ನು ಕುಗ್ಗಿಸಿದವು. ಅಲ್ಲದೆ ಅವಳ ಚಲನೆಯನ್ನು ಸ್ಥಗಿತಗೊಳಿಸಿದವು. ಇದರಿಂದಾಗಿ ಅವಳು ಆಹಾರ ಮತ್ತು ಭದ್ರತೆಯ ರಕ್ಷಣೆಗಾಗಿ ಗಂಡಸಿನ ಸಹಾಯವನ್ನು ಪಡೆಯುವಂತಹ ಪರಿಸ್ಥಿತಿ ಉಂಟಾಯಿತು. ಅಲ್ಲದೆ ಶಿಶು ಜನಿಸಿದ ಮೇಲೆ ನಿಯಂತ್ರಣವಿಲ್ಲದೆ ಒಂದರ ಮೇಲೊಂದರಂತೆ ಮಕ್ಕಳನ್ನು ಹೆರಬೇಕಾಗುತ್ತಿತ್ತು. ಇದರಿಂದಾಗಿ ಮಕ್ಕಳ-ಲಾಲನೆ-ಪಾಲನೆ, ಪೋಷಣೆಯಲ್ಲಿಯೇ ಕಾಲ ಕಳೆಯಬೇಕಾದ ಸ್ಥಿತಿ ನಿರ್ಮಾಣವಾಯಿತು. ತಾನೇ ಹೆತ್ತ ಮಕ್ಕಳಿಗೆ ಆಹಾರ ನೀಡಲು ಕೂಡ ಅಸಮರ್ಥಳಾದಳು. ಈ ಕಾರಣಗಳಿಂದಾಗಿ ಅವಳು ಗಂಡಸನ್ನು ಅವಲಂಬಿಸಬೇಕಾಯಿತು.[೪]

ಮಾನವನ ಅಲೆಮಾರಿ ಜೀವನದ ಈ ಹಂತದಲ್ಲಿ ನಿಸರ್ಗವು ಮಾನವನ ಜೀವನಕ್ಕೆ ಬೇಕಾದ ಎಲ್ಲ ಸೌಲಭ್ಯಗಳನ್ನು ಪುಕ್ಕಟೆಯಾಗಿ ನೀಡಿತ್ತು. ಮಾನವ ಸಂಪತ್ತಿಗಿಂತ ಪ್ರಕೃತಿ ಸಂಪತ್ತು ಹೇರಳವಾಗಿತ್ತು. ಆದ್ದರಿಂದ ಅಲೆಮಾರಿ ಸಮುದಾಯಗಳಲ್ಲಿ 'ಆಸ್ತಿ'ಯ ಕಲ್ಪನೆಯೇ ಇರಲಿಲ್ಲ. ಅಲ್ಲದೆ ತಮ್ಮ ಹಕ್ಕನ್ನು ಚಲಾಯಿಸುವ ಭೂಮಿ, ಭೂಮಿಯ ಒಡೆತನದ ಕಲ್ಪನೆ ಸಹ ಅವರಿಗೆ ಇರಲಿಲ್ಲ. ಇದು ಅವರಿಗೆ ಭವಿಷ್ಯತ್ತಿಗಾಗಿ ಏನನ್ನು ಸಂಗ್ರಹಿಸಿ ಇಟ್ಟುಕೊಳ್ಳದಂತಹ ಸಂದರ್ಭವನ್ನು ಒದಗಿಸಿತು. ಆ ಮೂಲಕ ಸಮುದಾಯದ ಸಂಪನ್ಮೂಲಗಳ ಹಂಚಿಕೆಯಲ್ಲಿ ಸಮಾನತೆಯನ್ನು ತಂದಿತು.[೫] ಆದ್ದರಿಂದಾಗಿ ಮಾನವ

ಜೀವಿಸಿದ ಈ ಹಂತದಲ್ಲಿ ಸಾಮಾಜಿಕ ಅಸಮಾನತೆಯಾಗಲಿ ಮತ್ತು ಲಿಂಗಅಸಮಾನತೆ ಆಗಲಿ ಕಂಡುಬಂದಿರವುದಿಲ್ಲ.

ಅಲೆಮಾರಿ ಜೀವನ ಸಾಗಿಸುತ್ತಿದ್ದ ಮಾನವ ನವ ಶಿಲಾಯುಗದಲ್ಲಿ ಒಂದು ಕಡೆ ನೆಲೆ ನಿಂತು ಜೀವಿಸಲು ಪ್ರಾರಂಭಿಸಿದ. ಈ ಕಾಲದಲ್ಲಿ ತಾನು ಬಳಸುತ್ತಿದ್ದ ಆಯುಧಗಳಾದ ಕೊಡಲಿ, ಭರ್ಜಿ ಮತ್ತು ಅರೆವ ಸಾಧನ ಇತ್ಯಾದಿಗಳನ್ನು ಮಸೆದು ನಯಗೊಳಿಸಿ ಹರಿತವಾಗುವಂತೆ ಮಾಡಿದ. ಈ ಹರಿತವಾದ ಸಾಧನಗಳಿಂದ ಗಿಡ ಮರಗಳನ್ನು ಕತ್ತರಿಸಿ ಕೃಷಿಕಾರ್ಯ ಮಾಡಲು ಜಮೀನನ್ನು ಸಿದ್ಧಗೊಳಿಸಿ ಒಂದು ಪ್ರದೇಶದಲ್ಲಿ ನೆಲೆ ನಿಂತ. ಈ ಹಂತದಲ್ಲಿ ಪುರುಷನು ಮನೆಯ ಹೊರಗಿನ ಕೆಲಸಗಳಾದ ಬೇಟೆಗಾರಿಕೆ, ಮೀನುಗಾರಿಕೆ ಮತ್ತು ಅರಣ್ಯ ಕಡಿದು ಕೃಷಿ ಭೂಮಿಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಿರತನಾದ. ಆದರೆ ಹೆಂಗಸರು ಕೃಷಿಯಿಂದ ಬೆಳೆ ಬೆಳೆಯುವುದು, ಪಶುಸಂಗೋಪನೆ, ಧಾನ್ಯ ಸಂಗ್ರಹಿಸಲು ಬುಟ್ಟಿ ಎಣೆಯುವುದು ಹಾಗೂ ಮಣ್ಣಿನ ಪಾತ್ರೆ ತಯಾರಿಕೆ ಇತ್ಯಾದಿ ಕೆಲಸಗಳಲ್ಲಿ ತೊಡಗುತ್ತಿದ್ದರು. ಇವು ಸಂಗೋಪನಾ ಕಾರ್ಯಗಳಾಗಿದ್ದು ಪುರುಷರ ಕೆಲಸಕ್ಕೆ ಸಹಾಯಕವಾದ ಕೆಲಸಗಳಾಗಿದ್ದವು.[೬]

ಹೀಗೆ ಅಲೆಮಾರಿ ಜೀವನಕ್ಕೆ ಕೊನೆಯಾಡಿದ ಮಾನವ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆ ನಿಂತು ಕೃಷಿಕಾರ್ಯ ಆರಂಭಿಸಿದ. ನಂತರ ತಾನು ನೆಲೆನಿಂತ ಜಾಗದ ಮೇಲೆ ಹಕ್ಕನ್ನು ಸಾಧಿಸಿದ. ಅವನಿಗಿದ್ದ ಸಂಪತ್ತಿನ ಸಂಗ್ರಹದ ದಾಹದಿಂದಾಗಿ ಜಮೀನಿನ ಮೇಲೆ ಒಡೆತನ ಸಾಧಿಸಿದ. ಅದು ಸಮುದಾಯದ 'ಆಸ್ತಿ'ಯಾಯಿತು. ಈ 'ಆಸ್ತಿ'ಯು ವಂಶಪಾರಂಪರ್ಯವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಮುಂದುವರೆಯಿತು. ಇದರಿಂದಾಗಿ ಮಾನವ ದುಡಿಯದೇ ಸಂಪತ್ತನ್ನು ಪಡೆಯುವ ಭಾಗ್ಯಶಾಲಿಯಾದ. ಅಂದು ಅಲೆಮಾರಿ ಸಮುದಾಯದಲ್ಲಿ ಅಂದಿನ ಬದುಕಿಗಾಗಿ ಹೋರಾಡುತ್ತಿದ್ದ ಮಾನವ ಒಂದು ಕಡೆ ನೆಲೆ ನಿಂತ ಮೇಲೆ ಭವಿಷತ್ತಿನ ಬದುಕಿಗಾಗಿ ಚಿಂತನೆ ನಡೆಸಿದ. ಆಹಾರ ಸಂಗ್ರಹ ಕಾರ್ಯದಲ್ಲಿ ತೊಡಗಿದ. ಇದರಿಂದಾಗಿ ಸಂಪತ್ತು ಒಬ್ಬರ ಕಡೆ ಅಂದರೆ ಬಲಿಷ್ಠರಾದವರ ಕಡೆ ಶೇಖರಣೆಯಾಯಿತು. ಇದರ ಪರಿಣಾಮವಾಗಿ ಸಮಾಜದಲ್ಲಿ ಅಸಮಾನತೆ ಸೃಷ್ಟಿಯಾಯಿತು. ಒಡೆಯ-ಗುಲಾಮ, ಶ್ರೀಮಂತ-ಬಡವ, ಉಚ್ಚ-ನೀಚ, ಆಳುವವ-ಸೇವಕ, ಮತ್ತು ಬಂಡವಾಳಶಾಹಿ-ಶ್ರಮಿಕ ವರ್ಗ ಎಂಬ ಸಾಮಾಜಿಕ ವರ್ಗಗಳು ಉದಯವಾಗಿ ಸಾಮಾಜಿಕ ವ್ಯವಸ್ಥೆಯೇ ಬದಲಾಯಿತು.[೭] ಕಾಲಾಂತರದಲ್ಲಿ ಮಹಿಳೆಯರ ಸ್ಥಾನಮಾನ ಸಹ ಕಡಿಮೆಯಾಯಿತು.

ಮಕ್ಕಳು ಹುಟ್ಟಲು ತಂದೆ ಅಥವಾ ಗಂಡನ ಪಾತ್ರ ಮುಖ್ಯ ಎಂಬ ಅಂಶ ಗೊತ್ತಿಲ್ಲದ ಆ ಕಾಲದಲ್ಲಿ ಮಹಿಳೆಯ ಪ್ರಜನನ ಶಕ್ತಿಯ ಬಗ್ಗೆ ಆಶ್ಚರ್ಯ ಮತ್ತು ಗೌರವ ಭಾವನೆಗಳು ಇದ್ದವು. ನಮ್ಮ ಪೂರ್ವಿಕರು ಹೆಂಗಸರ ದೇಹ ಸೇರಿ ಮಗುವಿನ ರೂಪತಾಳಿ ಜನಿಸುತ್ತಾರೆಂದು ನಂಬಿದ್ದರು. ಅಲ್ಲದೆ

ಮಗುವಿನ ಹುಟ್ಟಿಗೆ ತಾಯಿಯೇ ಮುಖ್ಯ ಕಾರಣಕರ್ತಳು ಆಗಿದ್ದರಿಂದ ಅವಳಿಗೆ ದೈವಿಗುಣ, ದೇವತೆ ಸ್ಥಾನ ದೊರೆಯಿತು. ಮಕ್ಕಳನ್ನು ಪೋಷಿಸಿ ಬೆಳೆಸುವವಳು ತಾಯಿಯೇ ಆಗಿದ್ದರಿಂದ ಮಕ್ಕಳು ತಾಯಿಯ ಕುಲಕ್ಕೆ ಸೇರಿದವರಾಗಿರುತ್ತಿದ್ದರು ಮತ್ತು ತಾಯಿಯ ಕುಲದ ಹಕ್ಕುಗಳನ್ನು ಮಕ್ಕಳು ಪಡೆಯುತ್ತಿದ್ದರು. ಇದರಿಂದಾಗಿ ಸಮುದಾಯದ ಆಸ್ತಿಯು ಹೆಂಗಸರ ಮೂಲಕ ಸಾಗುತ್ತಿತ್ತು. ಇದು ಮಾತೃವಂಶೀಯ ಕುಟುಂಬ ವ್ಯವಸ್ಥೆಯ ಹುಟ್ಟಿಗೆ ಕಾರಣವಾಯಿತು. ಈ ವ್ಯವಸ್ಥೆಯಲ್ಲಿ ಭೂಮಿಯು ಹೆಣ್ಣಿನ ಒಡೆತನಕ್ಕೆ ಸೇರುತ್ತಿದ್ದರಿಂದ ಅವಳಿಗೆ ಧಾರ್ಮಿಕ ಮತ್ತು ನ್ಯಾಯಿಕ ಹಕ್ಕುಗಳು ದೊರೆತು ಸಮುದಾಯದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದಳು.

ಮಕ್ಕಳು ಸಮುದಾಯದ ಮುಂದುವರಿಕೆಗೆ ಅವಶ್ಯವಾದವು. ಮುಂದೆ ಮಕ್ಕಳು ಹುಟ್ಟಲು ಗಂಡಿನ ಪಾತ್ರ ಇದೆ ಎಂಬ ಸತ್ಯ ಗೊತ್ತಾದಾಗ ಹೆಂಗಸು ಗಂಡಸಿನ ಅಡಿಯಾಳಾದಳು. ಸಮುದಾಯದ ಭಾಗವಾಗಿದ್ದ ಮಹಿಳೆ ವಿವಾಹ-ಕುಟುಂಬ ಎಂಬ ಸಂಸ್ಥೆಯ ಮೂಲಕ ಒಬ್ಬ ಪುರುಷನಿಗೆ (ಗಂಡನಿಗೆ) ಸೀಮಿತವಾದಳು. ಈ ಒಂದು ವ್ಯವಸ್ಥೆ ಹೆಂಗಸು ಗಂಡಸಿನ ಸ್ವತ್ತು ಅಥವಾ ಆಸ್ತಿ ಎಂಬ ಕಲ್ಪನೆಯನ್ನು ಬೆಳೆಸಿ ಗಂಡಸು ಅವಳ ಮೇಲೆ ಒಡೆತನ ಸಾಧಿಸುವಂತೆ ಮಾಡಿತು. ಇದರಿಂದಾಗಿ ಮಹಿಳೆಯ ಸ್ಥಾನಮಾನ ಕುಸಿಯಿತು. ಅಲ್ಲದೆ ಜಾರಿಯಲ್ಲಿದ್ದ ಮಾತೃಪ್ರಧಾನ ವ್ಯವಸ್ಥೆ ಮಾಯವಾಗಿ ಪಿತೃಪ್ರಧಾನ ವ್ಯವಸ್ಥೆ ಜಾರಿಗೆ ಬಂದಿತು.[೮] ಇದರ ಪರಿಣಾಮವಾಗಿ ಆಸ್ತಿಯು ತಂದೆಯಿಂದ ಮಗನಿಗೆ ವಂಶಪಾರಂಪರಿಕವಾಗಿ ವರ್ಗಾವಣೆಯಾಯಿತು. ಅಲ್ಲದೆ ಈ ವ್ಯವಸ್ಥೆಯು ಮಹಿಳೆಯ ಹಕ್ಕು ಮತ್ತು ಸ್ವಾತಂತ್ರ್ಯದ ಮೇಲೆ ಅನೇಕ ನಿರ್ಬಂಧಗಳನ್ನು ಹೇರಿ ಅವಳ ಕಾರ್ಯ ಚಟುವಟಿಕೆಯನ್ನು ಕುಟುಂಬ ವ್ಯವಸ್ಥೆಗೆ ಸೀಮಿತ ಗೊಳಿಸುವಂತೆ ಮಾಡಿತು.

ಕಾಲಾಂತರದಲ್ಲಿ ಗಂಡಸು ತನ್ನ ಸಾಮರ್ಥ್ಯವನ್ನು ಕಂಡುಕೊಂಡ. ತನ್ನ ಸೃಜನಶೀಲ ಕೈಗಳಿಗೂ ಸಿದ್ಧಗೊಳಿಸಿದ ವಸ್ತುವಿಗೂ ಕಾರ್ಯಕಾರಣ ಸಂಬಂಧವನ್ನು ಅರಿತ. ನೆಟ್ಟಬೀಜ ಮೊಳಕೆ ಒಡೆಯುವುದು. ಗಂಡಸಿನ ಸಂಪರ್ಕದಿಂದ ಮಗು ಜನಿಸುವುದು, ಲೋಹ ಜಗತ್ತಿನ ತಿಳುವಳಿಕೆ ಇತ್ಯಾದಿಗಳಿಂದ ಮಾನವ ತನ್ನ ಮೂಲ ಕಲ್ಪನೆಯನ್ನು ಬದಲಾಯಿಸಿಕೊಂಡ. ನೆಲದ ಫಲವತ್ತತೆಯನ್ನು ಬದಲಾಯಿಸಲು ಸಾಧ್ಯ ಎಂಬುದನ್ನು ತಿಳಿದ. ಬೀಜಗಳನ್ನು ಹೇಗೆ ಉಪಚರಿಸಿದರೆ ಫಲ ಹೆಚ್ಚುತ್ತದೆ ಎಂದು ತಿಳಿದ. ಬೆಳೆ ಹೇಗೆ ಬರಬೇಕೆಂಬುದನ್ನು ತಾನೇ ನಿಯಂತ್ರಿಸಬಲ್ಲವನಾದ. ಕಾಲುವೆಗಳನ್ನು ತೋಡಿದ, ರಸ್ತೆಗಳನ್ನು ನಿರ್ಮಿಸಿದ, ದೇವಾಲಯಗಳನ್ನು ಕಟ್ಟಿದ. ಹೀಗೆ ಹೊಸ ಜಗತ್ತನ್ನು ಸೃಷ್ಟಿಸಿಕೊಂಡು ಹಂತಹಂತವಾಗಿ ನಿಸರ್ಗದ ಮೇಲೆ ಹಿಡಿತ ಸಾಧಿಸಿದ. ತನ್ನ ಅಭಿವೃದ್ಧಿಗೆ ಮತ್ತು ಬೆಳವಣಿಗೆಗೆ ಸಹಾಯಕವಾದ ನಿಸರ್ಗದ ಎಲ್ಲ ವಸ್ತುಗಳ ಮೇಲೆ ಒಡೆತನ ಹೊಂದಿದ. ಅವೆಲ್ಲವು ಅವನ ಆಸ್ತಿಗಳಾದವು. ಈ ಆಸ್ತಿ ಹಕ್ಕಿನ

ಕಲ್ಪನೆ ಅವನನ್ನು ಒಡೆಯನನ್ನಾಗಿ ಮಾಡಿತು. ಈ ಹಂತದಲ್ಲಿ ಭೂಮಿಗೆ ಹೋಲಿಕೆಯಾಗಿದ್ದ ಹೆಂಗಸು ಸಹ ಗಂಡಸಿನ ಆಸ್ತಿಯಾದಳು. ಹಾಗಾಗಿ ಮಹಿಳೆಯ ಮೇಲಿನ ಎಲ್ಲ ಹಕ್ಕುಗಳು ಗಂಡಸಿನ ಪಾಲಾದವು.

ಆಧುನಿಕ ಯುಗದಲ್ಲಿ ಮಾನವ ವಿಜ್ಞಾನದ ಮೂಲಕ ಪ್ರಕೃತಿಗೆ ಸಮಾನವಾಗುವ ರೀತಿಯಲ್ಲಿ ಬದುಕಲು ಕಲಿತ, ಉನ್ನತ ಹುದ್ದೆ ಹಾಗೂ ಉದ್ಯೋಗಗಳಲ್ಲಿ ಅಗ್ರಸ್ಥಾನ ಹೊಂದಿದ ಮಾನವ ಲಿಂಗತಾರತಮ್ಯ ಮಾಡುವುದನ್ನೇ ವ್ಯವಸ್ಥಿತವಾಗಿ ರೂಪಿಸಿಕೊಂಡ. ಹೆಂಗಸರು ಅಬಲೆಯರು, ಅಶಕ್ತರು, ನಾಲ್ಕು ಗೋಡೆಗಳ ಮಧ್ಯೆ ಇರುವವರು ಎಂಬ ಮನೋಧೋರಣೆಯನ್ನು ತುಂಬಿ, ಮಹಿಳೆಯರನ್ನು ಪುರುಷರ ಅಧೀನತೆಗೆ ಒಳಪಡಿಸುವ ಪ್ರಕ್ರಿಯೆ ನಡೆಯಿತು. ಸಂವಿಧಾನಾತ್ಮಕವಾಗಿ ಎಲ್ಲರೂ ಸಮಾನರು, ಲಿಂಗತಾರತಮ್ಯ ಮಾಡಬಾರದು ಎಂಬ ಅಂಶ ಸಾಮಾನ್ಯವಾದವರೂ ಮಹಿಳೆ ಇನ್ನೂ ಎರಡನೇ ದರ್ಜೆಯ ಪ್ರಜೆಯನ್ನಾಗಿ ನೋಡುವ ಪರಿಪಾಟ ಬೆಳೆಯಿತು. ಈ ಕಾರ್ಯ ಸಾಮಾಜಿಕ ವ್ಯವಸ್ಥೆಯಲ್ಲಿ ಸಾಮಾಜಿಕ ಸಂಸ್ಥೆಗಳ ತಳಹದಿಯಿಂದಲೇ ಪ್ರಾರಂಭವಾಯಿತು.

### ೨.೨. ಸಾಮಾಜಿಕ ಸಂಸ್ಥೆಗಳಲ್ಲಿ ಮಹಿಳಾ ಆರ್ಥಿಕತೆ

ಸಾಮಾಜಿಕ ಸಂಸ್ಥೆಗಳು ಮಹಿಳಾ ಆರ್ಥಿಕತೆಯ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿವೆ. ಸಾಮಾಜಿಕ ಸಂಸ್ಥೆಯ ಸಂರಚನೆಯಲ್ಲಿ ಮಹಿಳೆಯನ್ನು ಆರ್ಥಿಕ ಅಂಶದಿಂದ ದೂರ ಇಡುವ ಪ್ರಯತ್ನ ನಿರಂತರವಾಗಿ ನಡೆಯುತ್ತಿದೆ. ಆ ಒಂದು ಪ್ರಕ್ರಿಯೆಯು ಸಾಮಾಜಿಕ ಸಂಸ್ಥೆಗಳಾದ ವಿವಾಹ, ಕುಟುಂಬ, ಶಿಕ್ಷಣ ಮತ್ತು ಧರ್ಮದ ಮೂಲಕ ನಿಶ್ಶಬ್ದಕರವಾಗಿ ನಡೆಯುತ್ತಿದೆ. ಇದರ ಪರಿಣಾಮ ಮಹಿಳಾ ಆರ್ಥಿಕತೆಯ ಮೇಲೆ, ಅವಳ ದುಡಿಮೆ ಗಳಿಕೆ ಬದುಕಿನ ಮೇಲೆ ಯಾವ ರೀತಿಯ ಪರಿಣಾಮವಾಗಿದೆ ಎಂಬುದನ್ನು ತಿಳಿಯುವುದು ಅತೀ ಅವಶ್ಯವಿದೆ.

### ೨.೨.೧. ವಿವಾಹ ವ್ಯವಸ್ಥೆಯಲ್ಲಿ ಮಹಿಳಾ ಆರ್ಥಿಕತೆ

ವಿವಾಹವು ಅನಾದಿ ಕಾಲದಿಂದಲೂ ಅಸ್ತಿತ್ವದಲ್ಲಿರುವ ಒಂದು ಸಾಮಾಜಿಕ ಮತ್ತು ಸಾರ್ವತ್ರಿಕ ವ್ಯವಸ್ಥೆಯಾಗಿದೆ. ವಿವಾಹದ ಮೂಲಕವೇ ಮಹಿಳೆಗೆ ಸಮಾಜದಲ್ಲಿ ಗುರುತು ಹಾಗೂ ಸ್ಥಾನಮಾನ ದೊರೆಯುತ್ತದೆ. ಅಲ್ಲದೆ ವಿವಾಹದ ಮೂಲಕವೇ ಅವಳು ಬಂಧನಕ್ಕೆ ಒಳಗಾಗಿ ಬದುಕಿನ ಸ್ವಾತಂತ್ರ್ಯದಿಂದ ದೂರ ಉಳಿಯುತ್ತಾಳೆ. ಹೀಗಾಗಿ ವಿವಾಹವು ಮಹಿಳಾ ಜೀವನದ ಮೇಲೆ ಆಗಾಧವಾದ ಪ್ರಭಾವವನ್ನು ಬೀರುವ ಒಂದು ಸಾಮಾಜಿಕ ಸಂಸ್ಥೆಯಾಗಿದೆ. 'ವಿವಾಹ' ಎಂಬ ಶಬ್ದ ಸಂಸ್ಕೃತದ "ವಿಶಿಷ್ಟ-ವಹನಂ" (ವಿಶಿಷ್ಟ ರೀತಿಯ ಮಿಲನ (ಸೇರುವಿಕೆ) ಎಂಬ ಅರ್ಥವನ್ನು ನೀಡುತ್ತದೆ. ಸಮಾಜದಿಂದ ಅಂಗೀಕರಿಸಲ್ಪಟ್ಟ ಸ್ತ್ರೀ-ಪುರುಷರ ಸಂಯೋಜನೆಯ ಮೂಲಕ ಅವರ ಲೈಂಗಿಕ ಬೇಡಿಕೆಯನ್ನು ಈಡೇರಿಸುವ ಸಂಸ್ಥೆಯೇ 'ವಿವಾಹ'ವಾಗಿದೆ. ವಿವಾಹ ಎನ್ನುವ ಪರಿಕಲ್ಪನೆಗೆ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ತಮ್ಮದೇ

ಅರ್ಥವಿವರಣೆಯನ್ನು ನೀಡಿದ್ದಾರೆ. ವಿವಾಹ ಎಂದರೆ ಸ್ತ್ರೀ ಪುರುಷರ ನಡುವೆ ಏರ್ಪಡುವ ಶಾಶ್ವತ ಸಂಬಂಧ ಎಂದಿರುವ ಎಸ್ಟರ್ ಮಾರ್ಕ್ ಮಕ್ಕಳ ಜನನದ ನಂತರವೂ ಮುಂದುವರೆಯುತ್ತದೆ ಎಂದಿದ್ದಾರೆ. ಸಾಮಾಜಿಕ ಚಿಂತಕ ಮಲನೋಸ್ಕಿಯವರು "ಸಂತಾನೋತ್ಪತ್ತಿ ಮತ್ತು ಶಿಶುಪಾಲನೆ ಪೋಷಣೆಗಾಗಿ ಮಾಡಿಕೊಂಡ ಒಪ್ಪಂದವೇ ವಿವಾಹ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮತ್ತೊಬ್ಬ ಸಮಾಜಶಾಸ್ತ್ರಜ್ಞ ಎಚ್.ಟಿ.ಮಜುಂದಾರ್ ಅವರು ನಿವಾಹ ಎಂದರೆ ಸಾಮಾಜಿಕ ಮಾನ್ಯತೆ ಪಡೆದಿರುವ ಸ್ತ್ರೀ ಪುರುಷರ ನಡುವಿನ ಸಂಯೋಗ. ಅದಕ್ಕೆ ಕುಟುಂಬದ ಸ್ಥಾಪನೆ, ಲೈಂಗಿಕ ಸಂಬಂಧ ಹೊಂದುವುದು, ಸಂತಾನೋತ್ಪತಿ ಮತ್ತು ಶಿಶು ಪಾಲನೆ-ಪೋಷಣೆ ಎಂಬ ನಾಲ್ಕು ಉದ್ದೇಶಗಳನ್ನು ಒಳಗೊಂಡಿದೆ" ಎಂದಿದ್ದಾರೆ.[೯] ಸಾಮಾನ್ಯವಾಗಿ ಹೇಳುವುದಾದರೆ ಲೈಂಗಿಕ ಬಯಕೆಯ ಈಡೇರಿಕೆ, ಸಂತಾನಾಭಿವೃದ್ಧಿ ಮತ್ತು ಕುಟುಂಬ ಸ್ಥಾಪನೆಗೆ ಸಾಮಾಜಿಕ ಒಪ್ಪಿಗೆಯನ್ನು ಪಡೆದ ಸ್ತ್ರೀ-ಪುರುಷರ ಸಂಯೋಜನೆಯೇ ವಿವಾಹವಾಗಿದೆ.

ವಿವಾಹವು ಸಂಗಾತಿಯನ್ನೊಳಗೊಂಡ ಒಂದು ಸಾಮಾಜಿಕ ಸಂಸ್ಥೆಯಾಗಿದ್ದರಿಂದ ಸಂಗಾತಿಗಳ ಸಂಖ್ಯೆಯನ್ನಾಧರಿಸಿ ವಿವಾಹವನ್ನು ವಿವಿಧ ಪ್ರಕಾರಗಳಲ್ಲಿ ವಿಭಾಗಿಸಬಹುದಾಗಿದೆ, ಯಾವ ವಿವಾಹ ಸಂಬಂಧದಲ್ಲಿ ವ್ಯಕ್ತಿಗೆ ಏಕಕಾಲದಲ್ಲಿ ಒಬ್ಬನೇ ಅಥವಾ ಒಬ್ಬಳೇ ಸಂಗಾತಿ ಇದ್ದರೆ ಇಂತಹ ವಿವಾಹವನ್ನು ಏಕ ಸಂಗಾತಿ ವಿವಾಹ ಅಥವಾ ಏಕಪತಿತ್ವ ವಿವಾಹ ಅಥವಾ ಏಕಪತ್ನಿತ್ವ ವಿವಾಹ ಎಂದು ಕರೆಯಲಾಗುತ್ತದೆ. ಯಾವ ವಿವಾಹ ಪದ್ಧತಿಯಲ್ಲಿ ಒಬ್ಬ ವ್ಯಕ್ತಿಗೆ ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸಂಗಾತಿಗಳಿದ್ದರೆ ಅಂತಹ ವಿವಾಹ ಪದ್ಧತಿಯನ್ನು 'ಬಹುಪತ್ನಿತ್ವ' ಅಥವಾ ಬಹುತಿತ್ವ ವಿವಾಹ ಪದ್ಧತಿ ಎಂದು ಕರೆಯಲಾಗುತ್ತದೆ. ಅನೇಕ ಜನ ಮಹಿಳೆಯರನ್ನು, ಅನೇಕ ಜನ ಪುರುಷರು ವಿವಾಹವಾಗುವ ಪದ್ಧತಿಯನ್ನು ಗುಂಪು ವಿವಾಹ ಪದ್ಧತಿ ಎಂದು ಕರೆಯುತ್ತಾರೆ. ಇಂತಹ ವಿವಾಹ ಪದ್ಧತಿಗಳು ಇಂದಿಗೂ ಕೂಡ ಆಸ್ಟ್ರೇಲಿಯಾ, ಭಾರತ, ಟಿಬೆಟ್ ಮತ್ತು ಶ್ರೀಲಂಕಾದ ಆದಿವಾಸಿ ಜನರಲ್ಲಿ ಕಂಡುಬರುತ್ತದೆ. ಹೀಗೆ ವಿವಾಹ ಎನ್ನುವುದು ಸ್ತ್ರೀ-ಪುರುಷರ ತಮ್ಮ ಲೈಂಗಿಕ ಅಪೇಕ್ಷೆಯ ಈಡೇರಿಕೆಗಾಗಿ ಮಾಡಿಕೊಂಡ ಸಾಮಾಜಿಕ ಒಪ್ಪಂದವಾಗಿದೆ. ಈ ಒಪ್ಪಂದದ ಮೇಲೆ ಸಮಾಜದ ಕಟ್ಟಳೆ, ರೂಢಿ, ಸಂಪ್ರದಾಯಗಳು ತಮ್ಮ ಪರಿಣಾಮವನ್ನು ಬೀರಿವೆ. ಹೀಗಾಗಿ ಮಹಿಳೆಗೆ ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರ್ಯ ಇಲ್ಲವಾಗಿದೆ. ಒಂದು ವೇಳೆ ಸಮಾಜದ ರೂಢಿ ಪದ್ಧತಿಗಳನ್ನು ಮೀರಿ ನಡೆದರೆ ಸಾಮಾಜಿಕ ಬಹಿಷ್ಕಾರ ಹಾಗೂ ಆರ್ಥಿಕ ಅಭದ್ರತೆಯನ್ನು ಎದುರಿಸಬೇಕಾಗುತ್ತದೆ.[೧೦]

ವಿವಾಹವು ಮಹಿಳಾ ಆರ್ಥಿಕತೆಯ ಮೇಲೆ ಪ್ರತ್ಯಕ್ಷವಾಗಿ ಪ್ರಭಾವ ಬೀರದಿದ್ದರೂ ಪರೋಕ್ಷವಾಗಿ ಹೆಚ್ಚಿನ ಪ್ರಭಾವವನ್ನು ಬೀರುತ್ತಿದೆ. ವಿವಾಹ ಸಂಸ್ಥೆಯ ರಚನೆಯಲ್ಲಿಯೇ ಅವಳನ್ನು ಆರ್ಥಿಕ ಅಂಶದ ಕೇಂದ್ರದಿಂದ ಹೊರ ಇಡುವ ಪ್ರಯತ್ನ ನಡೆಯುತ್ತಿದೆ. ಅಂದರೆ ವಿವಾಹ ವ್ಯವಸ್ಥೆಯು ಮಹಿಳೆಗೆ ಪಿತ್ರಾರ್ಜಿತ ಆಸ್ತಿ, ಆಸ್ತಿಯ ಹಕ್ಕು ಮತ್ತು ಸಂಪನ್ಮೂಲಗಳು ದೊರೆಯದಂತೆ ಕಾರ್ಯತಂತ್ರ

ರೂಪಿಸುತ್ತಿದೆ ಈ ಒಂದು ಪ್ರಕ್ರಿಯೆಯು ಮಹಿಳೆ ವಿವಾಹವಾಗುವ ಪೂರ್ವದಿಂದಲೇ ನಡೆಯುತ್ತಿರುತ್ತದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸಗೋತ್ರ ವಿವಾಹ ಪದ್ಧತಿಯನ್ನು ವಿರೋಧಿಸಲಾಗುತ್ತಿದೆ. ಸಗೋತ್ರ ವಿವಾಹ ಪದ್ಧತಿ ಎಂದರೆ ಒಂದೇ ಗೋತ್ರದಲ್ಲಿನ ಸ್ತ್ರೀ ಪುರುಷರು ವಿವಾಹವಾಗುವ ಪದ್ಧತಿಯಾಗಿದೆ. ಈ ಪದ್ಧತಿಯ ಪ್ರಕಾರ ವಿವಾಹ ನಡೆದರೆ ಸಹೋದರ ಸಹೋದರಿಯನ್ನೇ ವಿವಾಹವಾಗಬೇಕಾಗುತ್ತದೆ. ಆಗ ಪಿತ್ರಾರ್ಜಿತ ಆಸ್ತಿಯಲ್ಲಿ ಪುರುಷನಿಗೆ ಸರಿಸಮಾನವಾದ ಪಾಲನ್ನು ಮಹಿಳೆಯರು(ವಧು) ಪಡೆಯಬೇಕಾಗುತ್ತದೆ. ಅದಕ್ಕಾಗಿ ಇಂದು ಸಾಮಾಜಿಕ ವ್ಯವಸ್ಥೆಯಲ್ಲಿ ಸಗೋತ್ರ ವಿವಾಹ ಪದ್ಧತಿಯನ್ನು ವಿರೋಧಿಸಲಾಗುತ್ತಿದೆ. ಆದ್ದರಿಂದ ವಿಭಿನ್ನ ಗೋತ್ರದವರೊಂದಿಗೆ ವಿವಾಹ ಸಂಬಂಧವನ್ನು ಏರ್ಪಡಿಸ ಲಾಗುತ್ತದೆ. ವಿಭಿನ್ನ ಗೋತ್ರದವರೊಂದಿಗೆ ವಿವಾಹವನ್ನು ಏರ್ಪಡಿಸುವುದರಿಂದ ಮಹಿಳೆ ಹುಟ್ಟಿದ ಮನೆಯ 'ಆಸ್ತಿ ಹಕ್ಕು' ಮತ್ತು ಗಂಡನ ಮನೆಯ 'ಆಸ್ತಿಹಕ್'ನಿಂದ ವಂಚಿತಳಾಗುತ್ತಾಳೆ. ಇದರ ಪರಿಣಾಮವಾಗಿ ಅವಳು ಆರ್ಥಿಕ ಅಭದ್ರತೆಯನ್ನು ಎದುರಿಸಬೇಕಾಗುತ್ತದೆ. ಅಲ್ಲದೆ ಗಂಡನ ಮನೆಯವರು ನೀಡುವ ತೊಂದರೆ ಮತ್ತು ಶೋಷಣೆಯನ್ನು ಸಹಿಸಿಕೊಂಡು ಬದುಕನ್ನು ದೂಡುವಂತಾಗಿದೆ.[೧೧]

ವ್ಯಕ್ತಿಯು ಆರ್ಥಿಕವಾಗಿ ಪ್ರಬಲನಾಗಲು ಬಂಡವಾಳ, ಭೂಮಿ, ಶಿಕ್ಷಣ, ಮತ್ತು ಪೌಷ್ಟಿಕ ಆಹಾರ ಮತ್ತು ಆರೋಗ್ಯ ಇತ್ಯಾದಿ ಸಂಪನ್ಮೂಲಗಳು ಅವಶ್ಯವಾಗಿ ಬೇಕಾಗುತ್ತವೆ. ಆದರೆ ಈ ಸಂಪನ್ಮೂಲಗಳನ್ನು ನೀಡುವಲ್ಲಿಯೇ ಮಹಿಳೆಯರಿಗೆ ತಾರತಮ್ಯವನ್ನು ಮಾಡಲಾಗುತ್ತದೆ. ಸ್ವಯಂ ಉದ್ಯೋಗ ಸ್ಥಾಪಿಸಲು ಬ್ಯಾಂಕುಗಳು ಮತ್ತು ಹಣಕಾಸಿನ ಸಂಸ್ಥೆಗಳು ಬಂಡವಾಳ ನೀಡಲು ಮುಂದೆ ಬಂದರೂ ಅದಕ್ಕಾಗಿ ನೀಡಬೇಕಾದ ಪೂರಕ ದಾಖಲೆಗಳು ಮಹಿಳೆಯರ ಹೆಸರಿನಲ್ಲಿ ಇರದೆ ತಂದೆ ಅಥವಾ ಗಂಡನ ಹೆಸರಿನಲ್ಲಿ ಇರುತ್ತವೆ. ಒಂದು ವೇಳೆ ಯಾವುದೋ ಆಧಾರದಿಂದ ಬಂಡವಾಳ(ಹಣ) ದೊರೆತರೂ ಅದು ತಂದೆ ಇಲ್ಲವೇ ಗಂಡನ ಕೈ ಸೇರಿ ಅವಳ ಆರ್ಥಿಕ ಭದ್ರತೆಯ ಕನಸು ಕನಸಾಗಿಯೇ ಉಳಿದು ಬಿಡುತ್ತದೆ. ಭೂಮಿ ಅಥವಾ ಜಮೀನು ಸಮಾಜದಲ್ಲಿ ಆರ್ಥಿಕ ಸ್ಥಾನಮಾನವನ್ನು ನಿರ್ಧರಿಸುವ ಒಂದು ಮಾನ ದಂಡವಾಗಿದೆ. ಆದರೆ ಈ ಜಮೀನು ಕುಟುಂಬದ ಯಜಮಾನ, ಪುರುಷರ ಹೆಸರಿನಲ್ಲಿರುತ್ತದೆ. ಮಹಿಳೆ ಮಾತ್ರ ಸೇವಾ ಮನೋಭಾವದಿಂದ ಜಮೀನಿನಲ್ಲಿ ಕೂಲಿ ಆಳಾಗಿ ಪುಕ್ಕಟೆ ದುಡಿಯಬೇಕಾಗುತ್ತಿದೆ. ಒಂದು ವೇಳೆ ಜಮೀನು ಹೆಂಗಸರ ಹೆಸರಿನಲ್ಲಿದ್ದರೆ ಅದರ ಉಸ್ತುವಾರಿಯನ್ನು ನೋಡಿಕೊಂಡು ಹೋಗುವವರು ಪುರುಷರೇ ಆಗಿರುತ್ತಾರೆ. ಇದರ ಪರಿಣಾಮವಾಗಿ ಮಹಿಳೆ ಆಸ್ತಿ ಒಡೆತನದಿಂದ ದೂರವೆ ಉಳಿಯುತ್ತಾಳೆ.[೧೨]

ವ್ಯಕ್ತಿಯ ವ್ಯಕ್ತಿತ್ವ ವಿಕಾಸ ಮತ್ತು ಆರ್ಥಿಕ ಅಭಿವೃದ್ಧಿಗೆ ಶಿಕ್ಷಣ ಅತೀ ಮಹತ್ವದ ಸಾಧನವಾಗಿದೆ. ಆದರೆ ಈ ಸಾಧನವನ್ನು ಮಹಿಳೆಗೆ ದೊರೆಯದಂತೆ ಬಾಲ್ಯದಿಂದಲೇ ಸಾಮಾಜಿಕ ಚೌಕಟ್ಟನ್ನು ರೂಪಿಸಲಾಗಿದೆ. ಇದರ ಪರಿಣಾಮವಾಗಿ ಅವಳು ಉನ್ನತ ಹುದ್ದೆಯನ್ನು ಹೊಂದುವ ಅವಕಾಶದಿಂದ ವಂಚಿತಳಾಗುತ್ತಾಳೆ. ಒಂದು ವೇಳೆ ಉನ್ನತ ಶಿಕ್ಷಣ ಪಡೆದು ಒಳ್ಳೆಯ ಉದ್ಯೋಗ ಪಡೆದರೂ, ಗಂಡನ

ಆಜ್ಞೆ ಮತ್ತು ಅತ್ತೆ ಮಾವನವರ ಶಿಫಾರಸ್ಸಿನ ಮೇರೆಗೆ ಉದ್ಯೋಗ ತೊರೆದು ನಾಲ್ಕು ಗೋಡೆಗಳ ಮಧ್ಯೆ ಗಂಡನ ಸೇವೆ ಮಾಡುತ್ತಾ ಕುಟುಂಬದ ಸದಸ್ಯರ ಯೋಗಕ್ಷೇಮವನ್ನು ನೋಡಿಕೊಂಡು ಹೋಗುವ ಸೇವಕಿಯಾಗಿ ಉಳಿಯಬೇಕಾಗಿದೆ. ಇದು ಅವಳನ್ನು ಪರಾಧೀನತೆಗೆ ತಳ್ಳುವ ಒಂದು ತಂತ್ರವಾಗಿದೆ. ಪೌಷ್ಟಿಕ ಆಹಾರ ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಸಾಮರ್ಥ್ಯವನ್ನು ಹೆಚ್ಚಿಸಿ ಅವರಲ್ಲಿ 'ಶ್ರಮದ ದಕ್ಷತೆ'ಯನ್ನು ಉಂಟು ಮಾಡುತ್ತದೆ. ಆದರೆ ವಿವಾಹ ನಂತರದಲ್ಲಿ ಮಹಿಳೆ ಆಹಾರ ಪಡೆಯುವಲ್ಲಿ 'ಪರಹಿತ ತತ್ವ'ವನ್ನು ಅನುಸರಿಸಬೇಕಾಗುತ್ತದೆ. ಇದರ ಪರಿಣಾಮವಾಗಿ ಅವರು ಕಡಿಮೆ ಆಹಾರ ಸೇವಿಸುತ್ತಿದ್ದಾರೆ. ಬಡತನದ ರೇಖೆಯ ಕೆಳಗೆ ಜೀವಿಸುವ ಕಾರ್ಮಿಕ ವರ್ಗದ. ಮಹಿಳೆಯರು ಗಂಡ, ಮಕ್ಕಳು, ಅತ್ತೆ, ಮಾವ, ಮತ್ತು ಮನೆಯ ಇತರ ಸದಸ್ಯರು ಊಟ ಮಾಡಿದ ನಂತರ ಊಟ ಮಾಡ ಬೇಕಾದ ಸ್ಥಿತಿ ಇದೆ. ಇದರಿಂದಾಗಿ ಅವಳು ಅಳಿದುಳಿದ ಆಹಾರ ಸೇವಿಸಬೇಕಾಗುತ್ತದೆ. ಹಾಗೂ ಊಟ ಖಾಲಿಯಾದರೆ ಹೊಟ್ಟೆಗೆ ನೀರು ಕುಡಿದು ಉಪವಾಸ ಮಲಗಬೇಕಾದ ಪರಸ್ಥಿತಿ ಒದಗಿ ಬರುತ್ತಿದೆ. ಇದರಿಂದಾಗಿ ಮಹಿಳೆಯರ 'ಶ್ರಮದ ದಕ್ಷತೆ' ಕುಗ್ಗುತ್ತದೆ ಅಲ್ಲದೆ ಅನಾರೋಗ್ಯದಿಂದ ನರಳುವಂತಾಗು ತ್ತದೆ.[೧೩] ಹೀಗೆ ಈ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಗೆ ಸಂಪನ್ಮೂಲಗಳು ದೊರೆಯದಂತೆ ಮಾಡಿ ಅವಳನ್ನು ಪುರುಷರ ಆಧೀನತೆಗೆ ಒಳಪಡಿಸಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಒಂದು ಬಗೆಯ 'ನಶಿಸುವ ಸರಕು' ಎಂದು ತಿಳಿಯಲಾಗಿದೆ. ಅವಳ 'ನಶಿಸು'ವಿಕೆಯ ಪರಿಕಲ್ಪನೆಯು 'ಲೈಂಗಿಕತೆ'ಯ ಸುತ್ತ ಸುತ್ತುವರಿದ ಕಲ್ಪನೆಯಾಗಿದೆ. ಮಾರುಕಟ್ಟೆಯಲ್ಲಿ ಬೇಗ ನಶಿಸುವ ಸರಕುಗಳಾದ ಹಾಲು, ಹಣ್ಣು, ತರಕಾರಿ, ಮತ್ತು ಮಾಂಸದ ಪದಾರ್ಥಗಳಿಗೆ ತಾಜಾ ಇದ್ದರೆ ಹೆಚ್ಚಿನ ಬೇಡಿಕೆ ಮತ್ತು ಬೆಲೆ ಇರುವಂತೆ 'ಹೆಣ್ಣು' ಸಹ ತಾಜಾ ಇದ್ದರೆ ಅವಳಿಗೆ ಅಧಿಕ ಬೆಲೆ ಮತ್ತು ಬೇಡಿಕೆಯನ್ನೇ ನಿರ್ಧರಿಸಿದೆ ಈ ಸಾಮಾಜಿಕ ಮಾರುಕಟ್ಟೆ. ಅಂದರೆ ಹೆಣ್ಣನ್ನು ಋತುಮತಿಯಾದ ನಂತರ ಬಹಳ ವರ್ಷಗಳವರೆಗೆ ಮನೆಯಲ್ಲಿ ಇಟ್ಟುಕೊಳ್ಳಬಾರದು. ಬಹಳ ವರ್ಷ ಮನೆಯಲ್ಲಿ ಇಟ್ಟುಕೊಂಡರೆ ಅವಳು ಕೆಡುತ್ತಾಳೆ(ಲೈಂಗಿಕ ಅಪವಿತ್ರತೆ)ಅಥವಾ ನಶಿಸುತ್ತಾಳೆ. ಇದರಿಂದಾಗಿ ಮದುವೆ ಮಾರುಕಟ್ಟೆಯಲ್ಲಿ ಅವಳಿಗೆ ಬೇಡಿಕೆ ಕಡಿಮೆಯಾಗಿ ಮನೆಯಲ್ಲಿಯೇ ಉಳಿದು ಹೆತ್ತವರಿಗೆ ಭಾರವಾಗುತ್ತಾಳೆ. ಇಂದು ವಿವಾಹ ವ್ಯವಸ್ಥೆಯು ಮಾರ್ಕೆಟ್ಟೀಕರಣ ಸರಕು-ಸಂಸ್ಕೃತಿಯ ಮಹಾಪೂರಕ್ಕೆ ಸಿಲುಕಿ ಹಣಕಾಸಿನ ವ್ಯವಹಾರವಾಗಿ ಬಿಟ್ಟಿದೆ. ಪರಿಣಾಮವಾಗಿ ಸಮಾಜದ ಎಲ್ಲ ಸಮುದಾಯಗಳಲ್ಲಿ 'ವರದಕ್ಷಿಣೆ' ಎಂಬ ಪಿಡುಗು ತಾಂಡವ ಆಡುತ್ತಿದೆ ಇದರ ಪರಿಣಾಮವಾಗಿ ಹೆಣ್ಣುಹೆತ್ತ ತಂದೆ ತಾಯಿಯವರು ಎಂತಹ ಕಷ್ಟ ಪರಿಸ್ಥಿತಿ ಎದುರಾದರೂ ವರನು ಕೇಳುವ 'ಸಂಪತ್ತ'ನ್ನು ವರದಕ್ಷಿಣೆಯ ರೂಪದಲ್ಲಿ ನೀಡಿ ಮದುವೆ ಮಾಡಿಕೊಡುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಅಲ್ಲದೆ ಮದುವೆ ಮಾರುಕಟ್ಟೆಯಲ್ಲಿ ಒಂದೊಂದು ಪದವಿ ಹಾಗೂ ಉದ್ಯೋಗಕ್ಕೆ ಒಂದು ದರದಲ್ಲಿ ವರದಕ್ಷಿಣೆ

ನಿರ್ಧರಿತವಾಗಿದೆ. ಪ್ರಾಥಮಿಕ ಶಾಲಾ ಶಿಕ್ಷಕರಿಗೆ ೨೦ ಸಾವಿರ ದರದಿಂದ ೫೦ ಸಾವಿರ, ಪ್ರೌಢಶಾಲಾ ಶಿಕ್ಷಕರಿಗೆ ೫೦,೦೦೦ರಿಂದ ೧,೦೦೦೦೦, ಉಪನ್ಯಾಸಕರಿಗೆ ೨,೦೦೦೦೦ ದಿಂದ ೪,೦೦೦೦೦ ಹಾಗೂ ಇಂಜಿನಿಯರ್ ಮತ್ತು ವೈದ್ಯಾಧಿಕಾರಿಗಳಿಗೆ ೫ ಲಕ್ಷದಿಂದ ೧೦ ಲಕ್ಷದವರೆಗೆ ವರದಕ್ಷಿಣೆ ದರ ನಿರ್ಧರಿತವಾಗಿದೆ. ಈ ಮದುವೆ ಮಾರುಕಟ್ಟೆಯಲ್ಲಿ 'ಹಣ' ತರುವವರು ಹೆಣ್ಣಿನ ತಂದೆ ತಾಯಿಗಳಾದರೆ ವಸ್ತುಗಳನ್ನು (ಹಣ ಸಂಪತ್ತು) ಪಡೆಯುವವರು ಗಂಡಿನ ತಂದೆ ತಾಯಿಗಳಾಗಿದ್ದಾರೆ. ಇಲ್ಲಿ ಹೆಣ್ಣಿನ ತಂದೆ ತಾಯಿಗಳು ಹಣವನ್ನು ನೀಡುವುದರ ಜೊತೆಗೆ ತಮ್ಮ ಮಗಳನ್ನು ನೀಡಬೇಕಾಗುತ್ತದೆ.[೧೪] ಇದರಿಂದಾಗಿ 'ವಿವಾಹ' ಹೆಣ್ಣು ಹೆತ್ತ ತಂದೆ -ತಾಯಿಗಳಿಗೆ 'ಭಾರ'ವಾಗಿ ಪರಿಣಮಿಸಿದೆ ಅಲ್ಲದೆ 'ಹೆಣ್ಣು ಭ್ರೂಣಹತ್ಯೆ'ಯಂತಹ ಕೃತ್ಯ ನಡೆಯಲು ಕಾರಣವಾಗಿದೆ.

### ೨.೨.೨ ಕುಟುಂಬ ವ್ಯವಸ್ಥೆಯಲ್ಲಿ ಮಹಿಳಾ ಆರ್ಥಿಕತೆ

ಕುಟುಂಬವು ಸಾರ್ವತ್ರಿಕವಾದ ಮತ್ತು ಶಾಶ್ವತವಾದ ಒಂದು ಸಾಮಾಜಿಕ ಸಂಸ್ಥೆಯಾಗಿದೆ. ಮಾನವನ ಸಾಮಾಜಿಕ ಜೀವನದ ತಳಹದಿಯಾಗಿದೆ. ಮಾಂಸದ ಮುದ್ದೆಯಾಗಿದ್ದ ಶಿಶುವಿಗೆ ಸಾಮಾಜಿಕ ಪರಿಸರವನ್ನು ನೀಡುವ ಸಾಮಾಜಿಕ ಸಂಸ್ಥೆಯಾಗಿದೆ. ಕುಟುಂಬದ ಸದಸ್ಯರ ಮೂಲಭೂತ ಅಗತ್ಯತೆಗಳನ್ನು ಈಡೇರಿಸುವುದರ ಜೊತೆಗೆ ಸದಸ್ಯರಲ್ಲಿ ಪರಸ್ಪರ ಸಂಬಂಧ ಮತ್ತು ಏಕತೆ ಭಾವನೆಯನ್ನು ಬೆಳೆಸುತ್ತದೆ. ಅಲ್ಲದೆ ಕುಟುಂಬದ ಪ್ರತಿಯೊಬ್ಬ ಸದಸ್ಯರಿಗೆ ಸಮಾಜದಲ್ಲಿ ಹೇಗೆ ಬದುಕಬೇಕು, ಎಂಬುದರ ಬಗ್ಗೆ ತಿಳುವಳಿಕೆಯನ್ನು ನೀಡುವುದರ ಜೊತೆಗೆ ಆಯಾ ಸಮಾಜದ ಸಾಂಸ್ಕೃತಿಕ, ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸುತ್ತದೆ. ಸಮಾಜದಲ್ಲಿರುವ ಶ್ರಮ ವಿಭಜನೆ, ವೈವಾಹಿಕ ನೀತಿ, ನಿಯಮಗಳು, ಸದಸ್ಯರ ಸಂಪನ್ಮೂಲಗಳು, ಹಕ್ಕುಗಳು, ಕರ್ತವ್ಯಗಳು ಮತ್ತು ಸವಲತ್ತುಗಳ ಮೇಲಿನ ನಿಯಂತ್ರಣ ವ್ಯವಸ್ಥೆಗೆ ಆಧಾರ ಸ್ತಂಭವಾಗಿ ಕುಟುಂಬ ಕಾರ್ಯನಿರ್ವಹಿಸುತ್ತದೆ. ಕುಟುಂಬ ಮಹಿಳಾ ಬದುಕಿನೊಂದಿಗೆ ಹೆಚ್ಚು ಸಂಬಂಧ ಹೊಂದಿರುವುದರಿಂದ ಅವಳ ಎಲ್ಲ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಮೇಲೆ ಪ್ರಭಾವವನ್ನು ಬೀರಿದೆ. ಹೀಗಾಗಿ ಅವಳ ಬದುಕು ಕುಟುಂಬದ ಆಗು ಹೋಗುಗಳೊಂದಿಗೆ ಬೆರೆತುಕೊಂಡಿದೆ ಆದ್ದರಿಂದ ಕುಟುಂಬವಿಲ್ಲದೆ ಮಹಿಳೆಗೆ ಬದುಕಿಲ್ಲ. ಅದಕ್ಕಾಗಿ ಮಹಿಳೆಯನ್ನು ಕುರಿತಾದ ಯಾವುದೇ ಅಧ್ಯಯನದ ಕುಟುಂಬದ ಅಧ್ಯಯನದೊಂದಿಗೆ ಆರಂಭವಾಗಬೇಕಾಗುವುದು ಅನಿವಾರ್ಯವಾಗಿದೆ. ಅದಕ್ಕೆ ಆರ್ಥಿಕತೆಯು ಹೊರತಾಗಿಲ್ಲ.

ಕುಟುಂಬ ಎಂಬ ಪದವು ಇಂಗ್ಲಿಷ್ ಭಾಷೆಯ ಫ್ಯಾಮಿಲಿ (Family) ಎಂಬ ಪದದ ಅನುವಾದವಾಗಿದೆ. 'ಫ್ಯಾಮಿಲಿ' ಎಂಬ ಪದವು ಲ್ಯಾಟಿನ್ ಭಾಷೆಯಲ್ಲಿ 'ಫ್ಯಾಮುಲಸ್'(Famulas)ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಲ್ಯಾಟಿನ್ ಭಾಷೆಯಲ್ಲಿ 'ಫ್ಯಾಮುಲಸ್' ಎಂದರೆ 'ಆಳು' ಎಂಬ ಅರ್ಥವನ್ನು

ನೀಡುತ್ತದೆ. ರೋಮ್ ದೇಶದಲ್ಲಿ ಹಿಂದಿನ ಕಾಲದಲ್ಲಿ ಆಳುಗಳನ್ನು ಕುಟುಂಬದ ಸದಸ್ಯರೆಂದು ಪರಿಗಣಿಸುತ್ತಿದ್ದರಿಂದ 'ಫ್ಯಮಿಲಿ' ಎಂಬ ಪದ ಹುಟ್ಟಿಕೊಂಡಿತು. ಇದರ ಪರಿಣಾಮದಿಂದಾಗಿ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯನ್ನು 'ಸೇವಕಳು' ಎಂದು ಭಾವಿಸುವ ಪರಿಪಾಟ ಬೆಳೆಯಿತು.[೧೫] ಕುಟುಂಬ ಎಂಬುದು ಗಂಡ ಹೆಂಡತಿ ಮತ್ತು ಮಕ್ಕಳಿಂದ ಕೂಡಿದ ಭಾವಾತ್ಮಕ ಸಂಬಂಧಗಳ ವ್ಯವಸ್ಥೆಯಾಗಿದೆ. ಕುಟುಂಬ ಎಂದರೆ ಏನು ಎಂಬುದರ ಬಗ್ಗೆ ಹಲವು ಸಮಾಜಶಾಸ್ತ್ರಜ್ಞರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಖ್ಯಾತ ಸಮಾಜಶಾಸ್ತ್ರಜ್ಞ ಮೆಕೈವರ್ ಮತ್ತು ಫೇಜ್ ಅವರು "ಸಂತತಿ ಉತ್ಪತ್ತಿ ಮತ್ತು ಶಿಶುಗಳ ಪಾಲನೆ ಪೋಷಣೆಯ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಲೈಂಗಿಕ ಸಂಬಂಧದ ಆಧಾರದ ಮೇಲೆ ರಚಿತವಾದ ಮತ್ತು ದೀರ್ಘಕಾಲ ಬಾಳುವ ಸಮೂಹವೇ ಕುಟುಂಬ" ಎಂದಿದ್ದಾರೆ. ಕೀಲಿಯರ್ ಮತ್ತು ಮೇರಿಲ್ ಎಂಬ ಮತ್ತೊಬ್ಬ ಸಮಾಜಶಾಸ್ತ್ರಜ್ಞರು ಗಂಡ-ಹೆಂಡತಿ ಮತ್ತು ಮಕ್ಕಳನ್ನೊಳಗೊಂಡಿರುವ ಜೈವಿಕ ಸಾಮಾಜಿಕ ಘಟಕವೇ ಕುಟುಂಬ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೧೬]

ಕುಟುಂಬ ವ್ಯವಸ್ಥೆಯ ಒಡೆತನವನ್ನು ಆಧರಿಸಿ 'ಕುಟುಂಬ'ವನ್ನು ಎರಡು ವಿಧದಲ್ಲಿ ವಿಂಗಡಿಸಲಾಗಿದೆ ಅವುಗಳಲ್ಲಿ ಒಂದನೆಯದು ಮಾತೃವಂಶೀಯ ಕುಟುಂಬ ವ್ಯವಸ್ಥೆಯಾದರೆ ಮತ್ತೊಂದು ಪಿತೃವಂಶೀಯ ಕುಟುಂಬ ವ್ಯವಸ್ಥೆಯಾಗಿದೆ. "ತಾಯಿಯೇ ಕುಟುಂಬದ ಒಡತಿಯಾಗಿರುವ ಮತ್ತು ತಾಯಿಯ ಹೆಸರಿನಲ್ಲಿಯೇ ಕುಟುಂಬ ಆಸ್ತಿ ಪಾಸ್ತಿಗಳ ವಹಿವಾಟು ನಡೆಸುವ ಕುಟುಂಬ ವ್ಯವಸ್ಥೆಯನ್ನು ಮಾತೃವಂಶೀಯ ಕುಟುಂಬ ವ್ಯವಸ್ಥೆ ಎಂದು ಕರೆಯಲಾಗುತ್ತದೆ." ಈ ರೀತಿಯ ಕುಟುಂಬ ವ್ಯವಸ್ಥೆಯಲ್ಲಿ 'ಆಸ್ತಿಯ ಹಕ್ಕು' ತಾಯಿಯ ನಂತರ ಹಿರಿಯ ಮಗಳಿಗೆ ವರ್ಗಾವಣೆಯಾಗುತ್ತದೆ. ಇಲ್ಲಿ ಗಂಡು ಮಕ್ಕಳಿಗೆ ಆಸ್ತಿಯಲ್ಲಿ ಪಾಲುದಾರಿಕೆ ಇರುವುದಿಲ್ಲ ಈ ವ್ಯವಸ್ಥೆಯಲ್ಲಿ ಆಸ್ತಿಯ ಒಡೆತನ ಮಹಿಳೆಗೆ ಇರುವುದರಿಂದ ಅವಳ ಸಹೋದರರು ಆಸ್ತಿಯ ಮೇಲ್ವಿಚಾರಣೆಯನ್ನು ಮಾಡುವವರಾಗಿರುತ್ತಾರೆ. ಇಂತಹ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರು ಸ್ವತಂತ್ರವಾಗಿ ಜೀವಿಸುತ್ತಿದ್ದು ಆರ್ಥಿಕವಾಗಿ ಸಬಲರಾಗಿರುತ್ತಾರೆ. ಪುರುಷರ ಶೋಷಣೆ, ದಬ್ಬಾಳಿಕೆಯಿಂದ ಮುಕ್ತರಾಗಿರುತ್ತಾರೆ. ಈ ರೀತಿಯ ಕುಟುಂಬಗಳು ಇಂದಿಗೂ ಕೂಡ ಬಾಸಿ, ಗ್ಯಾರೋ, ಹಿಡಾಟ್ಸಾ, ಹೋಪಿ ಮತ್ತು ಕೇರಳದ ನಾಯಿನರ್ ಎಂಬ ಆದಿವಾಸಿ ಸಮುದಾಯಗಳಲ್ಲಿ ಕಂಡುಬರುತ್ತಿದೆ. 'ತಂದೆಯೇ ಮನೆಯ ಒಡೆಯನಾಗಿರುವ ಹಾಗೂ ತಂದೆಯ ಹೆಸರಿನಲ್ಲಿಯೇ ಆಸ್ತಿ-ಪಾಸ್ತಿಗಳ ವಹಿವಾಟು ನಡೆಯುವ ಕುಟುಂಬವನ್ನು ಪಿತೃಪ್ರಧಾನ ಕುಟುಂಬ ಎಂದು ಕರೆಯಲಾಗುತ್ತದೆ. ಈ ರೀತಿಯ ಕುಟುಂಬ ವ್ಯವಸ್ಥೆಯಲ್ಲಿ ತಂದೆಯೇ ಕುಟುಂಬದ ಯಜಮಾನನಾಗಿದ್ದು, ಕುಟುಂಬದಲ್ಲಿ ಹೆಚ್ಚಿನ ಅಧಿಕಾರ ಪಡೆದಿರುತ್ತಾನೆ. ಹೆಂಡತಿ ಮತ್ತು ಮಕ್ಕಳು ಸಂಪೂರ್ಣವಾಗಿ ಅವನ ಅಧೀನದಲ್ಲಿ ಇರುತ್ತಾರೆ. ಕುಟುಂಬಕ್ಕೆ ಸಂಬಂಧಿಸಿದ ಎಲ್ಲ ಅಧಿಕಾರ ತಂದೆಗೆ ಸೇರಿರುತ್ತವೆ ಮುಂದೆ ಈ ಅಧಿಕಾರ ತಂದೆಯಿಂದ ತನ್ನ ಹಿರಿಯ ಮಗನಿಗೆ ಹಸ್ತಾಂತರವಾಗುತ್ತದೆ. ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದ ಚರ ಮತ್ತು ಸ್ಥಿರ

ಆಸ್ತಿಗಳ ಒಡೆತನ ಮತ್ತು ಸಂಪನ್ಮೂಲಗಳ ಲಭ್ಯತೆಯು ಪುರುಷಕೇಂದ್ರಿತವಾಗಿರುತ್ತದೆ. ಆದ್ದರಿಂದ ಈ ವ್ಯವಸ್ಥೆಯಲ್ಲಿ ಮಹಿಳೆಯನ್ನು 'ಸೇವಕಿ'ಎಂದು ಗಂಡಸಿನ ಅಡಿಯಾಳೆಂದು ನೋಡಲಾಗುತ್ತದೆ. ಅಲ್ಲದೆ ಮಹಿಳೆಯ ಲೈಂಗಿಕತೆ, ಸಂತಾನೋತ್ಪತ್ತಿ ಸಾಮರ್ಥ್ಯ ಮತ್ತು ಆರ್ಥಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವ ಮೂಲಕ ಮಹಿಳೆಯರನ್ನು ನಿಯಂತ್ರಿಸಲಾಗುತ್ತದೆ.[೧೭] ಇಂದು ಈ ರೀತಿಯ ಕುಟುಂಬ ವ್ಯವಸ್ಥೆಗಳು ಭಾರತ, ಚೀನ, ಗ್ರೀಸ್, ರೋಮ್ ಮತ್ತು ಈಜಿಪ್ಟ್ ಮುಂತಾದ ರಾಷ್ಟ್ರಗಳಲ್ಲಿ ಕಂಡುಬರುತ್ತಿದೆ.

ವ್ಯಕ್ತಿಯನ್ನು ಸಾಮಾಜಿಕ ಕ್ರಿಯೆಗೆ ಒಳಪಡಿಸುವ ಮಹತ್ವದ ಸಂಸ್ಥೆಯಾದ ಕುಟುಂಬವು ಮಹಿಳೆಯ ಆರ್ಥಿಕತೆಯ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರಿದೆ. ಆ ಮೂಲಕ ಮಹಿಳೆಗೆ ಆರ್ಥಿಕ ಸಂಪನ್ಮೂಲಗಳು ಸುಲಭವಾಗಿ ಎಟುಕುದ ರೀತಿಯಲ್ಲಿ ಕಾರ್ಯ ತಂತ್ರವನ್ನು ರೂಪಿಸುತ್ತಿದ್ದು, ಈ ಪ್ರಕ್ರಿಯೆಯು ಹೆಂಗಸಿನ ಬಾಲ್ಯದಿಂದ ವಯಸ್ಸಾಗುವವರೆಗೂ ನಡೆಯುತ್ತದೆ. ಅಲ್ಲದೆ ಆರ್ಥಿಕತೆಯ ಮೂಲ ಅಂಶಗಳಾದ 'ಆಸ್ತಿ' ಹಾಗೂ ಮಾನವ ಬಂಡವಾಳ ಉತ್ಪಾದಕ ಸಂಪನ್ಮೂಲಗಳನ್ನು ಹೆಂಗಸಿಗೆ ದೊರೆಯದಂತೆ ಕುಟುಂಬ ಕಾರ್ಯನಿರ್ವಹಿಸುತ್ತದೆ. ಮಾನವ ಬಂಡವಾಳ ಉತ್ಪಾದಕ ಸಂಪನ್ಮೂಲಗಳೆಂದರೆ ಮಾನವನ ಉತ್ಪಾದನಾ ದಕ್ಷತೆಯನ್ನು ಹೆಚ್ಚಿಸುವ ಮತ್ತು ಅವನನ್ನು ಬಂಡವಾಳವನ್ನಾಗಿ ಪರಿವರ್ತಿಸುವ ಶಿಕ್ಷಣ, ಉದ್ಯೋಗ ಮತ್ತು ಆರೋಗ್ಯವನ್ನು ನೀಡುವುದೇ ಆಗಿದೆ.[೧೮] ಸಾಮಾಜಿಕ ವ್ಯವಸ್ಥೆಯಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅಳಿದು ಪಿತೃಪ್ರಧಾನ ಕುಟುಂಬ ವ್ಯವಸ್ಥೆ ರೂಪುಗೊಂಡಾಗಿನಿಂದ ಇಲ್ಲಿಯವರೆಗೂ ಮಹಿಳೆಯನ್ನು ಆರ್ಥಿಕ ಅಂಶದಿಂದ ದೂರ ಇಡುವ ಪ್ರಯತ್ನ ನಿರಂತರವಾಗಿ ನಡೆಯುತ್ತಿದೆ.

ಖ್ಯಾತ ಸ್ತ್ರೀವಾದಿ ಚಿಂತಕಿ ಸಿಮೊನ್ ದ ಬೋವಾ ಅವರು "ಸ್ತ್ರೀಯರ ದೌರ್ಬಲ್ಯಗಳಿಗೆ ಆರ್ಥಿಕ ದಾಸ್ಯ ಅಥವಾ ಅವಲಂಬನೆ ಮತ್ತು ಸಂತಾನವೇ ಕಾರಣವೆಂದು ಅಭಿಪ್ರಾಯ ಪಟ್ಟಿದ್ದಾರೆ" ಹಾಗೂ ಸಾಮಾಜಿಕತೆ ಮತ್ತು ಲೈಂಗಿಕತೆ ಎಂಬ ನಾಲ್ಕು ಅಂಶಗಳು ಪ್ರತ್ಯೇಕವಾಗಿ ಅಥವಾ ಒಟ್ಟಿಗೆ ಕೂಡಿಕೊಂಡು ಹೆಣ್ಣಿನ ಪರಿಸ್ಥಿತಿಯನ್ನು ನಿಯಂತ್ರಿಸುತ್ತಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೧೯] ಈ ನಾಲ್ಕು ಅಂಶಗಳು ಮಹಿಳೆಯ 'ಆರ್ಥಿಕತೆ' ಮತ್ತು 'ಚಲನೆ'ಯನ್ನು ನಿಯಂತ್ರಿಸುವ ಮೂಲಕ ಅವಳಿಗೆ ಆಸ್ತಿ, ಸಂಪತ್ತು, ಶಿಕ್ಷಣ ಅವಕಾಶ, ಬಿರುದು, ಉತ್ಪಾದನೆ ಮತ್ತು ಸಂತಾನ ಇತ್ಯಾದಿ ಸಂಪನ್ಮೂಲಗಳು ದೊರೆಯದಂತೆ ಮಾಡಲಾಗುತ್ತದೆ. ಇದರ ಪರಿಣಾಮವಾಗಿ ಮಹಿಳೆ ಆರ್ಥಿಕವಾಗಿ ದುರ್ಬಲಳಾಗುತ್ತಾಳೆ. ಅಲ್ಲದೆ ಪುರುಷರ ಅಧೀನದಲ್ಲಿ ಉಳಿಯುತ್ತಾಳೆ. ಈ ಒಂದು ಕ್ರಿಯೆಯು ಕುಟುಂಬದ ನೆಲೆಯಲ್ಲಿಯೆ ನಡೆಯುವಂತದಾಗಿದೆ.

ಕುಟುಂಬದಲ್ಲಿ 'ಆಸ್ತಿ'ಯು ವಂಶ ಪಾರಂಪರಿಕವಾಗಿ ತಂದೆಯಿಂದ ಮಗನಿಗೆ ವರ್ಗಾವಣೆಯಾಗುತ್ತದೆ. ಈ ಕಾರಣಕ್ಕಾಗಿ ಇಂದು ಸಮಾಜದಲ್ಲಿ ಗಂಡು ಸಂತಾನಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗುತ್ತಿದೆ. ಅಲ್ಲದೆ ಗಂಡು ಮಗು ಮತ್ತು ಹೆಣ್ಣು ಮಗುವಿಗೂ ಸಂಪನ್ಮೂಲಗಳನ್ನು ಹಂಚುವಲ್ಲಿ ತಾರತಮ್ಯವನ್ನು ಮಾಡಲಾಗುತ್ತದೆ. ಗಂಡು ಮಗು ಕುಟುಂಬದ ವಾರಸುದಾರ, ವಂಶೋದ್ಧಾರಕ ಮತ್ತು ಕುಟುಂಬಕ್ಕೆ ಆರ್ಥಿಕ ಆಧಾರಸ್ತಂಭವಾಗುವನೆಂದು ನಂಬಿ ಹೆಣ್ಣು ಮಗುವಿಗಿಂತ ಹೆಚ್ಚಿನ ಸೌಲಭ್ಯವನ್ನು ನೀಡಿ ಗಂಡು ಮಗುವನ್ನು ಬೆಳೆಸಲಾಗುತ್ತಿದೆ ಮತ್ತು ಆರ್ಥಿಕ ಸಂಪತ್ತನ್ನು ನೀಡಲಾಗುತ್ತದೆ. ಆದರೆ ಹೆಣ್ಣು ಮಗುವನ್ನು ಈ ಸೌಲಭ್ಯಗಳಿಂದ ವಂಚಿತಳನ್ನಾಗಿ ಮಾಡಲಾಗುತ್ತದೆ. ಕುಟುಂಬ ವ್ಯವಸ್ಥೆಯಲ್ಲಿ 'ಆಸ್ತಿ'ಯು ಪುರುಷರ ಅಧೀನದಲ್ಲಿರುವುದರಿಂದ ಪುರುಷರು 'ಆಸ್ತಿ' ಒಡೆತನದ ಹಕ್ಕನ್ನು ಪಡೆದು ಸಮಾಜದಲ್ಲಿ ಉನ್ನತ ಆರ್ಥಿಕ ಸ್ಥಾನಮಾನವನ್ನು ಪಡೆಯುತ್ತಾರೆ. ಆ ಮೂಲಕ ಅವರು ಎಲ್ಲ ರೀತಿಯ ಸಂಪತ್ತನ್ನು ಹೊಂದುತ್ತಾರೆ. ಆದರೆ ಕುಟುಂಬ ವ್ಯವಸ್ಥೆಯಲ್ಲಿ 'ಬಾಲ್ಯ'ದಿಂದಲೇ 'ಆಸ್ತಿ' ಹಕ್ಕಿನಿಂದ ದೂರ ಉಳಿಗ ಹೆಂಗಸು ವಿವಾಹ ನಂತರವೂ ಅವಳು ಆಸ್ತಿಯಿಂದ ದೂರ ಉಳಿಯುತ್ತಾಳೆ. ಒಂದು ವೇಳೆ ತಂದೆಯ ಉದಾರತೆ ಮತ್ತು ಗಂಡನ ಸಾವಿನಿಂದಾಗಿ 'ಆಸ್ತಿ' ಮಹಿಳೆಯ ಕೈ ಸೇರಿದರೂ ಅದರ ಒಡೆತನ ಮತ್ತು ಮೇಲ್ವಿಚಾರಣೆ ಅವರದಾಗಿರುವುದಿಲ್ಲ. ಅವಳ ಸಹೋದರ ಅಥವಾ ಗಂಡನ ಸಹೋದರರು ಆಸ್ತಿಯ ಮೇಲ್ವಿಚಾರಣೆಯನ್ನು ಮಾಡುವವರಾಗಿರುತ್ತಾರೆ. ಈ ಒಂದು ಅಂಶ ಅವಳನ್ನು ಪುರುಷರ ಅಧೀನದಲ್ಲಿ ಇರುವಂತೆ ಮಾಡಿದೆ. ಅಲ್ಲದೆ ಅವಳು ಆರ್ಥಿಕವಾಗಿ ದುರ್ಬಲಳಾಗಲು ಕಾರಣವಾಗಿದೆ.[೨೦]

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಆಹಾರ, ಬಟ್ಟೆ, ವಸತಿ ಮತ್ತು ಅಭಿವೃದ್ಧಿಗೆ ನಿರಂತರ ಅವಕಾಶ ಇತ್ಯಾದಿಗಳು ಪ್ರಮುಖವಾದವು. ಆದರೆ ಇವುಗಳನ್ನು ದೊರಕಿಸಿಕೊಡುವಾಗ ಕುಟುಂಬದಲ್ಲಿ ತಾರತಮ್ಯವನ್ನು ಮಾಡಲಾಗುತ್ತದೆ. ಇವುಗಳಲ್ಲಿ ಮಾನವನ ಬೆಳವಣಿಗೆಗೆ ಕಾರಣವಾದ ಆಹಾರದ ಹಂಚಿಕೆಯನ್ನು ತೆಗೆದುಕೊಂಡರೆ ಅದರ ಹಂಚಿಕೆಯಲ್ಲಿ ಗಂಡು ಮತ್ತು ಹೆಣ್ಣು ಮಗುವಿಗೆ ತಾರತಮ್ಯ ಮಾಡುತ್ತಿರುವುದು ಕಂಡುಬರುತ್ತದೆ. ಹೆಣ್ಣು ಮಗು ಎಂಬ ಕಾರಣಕ್ಕಾಗಿ ಕಡಿಮೆ ಆಹಾರವನ್ನು ನೀಡುವುದು, ಕುಟುಂಬದ ಪುರುಷ ಸದಸ್ಯರ ಊಟ ಆದ ನಂತರ ಊಟ ಬಡಿಸುವುದು ಮತ್ತು ಕಡಿಮೆ ಪೌಷ್ಟಿಕತೆಯುಳ್ಳ ಆಹಾರವನ್ನು ನೀಡುವುದು ಇತ್ಯಾದಿ ಆಚರಣೆಗಳು ಕುಟುಂಬದ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಅಲ್ಲದೆ ಹೆಣ್ಣು ಮತ್ತು ಇತರರ ಮನೆಯನ್ನು ಸೇರುವವಳು, ಗಂಡನ ಮನೆಗೆ ಆದಾಯ ತಂದು ಕೊಡುವವಳು ಎಂದು ಮತ್ತು ಗಂಡು ಮಗ ವಂಶೋದ್ಧಾರಕ, ಭವಿಷ್ಯತ್ತಿನಲ್ಲಿ ಕುಟುಂಬಕ್ಕೆ ಆಧಾರವಾಗುವವನು ಎಂಬ ಕಾರಣದಿಂದ ಗಂಡು ಮಗು ಮತ್ತು ಹೆಣ್ಣು ಮಗುವಿಗೆ ಆಹಾರ ನೀಡುವಲ್ಲಿ ತಾರತಮ್ಯವನ್ನು ಮಾಡಲಾಗುತ್ತಿದೆ.[೨೧] ಆಹಾರದ ಹಂಚಿಕೆಯಲ್ಲಿನ ತಾರತಮ್ಯದಿಂದಾಗಿ ಮಹಿಳೆ ಅಶಕ್ತತೆ ಮತ್ತು ಅನಾರೋಗ್ಯದಿಂದ ನರಳುತ್ತಾಳೆ. ಅಲ್ಲದೆ ಅವಳ 'ಉತ್ಪಾದಕ ಶಕ್ತಿ' ಕುಂದಿ ಅವಳ ಶ್ರಮ

ದಿನಗಳು ಕಡಿಮೆಯಾಗುತ್ತವೆ. ಇದರಿಂದಾಗಿ ಅವಳು ಪಡೆಯುವ ಆದಾಯವು ಕಡಿಮೆಯಾಗಿ ಕುಟುಂಬದ ಒಳಗಡೆ ಪುರುಷರ ಅಧೀನದಲ್ಲಿ ಪರಾವಲಂಬಿಯಾಗಿ ಬದುಕನ್ನು ಸಾಗಿಸಬೇಕಾಗುತ್ತದೆ.

ವ್ಯಕ್ತಿಯ ವ್ಯಕ್ತಿತ್ವ ವಿಕಾಸದಲ್ಲಿ ಶಿಕ್ಷಣ ಅತ್ಯಂತ ಮುಖ್ಯವಾದ ಪಾತ್ರ ವಹಿಸುತ್ತದೆ. ಮಾಂಸದ ಮುದ್ದೆಯಂತಿದ್ದ ಮಗುವನ್ನು 'ಸಾಮಾಜಿಕ ಮೌಲ್ಯೋತ್ಪಾದಕ ಬಂಡವಾಳ'ವನ್ನಾಗಿ ರೂಪಿಸುತ್ತದೆ. ಆದರೆ ಕುಟುಂಬ ಮಕ್ಕಳಿಗೆ ಶಿಕ್ಷಣ ನೀಡುವಲ್ಲೇ ತಾರತಮ್ಯವನ್ನು ಮಾಡುವ ಮೂಲಕ ಮಾನವ ಬಂಡವಾಳದ ನಿರ್ಮಾಣ ಕಾರ್ಯವನ್ನು ಕುಂಠಿತಗೊಳಿಸುತ್ತದೆ. ಕುಟುಂಬದ ನೆಲೆಯಲ್ಲಿ ನೋಡಿದರೆ ಶಿಕ್ಷಣ ಸಂಪನ್ಮೂಲವನ್ನು ಹಂಚುವಲ್ಲಿ ಗಂಡುಮಗು ಮತ್ತು ಹೆಣ್ಣುಮಗು ಎಂಬ ತಾರತಮ್ಯ ಮಾಡಿ ಗಂಡುಮಕ್ಕಳಿಗೆ ಹೆಚ್ಚಿನ ಶಿಕ್ಷಣ ಸೌಲಭ್ಯವನ್ನು ನೀಡಲಾಗುತ್ತದೆ. ಅಲ್ಲದೆ ಹೆಣ್ಣುಮಗು ಗಂಡು ಮಗುವಿಗಿಂತ ಎಷ್ಟೇ ಬುದ್ಧಿವಂತಳಾಗಿದ್ದರೂ ಅವಳಿಗೆ ಕಡಿಮೆ ಶಿಕ್ಷಣ ಸೌಲಭ್ಯವನ್ನು ನೀಡಲಾಗುತ್ತಿದೆ. ಸರಕಾರ ಮಹಿಳೆಯರಿಗೆ ಮತ್ತು ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಲು ಅನೇಕ ರೀತಿಯ ಸರಕಾರಿ ಅವಕಾಶಗಳನ್ನು ನೀಡಿದರೂ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಲು ಪಾಲಕರು ಹಿಂದೇಟು ಹಾಕುತ್ತಿದ್ದಾರೆ. ಹೆಣ್ಣು ಮಗು ಹೆಚ್ಚು ಕಲಿತರೆ ವರನಿಗೆ ಹೆಚ್ಚು ಹೆಚ್ಚು ವರದಕ್ಷಿಣೆ ನೀಡಬೇಕಾದ ಪರಿಸ್ಥಿತಿ ಬರಬಹುದೆಂದು ಅವರನ್ನು ಶಾಲೆ ಬಿಡಿಸುವ ಮತ್ತು ಬಾಲ್ಯ ವಿವಾಹವನ್ನು ಮಾಡುವ ಸಂಪ್ರದಾಯಗಳು ಗ್ರಾಮೀಣ ಜನರಲ್ಲಿ ಮನೆ ಮಾಡಿಕೊಂಡಿವೆ. ಗಂಡು ಮಗನಿಗೆ ಶಿಕ್ಷಣ ನೀಡಿದರೆ ಉದ್ಯೋಗ ಪಡೆದು ಇಳಿವಯಸ್ಸಿನಲ್ಲಿ ತಮ್ಮನ್ನು ನೋಡುತ್ತಾನೆ ಎಂಬ ಭಾವನೆಯಿಂದ ಪಾಲಕರು ಗಂಡು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುತ್ತಾರೆ. ಈ ರೀತಿಯ ಲಿಂಗತಾರತಮ್ಯದಿಂದಾಗಿ ಮಹಿಳೆ ಆರ್ಥಿಕ ಸ್ವಾವಲಂಬನೆಯ ಹಾದಿಯಿಂದ ವಂಚಿತಳಾಗುತ್ತಾಳೆ. ಅಲ್ಲದೆ ಕಡಿಮೆ ಆದಾಯ ತರುವ ಉದ್ಯೋಗವನ್ನು ಅರಸಿ ಪುರುಷರ ಅಧೀನದಲ್ಲಿ ದುಡಿಯುವಂತಾಗುತ್ತಾಳೆ.

ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿಗೆ ಉನ್ನತ ಸ್ಥಾನಮಾನ ದೊರಕಿಸಿಕೊಡುವಲ್ಲಿ ಉದ್ಯೋಗ ಮತ್ತು ಉತ್ಪಾದನೆ ಪ್ರಮುಖ ಸ್ಥಾನ ಪಡೆಯುತ್ತವೆ. ಆದರೆ ಮಹಿಳೆಯನ್ನು ಉತ್ಪಾದನೆ ಮತ್ತು ಉದ್ಯೋಗದ ಕಾರ್ಯದಿಂದಲೇ ದೂರ ಇಡುವ ಪ್ರಯತ್ನ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆಯುತ್ತಿದೆ. ಅಲೆಮಾರಿ ಜೀವನ ಸಾಗಿಸುತ್ತಿದ್ದ ಆದಿಮಾನವ ಒಂದೆಡೆ ನೆಲೆ ನಿಂತು ಕೃಷಿ ಕಾರ್ಯ ಆರಂಭಿಸಿದ ಕ್ಷಣದಿಂದಲೇ ಮಹಿಳೆಯಿಂದ ಉತ್ಪಾದನೆಯ ಹಕ್ಕು ಅಥವಾ ಅಧಿಕಾರವನ್ನು ಕಸಿದುಕೊಂಡ. ಬೇಟೆ, ಕೃಷಿ ಮತ್ತು ಔದ್ಯೋಗೀಕರಣದಂತಹ ಎಲ್ಲ ಹಂತಗಳಲ್ಲೂ ಪ್ರಧಾನ ಸ್ಥಾನವನ್ನು ಪಡೆದುಕೊಂಡ. ಅಲ್ಲದೆ ಮಹಿಳೆಯನ್ನು ಆ ಸ್ಥಾನದಿಂದ ದೂರವಿರಿಸಲು ಸಾಕಷ್ಟು ನಿಯಮ, ತತ್ವ ಮತ್ತು ನಿರ್ಬಂಧಗಳನ್ನು ಹೇರಿದ. ಅವಳು ಮನೆಯಲ್ಲಿ, ಉದ್ಯೋಗಸ್ಥಳದಲ್ಲಿ, ಕಾರ್ಖಾನೆ, ಕೃಷಿ ಭೂಮಿ ಮತ್ತು ಸೇವಾ ವಲಯಗಳಲ್ಲಿ ದುಡಿದರೂ ಅವಳ ದುಡಿಮೆಯನ್ನು ಶ್ರಮವೆಂದು ಪರಿಗಣಿಸದೆ ಅದು ಒಂದು ಸೇವೆ

ಎಂದು ಪರಿಗಣಿಸಿ ಅವಳ ದುಡಿಮೆಗೆ ಮಾರುಕಟ್ಟೆ ಮೌಲ್ಯವಿಲ್ಲದಂತೆ ಮಾಡಿ ಕ್ರಯ ವಿಕ್ರಯ ಪಟ್ಟಿಯಿಂದ ದೂರ ಮಾಡಿದ. ಇದರಿಂದಾಗ ಹೆಂಗಸಿನ ದುಡಿಮೆಗೆ, ಗಳಿಕೆಗೆ ಮೌಲ್ಯ ಇಲ್ಲವಾಯಿತು. ಹೆಂಗಸು ಆರ್ಥಿಕ ತೊಂದರೆಯಿಂದ ಉಂಟಾದ ಪರಿಸ್ಥಿತಿ ಸರಿಪಡಿಸಲು ಪುರುಷರ ಅಧೀನದಲ್ಲಿ ಕೆಲಸ ಮಾಡಿ ಕಡಿಮೆ ಆದಾಯ ಪಡೆಯುವಂತಾಯಿತು. ಆದರೆ ಅವಳು ಗಳಿಸಿದ ಆದಾಯ ಅವಳಿಗೆ ದೊರೆಯದೆ ಅವಳ ಗಂಡ, ತಂದೆ ಅಥವಾ ಕುಟುಂಬದ ಯಜಮಾನರ ಕೈಯಲ್ಲಿ ಸೇರುತ್ತದೆ. ಹಾಗಾಗಿ ಗಳಿಸಿದ ಆದಾಯವನ್ನು ವೆಚ್ಚ ಮಾಡುವ ಅಧಿಕಾರ ಸಹ ಅವಳಿಗಿಲ್ಲವಾಗುತ್ತಿದೆ. ಒಂದು ವೇಳೆ ಪುರುಷರಿಗೆ ಸಮಾನವಾದ ಉದ್ಯೋಗ ಮಾಡಿ ಅವರಿಗೆ ಸಮಾನವಾಗಿ ಆದಾಯ(ಸಂಬಳ) ಪಡೆದರೂ ಆದಾಯವನ್ನು ವೆಚ್ಚ ಮಾಡುವಲ್ಲಿ ಗಂಡನ ಅಥವಾ ಮನೆಯ ಯಜಮಾನನ ಒಪ್ಪಿಗೆ ಪಡೆಯಬೇಕಾದ ವ್ಯವಸ್ಥೆಯನ್ನು ನಿರ್ಮಿಸಿದೆ ಈ ಕುಟುಂಬ ವ್ಯವಸ್ಥೆ.[೨೨]

ಮಹಿಳೆಯರ ಆರ್ಥಿಕ ದೌರ್ಬಲ್ಯಕ್ಕೆ, ಆರ್ಥಿಕ ಶೋಷಣೆಗೆ ಅಥವಾ ಅವಳ ಪುರುಷ ಅವಲಂಬಿ ಜೀವನಕ್ಕೆ ಸಾಮಾಜಿಕ ವ್ಯವಸ್ಥೆಯ ಪ್ರಥಮ ಸಂಸ್ಥೆಯಾದ ಕುಟುಂಬದಲ್ಲಿ ಕಂಡುಬರುವ ಕುಟುಂಬ ಸಂಪನ್ಮೂಲಗಳಲ್ಲಿನ ಲಿಂಗತಾರತಮ್ಯವೇ ಮೂಲಕಾರಣವಾಗಿದೆ. ಅಲ್ಲದೆ ಸಮಾಜವು ಮಹಿಳೆಗೆ ಬೆಳೆಸಿದ ಜೈವಿಕ ನೀತಿಯ ಪರಹಿತವಾದಿ ಗುಣವು ಸಹ ಅವಳ ಶೋಷಣೆಗೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಹೆಣ್ಣು ಮಗುವಿಗೆ ಪರಹಿತವಾದಿ ಗುಣವನ್ನು ಶೈಶವಾಸ್ಥೆಯಿಂದಲೇ ಬೆಳೆಸಲಾಗುತ್ತದೆ. ಆದ್ದರಿಂದಾಗಿ ಅವಳು ಕುಟುಂಬದಲ್ಲಿ ತನ್ನ ಹಿತಕ್ಕಿಂತ ಗಂಡ ಮತ್ತು ಮಕ್ಕಳ ಹಿತಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಾಳೆ. ಇದು ಅವಳನ್ನು ಶೋಷಣೆಗೆ ಒಳಗಾಗುವಂತೆ ಮಾಡುತ್ತದೆ. ಇದನ್ನು ಆಧಾರವಾಗಿಟ್ಟುಕೊಂಡು ಖ್ಯಾತ ಅರ್ಥಶಾಸ್ತ್ರಜ್ಞ ಅಮರ್ತ್ಯಸೇನ್ ಅವರು ಕೌಟುಂಬಿಕ ನೆಲೆಯಲ್ಲಿ ಮಹಿಳಾ ಶೋಷಣೆಯ ಬಗ್ಗೆ ವಿಭಿನ್ನವಾದ ಪ್ರಮೇಯವನ್ನು ರೂಪಿಸಿದ್ದಾರೆ. 'ಕುಟುಂಬ' ಎಂಬ ಸಂಸ್ಥೆಯಲ್ಲಿನ ಸದಸ್ಯರಲ್ಲಿ ಸಹಕಾರದ ಗುಣವು ಇರುತ್ತದೆ ಮತ್ತು ಸಂಘರ್ಷದ ಗುಣವು ಇರುತ್ತದೆ ಎಂಬುದು ಸೇನ್ ಅವರ ವಾದವಾಗಿದೆ. ಮಹಿಳೆಯರು ತಮ್ಮ ಶೋಷಣೆಯ ಬಗ್ಗೆ, ಹಿಂಸೆಯ ಬಗ್ಗೆ, ತಾರತಮ್ಯದ ಬಗ್ಗೆ ಪ್ರತಿಭಟನೆ ಮಾಡುವ ಸ್ಥಿತಿಯಲ್ಲಿರುವುದಿಲ್ಲ. ಪ್ರತಿಭಟಿಸಿದರೆ ಸದ್ಯ ದೊರೆಯುತ್ತಿರುವ ಭದ್ರತೆ ರಕ್ಷಣೆಯೂ ಇಲ್ಲವಾಗಿ ಬಿಡುತ್ತದೆ. ಆದ್ದರಿಂದ ಸಂಘರ್ಷಕ್ಕೆ ಇಳಿಯಲಾರದೆ ಅಸಹಾಯಕತೆಯಿಂದ ಸಹಕಾರಿವಾದಿಗಳಾಗಿರುತ್ತಾರೆ ಎಂಬುದು ಸೇನ್ ಅವರ ವಾದವಾಗಿದೆ.[೨೩] ಮಹಿಳೆಯರಿಗೆ ತಾವು ಅನುಭವಿಸುತ್ತಿರುವ ಹಿಂಸೆ ತಾರತಮ್ಯ, ಶೋಷಣೆ ದಮನ ಮುಂತಾದವುಗಳ ಬಗ್ಗೆ ಅರಿವಿದೆ. ಆದರೆ ಅದನ್ನು ಪ್ರತಿಭಟಿಸಿ ಕುಟುಂಬದ ಹೊರಗೆ ಬಂದರೆ ನೆಲೆ ಎಲ್ಲಿ? ಬದುಕುವ ಬಗೆ ಹೇಗೆ? ಕುಟುಂಬದಿಂದ ಹೊರಗೆ ಬಂದ ಮಹಿಳೆಯನ್ನು ಸಮಾಜ ನೋಡುವ ದೃಷ್ಟಿಕೋನ ಹೇಗಿದೆ? ಇತ್ಯಾದಿ ಪ್ರಶ್ನೆಗಳನ್ನು ಹಾಕಿಕೊಂಡು ಉತ್ತರ ದೊರೆಯದೆ ಶೋಷಣೆಯ ನಡುವೆ ಪರಹಿತವಾದಿಯಾಗಿ ಜೀವಿಸುತ್ತಿದ್ದಾಳೆ.

ಇಂದು 'ಬಂಡವಾಳಶಾಹಿ' ವರ್ಗವ್ಯವಸ್ಥೆ ಹಾಗೂ 'ಪುರುಷಶಾಹಿ' ವ್ಯವಸ್ಥೆಗಳು ಮಹಿಳೆಯನ್ನು ಶೋಷಣೆಗೆ ಒಳಪಡಿಸುತ್ತಿವೆ. ಅಲ್ಲದೆ ಕುಟುಂಬ ವ್ಯವಸ್ಥೆಯೂ ಇಂತಹ ಶೋಷಣೆಯ ಮುಂದುವರ ಯುವಿಕೆಗೆ ಸಹಾಯ ಮಾಡುತ್ತಿದೆ. ಕುಟುಂಬ ವ್ಯವಸ್ಥೆಯ ರಾಜಕಾರಣದಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ, ಹಕ್ಕು, ಇಂದಿಗೂ ಪುರುಷರ ವಶದಲ್ಲಿದೆ. ಈ ಅಧಿಕಾರ ಪುರುಷರಿಗೆ ಆಸ್ತಿಯ ಹಕ್ಕು, ಉದ್ಯೋಗದ ಹಕ್ಕು ಮತ್ತು ವರಮಾನದ ಬಳಕೆಯಿಂದ ದೊರೆಯುತ್ತಿದ್ದು, ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ಈ ಹಕ್ಕಿನಿಂದ ವಂಚಿತಳಾಗಿದ್ದಾಳೆ. ಇದು ಅವಳನ್ನು ಆರ್ಥಿಕ ಶೋಷಣೆಗೆ ಮತ್ತು ಪರಾವಲಂಬಿ ಬದುಕಿಗೆ ದೂಡಿವೆ. ಇಂದು ಮಹಿಳೆ ಸ್ತ್ರೀಶಕ್ತಿ, ಸ್ವಸಹಾಯ ಗುಂಪುಗಳನ್ನು ಕಟ್ಟಿಕೊಂಡು ಆರ್ಥಿಕ ಸಬಲತೆ ಸಾಧಿಸುತ್ತಿದ್ದರೂ ಕುಟುಂಬ ವ್ಯವಸ್ಥೆಯ ಪರಹಿತವಾದಿ ಗುಣದಲ್ಲಿ ಸಿಲುಕಿ ಪುರುಷರ ಅಡಿಯಾಳಾಗುತ್ತಿದ್ದಾಳೆ.

### ೨.೩. ಶಿಕ್ಷಣ ವ್ಯವಸ್ಥೆಯಲ್ಲಿ ಮಹಿಳಾ ಆರ್ಥಿಕತೆ

ಶಿಕ್ಷಣವು ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಮಾಂಸದ ಮುದ್ದೆಯಂತೆ ಕಚ್ಚಾವಸ್ತುವಾದ ಮಾನವನನ್ನು ಸಿದ್ಧವಸ್ತುವನ್ನಾಗಿ ಅಥವಾ ಬಂಡವಾಳ ವಸ್ತುವನ್ನಾಗಿ ಮಾರ್ಪಡಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ಅಲ್ಲದೆ ಸಮಾಜದ ಜನರನ್ನು ಸುಶಿಕ್ಷಿತರನ್ನಾಗಿ ಮಾಡಿ ಅವರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬಳಸುವ ಮೂಲಕ ಸಾಮಾಜಿಕ ಪರಿವರ್ತನೆ ಮತ್ತು ಅಭಿವೃದ್ಧಿಗೆ ಕಾರಣವಾಗುತ್ತಿದೆ. ಹೀಗೆ ಅಭಿವೃದ್ಧಿಯ ಯಂತ್ರವಾದ ಈ ಶಿಕ್ಷಣವನ್ನು ನೀಡುವಲ್ಲಿ ಸಮಾಜ 'ಲಿಂಗತಾರತಮ್ಯ'ವನ್ನು ಮಾಡುತ್ತಿರುವುದು ಕಂಡುಬರುತ್ತದೆ. ಈ ಒಂದು ಪ್ರಕ್ರಿಯೆಯು ಸಾಮಾಜಿಕ ವ್ಯವಸ್ಥೆಯ ಪ್ರಮುಖ ಸಂಸ್ಥೆಯಾದ ಕುಟುಂಬದ ವ್ಯವಸ್ಥೆಯಿಂದಲೇ ಪ್ರಾರಂಭವಾಗುತ್ತಿರುವುದು ಮಾನವ ಸಂಪನ್ಮೂಲದ ಒಂದು ದೌರ್ಭಾಗ್ಯವಾಗಿದೆ. ಇದರ ಪರಿಣಾಮದಿಂದಾಗಿ ಇಂದು ಮಹಿಳೆಯರ ಸಾಕ್ಷರತೆಯ ಪ್ರಮಾಣ ಕಡಿಮೆಯಾಗುತ್ತಿದೆ. ಅಲ್ಲದೆ ಅವರನ್ನು 'ದುಡಿಮೆ' ಮತ್ತು 'ಗಳಿಕೆ'ಯ ವಾಹಿನಿಯಿಂದ ದೂರ ಮಾಡುವುದರ ಜೊತೆಗೆ ಅವರನ್ನು ಕಡಿಮೆ ಆದಾಯ ತರುವ, ಕೆಳಮಟ್ಟದ ಕೂಲಿ ಕೆಲಸಗಳಲ್ಲಿ ತೊಡಗುವಂತೆ ಮಾಡಿದೆ.

ಶಿಕ್ಷಣ ಎಂದರೇನು ಎಂಬುದರ ಬಗ್ಗೆ ಶಿಕ್ಷಣ ತಜ್ಞರು ವಿಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿ ದ್ದಾರೆ. ಕೆಲವರು "ಮಗುವಿನ ಸರ್ವತೋಮುಖ ಅಭಿವೃದ್ಧಿಯೇ ಶಿಕ್ಷಣ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರೆ ಮತ್ತೆ ಕೆಲವರು "ವ್ಯಕ್ತಿಯಲ್ಲಿ ಸುಪ್ತವಾಗಿರುವ ಶಕ್ತಿಯನ್ನು ಹೊರಗೆಳೆಯುವುದೇ ಶಿಕ್ಷಣ" ಎಂದಿದ್ದಾರೆ. ಸ್ವಾಮಿ ವಿವೇಕಾನಂದ ಅವರು "ಆರೋಗ್ಯವಂತ ದೇಹದಲ್ಲಿ ಆರೋಗ್ಯವಂತ ಮನಸ್ಸನ್ನು ಸೃಷ್ಟಿಸುವುದೇ ಶಿಕ್ಷಣ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಮಹಾತ್ಮಗಾಂಧೀಜಿ ಅವರು ಮೂಲ ಶಿಕ್ಷಣಕ್ಕೆ ಮಹತ್ವಕೊಟ್ಟು "ವ್ಯಕ್ತಿಯನ್ನು ಸ್ವಾವಲಂಬಿಯನ್ನಾಗಿ ಮಾಡುವುದೇ ಶಿಕ್ಷಣ

ಎಂದಿದ್ದಾರೆ. ಸಾಮಾನ್ಯವಾಗಿ ಹೇಳುವುದಾದರೆ ಶಿಕ್ಷಣ ಎಂದರೆ ವ್ಯಕ್ತಿಯನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಸದೃಢವನ್ನಾಗಿ ಮಾಡುವ ಮೂಲಕ ಅವನ ಆರ್ಥಿಕ ಪ್ರಗತಿಗೆ ಕಾರಣವಾಗುವುದೇ ಶಿಕ್ಷಣವಾಗಿದೆ.[೨೪] ವ್ಯಕ್ತಿಯ ವಿಕಸನಕ್ಕಾಗಿ ಶಿಕ್ಷಣ ಮುಖ್ಯವಾಗಿ ಮೂರು ಕಾರ್ಯಗಳನ್ನು ಮಾಡುತ್ತದೆ. ಅವುಗಳಲ್ಲಿ ಒಂದು ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವುದು. ಎರಡನೆಯದು ಸಮಾಜದಲ್ಲಿ ಬದಲಾವಣೆಯನ್ನು ತರುವುದಕ್ಕಾಗಿ ಪೂರಕವಾದ ವಾತಾವರಣವನ್ನು ಸೃಷ್ಟಿಸುವುದು ಮತ್ತು ಮೂರನೆಯದಾಗಿ ಮಾನವ ಸಂಪನ್ಮೂಲ ಅಭಿವೃದ್ಧಿಗೆ ಶಿಕ್ಷಣ ಮತ್ತು ತರಬೇತಿಯನ್ನು ನೀಡುವ ಮೂಲಕ ಮಾನವ ಶಕ್ತಿಯ ದಕ್ಷತೆಯನ್ನು ಹೆಚ್ಚಿಸುವುದು.[೨೫] ಈ ಮೂರು ಕಾರ್ಯಗಳಲ್ಲಿ ಮೊದಲೆರಡು ಕಾರ್ಯಗಳನ್ನು ಮಹಿಳೆಯರಿಗೆ ವಹಿಸಿ ಕೊಟ್ಟು ಅವರನ್ನು ಮೂರನೇ ಕಾರ್ಯದಿಂದ ದೂರ ಇಡಲಾಗುತ್ತಿದೆ. ಇದು ಅವಳನ್ನು ಅನಕ್ಷರತೆ, ಮೌಢ್ಯತೆ ಮತ್ತು ಅಭದ್ರತೆಯಿಂದ ಜೀವಿಸುವಂತೆ ಮಾಡಿದೆ. ಅಲ್ಲದೆ ಅವಳಿಗೆ ಆರ್ಥಿಕ ಅಂತಸ್ತು ದೊರೆಯದಂತೆ ಮಾಡಿದೆ.

ನಮ್ಮ ದೇಶದ ಸಂವಿಧಾನವು ರಾಷ್ಟ್ರದ ಯಾವುದೇ ಸೌಲಭ್ಯವನ್ನು ನಾಗರಿಕರಿಗೆ ನೀಡುವಾಗ ಸರಕಾರ ಜಾತಿ, ಮತ, ಧರ್ಮ ಮತ್ತು ಲಿಂಗದ ಆಧಾರದ ಮೇಲೆ ತಾರತಮ್ಯ ಮಾಡಬಾರದು ಎಂದು ತಿಳಿಸುತ್ತದೆ. ಅಲ್ಲದೆ ಸಂವಿಧಾನವು ೪೫ನೇ ವಿಧಿಯ ಮೂಲಕ ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂದು ತಿಳಿಸುತ್ತದೆ. ಸಂವಿಧಾನದ ೨೪ನೇ ವಿಧಿಯು ಮಹಿಳೆಯರ ಒತ್ತಾಯದ ದುಡಿಮೆ ಮತ್ತು ಮಕ್ಕಳನ್ನು ಗಂಡಾಂತರ ಕೆಲಸಕ್ಕೆ ನೇಮಿಸಿಕೊಳ್ಳುವುದನ್ನು ತಡೆಯುತ್ತದೆ. ಮುಂದುವರೆದು ಕಲ್ಯಾಣ ರಾಜ್ಯದ ಸ್ಥಾಪನೆಗಾಗಿ ಬೇಕಾದ ವ್ಯವಸ್ಥೆ ರೂಪಿಸಲು ರಾಜನೀತಿ ನಿರ್ದೇಶಕ ತತ್ವಗಳನ್ನು ಸಂವಿಧಾನದ ನಾಲ್ಕನೇ ಭಾಗ ಒಳಗೊಂಡಿದೆ. ಈ ಭಾಗದಲ್ಲಿ ವಯಸ್ಕರ ಶಿಕ್ಷಣ ಮತ್ತು ಮಹಿಳಾ ಶಿಕ್ಷಣಕ್ಕೆ ಬೇಕಾದ ನೀತಿನಿಯಮಗಳನ್ನು ಸರಕಾರ ರೂಪಿಸಬೇಕೆಂಬ ಸಲಹೆಯನ್ನು ಮಾಡಲಾಗಿದೆ.[೨೬] ಹೀಗೆ ಸಂವಿಧಾನ ಎಲ್ಲರಿಗೂ ಸಮಾನತೆ ಮತ್ತು ಸಮಾನ ಅವಕಾಶಗಳನ್ನು ಪಡೆಯಲು ಅವಕಾಶ ನೀಡಿದರೂ ಈ ಸಮಾಜದಲ್ಲಿ ಲಿಂಗತಾರತಮ್ಯವನ್ನು ಮಾಡಲಾಗುತ್ತಿದೆ. ಅಲ್ಲದೆ ಹೆಣ್ಣು ಮಗುವಿಗೆ ಶಿಕ್ಷಣ ನೀಡುವಲ್ಲಿ ಭೇದಭಾವವನ್ನು ಮಾಡಲಾಗುತ್ತಿದೆ. ಈ ಒಂದು ಕಾರ್ಯವು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ನಿರಂತರವಾಗಿ ನಡೆಯುತ್ತ ಬಂದಿರುವುದು ಕಂಡುಬರುತ್ತಿದೆ.

ಪ್ರಾಚೀನ ಕಾಲದ ವೈದಿಕ ಸಮಾಜದಲ್ಲಿ ಮಹಿಳೆಯರು ಅತ್ಯುನ್ನತ ಶೈಕ್ಷಣಿಕ ಸ್ಥಾನಮಾನವನ್ನು ಹೊಂದಿದ್ದಾರೆಂದು ಹೇಳಲಾಗುತ್ತಿದೆ. ಆದರೂ ಈ ಕಾಲದಲ್ಲಿ ಮಹಿಳೆಯ ಬದುಕಿನ ಚಿತ್ರಣವನ್ನು ವಿಭಿನ್ನವಾಗಿ ಚಿತ್ರಿಸಲಾಗಿರುವುದನ್ನು ಇತಿಹಾಸ ತಿಳಿಸುತ್ತಿದೆ. ಇತಿಹಾಸ ವಿದ್ವಾಂಸರಾದ ಅಲ್ಲೇಕರ್ ಮತ್ತು ಕಪಾಡಿಯಾ ಅವರು ವೇದಗಳಲ್ಲಿ ಸ್ತ್ರೀ ಪುರುಷರ ನಡುವೆ ಹೆಚ್ಚಿನ ತಾರತಮ್ಯ ಕಂಡುಬರುವುದಿಲ್ಲ ಎಂಬ

ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೂ ಮಹಿಳೆಯರಿಗೆ ಶಿಕ್ಷಣವನ್ನು ಪಡೆಯುವುದಕ್ಕಾಗಿ ತಕ್ಕಷ್ಟು ಅವಕಾಶಗಳನ್ನು ನೀಡದಿದ್ದದ್ದು ಸ್ಪಷ್ಟವಾಗಿ ಕಂಡುಬರುತ್ತಿದೆ. ಈ ಕಾಲದಲ್ಲಿ ಮಹಿಳೆಯನ್ನು ಪ್ರಾಣಿಗಿಂತಲೂ ಕೀಳಾಗಿ ಕಾಣಲಾಗುತಿತ್ತು. ಅಲ್ಲದೆ ಅವಳನ್ನು ಶಿಕ್ಷಣದಿಂದ ವಂಚಿತಳನ್ನಾಗಿ ಮಾಡಲಾಗುತ್ತಿತ್ತು ಎಂಬ ಅಂಶ ವ್ಯಕ್ತವಾಗಿದೆ. ಇದಕ್ಕೆ ಪೂರಕವಾದ ಮಾಹಿತಿಯು ಋಗ್ವೇದದಿಂದ ತಿಳಿದುಬರುತ್ತದೆ. ನಾಯಿ, ಕಾಗೆ, ಶೂದ್ರ ಹಾಗೂ ಸ್ತ್ರೀಯರು ಒಂದೇ ಗುಂಪಿಗೆ ಸೇರುತ್ತಾರೆ. ಅವರು ಪಾಪಿಗಳು, ದ್ರೋಹಿಗಳು ಹಾಗೂ ಮೂರ್ಖರಾಗಿರುವುದರಿಂದ ಅವರನ್ನು ಶಿಕ್ಷಣದಿಂದ ದೂರ ಇರಿಸಬೇಕೆಂದು ಋಗ್ವೇದ ತಿಳಿಸುತ್ತದೆ. ಅಲ್ಲದೆ ಮಹಿಳೆಗೆ ಬುದ್ಧಿ ಇಲ್ಲವಾದ್ದರಿಂದ ಅವಳಿಗೆ ಶಿಕ್ಷಣ ಅನಾವಶ್ಯಕದಿಂದ ವಿಚಾರವನ್ನು ವ್ಯಕ್ತಪಡಿಸುತ್ತಿದೆ.[೨೭]

ಉಪನಿಷತ್ತುಗಳ ಕಾಲದಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಮಹತ್ವ ದೊರೆಯಿತು. ಇದರ ಪರಿಣಾಮವಾಗಿ ಮಹಿಳೆಯರು ಉನ್ನತ ಶಿಕ್ಷಣ ಪಡೆಯುವಂತಾಗಿ ಮಹಿಳೆಯರು ಸಹ ಪುರುಷರಿಗೆ ಸಮಾನವಾದ ಪಾಂಡಿತ್ಯವನ್ನು ಪಡೆಯುವಂತಾಯಿತು. ಈ ಕಾಲದಲ್ಲಿ ಮಹಿಳಾ ಶಿಕ್ಷಣಕ್ಕೆ ಪ್ರಾಶಸ್ತ್ಯ ದೊರಕಿದ್ದರಿಂದ ಬಹ್ಮವಾದಿನಿಯರಾದ ಗಾರ್ಗಿ, ಮೈತ್ರೇಯಿ ಮುಂತಾದವರು ಉದ್ದಾಮ ಪಂಡಿತರಾಗಿದ್ದರು. ಮಹಾಕಾವ್ಯಗಳ ಕಾಲದಲ್ಲಿ ಮಹಿಳಾ ದಾರ್ಶನಿಕರು, ಛಲವಾದಿನಿಯರು, ವೀರ-ಶೂರ ಮಹಿಳೆಯರು ಇದ್ದರು. ಅವರಲ್ಲಿ 'ಸುಳವ' ಮತ್ತು 'ಪಿಂಗ'ಗಳು ಎಂಬುವವರು ಧರ್ಮ ಮತ್ತು ಅಧ್ಯಾತ್ಮದ ಗುರುಗಳಾಗಿರುವ ಬಗ್ಗೆ ಉಲ್ಲೇಖ ಸಹ ದೊರೆಯುತ್ತದೆ. ಬೌದ್ಧ ಧರ್ಮ ಸ್ತ್ರೀಯರಿಗೆ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ನೀಡಿತು. ಅಲ್ಲದೆ ಸ್ತ್ರೀಯರನ್ನು ಧಾರ್ಮಿಕ ಪ್ರಚಾರಕನಾಗಿ ನೇಮಿಸಿತು. ಬುದ್ಧನು ಪ್ರಜಾಗೌತಮಿಯ ಸಲಹೆಯ ಮೇರೆಗೆ ಭಿಕ್ಷುಣಿಯರ ಸಂಘಗಳನ್ನು ಸ್ಥಾಪಿಸಿ ಮಹಿಳೆಯರ ಶಿಕ್ಷಣಕ್ಕೆ ಅವಕಾಶ ಮಾಡಿಕೊಟ್ಟಿತು.[೨೮] ವೈದಿಕ ಯುಗ ಮಹಿಳೆಯರನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧಿಸಿ ಇಟ್ಟರೆ ಮಧ್ಯಯುಗ ಮಹಿಳೆಯರ ಅವನತಿಗೆ ಕಾರಣವಾಯಿತು. ಮುಸ್ಲಿಮರ ಪದೇಪದೇ ದಾಳಿಗೆ ಹಿಂದೂ ಸಾಮ್ರಾಜ್ಯಗಳ ಜೊತೆಗೆ ಹಿಂದೂ ಸ್ತ್ರೀಯರು ಸಿಲುಕಿ, ಆಸ್ತಿ, ಶೀಲ, ಸ್ಥಾನಮಾನವನ್ನು ಕಳೆದುಕೊಳ್ಳುವಂತಾಯಿತು. ಈ ಮುಸ್ಲಿಂ ದಾಳಿಕೋರರಿಂದ ಮಹಿಳೆಯರನ್ನು ರಕ್ಷಿಸಲು ಹಿಂದುಗಳು ಬಾಲ್ಯವಿವಾಹ, ಪರದಾಪದ್ಧತಿ ಇತ್ಯಾದಿ ಅನಿಷ್ಟ ಪದ್ಧತಿಗಳನ್ನು ಜಾರಿಗೆ ತಂದು ಮಹಿಳೆಯರನ್ನು ಶಿಕ್ಷಣದಿಂದ ವಂಚಿತರನ್ನಾಗಿ ಮಾಡಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ಶಿಕ್ಷಣವು 'ಧಾರ್ಮಿಕ ಶಿಕ್ಷಣ'ಕ್ಕೆ ಸಂಬಂಧಿಸಿದ್ದು ಅದು ಉಳ್ಳವರ, ಮೇಲ್ಜಾತಿಯವರ ಮತ್ತು ಪುರುಷರ ಸ್ವತ್ತಾಗಿತ್ತು. ಈ ಕಾಲದಲ್ಲಿ ಮಹಿಳೆ ಮತ್ತು ಶೂದ್ರರನ್ನು ಶಿಕ್ಷಣದಿಂದ ದೂರ ಇರಿಸಲಾಗಿತ್ತು. ಶೂದ್ರರು(ಶಿಕ್ಷಣವನ್ನು ಧಾರ್ಮಿಕ ಶಿಕ್ಷಣ) ಶ್ಲೋಕಗಳನ್ನು ಕೇಳಿಸಿ ಕೊಂಡರೆ ಅವರ ಕಿವಿಯಲ್ಲಿ ಕಾಯಿಸಿದ ಸೀಸ ಹಾಕಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತಿದ್ದವು. ಅಲ್ಲದೆ ಮಹಿಳೆಯ ಬದುಕು ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯವ್ವನದಲ್ಲಿ ಗಂಡನ ಆಶ್ರಯದಲ್ಲಿ ಮತ್ತು

ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿ ಇರಬೇಕೆಂಬ ಮನುಸ್ಮೃತಿ ತತ್ವಕ್ಕೆ ಗಂಟುಬಿದ್ದು ಮಹಿಳೆಯನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧಿಸಿಡಲಾಯಿತು. ಇದರ ಪರಿಣಾಮವಾಗಿ ಮಹಿಳೆಯರು ಶಿಕ್ಷಣದಿಂದ ವಂಚಿತರಾದರು.[೩೯] ಆದರೆ ಆಧುನಿಕ ಯುಗದ ಆರಂಭದ ಕಾಲ ಎಂದು ಗುರುತಿಸುವ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಸುಧಾರಣೆಯ ಗಾಳಿ ಬೀಸಲಾರಂಭಿಸಿ ಸ್ತ್ರೀಯರಿಗೆ ಶಿಕ್ಷಣ ನೀಡಬೇಕು ಎಂಬ ಒತ್ತಾಸೆಗಳು ಮೂಡಿಬಂದವು. ಬಾಲ್ಯ ವಿವಾಹ, ಸತಿಪದ್ಧತಿ, ವಿಧವಾ ವಿವಾಹಕ್ಕೆ ನಿಷೇಧ ಇತ್ಯಾದಿಗಳು ಸ್ತ್ರೀಯರು ಶಿಕ್ಷಣ ಪಡೆಯಲು ಇದ್ದ ಅಡ್ಡಿಗಳೆಂದು ಮನಗಂಡ ಸಮಾಜ ಸುಧಾರಕರು ಮಹಿಳಾ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂಬ ಒತ್ತಾಯವನ್ನು ಬ್ರಿಟೀಷ್ ಸರಕಾರದ ಮೇಲೆ ತಂದರು. ತಾವೇ ಸ್ವತಃದ ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ತೆರೆಯಲು ಮುಂದಾದರು.

ಬಂಗಾಳದ ಮಹಾನ್ ಸಮಾಜ ಸುಧಾರಕ ಈಶ್ವರ ಚಂದ್ರ ವಿದ್ಯಾಸಾಗರ ಅವರು ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಶ್ರಮಿಸಿದವರಲ್ಲಿ ಮೊದಲಿಗರು. ಇದರ ಪ್ರತಿಫಲವಾಗಿ ಬಂಗಾಳದಲ್ಲಿ ೩೫ ಹೆಣ್ಣು ಮಕ್ಕಳ ಶಾಲೆಗಳು ಪ್ರಾರಂಭವಾದವು. ಮಹಾರಾಷ್ಟ್ರದ ಸಮಾಜ ಸುಧಾರಕ ಮಹಾತ್ಮ ಜೋತಿ ಬಾಪುಲೇ ಅವರು ೧೮೪೮ರಲ್ಲಿ ಕನ್ಯಾಶಾಲೆಯನ್ನು ಪ್ರಾರಂಭಿಸಿದರು. ಅಲ್ಲದೆ ಸಮಾಜದಿಂದ ಬಹಿಷ್ಕಾರಕ್ಕೆ ಒಳಗಾಗಿದ್ದ ದಲಿತ ಮಹಿಳೆಯರ ಶಿಕ್ಷಣಕ್ಕಾಗಿ ೧೮೫೨ರಲ್ಲಿ ಶಾಲೆಯೊಂದನ್ನು ತೆರೆದರು. ಇದು ದೇಶದಲ್ಲಿಯೇ ಪ್ರಾರಂಭವಾದ ಪ್ರಥಮ ದಲಿತ ಮಹಿಳೆಯರ ಶಾಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಮಹರ್ಷಿ ಕರ್ವೆಯವರು ತಮ್ಮ ಕುಟುಂಬದ ವಿರೋಧದ ನಡುವೆಯೂ ಒಬ್ಬ ವಿಧವೆಯನ್ನು ಮದುವೆ ಮಾಡಿಕೊಂಡು ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸಿದರು. ವಿಧವಾ ವಿವಾಹದಿಂದ ಜನಿಸಿದ ಮಕ್ಕಳಿಗಾಗಿ ಶಿಕ್ಷಣ, ವಸತಿ ಮತ್ತು ಸಾಮಾಜಿಕ ಭದ್ರತೆಗಳನ್ನು ಒದಗಿಸಲು ಸಂಸ್ಥೆಗಳನ್ನು ಸ್ಥಾಪಿಸಿದರು. ೧೯೦೭ರಲ್ಲಿ ಮಹಿಳಾ ವಿಶ್ವವಿದ್ಯಾಲಯವನ್ನು ಮತ್ತು ೧೯೦೮ರಲ್ಲಿ ಎಸ್.ಎನ್.ಡಿ.ಟಿ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ಸ್ತ್ರೀಯರ ಶಿಕ್ಷಣಕ್ಕೆ ಅವಕಾಶಗಳನ್ನು ಕಲ್ಪಿಸಿದರು.[೪೦] ಆಂಧ್ರದ ಮಹರ್ಷಿ ಲಿಂಗಂ ಪಂತಲು, ಕರ್ನಾಟಕದ ರಮಾಬಾಯಿ ಮತ್ತು ಭಾಗೀರಥಿಬಾಯಿ, ಪುರಾಣಿಕ, ಅನಿಬೆಸೆಂಟ್, ಸರೋಜಿನಿ ನಾಯ್ಡು, ಕಮಲಾದೇವಿ ಚಟ್ಟೋಪಾಧ್ಯಾಯ, ರೇಣುಕಾಬಾಯಿ, ಸರಳಾದೇವಿ ಮತ್ತು ಮಾರ್ಗರೇಟ್ ಕ್ಯಾನನ್ ಅವರು ಸ್ತ್ರೀ ಶಿಕ್ಷಣದ ಬೆಳವಣಿಗೆಗೆ ಶ್ರಮಿಸಿದ ಇತರ ಗಣ್ಯರಾಗಿದ್ದಾರೆ.

ಆಗ ಅಧಿಕಾರ ನಡೆಸುತ್ತಿದ್ದ ಬ್ರಿಟಿಷರ ಆಡಳಿತ ವ್ಯವಸ್ಥೆಯು ಕೂಡ ಸ್ತ್ರೀಯರ ಶಿಕ್ಷಣಕ್ಕೆ ಮಹತ್ವ ನೀಡಿತು. ಅದರ ಪರಿಣಾಮವಾಗಿ ಅನೇಕ ಕ್ರೈಸ್ತ ಮಿಷನರಿಗಳು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಶಾಲೆಗಳನ್ನು ತೆರೆದವು. ೧೮೨೪ರಲ್ಲಿ ಮೊಟ್ಟಮೊದಲು ಮುಂಬಯಿಯಲ್ಲಿ ಸ್ತ್ರೀಯರಿಗೆಂದೇ ಶಾಲೆ ಪ್ರಾರಂಭವಾಯಿತು. ೧೮೪೯ರಲ್ಲ ಕಲ್ಕತ್ತದಲ್ಲಿ ಬೆಥುನ್ ಶಾಲೆ ಪ್ರಾರಂಭವಾಯಿತು. ಲಾರ್ಡ್ ಡಾಲ್‌ಹೌಸಿಯು ಸ್ತ್ರೀ ಶಿಕ್ಷಣಕ್ಕೆ ಸರಕಾರದ ಬೆಂಬಲ ನೀಡುವ ಮೂಲಕ ೧೮೫೪ರಲ್ಲಿ ಚಾರ್ಲ್ಸ್ ಮೆಕಾಲೆಯು ಸ್ತ್ರೀ ಶಿಕ್ಷಣ

ಮಸೂದೆಯನ್ನು ಅನುಮೋದಿಸಿದನು. ವುಡ್ಸ್ ವರದಿ ಮತ್ತು ಹಂಟರ್ ಆಯೋಗಗಳು ಮಹಿಳಾ ಶಿಕ್ಷಣದ ಬಗ್ಗೆ ಪ್ರಸ್ತಾಪಿಸಿದವು. ಇದರ ಪರಿಣಾಮವಾಗಿ ೧೮೮೨ರಲ್ಲಿ ಸ್ತ್ರೀಯರಿಗೆ ಉನ್ನತ ಶಿಕ್ಷಣ ಲಭಿಸುವುದರ ಜೊತೆಗೆ ೧೯೧೭ರಲ್ಲಿ ಪೂನಾದಲ್ಲಿ ಸ್ತ್ರೀಯರ ಶಿಕ್ಷಣಕ್ಕಾಗಿ ಪ್ರತ್ಯೇಕವಾದ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಹೆಣ್ಣು ಮಕ್ಕಳು ಉನ್ನತ ಶಿಕ್ಷಣ ಪಡೆಯುವಂತಾಯಿತು.[೬೧]

ಬ್ರಿಟಿಷರ ಆಳ್ವಿಕೆಯಲ್ಲಿದ್ದ ಭಾರತ ೧೯೪೭ರಂದು ಸ್ವಾತಂತ್ರ್ಯ ಪಡೆದು ತನ್ನ ಅಭಿವೃದ್ಧಿಗಾಗಿ ೧೯೫೧ರಿಂದ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೊಳಿಸಿತು. ಆ ಮೂಲಕ ದೇಶದ ಪ್ರಗತಿಗೆ ಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳ ಜೊತೆಗೆ ಸಾಮಾಜಿಕ ಮೌಲ್ಯೋತ್ಪಾದಕ ಬಂಡವಾಳವಾದ ಶಿಕ್ಷಣದ ಪ್ರಗತಿಗೂ ಯೋಜನೆಗಳಲ್ಲಿ ಪ್ರಾಶಸ್ತ್ಯವನ್ನು ನೀಡಿತು. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಯಿತು. ಅದಕ್ಕಾಗಿ ಮೊದಲನೇ ಪಂಚವಾರ್ಷಿಕ ಯೋಜನೆಯ(೧೯೫೧-೫೬) ಪ್ರಾಥಮಿಕ ಹಂತದಲ್ಲಿಯೇ ಬಾಲಕಿಯರ ದಾಖಲಾತಿಯನ್ನು ಉತ್ತಮಪಡಿಸಲು ಶಾಲಾ ಸೌಲಭ್ಯಗಳನ್ನೇ ಹೆಚ್ಚು ಮಾಡಲು ಪ್ರಾಶಸ್ತ್ಯ ಕೊಡಲಾಯಿತು. ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ(೧೯೫೬-೬೧) ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಅರಿವು ಮೂಡಿಸಲು ಪೋಷಕರಿಗೆ ವಿಶೇಷ ಶಿಕ್ಷಣ ಹಾಗೂ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರ ನೇಮಕಾತಿ ಹಾಗೂ ಹೆಣ್ಣು ಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯಲು ಅವಕಾಶ ನೀಡಲಾಯಿತು. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ(೧೯೬೧-೬೬) ಬಾಲಕ-ಬಾಲಕಿಯರ ನಡುವಿನ ಶೈಕ್ಷಣಿಕ ಅಸಮಾನತೆಯನ್ನು ಕಡಿಮೆ ಮಾಡಲು ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಯಿತು. ಜೊತೆಗೆ ಹರೀಶ್ ಮತ್ತು ಕೊಠಾರಿ ಆಯೋಗದ ಶಿಫಾರಸ್ಸುಗಳನ್ನು ಜಾರಿಗೊಳಿಸುವ ಪ್ರಯತ್ನವನ್ನು ಮಾಡಲಾಯಿತು. ಈ ಅವಧಿಯಲ್ಲಿಯೇ ಶಾಲೆಯ ಹೊರಗಡೆ ಇರುವ 'ಹೆಣ್ಣು ಮಕ್ಕಳ ಮತ್ತು ಸ್ತ್ರೀಯರ' ಶೈಕ್ಷಣಿಕ ಅವಶ್ಯಕತೆಯನ್ನು ಪೂರೈಸಲು ಕಾರ್ಯಕ್ರಮಗಳನ್ನು ರೂಪಿಸಲಾಯಿತು.

ನಾಲ್ಕನೇ ಪಂಚವಾರ್ಷಿಕ ಯೋಜನೆ (೧೯೬೯-೭೪)ಯಲ್ಲಿ ಮಹಿಳಾ ಶಿಕ್ಷಣಕ್ಕೆ ಒತ್ತು ಕೊಡಲಾಯಿತು. ಈ ಅವಧಿಯಲ್ಲಿ ಹೆಣ್ಣು ಮಕ್ಕಳ ಶಾಲೆಗಳ ಸ್ಥಾಪನೆ, ಶಿಕ್ಷಕಿಯರಿಗೆ ಉಚಿತ ವಸತಿ ಸೌಲಭ್ಯ, ಹಾಜರಾತಿ ವಿದ್ಯಾರ್ಥಿ ವೇತನ, ಶಾಲಾಶುಲ್ಕ ಕಡಿತ, ಶಿಷ್ಯ ವೇತನ, ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಹಾಸ್ಟೆಲ್‌ಗಳನ್ನು ತೆರೆಯುವುದು ಮುಂತಾದ ಅಂಶಗಳಿಗೆ ಒತ್ತು ನೀಡಲಾಯಿತು. ಜೊತೆಗೆ ಶ್ರೀಮತಿ ದುರ್ಗಾಬಾಯಿ ದೇಶ್‌ಮುಖ್ ಅವರ ಅಧ್ಯಕ್ಷತೆಯಲ್ಲಿ 'ಮಹಿಳಾ ಶಿಕ್ಷಣ ಸಮಿತಿ'ಯನ್ನು ಮತ್ತು 'ರಾಷ್ಟ್ರೀಯ ಶಿಕ್ಷಣ ಪರಿಷತ್ತ'ನ್ನು ರಚಿಸಿ ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಕ್ರಮಕೈಗೊಳ್ಳಲಾಯಿತು. ಐದನೇ ಪಂಚವಾರ್ಷಿಕ ಯೋಜನೆಯಲ್ಲಿ(೧೯೭೫-೭೯) 'ಉಚಿತ ಮತ್ತು ಕಡ್ಡಾಯ' ಶಿಕ್ಷಣಕ್ಕೆ ಮಹತ್ವ ನೀಡಲಾಯಿತು. ಹೆಣ್ಣು ಮಕ್ಕಳನ್ನು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಒಳಪಡಿಸಲು ಹಲವಾರು ವಿಶೇಷ ಪ್ರೋತ್ಸಾಹದಾಯಕ

ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು. ಇದೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿಯೇ ಭಾರತದ ಮಹಿಳೆಯರ ಸ್ಥಿತಿಗತಿಯನ್ನು ತಿಳಿಸುವ. 'ಸಮಾನತೆ ಎಡೆಗೆ' ಎಂಬ ವರದಿ ಪ್ರಕಟಗೊಂಡು ಮಹಿಳೆಯರ ಸಾಕ್ಷರತೆಯ ಮೇಲೆ ಬೆಳಕು ಚೆಲ್ಲಿತು. ಈ ಅವಧಿಯಲ್ಲಿ ಹುಡುಗಿಯರ ಗೈರು ಹಾಜರಿಯನ್ನು ತಪ್ಪಿಸಲು ಹುಡುಗಿಯರಿಗೆ ಹಾಜರಾತಿ ಸ್ಕಾಲರ್‌ಶಿಪ್, ಮಧ್ಯಾಹ್ನದ ಉಪಾಹಾರ ಮತ್ತು ಉಚಿತ ಸಮವಸ್ತ್ರ ಇತ್ಯಾದಿ ಅನುಕೂಲತೆಗಳನ್ನು ನೀಡಲಾಯಿತು. ಆರನೇ ಪಂಚವಾರ್ಷಿಕ ಯೋಜನೆ (೧೯೮೦-೮೫)ಯ ಅವಧಿಯಲ್ಲಿ ಗ್ರಾಮಾಂತರ ಮತ್ತು ಹಿಂದುಳಿದ ಪ್ರದೇಶಗಳಲ್ಲಿನ ಹೆಣ್ಣು ಮಕ್ಕಳನ್ನು ಶಿಕ್ಷಣ ಪಡೆಯಲು ಪ್ರೋತ್ಸಾಹಿಸಲು ಶಿಕ್ಷಣ ವ್ಯವಸ್ಥೆಯಲ್ಲಿ ಹಲವಾರು ಯೋಜನೆ ಮತ್ತು ಕಾರ್ಯಕ್ರಮಗಳನ್ನು ರೂಪಿಸಲಾಯಿತು.

ಏಳನೇ ಪಂಚವಾರ್ಷಿಕ ಯೋಜನೆಯ (೧೯೮೫-೯೦) ಅವಧಿಯಲ್ಲಿ ೧೯೮೬ರ 'ಹೊಸ ರಾಷ್ಟ್ರೀಯ ಶಿಕ್ಷಣ ನೀತಿ' ಜಾರಿಗೆ ಬಂದಿತು. ಈ ಹೊಸ ಶಿಕ್ಷಣ ನೀತಿಯ ಪಠ್ಯ ವಸ್ತು ಮತ್ತು ಶೈಕ್ಷಣಿಕ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳನ್ನು ಜಾರಿಗೊಳಿಸಿತು. ಇದರ ಪರಿಣಾಮವಾಗಿ ಭಾರತ ಸರಕಾರ ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ವಿಶೇಷ ಯೋಜನೆಯನ್ನು ಅನುಷ್ಠಾನಕ್ಕೆ ತಂದಿತು ಹಾಗೂ ಶಿಕ್ಷಣದಲ್ಲಿ ಲಿಂಗಾಧಾರಿತ ದೃಷ್ಟಿಕೋನವನ್ನು ವಿಶೇಷವಾಗಿ ಅಳವಡಿಸಿಕೊಂಡಿತು. ಕಪ್ಪು ಹಲಗೆ ಯೋಜನೆ, ಕನಿಷ್ಟ ಕಲಿಕಾ ಸಾಮರ್ಥ್ಯ, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಸಾಕ್ಷರತೆಯ ಮಿಷನ್ ಇತ್ಯಾದಿ ಕಾರ್ಯಕ್ರಮಗಳನ್ನು ಈ ಯೋಜನೆಯ ಅವಧಿಯಲ್ಲಿ ಜಾರಿಗೊಳಿಸಲಾಯಿತು. ಎಂಟನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೯೨-೯೭) ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆಗಳು ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳಲ್ಲಿ ಜಾರಿಗೆ ಬಂದವು ಹಾಗೂ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಹೆಚ್ಚು ಮಹತ್ವ ನೀಡಲಾಯಿತು. ಈ ಯೋಜನೆಯೂ ಸಹ ಮಧ್ಯಾಹ್ನದ ಉಪಾಹಾರವನ್ನು ನೀಡುವ ಮೂಲಕ ಹೆಣ್ಣು ಮಕ್ಕಳು ಶಾಲೆ ಬಿಡುವುದನ್ನು ತಪ್ಪಿಸಲು ಕ್ರಮ ಕೈಗೊಳ್ಳಲಾಯಿತು.[೩೨]

ಹತ್ತನೇ ಪಂಚವಾರ್ಷಿ ಯೋಜನೆ(೨೦೦೨-೦೭)ಯ ಅವಧಿಯಲ್ಲಿ ೨೦೦೭ರ ಹೊತ್ತಿಗೆ ದೇಶದ ಎಲ್ಲ ಮಕ್ಕಳಿಗೂ ಪ್ರಾಥಮಿಕ ಶಿಕ್ಷಣವನ್ನು ಉಚಿತ ಮತ್ತು ಕಡ್ಡಾಯವಾಗಿ ನೀಡುವುದು, ಸಾಕ್ಷರತೆ ಪ್ರಮಾಣವನ್ನು ಹೆಚ್ಚಿಸುವುದು ಮತ್ತು ಲಿಂಗ ತಾರತಮ್ಯವನ್ನು ಹೋಗಲಾಡಿಸುವ ಗುರಿಯನ್ನು ಹೊಂದಲಾಗಿತ್ತು. ಈ ಗುರಿ ಸಾಧನೆಗಾಗಿ ೨೦೦೨ನೇ ಸಾಲಿನಿಂದ 'ಸರ್ವಶಿಕ್ಷಣ ಅಭಿಯಾನ' ಎಂಬ ಶಿಕ್ಷಣ ಯೋಜನೆಯನ್ನು ಜಾರಿಗೊಳಿಸಲಾಯಿತು. ಈ ಕಾರ್ಯಕ್ರಮದಡಿಯಲ್ಲಿ 'ಶಿಕ್ಷಣ'ವನ್ನು 'ಮೂಲಭೂತ ಹಕ್ಕು' ಎಂದು ಘೋಷಿಸುವ ಮೂಲಕ ಸಂವಿಧಾನಕ್ಕೆ ತಿದ್ದುಪಡಿಯನ್ನು ತರಲಾಯಿತು. ಲಿಂಗ ಮತ್ತು ಸಾಮಾಜಿಕ ವರ್ಗಗಳ ಮಧ್ಯೆ ಅಂತರವನ್ನು ೨೦೦೭ರ ಒಳಗೆ ಕಡಿಮೆ ಮಾಡುವ

ಗುರಿಯನ್ನು ನಿಗದಿಪಡಿಸಲಾಯಿತು. ಹೆಣ್ಣು ಮಕ್ಕಳ ಶಿಕ್ಷಣವನ್ನು ಪ್ರೋತ್ಸಾಹಿಸಲು ಹೆಣ್ಣು ಮಕ್ಕಳಿಗೆ ಪದವಿ ಹಂತದವರೆಗೆ ಉಚಿತ ಶಿಕ್ಷಣ ನೀಡುವ ಕಾರ್ಯಕ್ರಮವನ್ನು ಮತ್ತು ಸರ್ವಶಿಕ್ಷಣ ಅಭಿಯಾನದ ಅಡಿಯಲ್ಲಿ 'ಸರ್ವಶಿಕ್ಷಣ ಸಂಚಲನ,' 'ಬಾ ಮರಳಿ ಶಾಲೆಗೆ, ಬಾ ಬಾಲೆ ಶಾಲೆಗೆ, ಚಿನ್ನರ ಅಂಗಳ, ಮತ್ತು ಹೆಣ್ಣು ಮಕ್ಕಳಿಗೆ ಉಚಿತ ಸಮವಸ್ತ್ರ ಪಠ್ಯ ಪುಸ್ತಕ ವಿತರಣೆ, ಅಕ್ಷರ ದಾಸೋಹ, ಬಿಸಿಯೂಟ ಕಾರ್ಯಕ್ರಮ ಇತ್ಯಾದಿಗಳ ಮೂಲಕ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಯಿತು. ಇದೇ ಅವಧಿಯಲ್ಲಿ ರಾಜ್ಯ ಸರಕಾರವೂ ಹೆಣ್ಣು ಮಕ್ಕಳ ಶಿಕ್ಷಣವನ್ನು ಪ್ರೋತ್ಸಾಹಿಸಲು ಮತ್ತು ಹೆಣ್ಣು ಭ್ರೂಣ ಹತ್ಯೆ ತಡೆಯಲು 'ಭಾಗ್ಯಲಕ್ಷ್ಮೀ ಯೋಜನೆ', ಬಾಲೆಗೆ ಬೈಸಿಕಲ್ಲು, ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರ ವಿತರಣೆ ಹೆಚ್ಚು ಪಡೆದ ಹೆಣ್ಣುಮಗುವಿಗೆ ಪ್ರೋತ್ಸಾಹ ಧನ ನೀಡುವುದು ಇತ್ಯಾದಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿತು.[೩೪] ಕೇಂದ್ರ ಸರ್ಕಾರವು ಇತ್ತೀಚೆಗೆ ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಘೋಷಿಸುವ ಮೂಲಕ ೧೪ ವರ್ಷದವರೆಗಿನ ಎಲ್ಲ ಮಕ್ಕಳು ಶಿಕ್ಷಣ ಪಡೆಯುವುದು ಅವರ ಮೂಲಭೂತ ಹಕ್ಕು ಎಂದು ಸಾರಿತು.

ಸರಕಾರ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೊಳಿಸಿ ಅವುಗಳ ಅಡಿಯಲ್ಲಿ ಅನೇಕ ಶೈಕ್ಷಣಿಕ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಮೂಲಕ ಮಹಿಳೆಯರ ಮತ್ತು ಮಕ್ಕಳ ಶಿಕ್ಷಣಕ್ಕೆ ಪ್ರಾಶಸ್ತ್ಯ ನೀಡುತ್ತಿದೆ. ಆದರೆ ದೇಶದ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ಮಹಿಳೆಯರ ಸಾಕ್ಷರತೆ ಮಟ್ಟ ಕಡಿಮೆ ಮಟ್ಟದಲ್ಲಿರುವುದು ಕಂಡು ಬರುತ್ತದೆ. ಇದು ದೇಶದ ಅಭಿವೃದ್ಧಿಗೆ ಮಾರಕವಾಗಿ ಪರಿಣಮಿಸಿದೆ.

**ಕೋಷ್ಟಕ ೨.೧.**

**ಭಾರತದಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ(ಶೇಕಡವಾರು)**

| ವರ್ಷಗಳು | ಮಹಿಳಾ ಸಾಕ್ಷರತೆ ಪ್ರಮಾಣ | ಪುರುಷರ ಸಾಕ್ಷರತೆ ಪ್ರಮಾಣ | ಒಟ್ಟು ಸಾಕ್ಷರತೆ |
|---|---|---|---|
| ೧೯೦೧ | .೦೬ | ೯.೮ | ೫.೪ |
| ೧೯೩೧ | ೨.೯೨ | ೧೫.೬ | ೯.೫ |
| ೧೯೪೧ | ೭.೩೦ | ೨೪.೯ | ೧೬.೫ |
| ೧೯೫೧ | ೮.೮೬ | ೨೫.೦ | ೧೬.೭ |
| ೧೯೯೧ | ೩೯.೪೨ | ೬೪.೧ | ೫೨.೨ |
| ೨೦೦೧ | ೫೭.೨೧ | ೭೫.೮೫ | ೬೫.೩೫ |

ಆಧಾರ : ೨೦೦೧ ಸೆನ್ಸಸ್ ರಿಪೋರ್ಟ್ ಇಂಡಿಯನ್ ಎಕನಾಮಿ ಕೆ.ಪಿ.ಎಂ.ಸುಂದರಂ ಮತ್ತು ರುದ್ರದತ್ತ.

ಮೇಲಿನ ಕೋಷ್ಟಕವನ್ನು ಗಮನಿಸಿದರೆ ಭಾರತದ ಮಹಿಳಾ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದು ಮೇಲಿನ ಅಂಕೆ ಸಂಖ್ಯೆಗಳಿಂದ ತಿಳಿದು ಬರುತ್ತಿದೆ. ೧೯೦೧ರಲ್ಲಿ ಶೇ. ೦.೬ರಷ್ಟಿದ್ದ ಮಹಿಳಾ ಸಾಕ್ಷರತೆ ಪ್ರಮಾಣ ೧೯೫೧ರಲ್ಲಿ ಶೇ. ೮.೮೬ರಷ್ಟು, ೧೯೯೧ರಲ್ಲಿ ೩೯.೪೨ರಷ್ಟು ಮತ್ತು ೨೦೦೧ರಲ್ಲಿ ಶೇ ೫೬.೨೧ರಷ್ಟು ಇರುವುದು ಕಂಡುಬರುತ್ತಿದೆ. ಈ ಕಡಿಮೆ ಸಾಕ್ಷರತೆಯ ಪ್ರಮಾಣವು ಸಮಾಜದಲ್ಲಿ ಶಿಕ್ಷಣ ಅವಕಾಶಗಳ ಬಳಕೆಯಲ್ಲಿನ ತಾರತಮ್ಯ ಅಧಿಕ ಪ್ರಮಾಣದಲ್ಲಿ ಕಾರ್ಯಪ್ರವೃತ್ತವಾಗಿದೆ ಎಂಬುದಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಭಾರತ ಗ್ರಾಮಗಳಿಂದ ಕೂಡಿದ ರಾಷ್ಟ್ರವಾಗಿದ್ದು ಶೇ. ೭೨.೨೭ ರಷ್ಟು ಜನರು ಗ್ರಾಮಗಳಲ್ಲಿ ವಾಸಿಸುತ್ತಿದ್ದು ಇವರು ಬಡತನ, ಅಜ್ಞಾನ, ಮೌಢ್ಯತೆ ಮತ್ತು ಸ್ತ್ರೀ ಶಿಕ್ಷಣ ಕುರಿತು ನಿರಾಸಕ್ತಿಯ ಧೋರಣೆಯನ್ನು ತಳೆದವರಾಗಿದ್ದಾರೆ. ಈ ಕಾರಣದಿಂದಾಗಿ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕಡಿಮೆಯಾಗುತ್ತಿದೆ. ಹಾಗೂ ಪರಿಣಾಮವಾಗಿ ಮಹಿಳೆಯರ ಉತ್ಪಾದನಾ ಸಾಮರ್ಥ್ಯ ಕಡಿಮೆಯಾಗುತ್ತದೆ. ಅವರು ಅಕೌಶಲ್ಯ ಹೊಂದಿದವರಾಗುತ್ತಾರೆ. ಇದು ಶ್ರಮದ ಚಲನೆಗೆ ಅಡ್ಡಿಯನ್ನುಂಟುಮಾಡಿ ಆ ಮೂಲಕ ಮಹಿಳೆಯರು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗುತ್ತಿದೆ.

### ಶಿಕ್ಷಣದಲ್ಲಿ ಲಿಂಗ ಪೂರ್ವಗ್ರಹಗಳು ಮತ್ತು ಮಹಿಳಾ ಆರ್ಥಿಕತೆಯ ಮೇಲೆ ಅವುಗಳ ಪ್ರಭಾವ

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಸ್ತ್ರೀಯರ ಶಿಕ್ಷಣಕ್ಕೆ ಆದ್ಯತೆ ನೀಡುವ ಮೂಲಕ ಅವರು ಎದುರಿಸುತ್ತಿರುವ ಅಸಮಾನತೆಯನ್ನು ತೊಡೆದು ಹಾಕುವ ಗುರಿಯನ್ನು ಹೊಂದಿತ್ತು. ೧೯೬೬ರಲ್ಲಿಯೇ ಭಾರತೀಯ ಶಿಕ್ಷಣ ಆಯೋಗವು ಸ್ತ್ರೀ ಪುರುಷರ ನಡುವೆ ಪಾತ್ರಗಳನ್ನು ಜವಾಬ್ದಾರಿಗಳನ್ನು ಹಂಚುವುದು, ಪುರುಷತ್ವ ಮತ್ತು ಸ್ತ್ರೀತ್ವ ಎಂಬ ಕಲ್ಪನೆಗಳನ್ನು ಭಿತ್ತುವುದು ಲಿಂಗ ಅಸಮಾನತೆಯ ಭಾವನೆಗಳನ್ನು ಶಿಕ್ಷಣದ ಮೂಲಕ ಪ್ರತಿಪಾದಿಸುವುದು. ಇವೇ ಮುಂತಾದ ಅಂಶಗಳು ಶೈಕ್ಷಣಿಕ ವ್ಯವಸ್ಥೆಯಿಂದ ದೂರ ಇಡಬೇಕು ಎಂದು ಘೋಷಿಸಿತ್ತು. ಆದರೆ ವಾಸ್ತವದಲ್ಲಿ ಇದು ಸಾಧ್ಯವಾಗುತ್ತಿಲ್ಲವಾಗಿದೆ. ಯಾಕೆಂದರೆ ಸಾಮಾಜಿಕ ವ್ಯವಸ್ಥೆಯಲ್ಲಿನ ಲಿಂಗಾಧಾರಿತ ಪೂರ್ವಗ್ರಹಗಳು ಶಿಕ್ಷಣ ವ್ಯವಸ್ಥೆಯ ಮೇಲೆ ಪ್ರಭಾವ ಬೀರುತ್ತವೆ.[೩೫] ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವಾಗ ಅವಳಿಗೆ ಆಸ್ತಿ ಮತ್ತು ಸಂಪನ್ಮೂಲಗಳು ದೊರಕದ ಹಾಗೆ ಸಾಮಾಜಿಕ ವ್ಯವಸ್ಥೆಯಲ್ಲಿರುವ ಲಿಂಗಾಧಾರಿತ ಪೂರ್ವಗ್ರಹಗಳು ಕಾರ್ಯವೆಸಗುತ್ತವೆ. ಆಸ್ತಿ ಮತ್ತು ಸಂಪನ್ಮೂಲಗಳು ವ್ಯಕ್ತಿಗೆ ಆರ್ಥಿಕ ಸ್ಥಾನಮಾನವನ್ನು ಒಂದಾಗಿಸುವ ಪ್ರಮುಖ ಅಂಶಗಳಾಗಿವೆ. ಇವುಗಳನ್ನು ದೊರಕಿಸಿಕೊಡುವಲ್ಲಿ ಶಿಕ್ಷಣ ಒಂದು ಸಾಧನವಾಗಿದೆ. ಆದರೆ ಈ ಸಾಮಾಜಿಕ ವ್ಯವಸ್ಥೆ ಆ ಸಾಧನ ಮಹಿಳೆಗೆ ದೊರಕದ ರೀತಿಯಲ್ಲಿ ತಾರತಮ್ಯವನ್ನು ಮಾಡುತ್ತಿದೆ. ಇದರ ಪರಿಣಾಮವಾಗಿ ಮಹಿಳೆ ಆರ್ಥಿಕವಾಗಿ ಹಿಂದುಳಿಯುವಂತಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿರುವ ಲಿಂಗಾಧಾರಿತ ಪೂರ್ವಗ್ರಹಗಳು 'ಮಹಿಳೆ'ಗೆ ಶಿಕ್ಷಣ ದೊರಕಿಸಿ ಕೊಡುವಲ್ಲಿ ಅಸಡ್ಡೆಯನ್ನು ಉಂಟು ಮಾಡುವ ಮೂಲಕ ಅವಳ ಆರ್ಥಿಕ ಅಧಃಪತನಕ್ಕೆ ಕಾರಣವಾಗುತ್ತಿವೆ. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗುತ್ತಿದೆ. ಕುಟುಂಬ ವ್ಯವಸ್ಥೆಯಲ್ಲಿ ಶಿಕ್ಷಣ ನೀಡುವಾಗ ಲಿಂಗತಾರತಮ್ಯವನ್ನು ಮಾಡಲಾಗುತ್ತಿದೆ. ಗಂಡುಮಗು ಮನೆಯ ಜವಾಬ್ದಾರಿಯನ್ನು ಹೊರುವವನು ಮತ್ತು ತಂದೆ-ತಾಯಿಗಳನ್ನು ಇಳಿವಯಸ್ಸಿನಲ್ಲಿ ಸಾಕುವವನು ಎಂಬ ಕಾರಣದಿಂದ ಗಂಡು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತದೆ ಮತ್ತು ಅವರ ಶಿಕ್ಷಣಕ್ಕೆ ಉದಾರವಾಗಿ ವೆಚ್ಚ ಮಾಡಲಾಗುತ್ತದೆ. ಆದರೆ ಹೆಣ್ಣುಮಗು ಗಂಡುಮಗುವಿಗಿಂತ ಎಷ್ಟೇ ಬುದ್ಧಿವಂತೆಯಾಗಿದ್ದರೂ ಅವಳ ಶಿಕ್ಷಣಕ್ಕೆ ಪ್ರೋತ್ಸಾಹ ಮತ್ತು ಸಹಕಾರ ಪಾಲಕರಿಂದ ದೊರೆಯುವುದಿಲ್ಲ. ಯಾಕೆಂದರೆ ಅವಳಿಗೆ ಶಿಕ್ಷಣ ನೀಡಿದರೆ 'ನೆರೆಮನೆಯ ಮರಕ್ಕೆ ನೀರು ಎರೆದಂತೆ' ಎಂಬ ಭಾವನೆ ಅವರಲ್ಲಿದೆ. ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ವೆಚ್ಚ ಮಾಡಿದರೆ ಅದರ ಪ್ರಯೋಜನ ಗಂಡನ ಮನೆಯವರಿಗೆ ದೊರೆಯುತ್ತದೆ ಎಂದು ಮತ್ತು ಅವಳಿಗೆ ಉನ್ನತ ಶಿಕ್ಷಣ ನೀಡಿದರೆ ತಕ್ಕ ವರನನ್ನು ಹುಡುಕುವುದು ಕಷ್ಟವೆಂದು ಹಾಗೂ ವರನು ಕೇಳಿದಷ್ಟು ವರದಕ್ಷಿಣೆ ಕೊಡಬೇಕಾಗುತ್ತದೆ ಎಂಬ ಕಾರಣದಿಂದಾಗಿ ಅವಳಿಗೆ ಉನ್ನತ ಶಿಕ್ಷಣ ನೀಡುವುದನ್ನು ತಡೆಯಲಾಗುತ್ತಿದೆ. ಆ ಮೂಲಕ ಅವಳಿಗೆ ಇದ್ದ ಆರ್ಥಿಕ ಸಬಲತೆಯ ಸಾಧನದಿಂದ ವಂಚಿತಳನ್ನಾಗಿ ಮಾಡಲಾಗುತ್ತಿದೆ.

ಕೆಲಸಗಳು ಆರ್ಥಿಕ ಸಬಲತೆಯ ಮೂಲಗಳಾಗಿವೆ ಆದರೆ ಈ ಮೂಲಗಳನ್ನು ಹಂಚುವಲ್ಲಿ ಕುಟುಂಬದ ನೆಲೆಯಲ್ಲಿಯೇ ತಾರತಮ್ಯವನ್ನು ಮಾಡಲಾಗುತ್ತಿದೆ ಗಂಡು ಹುಡುಗನಿಗೆ ಕಠಿಣವಾದ, ಧೈರ್ಯದ, ಸಾಹಸದ ಕೆಲಸಗಳನ್ನು ಹಂಚಲಾಗುತ್ತದೆ ಮತ್ತು ವ್ಯವಹಾರ ಜ್ಞಾನ ತಿಳಿಯಲು ತಂದೆಯ ಜೊತೆಗೆ ಪೇಟೆಗೆ ಕಳಿಸಲಾಗುತ್ತದೆ. ಆದರೆ ಹೆಣ್ಣು ಮಕ್ಕಳಿಗೆ ಹಗುರವಾದ, ನಯವಾದ, ಸೂಕ್ಷ್ಮ ಕುಸರಿ ಕೆಲಸಗಳನ್ನು ಮಾಡಲು ಹೇಳುವುದರ ಜೊತೆಗೆ ತಾಯಿಗೆ ಅಡಿಗೆಯಲ್ಲಿ ಸಹಾಯ ಮಾಡಲು ಅಡಿಗೆ ಮನೆಗೆ ಕಳಿಸಲಾಗುತ್ತದೆ. ಈ ರೀತಿಯ ಕೆಲಸಗಳು ಹಂಚಿಕೆಯು ಮಕ್ಕಳಲ್ಲಿ ಲಿಂಗಭೇದ ಶ್ರಮವಿಭಜನೆಗೆ ಕಾರಣವಾಗುತ್ತದೆ. ಈ ರೀತಿಯ ಲಿಂಗಾಧಾರಿತ ಪೂರ್ವಗ್ರಹಗಳು ಹೆಣ್ಣು ಮಕ್ಕಳಲ್ಲಿ ಶಿಕ್ಷಣದ ಬಗ್ಗೆ ನಿರಾಸಕ್ತಿಯನ್ನು ಹುಟ್ಟಿಸಿ ಅವರನ್ನು 'ಶಿಕ್ಷಣ'ದಿಂದ ವಂಚಿತರನ್ನಾಗಿ ಮಾಡುತ್ತದೆ. ಆ ಮೂಲಕ ಅವಳನ್ನು 'ಸಂಪತ್ತು' ಮತ್ತು 'ಆಸ್ತಿ' ಹೊಂದುವ ಅವಕಾಶದಿಂದ ದೂರ ಮಾಡುತ್ತದೆ.

ಶಿಕ್ಷಣ ಕಲಿಕೆಗೆ ಪಠ್ಯಕ್ರಮ ಒಂದು ವ್ಯವಸ್ಥಿತವಾದ ಚೌಕಟ್ಟಿದ್ದಂತೆ. ಆದರೆ ಈ ಚೌಕಟ್ಟು ಲಿಂಗಾಧಾರಿತ ಪೂರ್ವಗ್ರಹದಿಂದ ಕೂಡಿದೆ. ಅಂದರೆ ಪಠ್ಯಕ್ರಮ ರಚಿಸುವವರು, ಪುರುಷಶಾಹಿ ಧೋರಣೆಯನ್ನು ಹೊಂದಿರುವವರು ಮತ್ತು ಪುರುಷರೇ ಆಗಿದ್ದಾರೆ ಆದ್ದರಿಂದಾಗಿ ಇಡೀ 'ಪಠ್ಯವಸ್ತು' ಪುರುಷ ಕೇಂದ್ರಿತ ವಿಷಯಗಳನ್ನು ಒಳಗೊಂಡಿರುತ್ತದೆ. ಈ ಅಂಶ ಇಂದು ಜಾರಿಯಲ್ಲಿರುವ 'ಪಠ್ಯಕ್ರಮ'ದಲ್ಲಿ

ಯಥೇಚ್ಛವಾಗಿ ಕಂಡುಬರುತ್ತವೆ. ಉದಾಹರಣೆಗೆ ರಾಮನು ತಂದೆಯ ಜೊತೆಗೆ ಪೇಟೆಗೆ ಹೋದನು. ಕಮಲಾಳು ತಾಯಿಯ ಜೊತೆಗೆ ಅಡುಗೆ ಕೋಣೆಗೆ ಹೋದಳು ಮತ್ತು ಬಸಪ್ಪ ಒಬ್ಬ ರೈತ ಅವನು ಹೊಲದಲ್ಲಿ ನೇಗಿಲು ಉಳುತ್ತಿದ್ದಾನೆ. ಅವನ ಹೆಂಡತಿ ಲಕ್ಷ್ಮೀ ಅವನಿಗೆ ಬುತ್ತಿ ಒಯ್ಯುತ್ತಾಳೆ ಎಂಬ ಪಠ್ಯ ವಿಷಯಗಳನ್ನೇ ಗಮನಿಸಿದರೆ 'ಶಿಕ್ಷಣ'ವೇ ಇಂದು ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ಲಿಂಗ ಸಂಬಂಧಿ ಶ್ರಮವಿಭಜನೆಯನ್ನು ಬಳಸುತ್ತದೆ. ಹಾಗೂ ಆ ಶ್ರಮ ವಿಭಜನೆಯನ್ನು ಚಾಚೂತಪ್ಪದೇ ಪಾಲಿಸುವಂತೆ ಮಕ್ಕಳ ಮೇಲೆ ಪ್ರಭಾವ ಬೀರುತ್ತದೆ. ಶಿಕ್ಷಣದ ಮೂಲಕ ವೃತ್ತಿ ಆಧರಿತ ತರಬೇತಿಯನ್ನು ನೀಡುವಾಗ ಸಹ ಗಂಡು ಮತ್ತು ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕ ತರಬೇತಿಗಳನ್ನು ನೀಡಲಾಗುತ್ತಿದೆ. ಉದಹಾರಣೆಗೆ ಟೇಲರಿಂಗ್, ನರ್ಸಿಂಗ್, ಎನ್.ಟಿ.ಸಿ(ನರ್ಸರಿ ಟ್ರೈನಿಂಗ್ ಕೊರ್ಸ್) ಶಿಕ್ಷಕಿ, ಮೇಲ್ವಿಚಾರಕಿ ಮತ್ತು ಉಪಧ್ಯಾಯಿನಿ ವೃತ್ತಿ ಕೊರ್ಸ್‌ಗಳು ಮಹಿಳಾ ಕೇಂದ್ರಿತ ಕೋರ್ಸ್‌ಗಳಾಗಿದ್ದು ಇಂತಹ ಶಿಕ್ಷಣ ಪಡೆಯುವಲ್ಲಿ ಪುರುಷರ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತಿದೆ.

ಶಿಕ್ಷಣ ಪಡೆದ ಶಿಕ್ಷಣಾರ್ಥಿಗಳು ಉದ್ಯೋಗ ಆಯ್ಕೆಯ ಸಂದರ್ಭದಲ್ಲಿ ಲಿಂಗ ಪೂರ್ವಗ್ರಹಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ಹೆಣ್ಣು ಮಕ್ಕಳು ಮುಖ್ಯವಾಗಿ ಸೇವಾ ಭಾವನೆಯಿಂದ ಕೂಡಿದ ಕಡಿಮೆ ಆದಾಯ ಗಳಿಸುವ ವೃತ್ತಿಗಳಾದ ಸೇವಕಿ, ದಾದಿ, ಶಿಕ್ಷಕಿ, ಉಪನ್ಯಾಸಕಿ, ಮೇಲ್ವಿಚಾರಕಿ ಮತ್ತು ವೈದ್ಯೆಯಾಗಿ ಕಾರ್ಯ ನಿರ್ವಹಿಸಬೇಕೆಂದು ಸಮಾಜ ನಿರೀಕ್ಷಿಸಿದರೆ. ಅಧಿಕಾರ ಇರುವ ಹೆಚ್ಚು ಆದಾಯ ಗಳಿಸುವ ವೃತ್ತಿಗಳಾದ ಎಂಜನಿಯರ್, ವೈದ್ಯ, ಉಪನ್ಯಾಸಕ, ಐಎಎಸ್, ಐಪಿಎಸ್, ಐಎಫ್‌ಎಸ್ ಮತ್ತು ಕೆಎಎಸ್ ನಂತಹ ಅಧಿಕಾರ ಉಳ್ಳ ವೃತ್ತಿಗಳನ್ನು ಪುರುಷರು ವಹಿಸಬೇಕೆಂದು ಸಮಾಜ ಗ್ರಹಿಸುತ್ತಿದೆ. ಈ ಹುದ್ದೆಗಳು ಹೆಚ್ಚಾಗಿ ಪುರುಷರ ಒಡೆತನದಲ್ಲಿ ಇರುವಂತೆ ನೋಡಿಕೊಳ್ಳಲು ವ್ಯವಸ್ಥೆಯನ್ನು ಬಲಗೊಳಿಸಲಾಗುತ್ತಿದೆ. ನಮ್ಮ ಸಾಮಾಜಿಕ ವ್ಯವಸ್ಥೆ ಅನೇಕ ರೀತಿಯ ರೂಢಿ, ಸಂಪ್ರದಾಯ, ಪದ್ಧತಿಗಳಿಂದ ಕೂಡಿದೆ. ಈ ಪದ್ಧತಿಗಳು ಇಂದಿಗೂ ಗ್ರಾಮೀಣ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿವೆ ಹಾಗಾಗಿ ಇವುಗಳ ಪ್ರಭಾವ ಶಿಕ್ಷಣ ವ್ಯವಸ್ಥೆಯ ಮೇಲೆ ಉಂಟಾಗಿದೆ. ಇದರಿಂದಾಗಿ ಗ್ರಾಮೀಣ ಭಾಗದ ಹೆಣ್ಣುಮಕ್ಕಳು ಶಿಕ್ಷಣ ಅವಕಾಶದಿಂದ ವಂಚಿತರಾಗುತ್ತಾರೆ. ಇಂದಿಗೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಋತುಮತಿಯಾದ ಹುಡುಗಿಯನ್ನು ಶಾಲೆಗೆ ಕಳಿಸಲು ಹಿಂದೇಟು ಹಾಕುತ್ತಿರುವುದು ಕಂಡುಬರುತ್ತಿದೆ. ಮೈನೆರೆತ ಹೆಣ್ಣು ಮಗಳನ್ನು ಶಾಲೆಗೆ ಕಳಿಸಿದರೆ ಅವಳು ಗಂಡು ಹುಡುಗರ ಜೊತೆ ಸೇರಿ ಅನಾಹುತ ಮಾಡಿಕೊಂಡರೇ ಇದರಿಂದ ಕುಟುಂಬದ ಮರ್ಯಾದೆ ಹಾಳಾಗುತ್ತದೆ ಎಂಬ ಭಾವನೆಯಿಂದ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸುವುದನ್ನು ತಡೆಯಲಾಗುತ್ತದೆ. ಅಲ್ಲದೆ ಶಾಲಾ ಕಾಲೇಜುಗಳಲ್ಲಿ ಬಾಲಕಿಯರ ಮೇಲೆ ಶಿಕ್ಷಕರೇ ನಡೆಸುತ್ತಿರುವ ಲೈಂಗಿಕ ಕಿರುಕುಳ ಅತ್ಯಾಚಾರದಂತಹ ಪ್ರಕರಣಗಳು ಹಾಗೂ ಅಧ್ಯಯನಕ್ಕಾಗಿ ಮತ್ತು ಸಂದರ್ಶನಕ್ಕಾಗಿ ಹೋದ ಮಹಿಳೆಯರ ಮೇಲೆ ಕಾಮುಕ

ಅಧ್ಯಾಪಕರು ಮತ್ತು ಅಧಿಕಾರಿಗಳಿಂದ ನಡೆಯುತ್ತಿರುವ ಲೈಂಗಿಕ ಕಿರುಕುಳ ಮತ್ತು ಅತ್ಯಾಚಾರ ಪ್ರಕರಣಗಳು ಹೆಣ್ಣು ಮಕ್ಕಳನ್ನು ಶಾಲಾ ಕಾಲೇಜಿಗೆ ಕಳಿಸುವುದು ಅಪಾಯಕಾರಿ ಎಂಬ ಪೂರ್ವಗ್ರಹವನ್ನು ಪಾಲಕರಲ್ಲಿ ಮೂಡಿಸಿದೆ. ಇದು ಮಹಿಳೆಯರ ಸಾಕ್ಷರತೆಯ ಪ್ರಮಾಣವನ್ನು ಕಡಿಮೆ ಮಾಡುವ ಮೂಲಕ ಅಕುಶಲಿಗಳನ್ನಾಗಿ ಮಾಡಿ, ಅವರನ್ನು ಉದ್ಯೋಗ ಮತ್ತು ಗಳಿಕೆಯ ಅವಕಾಶದಿಂದ ಹೊರಗಿಡಲಾಗುತ್ತದೆ. ಇದು ಅವರನ್ನು ಪರಾವಲಂಬಿಯನ್ನಾಗಿಸುತ್ತದೆ.[೬೬]

ಕೇಂದ್ರ ಹಾಗೂ ರಾಜ್ಯ ಸರಕಾರಗಳು ಹೆಣ್ಣು ಮಕ್ಕಳ ಸಾಕ್ಷರತೆಯನ್ನು ಹೆಚ್ಚಿಸಲು ಮತ್ತು ಅವರನ್ನು ಸಬಲೀಕರಣರನ್ನಾಗಿ ಮಾಡಲು ಅನೇಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ. ಆದರೂ ಸಹ ಮಹಿಳೆಯರ ಸಾಕ್ಷರತೆಯ ಮಟ್ಟ ಹೆಚ್ಚುತ್ತಿಲ್ಲ. ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಈ ಮಹಿಳೆಯರು ಅನಕ್ಷರತೆ, ಬಡತನ, ಗ್ರಾಮೀಣ ಪ್ರದೇಶ ಮತ್ತು ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿದ್ದು ಮೂಲಭೂತ ಅವಶ್ಯಕತೆಗಳನ್ನೇ ಪೂರೈಸಿಕೊಳ್ಳಲಾರದಂತಹ ಸ್ಥಿತಿಯಲ್ಲಿದ್ದಾರೆ. ಇಂತಹ ಹೀನ ಸ್ಥಿತಿಯಲ್ಲಿರುವ ಈ ಜನರು ತಮ್ಮ ಬದುಕನ್ನು ಸಾಗಿಸಲು ಮಕ್ಕಳನ್ನು ತಮ್ಮ ಜೊತೆಯಲ್ಲಿ ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ ಹೊರತು ಶಾಲೆಗೆ ಕಲಿಸುವ ಸ್ಥಿತಿಯಲ್ಲಿ ಅವರಿರುವುದಿಲ್ಲ. ಅಲ್ಲದೆ ಅನಕ್ಷರಸ್ಥರಾದ ಇವರಿಗೆ ಸರಕಾರದ ಯೋಜನೆ, ಕಾರ್ಯಕ್ರಮಗಳ ಅರಿವು ಸಹ ಅವರಿಗೆ ಇಲ್ಲದಿರುವುದು ಹೆಣ್ಣು ಮಕ್ಕಳ ಶಿಕ್ಷಣದ ಹಿನ್ನಡೆಗೆ ಕಾರಣವಾಗಿದೆ. ದುರ್ಬಲ ಸ್ಥಿತಿಯಲ್ಲಿರುವ ಈ ಜನರನ್ನು ಆರ್ಥಿಕವಾಗಿ ಸಬಲರನ್ನಾಗಿ ಮಾಡಿದಾಗ ಮಾತ್ರ ಅವರು ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಿ ಸಾಕ್ಷರರನ್ನಾಗಿ ಮಾಡಲು ಮುಂದೆ ಬರುತ್ತಾರೆ. ಅಲ್ಲದೆ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವ ಮನಸ್ಸನ್ನು ಅವರು ಹೊಂದುತ್ತಾರೆ.

## ೨.೪. ಧಾರ್ಮಿಕ ವ್ಯವಸ್ಥೆಯಲ್ಲಿ ಮಹಿಳಾ ಆರ್ಥಿಕತೆ

ಮಾನವನ ಬದುಕಿನ ಮೇಲೆ ಪ್ರಭಾವ ಬೀರುವ ಅಂಶಗಳಲ್ಲಿ ಧರ್ಮ ಪ್ರಮುಖವಾದುದಾಗಿದೆ. ಅದು ದೇಶ, ಕಾಲ, ಮತ್ತು ಗಡಿಯನ್ನು ಮೀರಿ ತನ್ನ ವ್ಯಾಪ್ತಿಯನ್ನು ಹೊಂದಿ ಪ್ರಪಂಚದ ಪ್ರತಿಯೊಂದು ರಾಷ್ಟ್ರದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳ ಮೇಲೆ ತನ್ನ ಒಡೆತನವನ್ನು ಸಾಧಿಸಿದೆ. ಆ ಮೂಲಕ ಮಾನವರನ್ನು ಸನ್ಮಾರ್ಗದಲ್ಲಿ ನಡೆಯಲು ಪ್ರೇರೇಪಿಸುತ್ತದೆ. ಧರ್ಮ ಮಾನವರನ್ನು ಸನ್ಮಾರ್ಗದಲ್ಲಿ ನಡೆಸಲು ಪ್ರೇರೇಪಿಸುವಂತಹ ಒಂದು ಶಕ್ತಿಯಾಗಿ ಕಾರ್ಯನಿರ್ವಹಿಸುವ ವ್ಯವಸ್ಥೆಯಾಗಿದೆ, ಧರ್ಮ ಎಂದರೇನು ಎಂಬುದರ ಬಗ್ಗೆ ವಿವಿಧ ಚಿಂತಕರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ನಂಬಿಕೆಗಳ ಆಧಾರದ ಮೇಲೆ ಧರ್ಮದ ವಾಖ್ಯಾನವನ್ನು ಚಿಂತಕ ಮತ್ತು ಇತಿಹಾಸಕಾರ ಮ್ಯಾಕ್ಸ್ ಮುಲ್ಲರ್ ಅವರು ನೀಡಿದ್ದಾರೆ. ಅವರ ಪ್ರಕಾರ "ಒಂದು ಬಗೆಯ ಆತ್ಮಬಲದ ಪಾವಿತ್ರತೆಯೇ

ಧರ್ಮ, ಅದರ ಮೂಲಕ ಮಾನವನು ಅನಂತವಾದುದನ್ನು ಕಾಣುತ್ತಾನೆ." ಅಲೌಕಿಕ ಮತ್ತು ಅಗೋಚರ ಶಕ್ತಿಗಳಲ್ಲಿನ ನಂಬಿಕೆಯೇ 'ಧರ್ಮ' ಎಂಬ ಅಭಿಪ್ರಾಯ ಇ.ಟಿ. ಟೇಲರ್‌ರವರದ್ದಾಗಿದೆ. ಅವರ ಪ್ರಕಾರ "ಅಲೌಕಿಕ ಶಕ್ತಿಯಲ್ಲಿ ಮಾನವನು ಹೊಂದಿರುವ ನಂಬಿಕೆಯಾಗಿದೆ. ನಂಬಿಕೆಯ ಶಕ್ತಿಯು ಅಗೋಚರವಾಗಿ ಜಗತ್ತನ್ನು ಆಳುತ್ತದೆ. ಅಂತಹ ಶಕ್ತಿ ಸಾನಿಧ್ಯವನ್ನು ಪಡೆಯುವ ಹಂಬಲವೇ ಧರ್ಮ" ಆಗಿದೆ.[೩೨]

ಧರ್ಮದ ಉಗಮ ಮಹಿಳಾ ಆರ್ಥಿಕತೆ(ಉತ್ಪಾದಕತೆ)ಯ ಆಧಾರದ ಮೇಲೆ ಹುಟ್ಟಿದೆ ಎಂಬ ಅಂಶ ಮಾತೃದೇವತೆ, ನಿಸರ್ಗದೇವತೆ ಮತ್ತು ಪ್ರಕೃತಿ ಆರಾಧನೆಗಳ ಆಚರಣೆಗಳಿಂದ ತಿಳಿದುಬರುತ್ತಿದೆ. ಸ್ತ್ರೀಯ ನೈಸರ್ಗಿಕ ಕ್ರಿಯೆಯಾದ ಫಲವಂತಿಕೆ ಶಕ್ತಿ ಮತ್ತು ಉತ್ಪಾದಕ ಶಕ್ತಿಯನ್ನು ಪೂಜ್ಯತೆಯಿಂದ ಕಂಡು ಅವಳನ್ನು ಮೂರ್ತಿಯ ರೂಪದಲ್ಲಿ ಅಥವಾ ಪ್ರಕೃತಿಯ ರೂಪದಲ್ಲಿ ಪೂಜಿಸಲು ಪ್ರಾರಂಭಿಸಿದ ಆಗ 'ದೇವರು' ಮತ್ತು 'ಧರ್ಮ' ಹುಟ್ಟಿಕೊಂಡಿತು. ಕಾಲಾಂತರದಲ್ಲಿ ಹೆಣ್ಣಿನ ಆ ಶಕ್ತಿಯನ್ನು ಮಡಿ, ಮೈಲಿಗೆ ಎಂದು ಪರಿಗಣಿಸಿ ಸ್ತ್ರೀಯನ್ನು ಧರ್ಮದಿಂದ ದೂರ ಮಾಡಲಾಯಿತು. ಆ ಮೂಲಕ ಅವಳಿಗೆ ಆರ್ಥಿಕ ಸಂಪನ್ಮೂಲಗಳು ದೊರಕದಂತೆ ಮಾಡಿ ಅವಳನ್ನು ಪುರುಷರ ಅಧೀನತೆಗೆ ಒಳಪಡಿಸಲಾಯಿತು.

ಪ್ರಪಂಚದ ಧರ್ಮಗಳ ಉಗಮವು ಮಾತೃದೇವತೆಯ ನೆಲೆಯಿಂದ ಆರಂಭವಾಗಿ ಮಾನವ ನಾಗರಿಕತೆಯ ಜೊತೆಯಲ್ಲಿ ಉಳಿದು ಬಂದಿದೆ. ಈ ಹಂತದಲ್ಲಿ ಹೆಣ್ಣು ಆರಾಧನೆಯ ಅಥವಾ ಆಳಲ್ಪಡುವ ಸ್ಥಿತಿಯಲ್ಲಿ ಸೇರಿಕೊಂಡಿದ್ದಳು. ಹಾಗಾಗಿ ಅವಳನ್ನು ಪ್ರಕೃತಿ ಅಥವಾ ಮಾತೃದೇವತೆಯ ರೂಪದಲ್ಲಿ ಪೂಜಿಸುವ ಪರಿಪಾಟ ಬೆಳೆಯಿತು. ಪ್ರಾಚೀನ ಕಾಲದ ಮಾನವನಿಗೆ ಪ್ರಕೃತಿಯ ಅದ್ಭುತ ಶಕ್ತಿ ಮತ್ತು ರಹಸ್ಯದ ಬಗ್ಗೆ ಭೀತಿ ಬೆರಗು ಗೌರವಗಳಿದ್ದವು, ಆದ್ದರಿಂದಾಗಿ ಪ್ರಕೃತಿ ಆರಾಧನೆ ಪ್ರಾರಂಭವಾಯಿತು. ಅದೇ ರೀತಿ ಹೆಣ್ಣಿನ ನೈಸರ್ಗಿಕ ಕ್ರಿಯೆಗಳಾದ ಋತುಸ್ರಾವ, ಹೆರಿಗೆಯ ಕ್ರಿಯೆಗಳು ಗಂಡಿನಲ್ಲಿ ವಿಸ್ಮಯ ಮತ್ತು ಹೆದರಿಕೆಗಳನ್ನು ಹುಟ್ಟಿಸಿದವು. ಅಲ್ಲದೆ ಹೊಸ ಜೀವಕ್ಕೆ ಜನ್ಮ ಕೊಡುವ ಶಕ್ತಿ ಹೆಣ್ಣಿಗೆ ಇದ್ದದ್ದು, ಸಂತಾನೋತ್ಪಾದನೆಯಲ್ಲಿ ಗಂಡಿನ ಪಾತ್ರದ ಅರಿವಿಲ್ಲದಿದ್ದದ್ದೂ ಅಂದಿನ ಜನರ ಮನದಲ್ಲಿ ಸ್ತ್ರೀಶಕ್ತಿಯ ಬಗ್ಗೆ ವಿಪುಲವಾದ ಗೌರವಕ್ಕೆ ಕಾರಣವಾದವು. ಕೃಷಿಯ ಜನನಿ ಮಹಿಳೆಯೇ ಆಗಿದ್ದರಿಂದ ಕೃಷಿಯ ಉತ್ಪಾದನಾ ಸಾಮರ್ಥ್ಯ ಅವಳ ಅಧೀನದಲ್ಲಿರುತ್ತಿತ್ತು. ಆದ್ದರಿಂದ ಆಹಾರ ಉತ್ಪಾದನಾ ಸಾಮರ್ಥ್ಯ ಮತ್ತು ಸಂತಾನ ಸೃಷ್ಟಿ ಇವೆರಡು ಹೆಣ್ಣಿಗೆ ಇರುವ ಮಾಂತ್ರಿಕ ಶಕ್ತಿ ಎಂದು ಅವರು ನಂಬಿದ್ದರು. ಹೆಣ್ಣಿನ ಗರ್ಭದಿಂದ ಶಿಶುವೊಂದು ಹೊರಬರುವ ರೀತಿಗೂ, ಭೂಮಿಯೊಳಗಿನಿಂದ ಸಸಿವೊಂದು ಮೊಳಕೆ ಒಡೆಯುವುದಕ್ಕೂ ಹೋಲಿಕೆಯನ್ನು ಕಂಡುಕೊಂಡರು. ಬೇಸಾಯದ ಮೂಲಕ ಬದುಕಿನ ಅವಶ್ಯಕತೆಯಾಗಿದ್ದ ಆಹಾರದ ಪೂರೈಕೆ ಚೆನ್ನಾಗಿ ಸಾಗುತ್ತಿದ್ದ ಪರಿಸರದಲ್ಲಿ ಫಸಲನ್ನು ನೀಡಬಲ್ಲ ನೆಲದ ಶಕ್ತಿಯನ್ನು ಮತ್ತು ಶಿಶುವಿಗೆ ಜನ್ಮ ನೀಡುವ ಹೆಣ್ಣಿನ ಸೃಷ್ಟಿ ಸಾಮರ್ಥ್ಯವನ್ನು ಒಂದೇ ರೀತಿಯಲ್ಲಿ ಕಂಡರು. ಇದರ ಪರಿಣಾಮವಾಗಿ ಫಲವಂತಿಕೆಯನ್ನು ಆರಾಧಿಸುವ ನಂಬಿಕೆ, ಆಚರಣೆಗಳು ಹುಟ್ಟಿಕೊಂಡವು.[೩೩]

ಭೂಮಿ ಮತ್ತು ತಾಯಿ ಒಂದೇ ಎಂಬ ಭಾವನೆಯಿಂದ 'ಭೂಮಿ-ತಾಯಿ'ಯ (Earth-Mother) ಪರಿಕಲ್ಪನೆ ಬೆಳೆಯಲು ಕಾರಣವಾಯಿತು. ಇದರಿಂದಾಗಿ ಮುಂದೆ 'ಭೂಮಿತಾಯಿ'ಯ ಆರಾಧನೆ ಪ್ರಾರಂಭವಾಯಿತು. ಹಾಗೆ ನೆಲದ ಫಲವಂತಿಕೆಯನ್ನು ಹೆಚ್ಚಿಸಲು, ಖಾತರಿಗೊಳಿಸಲು ಹಲವಾರು ರೀತಿಯ ಧಾರ್ಮಿಕ ವಿಧಿಗಳು ಹುಟ್ಟಿಕೊಂಡವು. ಅವುಗಳಲ್ಲಿ ಬೆತ್ತಲೆ ಹೆಣ್ಣಿನ ಹೆಗಲಿಗೆ ನೇಗಿಲು ಹೂಡುವುದು, ಉಳುಮೆ ಮಾಡುವುದು ಇತ್ಯಾದಿ ಆಚರಣೆಗಳು ಬೆಳೆದು ಬಂದವು.[೬೯] ಅಲ್ಲದೆ ತಮ್ಮ ಜೀವನ ಸುಖಮಯವಾಗಿರಬೇಕು, ತಾವು ಬಯಸುವ ರೀತಿಯ ಪರಿಣಾಮಗಳನ್ನು ಸೃಷ್ಟಿಸಬೇಕು ಎಂಬ ಕಾರಣಕ್ಕಾಗಿ ಮಾನವ ಅನೇಕ ಬಗೆಯ ಧಾರ್ಮಿಕ ವಿಧಿ, ಆಚರಣೆಗಳನ್ನು ಕಟ್ಟಿಕೊಂಡ ಇವು ಧರ್ಮದ ಮೂಲ ರೂಪವಾದವು. ಯಾಕೆಂದರೆ ಧಾರ್ಮಿಕ ಸಂಕೇತವಾದ ವಿಗ್ರಹಗಳು ಹೆಣ್ಣಿನ ಸಂಕೇತವಾಗಿದ್ದರಿಂದ ಮೊಟ್ಟಮೊದಲ ಧಾರ್ಮಿಕ ಚಿಂತಕ ಗಂಡಸೇ ಆಗಿದ್ದಾನೆ. ಪ್ರಕೃತಿ ಮತ್ತು ಹೆಣ್ಣಿನಲ್ಲಿನ ಪ್ರಜನನ ಶಕ್ತಿಯ ವಿಸ್ಮಯವನ್ನರಿತ ಗಂಡಸು ಹೆಣ್ಣನ್ನು ದೇವತೆ ರೂಪದಲ್ಲಿ ಪೂಜಿಸಲು ಪ್ರಾರಂಭಿಸಿದ. ಇದರ ಪರಿಣಾಮವಾಗಿ 'ಮಾತೃದೇವತೆ ಆರಾಧನೆ' ಪ್ರಾರಂಭವಾಯಿತು. ಈ ಹಂತದಲ್ಲಿ ಧಾರ್ಮಿಕ ಆಚರಣೆಗಳನ್ನು ಮಾಡುವವರು ಮಹಿಳೆಯರೇ ಆಗಿದ್ದು ಅವರು ಧಾರ್ಮಿಕ ಸ್ವಾತಂತ್ರ್ಯವನ್ನು ಹೊಂದಿದವರಾಗಿದ್ದರು. ಈ ರೀತಿಯ ಮಾತೃ ದೇವತಾರಾಧನೆಯು ಶಿಲಾಯುಗ ಮತ್ತು ಕಂಚಿನ ಯುಗಕ್ಕೆ ಸೇರಿದ ಈಜಿಪ್ತ್, ಮೆಸಪೊಟಾಮಿಯ ಮತ್ತು ಸಿಂಧು ಬಯಲಿನ ನಾಗರಿಕತೆಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದದ್ದು ಕಂಡು ಬರುತ್ತದೆ.[೭೦]

ಪ್ರಪಂಚದ ಸೃಷ್ಟಿಯ ಪರಮಾಧಿಕಾರ ಹೊಂದಿದವಳು ಸ್ತ್ರೀಯೇ ಆಗಿದ್ದು ಗಂಡು ಆಕೆಯಿಂದ ಸೃಷ್ಟಿಗೊಂಡು, ಸಂತಾನಕ್ಕಾಗಿ ಆಕೆಯನ್ನು ಕೂಡುವ ವಸ್ತುವಾದ. ಆ ಮೂಲಕ ಅವನು ಅವಳ ಅಧೀನತೆಗೆ ಒಳಗಾದ. ಗಂಡು ಹೆಣ್ಣಿನ ಅಧೀನಕ್ಕೆ ಒಳಗಾದ ಬಗ್ಗೆ ಪ್ರಪಂಚದ ಕೆಲವು ಪುರಾಣಗಳಿಂದ ತಿಳಿದು ಬರುತ್ತದೆ. ಈಜಿಪ್ತ್ ದೇಶದಲ್ಲಿ ದೊರೆತ ಒಂದು ಪುರಾಣದ ಪ್ರಕಾರ 'ಹಾ ಥೋರ್' ಎಂಬ ಗೋಮಾತೆಯ ಗರ್ಭವೇ ಭೂಮಿ, ಅವಳ ಉದರವೇ ಆಕಾಶ, ಅವಳ ನಾಲ್ಕು ಪಾದಗಳು ನಾಲ್ಕು ದಿಕ್ಕುಗಳು, ಸೂರ್ಯದೇವ, ಹೊರೇಸ್ ಪ್ರತಿಸಂಜೆ ಅವಳ ಬಾಯಿಯನ್ನು ಪ್ರವೇಶಿಸಿ ಮರುದಿನ ಹೊರ ಬರುತ್ತಾನೆ. ಮಾತೃಗರ್ಭದಿಂದ ಹೊರಬರುವ ಈ ಸೂರ್ಯದೇವನು ತನಗೂ, ತನ್ನ ತಂದೆಗೂ, ಆಳುವ ಫಿರೋ ಮತ್ತು ಅವನ ಮೃತ ಪಿತೃಗೂ ಸಂಕೇತವಾಗಿದ್ದಾನೆ. 'ಹಾಥೋರ್' ಅವನ ತಾಯಿ-ಪತ್ನಿ ಎರಡು ಆಗಿ ಸಂಕೇತಗೊಳ್ಳುತ್ತಾಳೆ. ಮೆಸಪೊಟೋಮಿಯಾದ ಮತ್ತೊಂದು ಪುರಾಣಕಥೆಯ ಪ್ರಕಾರ "ಮೆಸಪೊಟೋಮಿಯಾದ ಮಹಾಮಾತೆ ಇನ್ನಾನ್ ಅಕ್ಕೆಡೆನ್ ದೇವತೆ. ಇಷ್ತಾರ್ ಕೂಡ ಜೀವಶಕ್ತಿಯ ಪ್ರತೀಕವಾಗಿದ್ದವರು. 'ಮಮುಜಿ' ಮತ್ತು 'ತುಮುಜಿ' ಇಬ್ಬರು ಯುವ ಗಂಡು ದೇವತೆಗಳಾಗಿದ್ದು ಈ ಇಬ್ಬರು ಪ್ರತಿವರ್ಷವೂ ಸತ್ತು, ದೇವಿಯಿಂದ ಮತ್ತೆ ಮರುಹುಟ್ಟು ಪಡೆಯುತ್ತಾರೆ. ಮಾತೃದೇವತೆಗಳಾದ

ಇನ್ನಾನ್, ಇಪ್ತಾರ್ ನಿರಂತರ ಮಹಾ ಉತ್ಪಾದನಾ ಶಕ್ತಿಗಳಾಗಿ ತಮ್ಮ ಆಶಕ್ತಿಗೆ ಗಂಡು ದೇವತೆಗಳನ್ನು ಸಾಧನವನ್ನಾಗಿಸಿಕೊಂಡಿರುವುದು ಮೆಸಪೊಟೋಮಿಯಾದ ಪುರಾಣಗಳಿಂದ ತಿಳಿದುಬರುತ್ತದೆ.[೪೧]

ಮುಂದೆ ಕಾಲಕ್ರಮದಲ್ಲಿ ಗಂಡು ದೇವತೆಯನ್ನು ಅಧೀನ ರೀತಿಯಲ್ಲಿ ಪೂಜಿಸುವುದು ರೂಢಿಗೆ ಬಂದಿತು. ಬೇಟೆಗಾರಿಕೆಯಿಂದ ಮಾನವನ ಬದುಕು ಪಶುಪಾಲನೆ ಹಂತ ತಲುಪಿದಾಗ ಗಂಡು ದೇವರು ಕಾಣಿಸಿಕೊಂಡರು. ಪಶುಪಾಲನೆಯ ವ್ಯವಸ್ಥೆಯಲ್ಲಿ ಸಂತಾನೋತ್ಪಾದನೆಗೆ ಗಂಡಸಿನ ಅವಶ್ಯಕತೆಯ ಅರಿವು ಮೂಡಿದಂತೆ ಮಾತೃದೇವಿಗೆ ಪತಿಪ್ರಿಯನಾದ ಗಂಡು ದೇವನೊಬ್ಬನ ಪರಿಕಲ್ಪನೆ ಬೆಳೆಯಲು ಕಾರಣವಾಯಿತು. ಪ್ರಾರಂಭದಲ್ಲಿ ಮಾತೃದೇವಿಯ ಪುತ್ರರಾಗಿದ್ದ ಪುರುಷ ದೇವತೆಗಳು ನಂತರ ದೇವಿಯ ಪತಿಯ ಸ್ಥಾನಕ್ಕೆ ಏರಿದರು. ಮುಂದೆ ಸ್ತ್ರೀಯರ ಕೃಷಿ ಕ್ಷೇತ್ರವನ್ನು ಗಂಡಸರು ಆಕ್ರಮಿಸಿಕೊಂಡಂತೆ ಗಂಡು ದೇವತೆಗಳು ಹೆಣ್ಣು ದೇವತೆಗಳ ಮೇಲೆ ಅಧಿಕಾರ ಸ್ಥಾಪಿಸಿಕೊಂಡು ಬಲಿಷ್ಠದೇವರಾಗಿ ಬೆಳೆದವು. ಇದರ ಪರಿಣಾಮವಾಗಿ ಹೆಣ್ಣು ಪೂಜಾರಿಣಿಯರ ಬದಲಿಗೆ ಗಂಡು ಪೂಜಾರಿಗಳು ಮತ್ತು ಮಾಂತ್ರಿಕರು ಬಲಿಷ್ಠರಾದರು. ಇದರಿಂದಾಗಿ ದೇವರ ಪೂಜಾ ವಿಧಾನವನ್ನು ಮಾಡುವವರು ಪುರುಷರೇ ಆದರು. ಕೃಷಿ ಉತ್ಪನ್ನ ಮತ್ತು ಸಂತಾನ ಸೃಷ್ಟಿ, ಎರಡು ಹೆಣ್ಣಿನ ಮೂಲದ ಮಾಂತ್ರಿಕ ಶಕ್ತಿಗಳೆನಿಸಿದ್ದು ಪೂಜಾರಿಯು ಅಂಥ ಮಾಂತ್ರಿಕ ಶಕ್ತಿಯನ್ನು ತಾನು ಪಡೆದುಕೊಂಡು ಪ್ರಕೃತಿಯಲ್ಲಿನ ಫಲೋತ್ಪಾದನಾ ಶಕ್ತಿಯನ್ನು ಹೆಚ್ಚಿಸುವಂತಹ ವಿಧಿಗಳನ್ನು ನಡೆಸಲು ಅರ್ಹತೆಯನ್ನು ಪಡೆಯಲು ಮುಂದಾದನು. ಈ ಒಂದು ಹಂತದಿಂದಲೇ ಮಹಿಳೆಯರನ್ನು 'ಧಾರ್ಮಿಕ ವಿಧಿ' ಮತ್ತು 'ಆಚರಣೆ'ಗಳಿಂದ ದೂರ ಇಡುವ ತಂತ್ರ ಬೆಳೆದು ಬಂದಿತು.[೪೨]

049287

## ಧರ್ಮ ಮತ್ತು ಆರ್ಥಿಕತೆ

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆ ಮಾತೃಪ್ರಧಾನ ವ್ಯವಸ್ಥೆಯಿಂದಾಗಿ ಮತ್ತು ಹೆಣ್ಣುದೇವರ ಸೇವೆಯಿಂದಾಗಿ ಹೆಚ್ಚು ಹೆಚ್ಚು ಸಂಪತ್ತು ಮತ್ತು ಆಸ್ತಿಯನ್ನೇ ಹೊಂದುವಂತವಳಾಗಿದ್ದಳು. ಆದರೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ನಶಿಸಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಉದಯವಾದಾಗ 'ಧಾರ್ಮಿಕ' ಅಧಿಕಾರ ಪುರುಷರ ಕೈ ಸೇರಿತು. ಆ ಹಂತದಲ್ಲಿ ಮಹಿಳೆಯನ್ನು 'ಆಸ್ತಿ' ಮತ್ತು 'ಸಂಪತ್ತಿ'ನಿಂದ ದೂರಮಾಡಲು ಮೋಕ್ಷ, ಪಾಪ, ಪುಣ್ಯ ಗಳಿಸಲು ಹೊಸ ಧಾರ್ಮಿಕ ಆಚರಣೆಗಳನ್ನು ಜಾರಿಗೊಳಿಸಲಾಯಿತು. 'ಆಸ್ತಿ'ಯು ತಾಯಿಯಿಂದ ಮಗಳಿಗೆ ಹೋಗುವುದನ್ನು ಪಡೆಯಲು 'ಧರ್ಮ ಮೋಕ್ಷ' ಎಂಬ ಪರಿಕಲ್ಪನೆಯನ್ನು ಜಾರಿಗೊಳಿಸಿತು. ದಂಪತಿಗಳು 'ಮೋಕ್ಷ' ಹೊಂದಲು ಗಂಡು ಮಗಬೇಕು. ಗಂಡು ಮಗುವೇ ವಂಶದ ಉದ್ಧಾರಕ. ಅವನಿಂದ ಮನೆ ಬೆಳಗುತ್ತದೆ. ಗಂಡು ಮಗು ತಂದೆ ತಾಯಿಗಳ ಬೆಂಕಿ ಹಚ್ಚಿದರೆ ಅವರು ಸ್ವರ್ಗಕ್ಕೆ ಹೋಗುತಾರೆ ಎಂಬ ಧಾರ್ಮಿಕ ನಂಬಿಕೆಯನ್ನು ಜನರಲ್ಲಿ ಬೆಳೆಸಿ ಧರ್ಮ

ಮಹಿಳೆಯರನ್ನು 'ಆಸ್ತಿ' ಮತ್ತು 'ಸಂಪತ್ತಿನ' ಒಡೆತನದಿಂದ ದೂರ ಮಾಡಿತು. ದೈಹಿಕವಾಗಿ ಮತ್ತು ಮಾನಸಿಕವಾಗಿ ಪುರುಷನಷ್ಟೇ ಪ್ರಬಲಳಾಗಿದ್ದು ಲೈಂಗಿಕ ಶಕ್ತಿ ಮತ್ತು ಫಲವಂತಿಕೆಯ ಶಕ್ತಿಯನ್ನು ಹೊಂದಿ ವಂಶ ಮುಂದುವರೆಕೆಗೆ ಸ್ತ್ರೀ ಅವಶ್ಯ ಎಂದು ಮನಗಂಡ ಪುರುಷ ಧರ್ಮದ ಮೂಲಕ ವೇದ, ಸ್ಮೃತಿ ಮತ್ತು ಧಾರ್ಮಿಕ ಆಚರಣೆಗಳನ್ನು ಅವಳ ಮೇಲೆ ಏರಿ ಅವಳ ಚಲನವಲನವನ್ನು ನಿರ್ಬಂಧಿಸಿದನು. ಆ ಮೂಲಕ ಅವಳನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧಿಸಿಟ್ಟು ಅವಳಿಗೆ ಶಿಕ್ಷಣ ಮತ್ತು ಸಂಪತ್ತುಗಳು ಅವಳಿಗೆ ದೊರಕದಂತೆ ನೋಡಿಕೊಂಡನು. ಅದಕ್ಕಾಗಿ ಹೆಣ್ಣು ಸ್ವತಂತ್ರಳಲ್ಲ, ಅವಳು ಪುರುಷರ ಅಧೀನದಲ್ಲಿರಬೇಕು ಎಂಬ ಧಾರ್ಮಿಕ ನಿರ್ಬಂಧವನ್ನು ಹೇರಿದನು.

"ಅಸ್ವತಂತ್ರಾ ಸ್ತ್ರೀಯಾ
ಪಿತಾ ರಕ್ಷತೀ ಕೌಮಾರೇ ಭರ್ತಾರಕ್ಷತಿ ಯೌವನೇ|
ದಕ್ಷಂತಿಸ್ಥಾವಿರೇ ಪುತ್ರಾನಸ್ತ್ರೀ ಸ್ವಾತಂತ್ರ್ಯ ಮರ್ಹತಿ||"

ಮನು-

ಸ್ತ್ರೀಯು ಸ್ವಾತಂತ್ರ್ಯಕ್ಕೆ ಅನರ್ಹಳು, ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ ಯೌವ್ವನದಲ್ಲಿ ಗಂಡನ ಆಶ್ರಯದಲ್ಲಿ ಮತ್ತು ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿರಬೇಕೆಂದು ಮನುಸ್ಮೃತಿ ತಿಳಿಸುತ್ತದೆ.[೪೩]

ಮನುಕುಲದ ಸೃಷ್ಟಿ ಹಾಗೂ ಪಾಲನೆ ಪೋಷಣೆಯನ್ನು ಹೊತ್ತ ಸ್ತ್ರೀಗೆ ಧರ್ಮವು ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿಲ್ಲ. ಧರ್ಮ ಅವಳಿಗೆ ನೀಡಿರುವ ಹಕ್ಕುಗಳಿಗಿಂತ ನಿರ್ಬಂಧಗಳನ್ನೇ ಹೆಚ್ಚಾಗಿ ವಿಧಿಸಿವೆ. ಸ್ತ್ರೀಯರಿಗೆ ನೀಡಿದಂಥ ಹಲವು ಹಕ್ಕುಗಳನ್ನು ಕೂಡ ಅವರು ಸಂಸಾರ ಎಂಬ ಸಾಂಸ್ಥಿಕ ಚೌಕಟ್ಟಿನೊಳಗೆ ಮಾತ್ರ ಅನುಭವಿಸಬೇಕೆಂಬ ನಿರ್ಬಂಧವನ್ನು ಹೇರಿತು. ಋಗ್ವೇದ ಕಾಲದ ನಂತರದಲ್ಲಿ ಆರ್ಯ ಸಂಸ್ಕೃತಿ ದೇಶದ ಉದ್ದಗಲಕ್ಕೂ ಹರಡಿ ಧಾರ್ಮಿಕ ಮೌಲ್ಯಚರಣೆಗಳನ್ನು ಸಮಾಜದ ತುಂಬೆಲ್ಲ ಹರಡಿತು. ಶುದ್ಧ-ಅಶುದ್ಧಗಳ ಪರಿಕಲ್ಪನೆಗಳು ಪ್ರಾಬಲ್ಯವನ್ನು ಪಡೆದು ಸ್ತ್ರೀ ಅನೇಕ ಧಾರ್ಮಿಕ ಆಚರಣೆಗಳಿಂದ ದೂರ ಸರಿಯಲ್ಪಟ್ಟಳು. ಅಲ್ಲದೆ ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕಿನ ವಂಚನೆ, ಶಿಕ್ಷಣದ ನಿರಾಕರಣೆ ಇವೇ ಮುಂತಾದ ಧರ್ಮ ಬೆಂಬಲಿತ ಸ್ತ್ರೀ ವಿರೋಧಿ ಪ್ರವೃತ್ತಿಗಳು ಈ ಕಾಲದಲ್ಲಿ ಬಲವಾಗಿ ಬೇರೂರಿ ಸ್ತ್ರೀಯನ್ನು ಸಕ್ರಿಯ ಸಾಮಾಜಿಕ ಮತ್ತು ಆರ್ಥಿಕ ಜೀವನದಿಂದ ದೂರ ಮಾಡುವ ಪರಿಸ್ಥಿತಿ ಸೃಷ್ಟಿಯಾಯಿತು. ವಿವಾಹ ಒಂದು ವ್ಯವಸ್ಥೆಯಾಗಿ ಮಾರ್ಪಟ್ಟು ಬಾಲ್ಯವಿವಾಹ, ವಿಧವಾ ವಿವಾಹಕ್ಕೆ ನಿಷೇಧ ಇತ್ಯಾದಿ ಆಚರಣೆಗಳು ಬೆಳೆದು ಮಹಿಳೆಯನ್ನು ಶೋಷಣೆಗೆ ಸಿಲುಕಿಸಿದವು.

ಧರ್ಮಶಾಸ್ತ್ರಗಳ ಕಾಲದಲ್ಲಿ ಸ್ತ್ರೀಯರ ಸ್ಥಿತಿ ಮತ್ತಷ್ಟು ಇಳಿಮುಖವಾಯಿತು. ದ್ವಿಮುಖ ನಿಲುವುಗಳಿಂದ ಕೂಡಿರುವಂತಹ ಮನುಸ್ಮೃತಿಯಲ್ಲಿ ಸ್ತ್ರೀಯನ್ನು ಅತಿಯಾದ ಗೌರವದಿಂದ ಕಾಣುವಂತೆ ಬಿಂಬಿಸಿದರೆ ಮತ್ತೊಂದು ಕಡೆ ಅವಳಿಗೆ ಸ್ವಂತ ವ್ಯಕ್ತಿತ್ವವೇ ಇಲ್ಲದಂಥ ವೃತ್ತಿಯನ್ನಾಗಿ ನಿರೂಪಿಸಿದೆ.

“ಯತ್ರ ನಾರ್ಯಸ್ತು ಪೂಜ್ಯಂತೇ
ರಮಂತೇ ತತ್ರದೇವತಾ:”

ಸ್ತ್ರೀಗೆ ಗೌರವ ಪೂಜೆಗಳು ಸಲ್ಲುವೆಡೆಯಲ್ಲಿ ದೇವತೆಗಳು ನಲಿದಾಡುತ್ತಾರೆ. ಗೌರವಿಸದ ಕಡೆಗಳಲ್ಲಿ ಯಾವ ಕಾರ್ಯವು ಫಲಕಾರಿಯಾಗುವುದಿಲ್ಲ ಎಂದು ಮನು ಸ್ತ್ರೀಯರಿಗೆ ಗೌರವ ತೋರಿಸಿದ್ದಾನೆ. ಅಲ್ಲದೆ “ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ” ಸ್ತ್ರೀಯು ಸ್ವಾತಂತ್ರ್ಯ ಪಡೆಯಲು ಅನರ್ಹಳು ಎಂದು ಹೇಳುವ ಮೂಲಕ ಸ್ತ್ರೀಯರಿಗೆ ಸ್ವಾತಂತ್ರ್ಯ ನೀಡುವುದನ್ನು ವಿರೋಧಿಸಿದ್ದಾನೆ. ಹೀಗೆ ಧರ್ಮಶಾಸ್ತ್ರಗಳು ಮಹಿಳೆಯ ಸ್ವಾತಂತ್ರ್ಯವನ್ನು ನಿರ್ಬಂಧಿಸುವುದರ ಜೊತೆಗೆ ಅವಳ ಚಲನೆಯ ಮೇಲೆ ನಿರ್ಬಂಧಗಳನ್ನು ಹೇರುವ ಮೂಲಕ ಅವಳನ್ನು ಪುರುಷರ ಅಧೀನಕ್ಕೆ ಒಳಪಡಿಸುವ ಪ್ರಯತ್ನ ಮಾಡುತ್ತಿವೆ.[೪೪] ಪ್ರಾಚೀನ ಅರ್ಥಶಾಸ್ತ್ರಜ್ಞ ಕೌಟಿಲ್ಯನು ತನ್ನ ಕೃತಿ ಅರ್ಥಶಾಸ್ತ್ರದಲ್ಲಿ ಪುತ್ರರಿಲ್ಲದಿದ್ದಾಗ ಹಿರಿಯರ ಆಸ್ತಿಯನ್ನು ಸತ್ತವನ ಸೋದರರು ಹೆಣ್ಣು ಮಕ್ಕಳು ಹಂಚಿಕೊಳ್ಳಬಹುದು ಎಂದು ಸ್ತ್ರೀಯರಿಗೆ ಮೊಟ್ಟಮೊದಲಿಗೆ ವಾರಸುದಾರಿಕೆಯ ಹಕ್ಕನ್ನು ನೀಡಿದನಾದರೂ ಗಂಡನ ಆಸ್ತಿಯಲ್ಲಿ ಹಕ್ಕನ್ನು ವಿರೋಧಿಸಿದನು”. ಸ್ತ್ರೀಗೆ ‘ಸ್ತ್ರೀಧನದ’ ಮೇಲೆ ಮಾತ್ರ ಹಕ್ಕಿದೆಯೇ ಹೊರತು ಗಂಡನ ಆಸ್ತಿ ವಿಭಾಗದ ಸಂದರ್ಭದಲ್ಲಿ ಆಕೆಗೆ ಯಾವ ಹಕ್ಕು ಇಲ್ಲವೆಂದು ಹೇಳಿದ್ದಾನೆ. ಸ್ತ್ರೀಧನವೆಂದರೆ ವಿವಾಹದ ನಂತರದಲ್ಲಿ ಕನ್ಯೆಗೆ ಪತಿಯಿಂದಲೂ ಪಿತೃವಿನಿಂದಲೂ ಬಳುವಳಿಯಾಗಿ ಬಂದ ಧನ(ಸಂಪತ್ತು ಅಥವಾ ಹಣ) ಎಂದು ಅರ್ಥ.[೪೫]

ಪ್ರಪಂಚದಲ್ಲಿರುವ ಎಲ್ಲಾ ಧರ್ಮಗಳನ್ನು ಗಮನಿಸಿದರೆ ಅವುಗಳ ಸಂಸ್ಥಾಪಕರು ಪುರುಷರೇ ಆಗಿದ್ದಾರೆ. ಆದ್ದರಿಂದ ಎಲ್ಲ ಧರ್ಮಗಳ ಧಾರ್ಮಿಕ ಚಿಂತನೆಯಲ್ಲಿ, ತತ್ವಸಿದ್ಧಾಂತಗಳಲ್ಲಿ ಪುರುಷಶಾಹಿ ಧೋರಣೆ ಎದ್ದುಕಾಣುತ್ತಿದೆ. ಅಲ್ಲದೆ ಸ್ತ್ರೀ ವಿರೋಧಿ ನೆಲೆ ಮತ್ತು ಸ್ತ್ರೀಯನ್ನು ಆಸ್ತಿ ಮತ್ತು ‘ಸಂಪನ್ಮೂಲ’ಗಳಿಂದ ದೂರ ಇಡುವ ಹುನ್ನಾರ ಕುತಂತ್ರವನ್ನು ಎಲ್ಲ ಧಾರ್ಮಿಕ ಚಿಂತಕರು ತಮ್ಮತಮ್ಮ ಧರ್ಮಗಳಲ್ಲಿ ಮಾಡಿರುವುದು ಕಂಡುಬರುತ್ತಿದೆ. ಇದಕ್ಕೆ ಪೂರಕವಾಗಿ ಜಗತ್ತಿನ ಕೆಲವು ಧರ್ಮಗಳಲ್ಲಿ ಮಹಿಳೆಯರ ಸ್ಥಾನಮಾನವನ್ನು ಅವಲೋಕಿಸುವುದು ಸೂಕ್ತವೆನಿಸುತ್ತದೆ.

‘ಜೊರಾಸ್ಟಾರ್’ನಿಂದ ಸ್ಥಾಪನೆಯಾದ ಧರ್ಮ “ಜೊರಾಷ್ಟ್ರಿಯನ್ ಧರ್ಮ” ಅವರ ಪ್ರಕಾರ ಅಹುರ್‌ಮಜ್ದಾ ಒಳಿತಿನ ಪ್ರತಿನಿಧಿ, ಅಹ್ರಿಮಾನ್ ಕೆಡುಕಿನ ಪ್ರತಿನಿಧಿ ಇವರಿಬ್ಬರ ನಡುವಿನ ನಿರಂತರ ಹೋರಾಟವೇ ವಿಶ್ವವನ್ನು ಮುನ್ನಡೆಸುವ ಪ್ರೇರೇಕಶಕ್ತಿ” ಆದುವೇ ಧರ್ಮ. ಈ ಧರ್ಮದ ಪ್ರಕಾರ ಪುರುಷ ಶ್ರೇಷ್ಠ ದೇವರಿಗೆ ಸಮಾನಾದವನು, ಹೆಣ್ಣು ಒಂದು ಮಾಯೆ ಕೆಡುಕಿನ ಪ್ರತಿನಿಧಿ. ಅಹ್ರಿಮಾನ್ ನಿನ್ನು ನಾಶಮಾಡಲು ದೇವರಿಂದ ಸೃಷ್ಟಿಯಾದ ‘ದೃಶ್ಯಾ’ ಎಂದು ಪರಿಗಣಿಸಿದೆ. ಈ ಧರ್ಮದ ದೇವರು ಅಹುರ್ ಮಜ್ದಾ ಹೇಳುವಂತೆ “ಮನುಷ್ಯನನ್ನು ಮಾಡಬಲ್ಲ ಬೇರೊಂದು ಪಾತ್ರ ನನಗೆ ಸಿಕ್ಕಿದ್ದರೆ ನಿನ್ನನ್ನು ನಾನು

ಸೃಷ್ಟಿಸುತ್ತಿರಲಿಲ್ಲ" ಈ ಹೇಳಿಕೆಯು ಹೆಣ್ಣಿನ ಸೃಷ್ಟಿ ಅಷ್ಟಾಗಿ ಇರಲಿಲ್ಲ. ಅವಳನ್ನು ಅನಿವಾರ್ಯತೆಯಿಂದಾಗಿ ಸೃಷ್ಟಿಸಲಾಗಿದೆ ಎಂಬ ಅಭಿಪ್ರಾಯವನ್ನು ತಿಳಿಸುತ್ತದೆ.

ಈ ಧರ್ಮದಲ್ಲಿ ಹೆಣ್ತನಕ್ಕೆ ಮಾತೆ-ಪತ್ನಿಯ ನೆಲೆಯಲ್ಲಿ ಸ್ವಲ್ಪ ಗೌರವವಿದೆ. ಯಾಕೆಂದರೆ 'ಅಹುರ್ ಮಜ್ದಾ'ನ ಮಗಳಾದ 'ಸ್ಪಾಂಡರ್‌ಮಾತ್' ಅವನ ಪತ್ನಿಯಾಗಿ ಸ್ವರ್ಗದ ರಾಣಿಯಾಗಿದ್ದಳು ಮತ್ತು ಸೃಷ್ಟಿಯ ಮಾತೆ ಎಂಬುದಕ್ಕಾಗಿ ಆದರೂ ಈ ಧರ್ಮದಲ್ಲಿ ಹೆಣ್ಣನ್ನು ತಿರಸ್ಕಾರ ದೃಷ್ಟಿಯಿಂದ ಕಾಣಲಾಗುತ್ತಿದೆ. ಅಲ್ಲದೆ ಅವಳನ್ನು ಪುರುಷರ ಅಧೀನದಲ್ಲಿರುವ ಒಬ್ಬ ಸೇವಕಿ ಎಂದು ಪರಿಗಣಿಸಿದೆ. ಹೆಣ್ಣು ದೇವರ ಸೃಷ್ಟಿಯಾದರೂ ಅಸುರನ ಜೊತೆ ಕೂಡಿದ್ದರಿಂದ. ಅವಳಿಗೆ ಮುಟ್ಟು ಆವರಿಸಿಕೊಂಡಿತು. ಆದ್ದರಿಂದ ಅವಳು ತಿರಸ್ಕಾರಕ್ಕೆ ಅರ್ಹಳು ಮತ್ತು "ನಿಮ್ಮ ಹೆಂಗಸರಲ್ಲಿ ನಂಬಿಕೆ ಇಡಬೇಡಿ, ಇಟ್ಟರೆ ನೀವು ನಾಚಿಕೆಕೊಳ್ಳುವ ಪಶ್ಚಾತ್ತಾಪ ಪಡುವ ಸಂದರ್ಭ ಬಂದೀತು" ಎಂದು ಬೋಧಿಸುವ ಮೂಲಕ ಮಹಿಳೆಗೆ ಧಾರ್ಮಿಕ ಮತ್ತು ಆರ್ಥಿಕ ಸ್ಥಾನಮಾನ ದೊರೆಯದಂತೆ ಮಾಡಿದೆ.[೪೬]

ಏಸುಕ್ರಿಸ್ತನಿಂದ ಉದಯವಾದ 'ಕ್ರೈಸ್ತ ಧರ್ಮ' ಸಹ ಮಹಿಳೆಯ ಬಗ್ಗೆ ದ್ವಂದ್ವ ವಿಚಾರವನ್ನು ವ್ಯಕ್ತಪಡಿಸಿದೆ. ಒಂದು ಕಡೆ ಅವಳನ್ನು ಕ್ರೈಸ್ತನ ತಾಯಿ (ಮೇರಿ) ಎಂದು ದೇವತೆ ಸ್ಥಾನಕ್ಕೆ ಏರಿಸಿ ಪೂಜಿಸಲು ಮುಂದಾದರೆ ಹಳೆಯ ಒಡಂಬಡಿಕೆಯಲ್ಲಿ ಮಹಿಳೆಯನ್ನು ಸ್ತ್ರೀ ಶಾಪಗ್ರಸ್ತಳಾದ 'ಈವಳ' ಪ್ರತೀಕವೆಂದು ತಿಳಿದು ಗಂಡಿನ ಅಡಿಯಾಳಾಗಿರುವವಳು ಎಂದು ಅವಳನ್ನು ಕೀಳಾಗಿ ಕಾಣಲಾಗುತ್ತಿದೆ. ದೇವರನ್ನು ತಂದೆ ಎಂದು ಸಂಬೋಧಿಸಿದ ಏಸುಕ್ರಿಸ್ತನು ಎಲ್ಲ ಸಹೋದರ ಸಹೋದರಿಯರು ಸಮಾನರು ಎಂದು ಸಾರಿದನು. ಅಲ್ಲದೆ ದೇವರು ದಯಪಾಲಿಸಿದ ಸಂಪತ್ತಿನಲ್ಲಿ ಎಲ್ಲ ಸಹೋದರ ಸಹೋದರಿಯರಿಗೂ ಸಮಾನ ಪಾಲಿದೆ ಎಂದು ಬೋಧಿಸಿದ. ಆದರೆ ಏಸುವಿನ ನಂತರ ಬಂದ ಚರ್ಚ್ ಪಾದ್ರಿಗಳು ಧಾರ್ಮಿಕ ವಿಚಾರದಲ್ಲಿ ಮಹಿಳೆ ಪುರುಷರ ಅಧೀನದಲ್ಲಿರುವಂತೆ ಮತ್ತು ಸಂಪನ್ಮೂಲಗಳಿಂದ ದೂರ ಇರುವಂತೆ ಬೋಧಿಸಿದರು ಹಾಗೂ ಬೈಬಲ್ಲಿನಲ್ಲಿ ಸೇರಿಸಿದರು. ಚರ್ಚಿನ ಪಾದ್ರಿ 'ಪೌಲ್' ಎಂಬುವವನು 'ಧಾರ್ಮಿಕ ಸಮಾವೇಶಗಳಲ್ಲಿ ಪಾಲ್ಗೊಳ್ಳಲು ಮತ್ತು ಮುಖ್ಯ ಕಾರ್ಯ ನಿರ್ವಹಿಸಲು ಚರ್ಚ್ ಮಹಿಳೆಯರಿಗೆ ಅವಕಾಶ ನೀಡಿದೆ. ಆದರೆ ಅವರು ಅಲಂಕಾರ, ಕೃತಕತೆ ಮತ್ತು ಒಡವೆಗಳ ಪ್ರದರ್ಶನವನ್ನು ಬಿಟ್ಟು ಚರ್ಚಿಗೆ ಹೋಗುವಾಗ ತಲೆಗೂದಲನ್ನು ಮುಚ್ಚಿಕೊಂಡು, ಮುಖದ ಮೇಲೆ ಪರದೆ ಧರಿಸಬೇಕೆಂದು ಆದೇಶಿಸಿದನು. ಮುಂದೆ ಬಂದ ಸಂತ 'ಅಗಸ್ಟಿಸ್' ಸ್ತ್ರೀಯರ 'ಆಸ್ತಿಹಕ್ಕಿ'ನ ಪರವಾಗಿ ವಾದಿಸಿದನು. ಸ್ತ್ರೀಯರು ಪುರುಷನಷ್ಟೇ ಸಮಾನರು ಅದಕ್ಕಾಗಿ ಆಸ್ತಿಯಲ್ಲಿ ಪುರುಷರಿಗೆ ದೊರೆಯುವಷ್ಟು ಪಾಲು ಸ್ತ್ರೀಯರಿಗೂ ದೊರೆಯಬೇಕೆಂದು ಅಭಿಪ್ರಾಯಪಟ್ಟರು. ಅದಕ್ಕಾಗಿ ಅವನು 'ಪುರುಷರ ಗೌರವವು' 'ಕ್ರೈಸ್ತ'ನ ರೂಪದಲ್ಲಿರುವಂತೆ ಸ್ತ್ರೀಯ ಗೌರವವು 'ಕ್ರಿಸ್ತ' ಮಾತೆಯ ರೂಪದಲ್ಲಿದೆ ಎಂದು ಆತ ಸಾರಿದನು.[೪೭]

ಆದರೂ ಹೆಣ್ಣಿನ ಬಗ್ಗೆ ಅಪನಂಬಿಕೆ ಹೊಂದಿದ್ದ ಧಾರ್ಮಿಕ ನಾಯಕರು ಮೇರಿಯ ವೈಭವೀಕರಣಕ್ಕೆ ವಿರೋಧ ವ್ಯಕ್ತಪಡಿಸಿದರು. ಆ ಮೂಲಕ ಸ್ತ್ರೀ ವಿರೋಧಿ ಚಿಂತನೆಯನ್ನು ಧರ್ಮದಲ್ಲಿ ಬೆಳಸಿದರು. ಥಾಮಸ್ ಆಕ್ವಿನಿಸ್ ಎಂಬುವವನು "ನಿಸರ್ಗದಿಂದಲೇ ಹೆಣ್ಣು ಗಂಡಿಗಿಂತ ದುರ್ಬಲಳು ದೇವರ ನಿಯಮವು ಕೂಡ ಇದೇ ಆಗಿದೆ. ವರ್ಜಿನ್ ಮೇರಿ ಕೂಡ ಇದಕ್ಕೆ ಅಪವಾದವಲ್ಲ. ಅವಳು ತನ್ನ ಪುತ್ರನಿಂದ ಉದ್ದಾರಗೊಂಡವಳು" ಎಂದು ಥಾಮಸ್ ಆಕ್ವಿನಸ್ ಸಾರಿದ ಆ ಮೂಲಕ ಸ್ತ್ರೀಯರಿಗೆ ಗೌರವವು ಪುರುಷರಿಂದ ಸಂದುತ್ತದೆ. ಅವರು ಪುರುಷರ ಅಧೀನದಲ್ಲಿರಬೇಕು. ಪುರುಷರ ಸೇವಕರಾಗಿ ಕಾರ್ಯನಿರ್ವಹಿಸಬೇಕು, ಇದು ಸೃಷ್ಟಿಯ ನಿಯಮ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ಮುಂದೆ ಧರ್ಮದಲ್ಲಿ ವಿಭಜನೆಯಾಗಿ ಕ್ಯಾಥೊಲಿಕ್ ಮತ್ತು ಪ್ರೊಟೆಸ್ಟೆಂಟ್ ಪಂಥಗಳು ಹುಟ್ಟಿಕೊಂಡವು. ಈ ಪಂಥಗಳು ಸಹ ಸ್ತ್ರೀಯರ ಸ್ಥಾನಮಾನವನ್ನು ಸುಧಾರಿಸುವಲ್ಲಿ ಸಫಲವಾಗಲಿಲ್ಲ. ಕ್ಯಾಥಲಿಕ್ ಚರ್ಚ್ ಹೆಣ್ಣಿಗೆ ಶಿಕ್ಷಣ, ಸನ್ಯಾಸಕ್ಕೆ ಅವಕಾಶ ನೀಡಬೇಕೆಂದು ಪ್ರತಿಪಾದಿಸಿದರೆ ಸುಧಾರಣಾವಾದಿ ಚರ್ಚ್, ಆ ಅವಕಾಶಗಳನ್ನು ಕಸಿದುಕೊಂಡು ಹೆಂಗಸರು ಗಂಡಸಿನ ಸೇವೆ ಮಾಡಬೇಕೆಂಬುದೇ ದೇವರ ಆದೇಶವೆಂದು ಸಾರಿತು. ಆ ಮೂಲಕ ಅವಳನ್ನು ಸಂಪನ್ಮೂಲಗಳ ಪಡೆಯುವಿಕೆಯಿಂದ ದೂರ ಮಾಡಿ ಪುರುಷರ ಸೇವೆ ಮಾಡುವಂತೆ ಆದೇಶಿಸಿತು. ಹೀಗೆ ಕ್ರೈಸ್ತ ಧರ್ಮ ಕೂಡ ಮಹಿಳೆಯರಿಗೆ ಆಸ್ತಿ ಮತ್ತು ಸಂಪನ್ಮೂಲಗಳು ದೊರಕುವ ರೀತಿಯಲ್ಲಿ ಧಾರ್ಮಿಕ ವಿಚಾರಗಳನ್ನು ಬಿತ್ತಿ ಮಹಿಳೆಯರು ಪುರುಷರ ಅಧೀನದಲ್ಲಿರಬೇಕೆಂದು ಹಾಗೂ ಆರ್ಥಿಕ ಸ್ವಾತಂತ್ರ್ಯವನ್ನು ಹೊಂದಬಾರದೆಂದು ನಿರ್ಬಂಧವನ್ನು ಹೇರುವ ಮೂಲಕ ಅವಳನ್ನು ಪುರುಷರ ಅಧೀನದಲ್ಲಿರುವಂತೆ ಮಾಡಿತು.[೮೮]

ಜಗತ್ತಿನಲ್ಲಿಯೇ ಶ್ರೀಮಂತರ ಮಧ್ಯಮವರ್ಗದ ವರ್ತಕರ ಧರ್ಮವಾದ ಇಸ್ಲಾಂ ಧರ್ಮವು ಮಹ್ಮದ್ ಪೈಗಂಬರ್‌ರಿಂದ ಹುಟ್ಟಿಕೊಂಡಿತು. ಸ್ತ್ರೀ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿಯೇ ಬೆಳೆದ ಪೈಗಂಬರ್ ಅವರಿಂದ ಬೆಳೆದ ಈ ಧರ್ಮ ಸ್ತ್ರೀಯರಿಗೆ ಉನ್ನತ ಸ್ಥಾನಮಾನವನ್ನು ನೀಡಿತ್ತು ಹಾಗೂ ಅವರಿಗೆ ಆಸ್ತಿಯ ಹಕ್ಕು ಮತ್ತು ವ್ಯಾವಹಾರಿಕ ಸ್ವಾತಂತ್ರ್ಯವನ್ನು ನೀಡಿತ್ತು. ಪೈಗಂಬರ್‌ರ ಪತ್ನಿ ಖದಿಜಾ ಮತ್ತು ಅವನ ತಾಯಿ ಸ್ವತಃಹ ವ್ಯಾಪಾರಿಗಳಾಗಿದ್ದು ಆರ್ಥಿಕ ಸ್ವಾತಂತ್ರ್ಯವನ್ನು ಪಡೆದಿದ್ದುದೇ ಇದಕ್ಕೆ ಆಧಾರವಾಗಿದೆ. ಈ ಹಿನ್ನೆಲೆಯಲ್ಲಿ ಬೆಳೆದ ಪೈಗಂಬರ್ ಧರ್ಮದ ಮೂಲಕ ಮಹಿಳೆ ಆಸ್ತಿ ಹಕ್ಕು ಮತ್ತು ವ್ಯವಹಾರ ಮಾಡಲು ಅರ್ಹಳು ಎಂದು ಬೋಧಿಸಿದರು. ಆ ಮೂಲಕ ಮಹಿಳೆಗೆ ಆರ್ಥಿಕ ಸ್ಥಾನವನ್ನು ದೊರಕಿಸಿಕೊಟ್ಟರು.

ಆದರೆ ಪ್ರವಾದಿಯ ನಂತರ ಬಂದ ಧಾರ್ಮಿಕ ಚಿಂತಕರು ಧರ್ಮದಲ್ಲಿ ಅನೇಕ ಬದಲಾವಣೆಗಳನ್ನು ಜಾರಿಗೆ ತಂದರು. ಮಾತೃವಂಶ ಮೂಲಕ ಗುರುತಿಸುತ್ತಿದ್ದ ವಂಶಮೂಲ ನಿಂತು ಪಿತೃಪ್ರಧಾನ ವ್ಯವಸ್ಥೆ ಜಾರಿಗೆ ಬಂದಿತು. ಹೀಗಾಗಿ ತಂದೆಯಿಂದ ಗುರುತಿಸುವ 'ಪಿತೃವಂಶ ಮೂಲ' ರೂಢಿಗೆ ಬಂದಿತು.

ಇದರಿಂದಾಗಿ ಆಸ್ತಿಯು ತಂದೆಯಿಂದ ಮಗನಿಗೆ ವರ್ಗಾವಣೆಯಾಯಿತು. ಇದರ ಪರಿಣಾಮವಾಗಿ ಸ್ತ್ರೀಯರು 'ಆಸ್ತಿಹಕ್ಕಿ'ನಿಂದ ಮತ್ತು ವ್ಯವಹಾರದಿಂದ ದೂರ ಉಳಿಯುವಂತಾಯಿತು. ಸಂಪತ್ತು ಮತ್ತು ವಾಣಿಜ್ಯ ವ್ಯಾಪಾರದಿಂದ ವಂಚಿತರಾಗಿ ಆರ್ಥಿಕ ಭದ್ರತೆಗಾಗಿ ಪುರುಷರನ್ನು ಅವಲಂಬಿಸುವಂತಾಯಿತು. ಹೆಂಡತಿಗೆ ಒಮ್ಮೆಗೆ ಒಬ್ಬನೇ ಪತಿ ಎಂಬ ನಿಯಮವನ್ನು ರೂಢಿಸಿ ಗಂಡಿಗೆ ಬಹುಪತ್ನಿತ್ವಕ್ಕೆ ಅವಕಾಶವನ್ನು ಮಾಡಿಕೊಟ್ಟರು. ಧರ್ಮದ ಹೆಸರಿನಲ್ಲಿ ಮಹಿಳೆಯ ಚಲನೆಯ ಮೇಲೆ ಅನೇಕ ನಿರ್ಬಂಧಗಳನ್ನು ಹೇರಿದರು. ಅವುಗಳಲ್ಲಿ 'ನಿಕಾಹ್' (ವಿವಾಹ) ಒಂದು. ನಿಕಾಹ್ ಎಂದರೆ ಸಂಭೋಗ, ಸಂತಾನೋತ್ಪತ್ತಿಗಾಗಿ ಮಾಡಿಕೊಂಡ ಕಾನೂನು ಒಪ್ಪಂದ ಎಂದು ಅರ್ಥ. ಅಲ್ಲದೆ 'ಪರದ' ಪದ್ಧತಿ ಮತ್ತು 'ತಲ್ಲಾಕ್' ಎಂಬ ಪದ್ಧತಿಗಳು ಪ್ರಮುಖವಾಗಿದ್ದು ಅವುಗಳ ಮೂಲಕ ಮಹಿಳೆಯನ್ನು ಪುರುಷರ ಆಧೀನದಲ್ಲಿ ಇಡುವ ಮತ್ತು ಅವಳ ಮೇಲೆ ನಿಯಂತ್ರಣ ಸಾಧಿಸುವ ಕಾರ್ಯ ಮುಂದುವರೆಯಿತು. ಪೈಗಂಬರ್ ಸ್ತ್ರೀಯರಿಗೆ ಧಾರ್ಮಿಕ ಮತ್ತು ಆರ್ಥಿಕ ಜೀವನದಲ್ಲಿ ಸಮಾನ ಅವಕಾಶ ನೀಡಿದರೂ ಮುಂದೆ ಬಂದ ಧಾರ್ಮಿಕ ಚಿಂತಕರು ಅದನ್ನು ವಿರೋಧಿಸಿ ಮಹಿಳೆಯರನ್ನು ಎರಡನೇ ದರ್ಜೆಗೆ ಇಳಿಸುವ ಮೂಲಕ ಅವರನ್ನು ಪುರುಷರ ಸೇವಕರೆಂದು ಸಾರಿದರು. ಅಲ್ಲದೆ ಅವರ ಸ್ವಾತಂತ್ರ್ಯವನ್ನು ಹರಣ ಮಾಡಿದರು.[೪೯]

ವೈದಿಕ ಧರ್ಮದಲ್ಲಿನ ನ್ಯೂನತೆಗಳ ವಿರುದ್ಧ ಸಿಡಿದೆದ್ದು ಜನಸಾಮಾನ್ಯರಿಗೆ ಮತ್ತು ಮಹಿಳೆಯರಿಗೆ ಮೋಕ್ಷದ ದಾರಿಯನ್ನು ತೋರಿದ ಹಾಗೂ ಸ್ತ್ರೀ ಪುರುಷರು ಸಮಾನರು ಎಂದು ಸಾರಿದ ಜೈನ ಮತ್ತು ಬೌದ್ಧ ಧರ್ಮಗಳು ಮಹಾವೀರ ಮತ್ತು ಗೌತಮ ಬುದ್ಧನಿಂದ ಸ್ಥಾಪಿತವಾದವು. ಸತ್ಯ, ಅಹಿಂಸೆಗೆ ಪ್ರಾಮುಖ್ಯತೆ ಕೊಟ್ಟು ಅನ್ಯಮಾರ್ಗದಿಂದ ಗಳಿಸಿದ 'ಸಂಪತ್ತು' ಅಥವಾ 'ಆಸ್ತಿ' ಮೋಕ್ಷವನ್ನು ಉಂಟು ಮಾಡುವುದಿಲ್ಲವೆಂದು ಸಾರಿದವು. ಅಲ್ಲದೆ 'ಸತ್ಯ' ಮತ್ತು 'ಅಹಿಂಸೆ'ಯ ಮೂಲಕ ಸ್ತ್ರೀಯರು, ಶೂದ್ರರು ಸಹ ಮೋಕ್ಷವನ್ನು ಪಡೆಯಬಹುದೆಂದು ಬೋಧಿಸಿದವು. ಅದಕ್ಕಾಗಿ ಈ ಧರ್ಮಗಳು ಮಹಿಳೆಯರಿಗೆ ಮತ್ತು ಶೂದ್ರರಿಗೆ ಸನ್ಯಾಸ ದೀಕ್ಷೆಯನ್ನು ನೀಡಿ, ಭಿಕ್ಷುಣಿಯರ ಸಂಘಗಳನ್ನು ಕಟ್ಟಿಕೊಡುವ ಮೂಲಕ ಮಹಿಳೆಯರು ಪುರುಷರಿಗೆ ಸಮಾನವಾಗಿ ಬೆಳೆಯಲು ಅವಕಾಶ ಮಾಡಿಕೊಟ್ಟವು. ಅಲ್ಲದೆ ಬೌದ್ಧ ಧರ್ಮ ಮಹಿಳೆಯರು ಧರ್ಮ ಪ್ರಸಾರ ಕಾರ್ಯದಲ್ಲಿ ಭಾಗವಹಿಸಲು ಅವಕಾಶವನ್ನು ನೀಡಿತು. ಈ ಎರಡು ಧರ್ಮಗಳು ನಿಸರ್ಗದಲ್ಲಿ ದೊರೆಯುವ 'ಸಂಪನ್ಮೂಲ'ಗಳನ್ನು ಪಡೆಯಲು ಸ್ತ್ರೀ-ಪುರುಷರು ಸಮಾನರು ಆದರೆ ಹಿಂಸೆಯ ಮಾರ್ಗ, ಹಿಡಿದು ಬೇರೆಯವರ ಪಾಲನ್ನು ಕಸಿದು ಕೊಳ್ಳುವುದು ಅಪರಾಧ ಎಂದು ಸಾರಿದವು.

ಸಮಾನತೆ ಸಾರಿದ ಈ ಧರ್ಮಗಳು ಕೂಡ ಮಹಿಳೆಯರ ಬಗ್ಗೆ ಅನಾಸಕ್ತಿ ಮತ್ತು ತಿರಸ್ಕಾರ ಭಾವನೆಯನ್ನು ತಾಳಿರುವುದು ಕಂಡುಬರುತ್ತದೆ. ದಿಗಂಬರ ಜೈನ ಪಂಥವು ಸ್ತ್ರೀಯರಿಗೆ ಮೋಕ್ಷವು ಒಂದೇ ಜನ್ಮದಲ್ಲಿ ಸಿಗುವುದಿಲ್ಲ ಎಂದು ಅದಕ್ಕಾಗಿ ಅವಳು ಪುರ್ನಜನ್ಮಪಡೆಯಬೇಕೆಂದು ಸಾರಿತು. ವಂಚಕ

ತನವು ಸ್ತ್ರೀ 'ಸಹಜ ಗುಣ', ತಪಸ್ಸು, ಧ್ಯಾನ, ಸದಾಚಾರ ಮತ್ತು ಧರ್ಮೋಪದೇಶಗಳು ಸಾಧುಗಳ ಸಹಜ ಗುಣ ಎಂಬ ತಾರತಮ್ಯ ಭಾವನೆಯನ್ನು ವ್ಯಕ್ತಪಡಿಸಿದೆ. ಈ ಎರಡು ಧರ್ಮಗಳಲ್ಲಿ ಭಿಕ್ಷುಣಿ ಮತ್ತು ಭಿಕ್ಷುಗಳ ನಡುವೆ ತಾರತಮ್ಯ ಇದ್ದದ್ದು ಕಂಡುಬರುತ್ತಿದೆ. ಭಿಕ್ಷುಣಿಯರು ಭಿಕ್ಷುಗಳ ಆಶ್ರಯದಲ್ಲಿರಬೇಕು ಮತ್ತು ಭಿಕ್ಷುಣಿಯರಿಗಿಂತ ಭಿಕ್ಷುಗಳು ಸರ್ವಶ್ರೇಷ್ಠರು ಎಂಬ ಭಾವನೆ. ಧರ್ಮದಲ್ಲಿದ್ದ ಲಿಂಗತಾರತಮ್ಯಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ಈ ಧರ್ಮಗಳು ಭಿಕ್ಷುಣಿಯರ ಚಲನೆಗೆ ಸ್ವಾತಂತ್ರ್ಯವನ್ನು ನಿರ್ಬಂಧಿಸಿದ್ದವಲ್ಲದೆ ಅವರು ಭಿಕ್ಷುಗಳ ಆಧೀನದಲ್ಲಿರಬೇಕೆಂದು ನಿಯಮ ರೂಪಿಸಿದ್ದವು. ಹೀಗಾಗಿ ಭಿಕ್ಷುಣಿಯರು ಸ್ವತಂತ್ರವಾಗಿ ಓಡಾಡುವಂತಿರಲಿಲ್ಲ. ಅವರು ಗುಂಪಾಗಿ ಇಲ್ಲದೆ ಭಿಕ್ಷುಗಳ ಜೊತೆಯಲ್ಲಿ ಓಡಾಡಬೇಕಿತ್ತು. ಮತ್ತು ನವ ಭಿಕ್ಷುಣಿಯ ದೀಕ್ಷೆಗೆ ಎಲ್ಲ ಭಿಕ್ಷು ಭಿಕ್ಷುಣಿಯರು ಹಾಜರಿರುವುದು ಕಡ್ಡಾಯವಾಗಿತ್ತು. ಆದರೆ ನವ ಭಿಕ್ಷುವಿನ ದೀಕ್ಷೆಗೆ ಕೇವಲ ಭಿಕ್ಷುಗಳು ಇದ್ದರೆ ಸಾಕಾಗುತ್ತಿತ್ತು ಹಾಗೂ ಭಿಕ್ಷುಣಿಯರು ಭಿಕ್ಷುಗಳಿಗೆ ಎದ್ದುನಿಂತು ಗೌರವ ನೀಡಬೇಕಾಗುತ್ತಿತ್ತು. ಭಿಕ್ಷು ಭಿಕ್ಷುಣಿಯರಿಗಿಂತ ಕಿರಿಯವನಾದರೂ ಭಿಕ್ಷುಣಿ ಎದ್ದುನಿಂತು ಗೌರವ ಸೂಚಿಸುವ ಪದ್ಧತಿಗಳು ಈ ಧರ್ಮಗಳಲ್ಲಿ ಜಾರಿಯಲ್ಲಿದ್ದವು. ಈ ಎಲ್ಲ ಪದ್ಧತಿ ಆಚರಣೆಗಳು ಸ್ತ್ರೀಯರು ಪುರುಷರ ಅಧೀನರು ಮತ್ತು ಅವರಿಗಿಂತ ಕಡಿಮೆ ಧಾರ್ಮಿಕ ಸ್ಥಾನಮಾನ ಹೊಂದಿದವರು ಎಂಬುದನ್ನು ಬಿಂಬಿಸುತ್ತವೆ. ಹೀಗಾಗಿ ಈ ಧರ್ಮಗಳಲ್ಲಿ ಸಹ ಪುರುಷಕೇಂದ್ರಿತ ಚಿಂತನೆ ಮತ್ತು ಸ್ತ್ರೀವಿರೋಧಿ ಚಿಂತನೆಗೆ ಒಳಗಾಗಿರುವುದು ಕಂಡುಬರುತ್ತದೆ.[೫೦]

ಮರಣಶಯ್ಯ ಹಂತದಲ್ಲಿದ್ದ ಬುದ್ಧನು ತನ್ನ ಶಿಷ್ಯ ಆನಂದನಿಗೆ ಹೇಳಿದನೆಂದು ನಂಬಲಾದ ಸಲಹೆಯನ್ನು ನೋಡಿದರೆ ಬೌದ್ಧ ಧರ್ಮ ಮತ್ತು ಬುದ್ಧ ಸಹ 'ಪುರುಷಕೇಂದ್ರಿತ' ಮತ್ತು 'ಸ್ತ್ರೀವಿರೋಧಿ' ಚಿಂತನೆಗೆ ಒಳಗಾಗಿರುವುದು ಕಂಡುಬರುತ್ತದೆ. "ಹೆಂಗಸರತ್ತ ನೋಡಬೇಡ, ಅವರ ಜೊತೆ ಮಾತನಾಡಬೇಡ, ಅವರು ಶೀಘ್ರಕೋಪಿಗಳು, ಅವರಲ್ಲಿ ರಾಗೋದ್ರೇಕಗಳು ತೀವ್ರವಾಗಿರುತ್ತವೆ. ಅವರು ಅಸೂಯೆಪರರು, ಆದ್ದರಿಂದ ಸಾರ್ವಜನಿಕ ಸಭೆಗಳಲ್ಲಿ ಸ್ತ್ರೀಯರಿಗೆ ಸ್ಥಾನವಿಲ್ಲ, ಅವರು ವ್ಯವಹಾರ ನಡೆಸಲಾರರು, ಯಾವುದೇ ವೃತ್ತಿಯಿಂದ ತಮ್ಮ ಜೀವನ ನಿರ್ವಹಣೆ ಮಾಡಿಕೊಳ್ಳಲಾರರು" ಎಂದು ಆನಂದನಿಗೆ ಸಲಹೆ ನೀಡದನು. ಈ ಹೇಳಿಕೆಯು ಮಹಿಳೆ ಆರ್ಥಿಕ ಚಟುವಟಿಕೆ ಕೈಗೊಳ್ಳಲು ಅಶಕ್ತಳು ಹಾಗಾಗಿ ಅವಳು ಪುರುಷನನ್ನು ಅವಲಂಬಿಸುತ್ತಾಳೆ. ಆದ್ದರಿಂದ ಪುರುಷರು ಅವಳ ಬಗ್ಗೆ ಜಾಗೃತರಾಗಿರಬೇಕು ಅಲ್ಲದೆ ಅವಳನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕೆಂಬ ಅಂಶವನ್ನು ವ್ಯಕ್ತಪಡಿಸುತ್ತಿದೆ.[೫೧] ಈ ಎಲ್ಲ ಅಂಶಗಳನ್ನು ಗಮನಿಸಿದರೆ ಜೈನ ಮತ್ತು ಬೌದ್ಧ ಧರ್ಮಗಳು ಬೇರೆ ಧರ್ಮಗಳಿಗಿಂತ ಉನ್ನತವಾದ ಸ್ಥಾನಮಾನ ಮತ್ತು ಸಮಾನ ಅವಕಾಶಗಳನ್ನು ಸ್ತ್ರೀಯರಿಗೆ ನೀಡಿರುವುದು ಕಂಡುಬರುತ್ತಿದೆ. ಆದರೂ ಈ ಧರ್ಮಗಳು ಲಿಂಗತಾರತಮ್ಯವನ್ನು ಎಲೆಮರೆ ಕಾಯಿಯಂತೆ ಬಿಂಬಿಸಿರುವುದು ತಿಳಿದುಬರುತ್ತಿದೆ.

ಪ್ರಪಂಚದ ಎಲ್ಲ ಧರ್ಮಗಳನ್ನು ಅವಲೋಕಿಸಿದರೆ ಅವು ಮಹಿಳೆಗೆ 'ಆಸ್ತಿಹಕ್ಕು' ಮತ್ತು 'ಸಂಪನ್ಮೂಲ'ಗಳು ದೊರಕದ ರೀತಿಯಲ್ಲಿ ಧಾರ್ಮಿಕ ಆಚರಣೆಗಳನ್ನು ರೂಪಿಸಿರುವುದು ಕಂಡುಬರುತ್ತದೆ. ಆಧುನಿಕ ಯುಗದಲ್ಲಿಯೂ ಮಠಮಾನ್ಯ, ಚರ್ಚು, ಮಸೀದಿ ಮತ್ತು ವಿಹಾರ-ಬಸಿದಿಗಳ 'ಆಸ್ತಿ' ಮತ್ತು 'ಸಂಪನ್ಮೂಲ'ಗಳು ಪುರುಷ ಧಾರ್ಮಿಕ ಮುಖಂಡರ ಒಡೆತನದಲ್ಲಿರುವುದು ಕಂಡುಬರುತ್ತದೆ. ಇದು ಪುರುಷರು ಆರ್ಥಿಕ ಸಂಪತ್ತಿನ ಒಡೆಯರು ಮತ್ತು ಸ್ತ್ರೀಯು ಆಸ್ತಿ ಹೊಂದಲು ಅನರ್ಹಳು ಮತ್ತು ಪುರುಷನ ಸೇವಕಳು ಎಂಬ ಅಂಶ ವ್ಯಕ್ತವಾಗುತ್ತದೆ. ಈ ಕಾರಣದಿಂದಾಗಿ ಮಹಿಳೆಯನ್ನು ಆರ್ಥಿಕ ಅಂಶದಿಂದ ಹೊರ ಇಡುವ ಹುನ್ನಾರ ಎಲ್ಲ ಧರ್ಮಗಳಲ್ಲಿ ನಡೆದಿರುವುದು ತಿಳಿದು ಬರುತ್ತದೆ.

ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಹಿಸುವ ಸಾಮಾಜಿಕ ಸಂಸ್ಥೆಗಳಾದ ವಿವಾಹ, ಕುಟುಂಬ, ಶಿಕ್ಷಣ ವ್ಯವಸ್ಥೆ ಮತ್ತು ಧರ್ಮ ಮಹಿಳೆಗೆ ಆಸ್ತಿ ಮತ್ತು ಸಂಪನ್ಮೂಲಗಳು ದೊರಕದಂತೆ ಅನೇಕ ವಿಧದ ಪದ್ಧತಿ, ರೂಢಿ, ಸಂಪ್ರದಾಯ ಮತ್ತು ಆಚರಣೆಗಳನ್ನು ಜಾರಿಗೊಳಿಸುವ ಮೂಲಕ ಅವಳನ್ನು ಆರ್ಥಿಕ ಅಂಶದಿಂದ ದೂರ ಮಾಡಿ ಪುರುಷರ ಅಧೀನದಲ್ಲಿ ಪುರುಷಕೇಂದ್ರಿತ ವ್ಯವಸ್ಥೆಯನ್ನು ಒಪ್ಪಿಕೊಂಡು ಬದುಕನ್ನು ಸಾಗಿಸುವ ಪರಿಸ್ಥಿತಿಯನ್ನು ನಿರ್ಮಿಸಿದೆ. ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಗೆ ಸ್ಥಾನ ಇಲ್ಲದಂತೆ ಮಾಡಿ ಪುರುಷಕೇಂದ್ರಿತ ಆರ್ಥಿಕ ಸಂರಚನೆಯನ್ನು ರೂಪಿಸಿದೆ. ಹೀಗಾಗಿ ಆರ್ಥಿಕ ಪರಿಕಲ್ಪನೆಗಳು ಸಹ ಮಹಿಳೆಯನ್ನು, ಅವಳ ದುಡಿಮೆಯನ್ನು ಭಿನ್ನವಾಗಿ ಗ್ರಹಿಸುವಂತೆ ಮಾಡಿವೆ.

**ಅಡಿಟಿಪ್ಪಣಿಗಳು**

೧. ಸೇತುರಾವ್(ಸಂ), ೨೦೦೧, ನವಕರ್ನಾಟಕ ಜ್ಞಾನ ವಿಜ್ಞಾನ ಕೋಶ, ಪು.೩೮

೨. ತಂಬಂಡ ವಿಜಯ್ ಪೂಣ್ಣಚ(ಸಂ), ೨೦೦೧, ಚರಿತ್ರೆ ವಿಶ್ವಕೋಶ ೪, ಪ್ರಾಗೈತಿಕ ಜಗತ್ತು, ಪು.೭೫-೭೭

೩. ಶ್ರೀಮತಿ ಎಚ್.ಎಸ್.(ಅನು), ೨೦೦೮, ದ ಸೆಕೆಂಡ್‌ಸೆಕ್ಸ್, ಅಲೆಮಾರಿಗಳು, ಸಿಮೋನ್ ದ ಬೋವಾ(ಮೂಲ), ಪು.೭೩-೭೬

೪. ಅದೇ, ಪು..೭೫-೭೮

೫. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು-ಹೆಂಗಸು, ಪುರುಷ ಸಂಕಥನದಲ್ಲಿ ದೊರಕುವ ಕಲ್ಪನೆ ಮಹಿಳಾ ಚರಿತ್ರೆ, ಪು.೨೩-೨೪,

೬. ತಂಬಂಡ ವಿಜಯ್ ಪೂಣ್ಣಚ(ಸಂ), ೨೦೦೧, ಚರಿತ್ರೆ ವಿಶ್ವಕೋಶ ೪, ಪು.೭೭-೭೮

೭. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು-ಹೆಂಗಸು, ಪು.ಸಂ.೨೪

೮. ಶ್ರೀಮತಿ ಎಚ್.ಎಸ್.(ಅನು), ೨೦೦೮, ದ ಸೆಕೆಂಡ್‌ಸೆಕ್ಸ್, ಪು.೮೬-೯೪

೯. ನಾರಾಯಣ ಎಂ., ೨೦೦೫, ಸಮಾಜಶಾಸ್ತ್ರ, ವಿವಾಹ ಸಂಸ್ಥೆ, ಪು.೯೨

೧೦. ಅದೇ, ಪು.ಸಂ.೯೩

೧೧. ಶಂಕರರಾವ್ ಚ.ನ., ೨೦೦೫, ಸಮಾಜಶಾಸ್ತ್ರದ ಮೂಲತತ್ವಗಳು, ಪು.ಸಂ.೩೪

೧೨. ದುಬೆ ಎಸ್.ಸಿ., ೧೯೯೦, ಇಂಡಿಯನ್ ಸೊಸೈಟಿ, ಫ್ಯಾಮಿಲಿ ಆ್ಯಂಡ್ ಕಿನ್‌ಶಿಪ್, ಪು.೬೪-೮೯

೧೩. ಇಂದಿರಾ ಆರ್., ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ-ವಿವಾಹ ಮತ್ತು ಲಿಂಗ ವ್ಯವಸ್ಥೆ, ಪು.೩೧-೩೨

೧೪. ಶ್ರೀಮತಿ ಎಚ್.ಎಸ್.(ಸಂ), ೨೦೦೩, ಮಹಿಳಾ ಅಧ್ಯಯನ, ದಕ್ಷಿಣಾಯನ ಸಂಚಿಕೆ, ಬಿ.ಶೇಷಾದ್ರಿ, *ಮಹಿಳೆ ವಿವಾಹ ಮತ್ತು ಕುಟುಂಬ ಒಂದು ಪ್ರಕ್ರಿಯೆ,* ಪು.೬೨-೬೩

೧೫. ಶಂಕರರಾವ್ ಚ.ನ., ೨೦೦೫, ಪ್ರಿನ್ಸಿಪಲ್ಸ್ ಆಫ್ ಸೋಸಿಯಾಲಜಿ, *ಮ್ಯಾರೇಜ್ ಆ್ಯಂಡ್ ಫ್ಯಾಮಿಲಿ,* ಪು.೨೦೪

೧೬. ಭೈರಪ್ಪ ಕೆ., ೧೯೯೮, ಪ್ರಿನ್ಸಿಪಲ್ಸ್ ಆಫ್ ಸೋಸಿಯಾಲಜಿ, ಸೋಸಿಯಲ್ ಇನಿಸ್ಟಿಟ್ಯುಷನ್ಸ್, ಪು.೨೬೫- ೨೬೬

೧೭. ಶ್ರೀಮತಿ ಎಚ್.ಎಸ್.(ಸಂ), ೨೦೦೩, ಮಹಿಳಾ ಅಧ್ಯಯನ, ದಕ್ಷಿಣಾಯನ ಸಂಚಿಕೆ, ವನಜ ಎಂ., *ಕುಟುಂಬ ಮತ್ತು ಮಹಿಳೆ,* ಪು.೬೨-೬೩

೧೮. ಜಿಂಗನ್ ಎಂ.ಎಲ್., ೨೦೦೯, ದ ಎಕನಾಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್ ಹುಮನ್ ಕ್ಯಾಪಿಟಲ್ ಫಾರ್ಮೇಷನ್ ಆ್ಯಂಡ್ ಮ್ಯಾನ್‌ಪವರ್ ಪ್ಲಾನಿಂಗ್, ಪು.೩೮೭-೩೯೦

೧೯. ಶ್ರೀಮತಿ ಎಚ್.ಎಸ್.(ಅನು), ೨೦೦೮, ದ ಸೆಕೆಂಡ್‌ಸೆಕ್ಸ್, ಅಲೆಮಾರಿಗಳು, ಸಿಮಾನ್ ದ ಬೋವಾ(ಮೂಲ), ಪು.೭೮

೨೦. ಇಂದಿರಾ ಆರ್., ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಕುಟುಂಬ ಮತ್ತು ಲಿಂಗವ್ಯವಸ್ಥೆ, ಪು.೫೨

೨೧. ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಾಮಾಜಿಕತೆ, *ಕುಟುಂಬ ಸಂಸ್ಥೆ ಮತ್ತು ಲಿಂಗ ವ್ಯವಸ್ಥೆ,* ಪು.೩೪-೩೫

೨೨. ಶ್ರೀಮತಿ ಎಚ್.ಎಸ್., ೨೦೦೨, ಚಹರೆ, *ಸಾಮಾಜಿಕ ಚಿಂತನೆಯಲ್ಲಿ ಹೆಣ್ಣು,* ಪು.೪೧-೪೭

೨೩. ಶೇಷಾದ್ರಿ ಬಿ., ೨೦೦೦, ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, *ಮಹಿಳೆ, ವಿವಾಹ, ಮತ್ತು ಕುಟುಂಬ: ಒಂದು ಪ್ರಕ್ರಿಯೆ,* ಪು.೬೪-೬೫

೨೪. ಯಾದವಾಡ ಬಿ.ಎನ್., ೨೦೦೧, ಉದಯೋನ್ಮುಖ ಭಾರತದಲ್ಲಿ ಶಿಕ್ಷಣ, *ಶಿಕ್ಷಣದ ಅರ್ಥ,* ಪು.೧೮

೨೫. ಜಿಂಗನ್ ಎಂ.ಎಲ್., ೨೦೦೯ ಡೆವಲಪ್ ಮೆಂಟಲ್ ಎಕನಾಮಿಕ್ಸ್, *ಮ್ಯಾನ್‌ಪವರ್ ಡೆವಲಪ್‌ಮೆಂಟ್,* ಪು.೩೮೯

೨೬. ಬಕ್ಷೀ ಕೆ.ಎಂ., ೨೦೦೭, ದ ಕಾನ್‌ಸ್ಟಿಟ್ಯೂಷನ್ ಆಫ್ ಇಂಡಿಯಾ, *ಫಂಡ್‌ಮೆಂಟಲ್ ರೈಟ್ಸ್ ಆ್ಯಂಡ್ ಡೈರೆಕ್ಟೀವ್ ಪ್ರಿನ್ಸಿಪಲ್ಸ್ ಆಫ್ ಸ್ಟೇಟ್,* ಪು.೨೬-೯೦

೨೭. ಜ್ಯೋತ್ಸ್ನಾ ಕಾಮತ್, ೧೯೯೯, ಮಹಿಳೆ ಒಂದು ಅಧ್ಯಯನ, ಪು.೩೦-೬೦

೨೮. ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಾಮಾಜಿಕತೆ, ಪು.೮೨-೮೩

೨೯. ನಿರುಪಮ್, ೧೯೯೬, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ಮನುಸ್ಮೃತಿ, ಪು.೮೪

೩೦. ಶ್ರೀಮತಿ ಎಚ್.ಎಸ್.(ಅನು), ೨೦೦೧, ಆಧುನಿಕ ಭಾರತದಲ್ಲಿ ಮಹಿಳೆ, ಮಹಿಳೆಯರಿಗೆ ಶಿಕ್ಷಣ, ಜೆರಾಲ್ಡನ್ ಫೋರ್ಬ್ಸ್(ಮೂಲ), ಪು.೯೫,

೩೧. ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಾಮಾಜಿಕತೆ, *ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆ,* ಪು.೮೪

೩೨. ಶ್ರೀಮತಿ ಎಚ್.ಎಸ್.(ಸಂ), ೨೦೦೦, ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ಎಂ.ಡಿ.ಉಷಾದೇವಿ, *ಶಿಕ್ಷಣ ಕ್ಷೇತ್ರದ ಅಭಿವೃದ್ಧಿ ಯೋಜನೆಗಳು ಮತ್ತು ಮಹಿಳೆ*, ಪು.೭೨-೭೫

೩೩. ಯಾದವಾಡ ಎಸ್.ಬಿ., ೨೦೦೮, ಶಿಕ್ಷಣ ಸರ್ವಶಿಕ್ಷಣ ಅಭಿಯಾನ, ಪು.೧೬೧-೧೬೪

೩೪. ಸುಂದರಂ ಕೆ.ಪಿ.ಎಂ. ಮತ್ತು ರುದ್ರದತ್ತ, ೨೦೦೧, ಇಂಡಿಯನ್ ಎಕನಾಮಿಕ್ಸ್(Five Year Plans), ಪು.೭೪೦

೩೫. ಇಂದಿರಾ ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ, *ಮಹಿಳೆ ಮತ್ತು ಶಿಕ್ಷಣ*, ಪು.೮೯

೩೬. ಅದೇ, ಪು.೮೯-೯೧

೩೭. ಭೈರಪ್ಪ ಕೆ., ೧೯೯೮, ಪ್ರಿನ್ಸಿಪಲ್ಸ್ ಆಫ್ ಸೋಷಿಯಾಲಜಿ, ಪು.೨೯೪-೨೯೫

೩೮. ರಹಮತ್ ತರೀಕೆರೆ(ಸಂ), ೨೦೦೧, ಧರ್ಮ, ಸುಮಿತ್ರಬಾಯಿ ಎನ್., *ಹೆಣ್ಣು*, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ಪು.೪೯೫

೩೯. ಅದೇ, ಪು.೪೯೫-೫೦೫

೪೦. ಅದೇ, ಪು.೪೯೫-೪೯೬

೪೧. ಅದೇ, ಪು.೪೯೬

೪೨. ಅದೇ, ಪು.೪೯೭-೪೯೮

೪೩. ನಿರುಪಮ, ೧೯೯೬, ಧರ್ಮಶಾಸ್ತ್ರಗಳು, *ಸ್ತ್ರೀ ಹಾಗೂ ಶೋಷಣೆ*, ಪು.೨೩-೮೪

೪೪. ಇಂದಿರಾ ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ, *ಧರ್ಮ ಜಾತಿ ಮತ್ತು ಮಹಿಳೆ*, ಪು.೧೦೨-೧೦೫

೪೫. ನಿರುಪಮ, ೧೯೯೬, ಧರ್ಮಶಾಸ್ತ್ರಗಳು, *ಸ್ತ್ರೀ ಹಾಗೂ ಶೋಷಣೆ, ಕೌಟಿಲ್ಯನ ಅರ್ಥಶಾಸ್ತ್ರ*, ಪು.೧೨೦-೧೨೧

೪೬. ಇಂದಿರಾ ಆರ್., ಮಹಿಳೆ ಸಮಾಜ ಮತ್ತು ಸಂಸ್ಕೃತಿ, *ಧರ್ಮ ಜಾತಿ ಮತ್ತು ಮಹಿಳೆ*, ಪು.೧೦೪, ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಾಮಾಜಿಕತೆ, ಪು.೧೩೧

೪೭. ರಹಮತ್ ತರೀಕೆರೆ(ಸಂ), ೨೦೦೧, ಧರ್ಮ, ಸುಮಿತ್ರಬಾಯಿ ಎನ್., *ಹೆಣ್ಣು*, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ಪು.೫೦೧

೪೮. ಅದೇ, ಪು.೫೦೧ ೫೦೨

೪೯. ಅದೇ, ಪು.೫೦೩ ೫೦೪

೫೦. ಅದೇ, ಪು.೫೦೮

೫೧. ಅದೇ, ಪು.೫೦೮

## ಅಧ್ಯಾಯ ಮೂರು

# ಆರ್ಥಿಕತೆಯ ಪರಿಕಲ್ಪನೆಗಳು ಅಥವಾ ಸಾಂಪ್ರದಾಯಿಕ ಅರ್ಥಶಾಸ್ತ್ರದ ಪರಿಕಲ್ಪನೆಗಳು : ಸ್ತ್ರೀವಾದಿ ವಿಶ್ಲೇಷಣೆ

೩.೧ ಮೂಲಭೂತ ಆರ್ಥಿಕ ಸಮಸ್ಯೆಗಳು

೩.೨ ಆರ್ಥಿಕತೆಯ ಪರಿಕಲ್ಪನೆಗಳು

೨.೧ ಉಪಭೋಗ

೨.೨ ಉತ್ಪಾದನೆ

೨.೩ ವಿನಿಮಯ

೨.೪ ವಿತರಣೆ

೩.೩ ದುಡಿಮೆಯ ಅರ್ಥ ಮತ್ತು ಮಹಿಳಾ ದುಡಿಮೆಯ ಸ್ವರೂಪ

೩.೪ ಶ್ರಮವಿಭಜನೆ

೩.೫ ಸ್ತ್ರೀವಾದಿ ವಿಮರ್ಶೆ

ಅಧ್ಯಾಯ ಮೂರು

# ಆರ್ಥಿಕತೆಯ ಪರಿಕಲ್ಪನೆಗಳು ಅಥವಾ ಸಾಂಪ್ರದಾಯಿಕ ಅರ್ಥಶಾಸ್ತ್ರದ ಪರಿಕಲ್ಪನೆಗಳು : ಸ್ತ್ರೀವಾದಿ ವಿಶ್ಲೇಷಣೆ

ಪ್ರಪಂಚದ ಪ್ರತಿಯೊಂದು ರಾಷ್ಟ್ರದ ಜನರು ತಮ್ಮ ಉಪ ಜೀವನಕ್ಕಾಗಿ ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಆ ಆರ್ಥಿಕ ಚಟುವಟಿಕೆಗಳಿಂದ ಅವರು ಸರಕು ಸೇವೆಗಳನ್ನು ಉತ್ಪಾದಿಸುತ್ತಾರೆ. ಹೀಗೆ ಒಂದು ದೇಶದ ಜನರು ಹೇಗೆ ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಮತ್ತು ಅವರು ಹೇಗೆ ಸರಕು ಸೇವೆಗಳನ್ನು ಉತ್ಪಾದಿಸುತ್ತಾರೆ. ಹಾಗೂ ಉತ್ಪಾದನೆಯಿಂದ ಬರುವ ಆದಾಯವನ್ನು ಹೇಗೆ ಹಂಚಿಕೊಳ್ಳುತ್ತಾರೆ ಎಂಬುದನ್ನು ವಿವರಿಸುವುದೇ ಅರ್ಥವ್ಯವಸ್ಥೆಯಾಗಿದೆ. ಇಂತಹ ಅರ್ಥವ್ಯವಸ್ಥೆಯು ಪ್ರಪಂಚದ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ವಿಧದಲ್ಲಿ ಕಂಡು ಬರುತ್ತಿದೆ. ಹಿಂದಿನ ಅಧ್ಯಾಯದಲ್ಲಿ ವಿವರಿಸಿದಂತೆ ಅರ್ಥವ್ಯವಸ್ಥೆಯು ಮುಖ್ಯವಾಗಿ ಮೂರು ವಿಧಗಳಲ್ಲಿ ಅಂದರೆ ೧. ಬಂಡವಾಳಶಾಹಿ ಅರ್ಥವ್ಯವಸ್ಥೆ ೨. ಸಮಾಜವಾದಿ ಅರ್ಥವ್ಯವಸ್ಥೆ ಮತ್ತು ೩. ಮಿಶ್ರ ಅರ್ಥವ್ಯವಸ್ಥೆಗಳಲ್ಲಿ ಕಂಡುಬರುತ್ತದೆ.

ಯಾವುದೇ ರಾಷ್ಟ್ರದ ಅರ್ಥವ್ಯವಸ್ಥೆಯನ್ನು ಗಮನಿಸಿದರೆ ಆ ರಾಷ್ಟ್ರದ ಆರ್ಥಿಕ ಚಟುವಟಿಕೆಗಳು ಆರ್ಥಿಕತೆಯ ಮೂಲ ಪರಿಕಲ್ಪನೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವಿತರಣೆ ಅಥವಾ ಹಂಚಿಕೆ ಎಂಬ ಮೂಲಾಂಶಗಳ ಆಧಾರದ ಮೇಲೆ ನಡೆಯುತ್ತಿವೆ. ಆದರೆ ಅರ್ಥಶಾಸ್ತ್ರದಲ್ಲಿ ಈ ಪರಿಕಲ್ಪನೆಗಳನ್ನು ಪುರುಷಶಾಹಿ ದೃಷ್ಟಿಕೋನದಿಂದ ನೋಡಲಾಗುತ್ತಿದೆ. ಆರ್ಥಿಕ ಚಟುವಟಿಕೆಗಳಲ್ಲಿ ಮಹಿಳೆ ಪುರುಷನಿಗೆ ಸಮಾನವಾಗಿ ಭಾಗವಹಿಸಿದರು ಅವಳ ಆರ್ಥಿಕ ಚಟುವಟಿಕೆಗಳನ್ನು ಅರ್ಥಶಾಸ್ತ್ರದ ಪರಿಧಿಯಿಂದ ದೂರಸರಿಸಲಾಗಿದೆ. ಅಲ್ಲದೆ ಅವಳ ಆರ್ಥಿಕ ಚಟುವಟಿಕೆಗಳನ್ನು(ದುಡಿಮೆ) ಮಾರುಕಟ್ಟೆ ಮೌಲ್ಯದಿಂದ ದೂರಮಾಡಿ ಆ ಚಟುವಟಿಕೆಗಳನ್ನು ಸೇವೆಗಳೆಂದು, ಸಂಗೋಪನ ಕಾರ್ಯಗಳಿಂದ ಪರಿಭಾವಿಸಲಾಗಿದೆ. ಏಕೆಂದರೆ ಅರ್ಥಶಾಸ್ತ್ರದಲ್ಲಿ ಆರ್ಥಿಕತೆ ಎಂಬ ಪದವನ್ನು ಒಂದು ನಿರ್ದಿಷ್ಟ ಅರ್ಥದಲ್ಲಿ ಬಳಸಲಾಗುತ್ತಿದೆ. ಉತ್ಪಾದನಾಂಗಗಳನ್ನು ಸಂಘಟಿಸಿ ಅವುಗಳನ್ನು ಉತ್ಪಾದನಾ ಕ್ರಿಯೆಯಲ್ಲಿ ತೊಡಗಿಸಿ ಸಂಪತ್ತನ್ನು ಅಥವಾ ಸರಕು ಮತ್ತು ಸೇವೆಗಳನ್ನು ಉತ್ಪಾದಿಸುವ ಒಂದು ವ್ಯವಸ್ಥೆಯೇ

ಆರ್ಥಿಕತೆ. ಇದೊಂದು ನಿರಂತರ ಪ್ರಕ್ರಿಯೆಯಾಗಿದೆ. ಸಂಪತ್ತಿನ ಉತ್ಪಾದನೆಯಲ್ಲಿ ತೊಡಗಿದ ಉತ್ಪಾದನಾಂಗಗಳು ಉತ್ಪಾದನೆಯಲ್ಲಿ ತೊಡಗಿದ್ದಕ್ಕಾಗಿ ಪ್ರತಿಫಲವನ್ನು ಪಡೆಯುತ್ತವೆ ಮತ್ತು ಆ ಪ್ರತಿಫಲವನ್ನು ಬಳಸಿಕೊಂಡು ಉತ್ಪಾದಿಸಿದ ಸಂಪತ್ತನ್ನು ಅನುಭೋಗಿಸುತ್ತವೆ. ಹೀಗಾಗಿ ಆರ್ಥಿಕತೆ ಎಂಬುದು ನಿರಂತರವಾಗಿ ನಡೆಯುತ್ತಿರುವ ಪ್ರಕ್ರಿಯೆಯಾಗಿದೆ.

ಆರ್ಥಿಕತೆ ಎಂಬುದು ಸಮಾಜದ ಒಂದು ಭಾಗವಾಗಿದ್ದು ಸಮಾಜ ವ್ಯವಸ್ಥೆಯಲ್ಲಿ ನಡೆಯುವ ಎಲ್ಲ ವಿಧದ ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿದೆ. ಆದರೆ ದುಡಿಮೆಯ ಚಟುವಟಿಕೆಗಳು ಆರ್ಥಿಕತೆಯ ಗಡಿಯನ್ನು ಮೀರಿ ನಡೆಯುತ್ತವೆ. ಹೀಗೆ ಆರ್ಥಿಕತೆಯ ಗಡಿಯಾಚೆ ನಡೆಯುವ ದುಡಿಮೆಯಲ್ಲಿ ಮಹಿಳೆಯರೇ ಅಧಿಕ ಸಂಖ್ಯೆಯಲ್ಲಿ ತೊಡಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತೊಡಗಿರುವ ಹಾಗೂ ಆರ್ಥಿಕತೆಯ ಗಡಿಯ ಅಂಚಿನಲ್ಲಿ ನಡೆಯುವ ದುಡಿಮೆಯ ಚಟುವಟಿಕೆಗಳನ್ನು ಜೈವಿಕವೆಂದು ಪ್ರಾಕೃತಿಕವೆಂದು, ಅವು ಉಪಯೋಗಿ ಮಹತ್ವ ಹೊಂದಿರುತ್ತವೆಂದು ಪರಿಭಾವಿಸಲಾಗಿದೆ. ಆರ್ಥಿಕ ಚೌಕಟ್ಟಿನ ಒಳಗೆ ನಡೆಯುವ ದುಡಿಮೆಯಲ್ಲಿ ಪುರುಷರು ಅಧಿಕ ಸಂಖ್ಯೆಯಲ್ಲಿ ತೊಡಗಿರುವ ಚಟುವಟಿಕೆಗಳನ್ನೇ 'ಉತ್ಪಾದನೆಯೆಂದು' ಅಥವಾ ಆರ್ಥಿಕೋತ್ಪಾದನೆ ಎಂದು ಲಿಂಗ ಸಂಬಂಧಿ ಆಯಾಮದ ಮೇಲೆ ಆರ್ಥಿಕ ಚಟುವಟಿಕೆಗಳನ್ನು ವರ್ಗೀಕರಿಸಲಾಗಿದೆ.

ಆರ್ಥಿಕತೆಯಲ್ಲಿ ಸಾಮಾಜಿಕವಾಗಿ ಮನ್ನಣೆ ಇಲ್ಲದ. ಕೇವಲ ಉಪಯೋಗಿ ಮಹತ್ವವುಳ್ಳ ಚಟುವಟಿಕೆಗಳನ್ನು ಮಹಿಳೆಯರಿಗೆ ಮುಡುಪಾಗಿಡಲಾಗಿದೆ. ವಿಶಾಲಾರ್ಥದಲ್ಲಿ ಇಂತಹ ಚಟುವಟಿಕೆಗಳನ್ನು ಸಂತಾನೋತ್ಪತ್ತಿ ಚಟುವಟಿಕೆಗಳೆಂದು, ಸಂಗೋಪನಾ ಚಟುವಟಿಕೆಗಳೆಂದು ಪರಿಗಣಿಸಲಾಗುತ್ತದೆ. ಇದರಿಂದಾಗಿ ಆರ್ಥಿಕತೆ ಎಂಬುದು ಪುರುಷಪ್ರಧಾನವಾಗಿ ಪುರುಷ ಪ್ರಪಂಚವಾಗಿ ನಿರ್ಮಾಣವಾಗಿದೆ. ಇದರ ಪರಿಣಾಮವಾಗಿ ಮಹಿಳೆಯರು ಆರ್ಥಿಕ ಚಟುವಟಿಕೆಗಳಲ್ಲಿ ಅಥವಾ ಉತ್ಪಾದನಾ ಚಟುವಟಿಕೆಗಳಲ್ಲಿ ನಿರತರಾಗಿದ್ದರೂ ಅವರ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸದೆ ಅದು ಒಂದು ವಿಧದ ಸೇವೆ ಸಂಗೋಪನಾ ಕಾರ್ಯವೆಂದು ವ್ಯಾಖ್ಯಾನಿಸಲಾಗುತ್ತದೆ. ಏಕೆಂದರೆ ಮಹಿಳೆಯರು ಮಾಡುವ ದುಡಿಮೆ ಅಥವಾ ಆರ್ಥಿಕ ಚಟುವಟಿಕೆಗೆ ಉಪಯೋಗಿ ಮಹತ್ವವಿರುತ್ತದೆಯೇ ಹೊರತು ವಿನಿಮಯ ಮಹತ್ವ ಇರುವುದಿಲ್ಲ. ಆದ್ದರಿಂದ ಆರ್ಥಿಕತೆಯಲ್ಲಿ 'ಸಂಪಾದನೆ'ಯನ್ನು ಪುರುಷವರ್ಗಕ್ಕೆ ಮೀಸಲಿಟ್ಟು 'ಸಂಗೋಪನೆ'ಯನ್ನು ಮಹಿಳೆಯರಿಗೆ ಮೀಸಲಿಡಲಾಗಿದೆ. ಹೀಗಾಗಿ ಮಹಿಳೆಯ ಬದುಕು ಎಂಬುದು ಆರ್ಥಿಕತೆಯ ಆಚೆ ನಡೆಯುವ ಒಂದು ಚಟುವಟಿಕೆಯಾಗಿದೆ.

ಹೀಗೆ ಆರ್ಥಿಕತೆಯಲ್ಲಿ ಉಪಯೋಗಿ ಮೌಲ್ಯ ಮತ್ತು ವಿನಿಮಯ ಮೌಲ್ಯಗಳ ಆಧಾರದ ಮೇಲೆ ಉತ್ಪಾದನಾ ಚಟುವಟಿಕೆಗಳನ್ನು ಸಂಪಾದನಾ ಚಟುವಟಿಕೆ ಮತ್ತು ಸಂಗೋಪನಾ ಚಟುವಟಿಕೆಗಳೆಂದು ವಿಂಗಡಿಸಿ ಮಹಿಳೆಯರ ಉತ್ಪಾದನೆಯನ್ನು, ಉತ್ಪಾದನಾ ಚಟುವಟಿಕೆಗಳನ್ನು ನಗಣ್ಯ ಮಾಡಲಾಗುತ್ತದೆ.

ಇದಕ್ಕೆ ಮುಖ್ಯ ಕಾರಣ ಆರ್ಥಿಕತೆಯು 'ಪುರುಷಶಾಹಿ' ಧೋರಣೆಗೆ ಒಳಗಾಗಿರುವುದೇ ಆಗಿದೆ. ಆದ್ದರಿಂದ ಮಹಿಳೆಯ ದುಡಿಮೆ ದುಡಿಮೆಯ ಸಹಭಾಗಿತ್ವ, ಅಸಂಘಟಿತ ವಲಯದಲ್ಲಿ ಅವಳ ದುಡಿಮೆಯ ಸ್ವರೂಪ ಇತ್ಯಾದಿಗಳನ್ನು ತಿಳಿಯುವುದಕ್ಕಿಂತ ಪೂರ್ವದಲ್ಲಿ ಆರ್ಥಿಕತೆಯ ಮೂಲ ಪರಿಕಲ್ಪನೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವಿತರಣೆಯಲ್ಲಿ ಮಹಿಳೆಯನ್ನು ಹೇಗ ಪರಿಭಾವಿಸಲಾಗಿದೆ? ಮಹಿಳೆಯ ದುಡಿಮೆ ಸ್ವರೂಪ ಎಂತಹುದು? ಗೃಹಕೃತ್ಯ ಮತ್ತು ಉದ್ಯೋಗದಲ್ಲಿ ಶ್ರಮ ವಿಭಜನೆ ಯಾವ ವಿಧದಲ್ಲಿದೆ? ಮಹಿಳಾ ಶೋಷಣೆಗೆ ಕಾರಣವಾದ ಅಂಶ ಯಾವುವು? ಎಂಬ ಅಂಶಗಳನ್ನು ತಿಳಿಯುವುದು ಅವಶ್ಯವಿದೆ. ಈ ಎಲ್ಲ ಅಂಶಗಳನ್ನು ಈ ಒಂದು ಅಧ್ಯಾಯದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಮೂಲಭೂತ ಆರ್ಥಿಕ ಪರಿಕಲ್ಪನೆಗಳನ್ನು ವಿಶ್ಲೇಷಣೆಗೆ ಒಳಪಡಿಸುವುದಕ್ಕಿಂತ ಪೂರ್ವದಲ್ಲಿ ಆರ್ಥಿಕತೆಯ ಮೂಲಭೂತ ಸಮಸ್ಯೆಗಳನ್ನು ವಿಶ್ಲೇಷಿಸುವುದು ಅವಶ್ಯವಿದೆ. ಏಕೆಂದರೆ ಪ್ರತಿಯೊಂದು ರಾಷ್ಟ್ರ ತನ್ನಲ್ಲಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಯಾವ ಸರಕುಗಳನ್ನು ಉತ್ಪಾದಿಸಬೇಕು? ಯಾರಿಗಾಗಿ ಉತ್ಪಾದಿಸಬೇಕು ಯಾವ ವಿಧಾನದಿಂದ ಉತ್ಪಾದಿಸಬೇಕು? ಎಂಬುದನ್ನು ನಿರ್ಧರಿಸುವುದು ಅತೀ ಅವಶ್ಯ. ಅದಕ್ಕಾಗಿ ಆರ್ಥಿಕ ಪರಿಕಲ್ಪನೆಗಳಿಗಿಂತ ಪೂರ್ವದಲ್ಲಿ ಮೂಲಭೂತ ಆರ್ಥಿಕ ಸಮಸ್ಯೆಗಳ ವಿಶ್ಲೇಷಣೆಯು ಪ್ರಮುಖವಾಗಿದೆ.

### ೩.೧. ಮೂಲಭೂತ ಆರ್ಥಿಕ ಸಮಸ್ಯೆಗಳು

ಆಧುನಿಕ ಅರ್ಥಶಾಸ್ತ್ರಜ್ಞರ ಪ್ರಕಾರ 'ಕೊರತೆ' ಮತ್ತು 'ಆಯ್ಕೆ' ಎಂಬ ಮೂಲ ಸಮಸ್ಯೆಗಳು ಪ್ರತಿಯೊಂದು ಆರ್ಥಿಕತೆಯನ್ನು ಬಾಧಿಸುತ್ತಿವೆ. ಅಂದರೆ ಕೊರತೆಯಲ್ಲಿರುವ ಹಾಗೂ ಪರ್ಯಾಯ ಉಪಯೋಗಿ ಮಹತ್ವವಿರುವ ಸಂಪನ್ಮೂಲಗಳನ್ನು ಮತ್ತು ಮಾನವನ ಅಪರಿಮಿತ ಬಯಕೆಗಳ ನಡುವೆ ಹೊಂದಾಣಿಕೆ ಮಾಡುವುದು ಆರ್ಥಿಕತೆಯ ಪ್ರಮುಖ ಸಮಸ್ಯೆಯಾಗಿದೆ. ಕಲ್ಯಾಣ ರಾಷ್ಟ್ರದ ಗುರಿಯನ್ನು ಹೊತ್ತ ಪ್ರತಿಯೊಂದು ರಾಷ್ಟ್ರವು ಇತ್ತೀಚೆಗೆ 'ಲಿಂಗ ಸಮಾನತೆ' ತರುವ ನಿಟ್ಟಿನಲ್ಲಿ ತನ್ನ ಸಂಪನ್ಮೂಲಗಳನ್ನು ಕ್ರೋಡೀಕರಿಸಬೇಕಾಗುತ್ತದೆ. ಇದು ಸಹ ಇಂದು ಆರ್ಥಿಕ ಸಮಸ್ಯೆಗಳ ಸ್ವರೂಪವನ್ನು ಪಡೆದಿದೆ. ಆದ್ದರಿಂದಾಗಿ ಪ್ರಪಂಚದ ಎಲ್ಲ ಆರ್ಥಿಕತೆಗಳು ಕೆಲವೊಂದು ಮೂಲಭೂತ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ. ಅಂತಹ ಮೂಲಭೂತ ಸಮಸ್ಯೆಗಳು ಮುಖ್ಯವಾಗಿ ಆರು ಪ್ರಕಾರವಾಗಿವೆ.

ಅವುಗಳೆಂದರೆ

೧. ಏನನ್ನು ಉತ್ಪಾದಿಸಬೇಕು?

೨. ಹೇಗೆ ಉತ್ಪಾದಿಸಬೇಕು?

೩. ಯಾರಿಗಾಗಿ ಉತ್ಪಾದಿಸಬೇಕು?

೪. ಸಂಪನ್ಮೂಲಗಳು ಸರಿಯಾಗಿ ಬಳಸಲ್ಪಡುತ್ತಿವೆಯೇ?

೫. ಪೂರ್ಣ ಉದ್ಯೋಗ ಸಾಧನೆಯ ಸಮಸ್ಯೆ

೬. ಪ್ರಗತಿ ಸಾಧನೆಯ ಸಮಸ್ಯೆ

**೧. ಏನನ್ನು ಉತ್ಪಾದಿಸಬೇಕು?**

ಏನನ್ನು ಉತ್ಪಾದಿಸಬೇಕು ಎಂಬ ಸಮಸ್ಯೆ ಉತ್ಪಾದನೆಯ ಆಯ್ಕೆ ಮತ್ತು ಸಂಪನ್ಮೂಲಗಳ ವಿತರಣೆಗೆ ಸಂಬಂಧಿಸಿದ ಸಮಸ್ಯೆಯಾಗಿದೆ. ಸಾಧನೆ ಸಂಪನ್ಮೂಲಗಳು ಕೊರತೆಯಲ್ಲಿದ್ದು ಅವುಗಳನ್ನು ಒಂದು ಸಮುದಾಯಕ್ಕೆ ಒಂದೇ ಉಪಯೋಗಕ್ಕೆ ವಿನಿಯೋಗಿಸಬಹುದಾಗಿದ್ದರಿಂದ ಮಾನವ ಬಯಸುವ ಎಲ್ಲ ಸರಕು ಸೇವೆಗಳನ್ನು ಅದನ್ನು ಬಯಸುವಷ್ಟು ಪ್ರಮಾಣದಲ್ಲಿ ಉತ್ಪಾದಿಸಲು ಸಾಧ್ಯವಿಲ್ಲ. ಆದುದರಿಂದ ಯಾವ ಸರಕನ್ನು ಉತ್ಪಾದಿಸಬೇಕು? ಮತ್ತು ಅವುಗಳನ್ನು ಯಾವ ಪ್ರಮಾಣದಲ್ಲಿ ಉತ್ಪಾದಿಸಬೇಕು? ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಏಕೆಂದರೆ ಒಂದು ಪ್ರಕಾರದ ವಸ್ತುಗಳನ್ನು ಅರ್ಥಿಕ ಪ್ರಮಾಣದಲ್ಲಿ ಉತ್ಪಾದನೆ ಮಾಡಬೇಕಾದರೆ ಅದಕ್ಕೆ ಹೆಚ್ಚಿನ ಸಂಪನ್ಮೂಲಗಳನ್ನು ಒದಗಿಸಬೇಕಾಗುತ್ತದೆ. ಸಂಪನ್ಮೂಲಗಳು ಮಿತವಾಗಿರುವುದರಿಂದ ಇತರ ಪ್ರಕಾರದ ವಸ್ತುಗಳ ಉತ್ಪಾದನೆಗೆ ಕಡಿಮೆ ಬೀಳುವ ಸಾಧ್ಯತೆ ಇರುತ್ತದೆ. ಆದುದರಿಂದ ಮೊದಲು ಯಾವ ವಸ್ತುಗಳನ್ನು ಉತ್ಪಾದಿಸಬೇಕು ಮತ್ತು ಅವುಗಳನ್ನು ಯಾವ ಪ್ರಮಾಣದಲ್ಲಿ ಉತ್ಪಾದಿಸಬೇಕು ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಸರಕು ಮತ್ತು ಸೇವೆಗಳ ಉತ್ಪಾದನೆಯಲ್ಲಿ ಲಿಂಗ ನಿರಪೇಕ್ಷತೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ.[೧]

**೨. ಹೇಗೆ ಉತ್ಪಾದಿಸಬೇಕು?**

ಹೇಗೆ ಉತ್ಪಾದಿಸಬೇಕು ಎಂಬುದು ಉತ್ಪಾದನಾ ತಂತ್ರದ ಆಯ್ಕೆಗೆ ಸಂಬಂಧಿಸಿದ ಸಮಸ್ಯೆಯಾಗಿದೆ. ಸಮಾಜಕ್ಕೆ ಯಾವ ಯಾವ ವಸ್ತುಗಳು ಬೇಕಾಗಿವೆ ಮತ್ತು ಅವುಗಳನ್ನು ಎಷ್ಟು ಪ್ರಮಾಣದಲ್ಲಿ ಉತ್ಪಾದಿಸಬೇಕು ಎಂಬುದನ್ನು ನಿರ್ಧರಿಸಿದ ನಂತರ ಅವುಗಳನ್ನು ಹೇಗೆ ಉತ್ಪಾದಿಸಬೇಕೆಂಬುದನ್ನು ನಿರ್ಧರಿಸಬೇಕಾಗುತ್ತದೆ. ಸರಕುಗಳನ್ನು ಉತ್ಪಾದಿಸಲು ಎರಡು ರೀತಿಯ ತಂತ್ರವಿಧಾನಗಳಿದ್ದು ರಾಷ್ಟ್ರವು ತನ್ನ ಅಗತ್ಯಕ್ಕೆ ತಕ್ಕಂತೆ ಅವುಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಮಾನವಶ್ರಮ ಅಧಿಕವಾಗಿದ್ದು ಬಂಡವಾಳವು ಕಡಿಮೆ ಇರುವಂತಹ ರಾಷ್ಟ್ರಗಳು ಶ್ರಮ ಸಾಂದ್ರ(Lahour-Intensive) ಉತ್ಪಾದನಾ ತಂತ್ರವನ್ನು ಅನುಸರಿಸಬೇಕಾಗುತ್ತದೆ. ಮಾನವಶ್ರಮ ಕಡಿಮೆ ಇರುವ. ಬಂಡವಾಳವನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿರುವ ರಾಷ್ಟ್ರವು ಬಂಡವಾಳ ಸಾಂದ್ರ(Capital-Intensive) ಉತ್ಪಾದನಾ ತಂತ್ರವನ್ನು ಅನುಸರಿಸಬೇಕಾಗುತ್ತದೆ. ಒಟ್ಟಿನಲ್ಲಿ ಉತ್ಪಾದನಾ ತಂತ್ರವು ದೇಶದಲ್ಲಿ ಲಭ್ಯವಿದ್ದ ಸಂಪನ್ಮೂಲಗಳ ಪ್ರಮಾಣವನ್ನು ಮತ್ತು ತಾಂತ್ರಿಕ ಮಟ್ಟವನ್ನು ಅವಲಂಬಿಸಿರುತ್ತದೆ. ಉತ್ಪಾದನಾ ತಂತ್ರದ ಆಯ್ಕೆಯು

ಆರ್ಥಿಕ ಬೆಳವಣಿಗೆ ಸಾಧಿಸಲು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಅತೀ ಪ್ರಮುಖ ವಿಷಯವಾಗಿದೆ ಎಂದು ಸೇನ್ ಮತ್ತು ಹಾರ್ವರ್ಡ್ ವಿಶ್ವವಿದ್ಯಾಲಯದ ಅಭಿಪ್ರಾಯವಾಗಿದೆ.[೨]

**೩. ಯಾರಿಗಾಗಿ ಉತ್ಪಾದಿಸಬೇಕು?**

ಯಾರಿಗಾಗಿ ಉತ್ಪಾದಿಸಬೇಕು ಎಂಬ ಸಮಸ್ಯೆ ಮುಖ್ಯವಾಗಿ ರಾಷ್ಟ್ರೀಯ ವರಮಾನ ವಿತರಣೆಗೆ ಸಂಬಂಧಿಸಿದ ವಿಚಾರವಾಗಿದೆ. ರಾಷ್ಟ್ರದಲ್ಲಿ ಉತ್ಪಾದಿಸಲ್ಪಟ್ಟ ಸರಕು ಸೇವೆಗಳನ್ನು ಜನತೆಯಲ್ಲಿ ಯಾವ ಪ್ರಕಾರವಾಗಿ ವಿತರಣೆ ಮಾಡಬೇಕೆಂಬುದನ್ನು ನಿರ್ಧರಿಸಬೇಕಾಗುತ್ತದೆ. ಅಂದರೆ ರಾಷ್ಟ್ರೀಯ ವರಮಾನವನ್ನು ಉತ್ಪಾದನೆಯಲ್ಲಿ ತೊಡಗಿದ ವಿವಿಧ ವರ್ಣಗಳ ಜನರಿಗೆ ಯಾವ ಪ್ರಕಾರವಾಗಿ ಹಂಚಬೇಕೆಂಬುದನ್ನು ನಿರ್ಧರಿಸುವುದು ಅಗತ್ಯವಾಗಿರುತ್ತದೆ. ರಾಷ್ಟ್ರೀಯ ವರಮಾನವನ್ನು ಜನರ ಅವಶ್ಯಕತೆಗೆ ಅನುಗುಣವಾಗಿ ಹಂಚಬೇಕೋ ಅಥವಾ ಅವರ ಉತ್ಪಾದನಾ ಸಾಮರ್ಥ್ಯಕ್ಕೆ ಅನುಗುಣವಾಗಿ ಹಂಚಬೇಕೋ ಅಥವಾ ಅವರು ಹೊಂದಿರುವ ಸದಾವಕಾಶಕ್ಕೆ ಅನುಗುಣವಾಗಿ ಹಂಚಬೇಕೋ ಎಂಬುದನ್ನು ನಿರ್ಧರಿಸಬೇಕಾಗುತ್ತದೆ. ಆದರೆ ಈ ಒಂದು ಕಾರ್ಯವು ಅರ್ಥವ್ಯವಸ್ಥೆಯ ಸ್ವರೂಪ ಮತ್ತು ಪ್ರಕಾರವನ್ನು ಅವಲಂಬಿಸಿರುತ್ತದೆ. ರಾಷ್ಟ್ರೀಯ ಉತ್ಪಾದನೆಯ ವಿತರಣೆಯು ಹಣದ ರೂಪದಲ್ಲಿರುವ ರಾಷ್ಟ್ರೀಯ ವರಮಾನದ ವಿತರಣೆಯನ್ನು ಅವಲಂಬಿಸಿದೆ. ರಾಷ್ಟ್ರೀಯ ವರಮಾನವು ಅಸಮಾನವಾಗಿ ಹಂಚಲ್ಪಟ್ಟಿದ್ದರೆ. ರಾಷ್ಟ್ರೀಯ ಉತ್ಪಾದನೆಯೂ ಸಹ ಅಸಮಾನವಾಗಿ ಹಂಚಲ್ಪಡುತ್ತದೆ.[೩] ಅಲ್ಲದೆ ರಾಷ್ಟ್ರದಲ್ಲಿ ಲಿಂಗ ಅಸಮಾನತೆಯು ಅಧಿಕ ಪ್ರಮಾಣ ದಲ್ಲಿದ್ದರೆ ರಾಷ್ಟ್ರೀಯ ಉತ್ಪಾದನೆಯ ಹಂಚಿಕೆಯು ಸಹ ಅಸಮಾನವಾಗಿ ಹಂಚಿಕೆಯಾಗುತ್ತದೆ.

**೪. ದಕ್ಷತೆಯ ಸಮಸ್ಯೆ**

ದಕ್ಷತೆಯ ಸಮಸ್ಯೆ ಎಂಬುದು ಸಂಪನ್ಮೂಲಗಳನ್ನು ಮಿತವ್ಯಯಕಾರಿಯಾಗಿ ಬಳಸಿಕೊಳ್ಳಲಾಗಿದೆಯೇ ಅಥವಾ ಯೋಗಕ್ಷೇಮವನ್ನು ಗರಿಷ್ಠಗೊಳಿಸಲಾಗಿದೆಯೇ ಎಂಬ ಸಮಸ್ಯೆಗೆ ಸಂಬಂಧಿಸಿದೆ. ಮಿತವಾಗಿರುವ ಉತ್ಪಾದಕ ಸಂಪನ್ಮೂಲಗಳನ್ನು ದಕ್ಷವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸಿಕೊಂಡಾಗ ಸಮಾಜದ ಗರಿಷ್ಠ ಹಿತ ಸಾಧನೆ ಸಾಧ್ಯವಾಗುತ್ತದೆ. ಅದಕ್ಕಾಗಿ ಪ್ರತಿಯೊಂದು ಆರ್ಥಿಕತೆಯು ಉತ್ಪಾದನೆಯ ದಕ್ಷತೆ ಮತ್ತು ವಿತರಣೆಯ ದಕ್ಷತೆಗೆ ಹೆಚ್ಚಿನ ಆದ್ಯತೆ ನೀಡಬೇಕಾಗುತ್ತದೆ. ಉತ್ಪಾದನೆಯ ದಕ್ಷತೆ ಎಂದರೆ ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಳ್ಳುವುದು ಎಂದರ್ಥ. ಅಂದರೆ ಸಂಪನ್ಮೂಲಗಳು ಮಿತವಾಗಿರು ವುದರಿಂದ ಅವು ಪೋಲಾಗುವುದನ್ನು ತಡೆಗಟ್ಟಬೇಕು. ಅಲ್ಲದೆ ಅವು ಯಾವುದೇ ರೀತಿಯಲ್ಲಿ ದುರ್ಬಳಕೆ ಯಾಗದಂತೆ ನೋಡಿಕೊಳ್ಳಬೇಕು. ಲಭ್ಯವಿರುವ ಮಿತ ಸಂಪನ್ಮೂಲಗಳ ಸಹಾಯದಿಂದ ಅಧಿಕ ಸಂಖ್ಯೆಯ ಬಯಕೆಗಳನ್ನು ತೃಪ್ತಿಪಡಿಸುವುದು ಉತ್ಪಾದನೆಯ ಪ್ರಮುಖ ಗುರಿಯಾಗಿದೆ. ಆರ್ಥಿಕತೆಯಲ್ಲಿ ಸಂಪನ್ಮೂಲ ಗಳು ದಕ್ಷವಾಗಿ ಬಳಕೆಯಾಗುತ್ತಿವೆಯೇ ಅಥವಾ ಉತ್ಪಾದನಾ ವಿಧಾನ ದಕ್ಷವಾಗಿದೆಯೇ ಎಂಬುದನ್ನು

ಸಂಪನ್ಮೂಲಗಳ ಮರು ಹಂಚಿಕೆಯ ಪರೀಕ್ಷೆಯ ಮೂಲಕ ತಿಳಿದುಕೊಳ್ಳಬೇಕು. ಇದರಿಂದ ಸಂಪನ್ಮೂಲಗಳ ದಕ್ಷ ಬಳಕೆ ಮತ್ತು ಉತ್ಪಾದನಾ ದಕ್ಷತೆಯು ತಿಳಿದುಬರುತ್ತದೆ.[೪]

ಹಾಗೆಯೇ ಉತ್ಪಾದಿತ ರಾಷ್ಟ್ರೀಯ ವರಮಾನವನ್ನು ವಿವಿಧ ಜನರ ನಡುವೆ ದಕ್ಷವಾಗಿ ವಿತರಿಸಬೇಕು. ಆಗ ವಿವರಣೆಯು ಸಮರ್ಪಕವಾಗಿ ಆಗುತ್ತದೆ. ಅಲ್ಲದೆ ಯಾವುದೇ ಅಸಮಾನತೆಗೆ ಅವಕಾಶ ಮಾಡಿಕೊಡುವುದಿಲ್ಲ. ಇದನ್ನೇ ವಿತರಣಾ ದಕ್ಷತೆ ಎನ್ನಲಾಗುತ್ತದೆ. ರಾಷ್ಟ್ರದಲ್ಲಿ ಈ ವಿತರಣಾ ವ್ಯವಸ್ಥೆ ದಕ್ಷವಾಗಿದ್ದರೆ ಗರಿಷ್ಟ ಸಾಮಾಜಿಕ ಯೋಗಕ್ಷೇಮ ಸಾಧ್ಯವಾಗುತ್ತದೆ. ಇದು ಕಲ್ಯಾಣ ರಾಷ್ಟ್ರದ ಕನಸನ್ನು ನನಸಾಗಿಸುತ್ತದೆ.

**೫. ಸಂಪನ್ಮೂಲಗಳ ಗರಿಷ್ಠ ಬಳಕೆಯ ಸಮಸ್ಯೆ**

ಸಂಪನ್ಮೂಲಗಳು ಕೇವಲ ಕೊರತೆಯಲ್ಲಿರುವುದಷ್ಟೆ ಅಲ್ಲ, ಅವು ಅಸಮಾನವಾಗಿ ಹಂಚಿಹೋಗಿವೆ. ಅಂದರೆ ಅವುಗಳ ಕೊರತೆಯಲ್ಲಿಯೇ ಅಸಮಾನತೆ ಕಂಡುಬರುತ್ತಿದೆ. ಆದ್ದರಿಂದ ಹೆಚ್ಚು ಕೊರತೆಯಲ್ಲಿರುವ ಸಂಪನ್ಮೂಲಗಳನ್ನು ಹೆಚ್ಚು ಜಾಗರೂಕತೆಯಿಂದ ಮಿತವ್ಯಯದಿಂದ ಉಪಯೋಗಿಸಬೇಕಾಗುತ್ತದೆ. ಎಲ್ಲ ಸಂಪನ್ಮೂಲಗಳನ್ನು ಸಮಾಜಕ್ಕೆ ಗರಿಷ್ಠ ಯೋಗಕ್ಷೇಮವಾಗುವಂತೆ ಬಳಸಿಕೊಳ್ಳುವುದು ಅವಶ್ಯವಾಗಿದೆ. ಆದ್ದರಿಂದ ಅವುಗಳ ದುರುಪಯೋಗ ಅಥವಾ ಅಪವ್ಯಯವನ್ನು ತಡೆಗಟ್ಟಬೇಕಾಗುತ್ತದೆ ಹಾಗೂ ಅವು ಪೂರ್ತಿಯಾಗಿ ಸರಿಯಾದ ವಿಧಾನದಲ್ಲಿ ಉಪಯೋಗಿಸಲ್ಪಡಬೇಕಾಗುತ್ತದೆ. ಹೀಗೆ ಸಂಪನ್ಮೂಲಗಳು ಸರಿಯಾಗಿ ಪೂರ್ತಿಯಾಗಿ ಅಥವಾ ಸಮರ್ಥವಾಗಿ ಉಪಯೋಗಿಸಲ್ಪಟ್ಟರೆ ಮಾತ್ರ ಸಮಾಜದಲ್ಲಿನ ಜನರ ಯೋಗಕ್ಷೇಮವು ಗರಿಷ್ಠ ಮಟ್ಟವನ್ನು ಮುಟ್ಟುತ್ತದೆ.[೫]

**೬. ಅರ್ಥವ್ಯವಸ್ಥೆಯ ಬೆಳವಣಿಗೆಯ ಸಮಸ್ಯೆ**

ಈ ಸಮಸ್ಯೆಯು ಆರ್ಥಿಕ ವ್ಯವಸ್ಥೆಯ ಸಾಮರ್ಥ್ಯದ ವಿಚಾರಕ್ಕೆ ಸಂಬಂಧಿಸಿದ ಸಮಸ್ಯೆಯಾಗಿದೆ. ಅರ್ಥವ್ಯವಸ್ಥೆಯ ಸಾಮರ್ಥ್ಯ ಅಧಿಕವಾಗಿದ್ದರೆ ಜನರ ಜೀವನ ಮಟ್ಟ ಮತ್ತು ಕಲ್ಯಾಣವು ಅಧಿಕವಾಗಿರುತ್ತದೆ. ಅರ್ಥ ವ್ಯವಸ್ಥೆಯ ಸಾಮರ್ಥ್ಯವು ಕಡಿಮೆ ಇದ್ದರೆ ಜನರ ಜೀವನ ಮಟ್ಟ ಮತ್ತು ಕಲ್ಯಾಣವು ಕೆಳಮಟ್ಟದಲ್ಲಿರುತ್ತದೆ ಎಂಬ ಅಂಶವನ್ನು ಈ ಸಮಸ್ಯೆ ಬಿಂಬಿಸುತ್ತದೆ. ಅರ್ಥವ್ಯವಸ್ಥೆಯ ಉತ್ಪಾದನಾ ಸಾಮರ್ಥ್ಯವು ಕ್ರಮೇಣ ಅಧಿಕವಾಗುತ್ತದೆಯೋ, ಕಡಿಮೆಯಾಗುತ್ತದೆಯೇ ಅಥವಾ ಸ್ಥಿರವಾಗಿದೆಯೋ ಎಂಬುದನ್ನು ತಿಳಿದುಕೊಳ್ಳುವುದು ಅತ್ಯಗತ್ಯ. 'ಅರ್ಥವ್ಯವಸ್ಥೆಯ ಉತ್ಪಾದನಾ ಸಾಮರ್ಥ್ಯವು ಸ್ಥಿರವಾಗಿ ಉಳಿಯದಂತೆ, ಕಡಿಮೆಯಾಗದಂತೆ ಮತ್ತು ಅದು ಅಧಿಕವಾಗುವಂತೆ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಇದನ್ನೇ ಅರ್ಥವ್ಯವಸ್ಥೆಯ ಬೆಳವಣಿಗೆ ಅಥವಾ ಆರ್ಥಿಕ ಅಭಿವೃದ್ಧಿ ಎಂದು ಹೇಳಲಾಗುತ್ತದೆ. ಅದಕ್ಕಾಗಿಯೇ ಆಧುನಿಕ ಅರ್ಥಶಾಸ್ತ್ರಜ್ಞರಾದ ಕೇನ್ಸ್, ಬೆನ್‌ಹ್ಯಾಮ್, ಹ್ಯಾರೋಡೊಮರ್, ನರ್ಕ್ಸ್

ಸ್ಯಾಮುಯಲ್ಸನ್ ಮೊದಲಾದ ಅರ್ಥಶಾಸ್ತ್ರಜ್ಞರು ಅರ್ಥವ್ಯವಸ್ಥೆಯ ಬೆಳವಣಿಗೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ರಾಷ್ಟ್ರದ ಉತ್ಪಾದನಾ ಸಾಮರ್ಥ್ಯ ಅಧಿಕವಾಗಿದ್ದರೆ ರಾಷ್ಟ್ರದ ಅಭಿವೃದ್ಧಿಯು ತೀವ್ರಗತಿಯಲ್ಲಿರುತ್ತದೆ. ಇದರಿಂದ ಜನರ ಕಲ್ಯಾಣವು ಅಧಿಕವಾಗುತ್ತದೆ. ಹಾಗೂ ಅವರ ಜೀವನ ಮಟ್ಟವು ಉನ್ನತ ಮಟ್ಟದಲ್ಲಿರುತ್ತದೆ. ಅದಕ್ಕಾಗಿ ಪ್ರತಿಯೊಂದು ರಾಷ್ಟ್ರವು ಅಭಿವೃದ್ಧಿಯ ಸ್ಥಿರತೆಗೆ ಪ್ರಯತ್ನಿಸುತ್ತದೆ ಎಂದಿದ್ದಾರೆ.[೬]

ಈ ಮೂಲಭೂತ ಆರ್ಥಿಕ ಸಮಸ್ಯೆಗಳು ಆರ್ಥಿಕತೆಯ ಎಲ್ಲ ಚಟುವಟಿಕೆಗಳನ್ನು ನಿರ್ಧರಿಸುವ ಸೂತ್ರಗಳಾಗಿವೆ. ಇಂತಹ ಸೂತ್ರಗಳನ್ನು ಅರ್ಥವ್ಯವಸ್ಥೆಗೆ ಅಳವಡಿಸುವಾಗ 'ಲಿಂಗನಿರ್ದಿಷ್ಟತೆ'ಯನ್ನು ಅನುಸರಿಸಿರುವುದು ಕಂಡುಬರುತ್ತಿದೆ. ಕೊರತೆಯಲ್ಲಿರುವಂತಹ ಮತ್ತು ಬಹೂಪಯೋಗಿ ಗುಣ ಹೊಂದಿರುವ ಸಂಪನ್ಮೂಲಗಳನ್ನು ಪಡೆಯುವಲ್ಲಿ ಮಹಿಳೆಯರು ಹಿಂದುಳಿದಿರುವುದು ಆರ್ಥಿಕತೆಯಲ್ಲಿ ಕಂಡುಬರುತ್ತಿದೆ. ಉದಾಹರಣೆಗೆ ಭೂಸಂಪತ್ತು ಮತ್ತು ಅದರ ಒಡೆತನ ಮಹಿಳೆಯರಲ್ಲಿ ಇಲ್ಲದಿರುವುದೇ ಇದಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ರಾಷ್ಟ್ರೀಯ ಉತ್ಪಾದಕತೆಯ ಹಂಚಿಕೆಯ ವಿಷಯವನ್ನು ಗಮನಿಸಿದರೆ ರಾಷ್ಟ್ರೀಯ ಉತ್ಪನ್ನದ ಪಾಲು ಮಹಿಳೆಯರಿಗೆ ಅಸಮಾನವಾಗಿ ತಲುಪುತ್ತಿರುವುದು ಕಂಡುಬರುತ್ತಿದೆ. ಉದಾಹರಣೆಗೆ ಸರಕಾರಿ ಸಂಬಳ ಮತ್ತು ಇತರ ಸಂಬಳಗಳನ್ನು ಹೊರತು ಪಡಿಸಿದರೆ. ಶ್ರಮದಾಯಕ ಕೆಲಸಕ್ಕೆ ಮಹಿಳೆಯರು ಪುರುಷರಿಗಿಂತ ಕಡಿಮೆ ಕೂಲಿಯನ್ನು ಪಡೆಯುತ್ತಿದ್ದಾರೆ. ಇದು ರಾಷ್ಟ್ರೀಯ ಆದಾಯದ ಅಸಮಾನ ವಿತರಣೆಯನ್ನು ಬಿಂಬಿಸುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿದರೆ ಆರ್ಥಿಕತೆಯ ಆಧಾರಸ್ತಂಭಗಳಾದ ಮೂಲಭೂತ ಆರ್ಥಿಕ ಸಮಸ್ಯೆಗಳಲ್ಲಿಯೇ ಲಿಂಗ ಅಸಮಾನತೆಗೆ ಕಾರಣವಾಗುವ ಅಂಶಗಳು ಅಧಿಕ ಪ್ರಮಾಣದಲ್ಲಿ ಇರುವುದರಿಂದ ಇಡೀ ಆರ್ಥಿಕ ವ್ಯವಸ್ಥೆಯಲ್ಲಿಯೇ ಲಿಂಗತಾರತಮ್ಯ ಅಥವಾ ಲಿಂಗ ಅಸಮಾನತೆ ಕಂಡುಬರುತ್ತದೆ. ಆರ್ಥಿಕ ವ್ಯವಸ್ಥೆಯ ರಚನೆಯ ಪುರುಷಶಾಹಿ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಈ ಒಂದು ಅಂಶವು ಮುಂದೆ ವಿಶ್ಲೇಷಿಸಲಾಗುವ 'ಆರ್ಥಿಕ ಪರಿಕಲ್ಪನೆಗಳ' ನಿರ್ವಚನದಿಂದ ತಿಳಿದುಬರುತ್ತದೆ.

### ೩.೨. ಆರ್ಥಿಕತೆಯ ಪರಿಕಲ್ಪನೆಗಳು

ಆರ್ಥಿಕತೆಯ ಪರಿಕಲ್ಪನೆಗಳಾದ ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ವಿತರಣೆ ಹಂಚಿಕೆಗಳು ಅರ್ಥಶಾಸ್ತ್ರದಲ್ಲಿ ತಮ್ಮದೇ ಆದ ನಿರ್ದಿಷ್ಟ ಅರ್ಥವನ್ನು ಪಡೆದುಕೊಂಡಿವೆ. ಅಲ್ಲದೆ ಕೊರತೆಯಲ್ಲಿರುವ ಸಂಪನ್ಮೂಲಗಳು ಮತ್ತು ಉತ್ಪಾದನೆಯ ಲಭ್ಯತೆಯನ್ನು ಆಧರಿಸಿ ಈ ಆರ್ಥಿಕ ಪರಿಕಲ್ಪನೆಗಳು ಕಾರ್ಯ ನಿರ್ವಹಿಸುತ್ತವೆ. ಮಾನವನ ಬಯಕೆಯನ್ನು ತೃಪ್ತಿಪಡಿಸುವ ಸರಕಿನಲ್ಲಿರುವ ಗುಣವನ್ನು ನಾಶಪಡಿಸುವ ಕ್ರಿಯೆಯನ್ನು ಉಪಭೋಗ ಅಥವಾ ಅನುಭೋಗ ಎಂದು ಕರೆದರೆ, ಸರಕಿನಲ್ಲಿ ತುಷ್ಟಿಗುಣವನ್ನು ತುಂಬುವುದೇ ಉತ್ಪಾದನೆಯಾಗಿದೆ. ಉತ್ಪಾದನೆಯಾದ ಸರಕು ಸೇವೆಗಳು ಮಾರುಕಟ್ಟೆಯ

ಮೂಲಕ ಅನುಭೋಗಕ್ಕೆ ದೊರೆಯುವ ಪ್ರಕ್ರಿಯೆಯನ್ನು 'ವಿನಿಮಯ' ಎಂದು ಮತ್ತು ಉತ್ಪಾದನೆಯಲ್ಲಿ ತೊಡಗಿದ್ದಕ್ಕಾಗಿ ಉತ್ಪಾದನಾಂಗಗಳಿಗೆ ನೀಡಲಾಗುವ ಪಾಲನ್ನು 'ಹಂಚಿಕೆ' ಎಂದು ಕರೆಯಲಾಗುತ್ತದೆ. ಆದ್ದರಿಂದ ಇಡೀ ಆರ್ಥಿಕತೆ ಎನ್ನುವುದು ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ಹಂಚಿಕೆ ಎಂಬ ನಾಲ್ಕು ಕ್ರಿಯೆಗಳ ಮೂಲಕ ನಡೆಯುವ ಆರ್ಥಿಕ ಚಟುವಟಿಕೆಯಾಗಿದೆ. ಆದರೆ ಈ ಆರ್ಥಿಕ ಚಟುವಟಿಕೆಗಳ ಅಥವಾ ಪ್ರಕ್ರಿಯೆಗಳು ಅನುಷ್ಠಾನವು ಪುರುಷಶಾಹಿ ಚಿಂತನೆಯಿಂದ ಪ್ರಭಾವಿತವಾಗಿರುವುದರಿಂದ ಲಿಂಗ ಅಸಮಾನತೆ, ಲಿಂಗತಾರತಮ್ಯ ಆರ್ಥಿಕ ಪರಿಕಲ್ಪನೆಗಳಲ್ಲಿ ಕಂಡುಬರುತ್ತಿದೆ. ಈ ಅಂಶವನ್ನು ಮುಂದೆ ಆರ್ಥಿಕ ಪರಿಕಲ್ಪನೆಗಳ ವಿಶ್ಲೇಷಣೆಯಿಂದ ತಿಳಿದುಕೊಳ್ಳಬಹುದು.

**ಉಪಭೋಗ**

ಉಪಭೋಗವನ್ನು ಸಕಲ ಚಟುವಟಿಕೆಗಳ ಉಗಮ ಸ್ಥಾನ ಎಂದು ಕರೆಯಲಾಗುತ್ತದೆ. ಅನುಭೋಗ ಎಂದರೆ ಸರಕು ಮತ್ತು ಸೇವೆಗಳನ್ನು ಉಪಯೋಗಿಸಿಕೊಂಡು ಆಸೆಗಳನ್ನು ತೃಪ್ತಿ ಪಡಿಸುವ ಕ್ರಿಯೆ ಎಂದು ಅರ್ಥ. ಈ ಅನುಭೋಗಕ್ಕಾಗಿಯೇ ಉತ್ಪಾದನೆ ನಡೆಯುತ್ತದೆ. ಅನುಭೋಗದಿಂದಾಗಿಯೇ ವಿತರಣೆ ಮತ್ತು ವಿನಿಮಯಗಳು ನಡೆಯುತ್ತವೆ. ಅಲ್ಲದೆ ಸಾರ್ವಜನಿಕ ಹಣಕಾಸಿನ ಉದ್ದೇಶವು ಕೂಡ ಜನರ ಅನುಭೋಗಕ್ಕಾಗಿ ಸರಕು ಮತ್ತು ಸೇವೆಗಳನ್ನು ಸೃಷ್ಟಿಸುವುದೇ ಆಗಿದೆ. ಹೀಗಾಗಿ ಸಕಲ ಆರ್ಥಿಕ ಚಟುವಟಿಕೆಗಳ ಮೂಲ ಹಾಗೂ ಕೇಂದ್ರ ಉಪಭೋಗವಾಗಿದೆ. ಇಂತ ವಿಶಾಲ ವ್ಯಾಪ್ತಿಯನ್ನು ಹೊಂದಿರುವ 'ಉಪಭೋಗ' ಎಂಬ ಪದಕ್ಕೆ ನಿರ್ದಿಷ್ಟ ವ್ಯಾಖ್ಯಾನ ನೀಡಲಾಗಿದೆ. 'ಬಯಕೆಗಳನ್ನು ತೃಪ್ತಿಪಡಿಸಲು ಸರಕು ಮತ್ತು ಸೇವೆಗಳನ್ನು ಉಪಯೋಗಿಸುವ ಕ್ರಿಯೆಗೆ ಅರ್ಥಶಾಸ್ತ್ರದಲ್ಲಿ 'ಅನುಭೋಗ' ಎಂದು ಕರೆಯಲಾಗುತ್ತದೆ. ಪ್ರೊ.ಈಲಿ ಎಂಬ ಅರ್ಥಶಾಸ್ತ್ರಜ್ಞರು ಅನುಭೋಗವೆಂಬುದು ಅದರ ವಿಶಾಲಾರ್ಥದಲ್ಲಿ ಮಾನವನ ಬಯಕೆಗಳ ತೃಪ್ತಿಗಾಗಿ ಆರ್ಥಿಕ ಸರಕುಗಳು ಮತ್ತು ವೈಯಕ್ತಿಕ ಸೇವೆಗಳನ್ನು ಬಳಸುವುದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ'.[೭]

ಉತ್ಪಾದನೆಯಾದ ಪ್ರತಿಯೊಂದು ಸರಕು ಮತ್ತು ಪ್ರತಿಯೊಂದು ಸೇವೆಯಲ್ಲಿಯೂ ಮಾನವನ ಬಯಕೆಯನ್ನು ಈಡೇರಿಸುವ ಅಥವಾ ತೃಪ್ತಿಪಡಿಸುವ ತುಷ್ಟಿಗುಣ ಇರುತ್ತದೆ. ಇಂತಹ ಸರಕು ಸೇವೆಗಳನ್ನು ಮಾನವನು ಬಳಸಿದಾಗ ಆ ಸರಕು ಸೇವೆಗಳಲ್ಲಿನ ತುಷ್ಟಿಗುಣ ನಾಶವಾಗಿ ಮಾನವನಿಗೆ ವರ್ಗಾವಣೆಯಾಗುತ್ತದೆ. ಹೀಗೆ ಸರಕು ಸೇವೆಗಳಿಂದ ತುಷ್ಟಿಗುಣವು ವ್ಯಕ್ತಿಗೆ ವರ್ಗಾವಣೆಯಾಗುವ ಪ್ರಕ್ರಿಯೆಯನ್ನು ಅನುಭೋಗ ಎಂದು ಕರೆಯಲಾಗುತ್ತದೆ. ಉದಾಹರಣೆಗೆ ಬರೆಯಬೇಕೆನಿಸಿದಾಗ ಪೆನ್ನನ್ನು ಬಳಸುವುದು. ಹಸಿವೆಯಾದಾಗ ಊಟ ಮಾಡುವುದು. ಬಾಯಾರಿಕೆಯಾದಾಗ ನೀರನ್ನು ಕುಡಿಯುವುದು. ಮನರಂಜನೆಗಾಗಿ. ಟಿ.ವಿ, ಸಿನಿಮಾ, ನಾಟಕ ನೋಡುವುದು ಮತ್ತು ಅನಾರೋಗ್ಯವಾದಾಗ ವೈದ್ಯಕೀಯ ಸೇವೆ ಪಡೆಯುವುದು ಇತ್ಯಾದಿಗಳು ಅನುಭೋಗದ ವಿವಿಧ ರೂಪಗಳಾಗಿವೆ.

ಉಪಭೋಗ ಕ್ರಿಯೆಯು ಮುಖ್ಯವಾಗಿ ಆದಾಯವನ್ನು ಅವಲಂಬಿಸಿದೆ. ಆದಾಯ ಹೆಚ್ಚಿದಂತೆ ಉಪಭೋಗ ಸ್ವಲ್ಪ ಪ್ರಮಾಣದಲ್ಲಿ ಹೆಚ್ಚುತ್ತದೆ. ಹಾಗೂ ಆದಾಯ ಕಡಿಮೆ ಆದಂತೆ ಉಪಭೋಗದ ಮಟ್ಟವೂ ಸಹ ಕಡಿಮೆಯಾಗುತ್ತದೆ. ಆದಾಯ ಮತ್ತು ಉಪಭೋಗಕ್ಕಿರುವ ಸಂಬಂಧವನ್ನು ಫ್ರಿಡೆರಿಕೊ ಏಂಗೆಲ್ಸ್ ಮತ್ತು ಕೇನ್ಸ್ ಅವರು ಹೀಗೆ ವಿವರಿಸಿದ್ದಾರೆ. ಇವರು ತಮ್ಮ ನಿಯಮಗಳಲ್ಲಿ ಆದಾಯ ಮತ್ತು ಉಪಭೋಗದ ನಡುವೆ ವಿಲೋಮ ಸಂಬಂಧ ಇರುವುದನ್ನು ಗುರುತಿಸಿದ್ದಾರೆ. 'ಅನುಭೋಗವು ಆದಾಯವನ್ನು ಅವಲಂಬಿಸಿರುತ್ತದೆ. ಆದಾಯ ಅಧಿಕವಾದಂತೆಲ್ಲ ಅಗತ್ಯ ಸರಕುಗಳ ಮೇಲಿನ ವೆಚ್ಚದ ಪ್ರಮಾಣ ಕಡಿಮೆಯಾಗುತ್ತದೆ. ಹಿತದಾಯಕ ಮತ್ತು ವಿಲಾಸಿ ಸರಕುಗಳ ಮೇಲಣ ವೆಚ್ಚದ ಪ್ರಮಾಣ ಕಡಿಮೆಯಾಗುತ್ತದೆ. ಅನುಕರಣೆ ಮತ್ತು ಮಹಾತ್ವಕಾಂಕ್ಷೆ ಇದಕ್ಕೆ ಕಾರಣ ಎಂಬ ಅಭಿಪ್ರಾಯವನ್ನು ಫಿಡ್ರಿಕ್ ಎಂಗೆಲ್ಸ್ ವ್ಯಕ್ತಪಡಿಸಿದ್ದಾರೆ.'[೮] ಜನರ ಬಳಿ ಆದಾಯ ಹೆಚ್ಚಿದಂತೆ ಅವರು ಉಪಭೋಗಕ್ಕಾಗಿ ಅವಶ್ಯಕ ಸರಕುಗಳನ್ನು ಕೊಳ್ಳಲು ಆದಾಯವನ್ನು ಬಳಸದೆ ಹಿತದಾಯಕ ಮತ್ತು ವಿಲಾಸಿ ಸರಕುಗಳ ಖರೀದಿಗೆ ಬಳಸುತ್ತಾರೆ ಎಂಬುದು ಫ್ರೆಡರಿಕ್ ಅವರ ನಿಯಮವಾಗಿದೆ.

ಆಧುನಿಕ ಅರ್ಥಶಾಸ್ತ್ರಜ್ಞ ಜಾನ್ ಮೇನಾರ್ಡ್ ಕೇನ್ಸ್ ಅವರು ಅನುಭೋಗಕ್ಕೆ ಸಂಬಂಧಿಸಿದಂತೆ 'ಅನುಭೋಗದ ಮಾನಸಿಕ ನಿಯಮ'ವನ್ನು ರೂಪಿಸಿದ್ದಾರೆ. ಈ ನಿಯಮದ ಪ್ರಕಾರ ಜನರ ಆದಾಯ ಹೆಚ್ಚಿದಂತೆ ಅವರ ಅನುಭೋಗವು ಹೆಚ್ಚುತ್ತದೆ. ಆದರೆ ಆದಾಯ ಹೆಚ್ಚಿದ ಪ್ರಮಾಣದಲ್ಲಿಯೇ ಅನುಭೋಗ ಹೆಚ್ಚುವುದಿಲ್ಲ. ಅಂದರೆ ಆದಾಯ ಹೆಚ್ಚಳಗೊಂಡ ಪ್ರಮಾಣದಲ್ಲಿ ಅನುಭೋಗ ಹೆಚ್ಚುವುದಿಲ್ಲ." ಏಕೆಂದರೆ ಹೆಚ್ಚಿನ ಪ್ರಮಾಣದ ಆದಾಯದಲ್ಲಿ ಹಣವನ್ನು ಉಳಿತಾಯ ಮಾಡುವ ಪ್ರವೃತ್ತಿ ಜನರಲ್ಲಿರುತ್ತದೆ. ಅದಕ್ಕಾಗಿ ಆದಾಯ ಹೆಚ್ಚಾದರೂ ಅನುಭೋಗ ಹೆಚ್ಚುವುದಿಲ್ಲ. ಇದನ್ನು ಕೇನ್ಸ್ ರವರು ಈ ರೀತಿ ಹೇಳಿದ್ದಾರೆ. "ಜನಸಮುದಾಯದ ಮನಸ್ಸು ಹೇಗೆ ಇರುತ್ತದೆ ಎಂದರೆ ಸಮಗ್ರ ನೈಜ ಆದಾಯ ಹೆಚ್ಚಿದಾಗ ಸಮಗ್ರ ಅನುಭೋಗವು ಹೆಚ್ಚುತ್ತದೆ. ಆದರೆ ಆದಾಯ ಹೆಚ್ಚಳಗೊಂಡ ಪ್ರಮಾಣದಲ್ಲ"[೯] ಕೇನ್ಸ್ ಅವರು ಜನರು ತಮ್ಮ ಆದಾಯದ ಕೆಲವು ಭಾಗವನ್ನು ಉಳಿತಾಯ ಮಾಡುವುದರಿಂದ ಆದಾಯ ಹೆಚ್ಚಳವಾದ ಪ್ರಮಾಣದಲ್ಲಿ ಜನರ ಉಪಭೋಗ ಹೆಚ್ಚಳವಾಗುವುದಿಲ್ಲ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

**ಲಿಂಗ ಸಂಬಂಧಗಳ ನೆಲೆಯಿಂದ ಉಪಭೋಗ**

ಅನುಭೋಗವು ಮುಖ್ಯವಾಗಿ ಆದಾಯವನ್ನು ಅವಲಂಬಿಸಿದೆ. ಆದರೆ ಕುಟುಂಬ ವ್ಯವಸ್ಥೆಯಲ್ಲಿ ಆದಾಯದ ಮೇಲಿನ ಒಡೆತನ ಮತ್ತು ಹಕ್ಕು ಕುಟುಂಬದ ಯಜಮಾನ ಅಥವಾ ಪುರುಷರ ಅಧೀನದಲ್ಲಿ ಇರುತ್ತದೆ. ಮಹಿಳೆಯರಿಗೆ ಕುಟುಂಬದ ಆದಾಯ ಮತ್ತು ಸಂಪತ್ತಿನ ಮೇಲೆ ಯಾವುದೇ ಒಡೆತನ, ಹಕ್ಕು ಇರುವುದಿಲ್ಲ. ಅಲ್ಲದೆ ಅವರು ಕುಟುಂಬದ ಯಜಮಾನ ನಿರ್ದೇಶಿಸಿದ ಸರಕು ಸೇವೆಗಳನ್ನು

ಅನುಭೋಗಿಸಬೇಕಾಗುತ್ತದೆ. ಅವರಿಗೆ ತಮ್ಮ ಇಚ್ಛೆಯ ವಸ್ತುಗಳನ್ನು ಅನುಭೋಗಿಸುವ ಸ್ವಾತಂತ್ರ್ಯ ಇರುವುದಿಲ್ಲ. ಇದರಿಂದಾಗಿ ಮಹಿಳೆಯರು ಅನೇಕ ವಿಧದ ಉಪಭೋಗಗಳಿಂದ ವಂಚಿತರಾಗುತ್ತಾರೆ. ಉದಾಹರಣೆಗೆ ಪುರುಷನಿಗೆ ಮನೆಯ ಊಟ ಉಪಚಾರ ಬೇಡವೆನಿಸಿದರೆ ಅವನು ಹೊಟೇಲ್ ಅಥವಾ ರೆಸ್ಟೋರೆಂಟ್‌ಗಳಲ್ಲಿ ಊಟ ಮಾಡಬಹುದು. ತನಗೆ ಬೇಕೆನಿಸಿದರೆ ದುಬಾರಿ ಬೆಲೆಯ ಬಟ್ಟೆ ಧರಿಸಬಹುದು. ಆಸ್ತಿ ಅಂತಸ್ತನ್ನು ಕೊಂಡುಕೊಳ್ಳಬಹುದು. ಆದರೆ ಮಹಿಳೆಯರಿಗೆ ಈ ರೀತಿಯ ಸ್ವಾತಂತ್ರ್ಯ ಇರುವುದಿಲ್ಲ. ಅವರು ಮನೆಯಲ್ಲಿ ಮಾಡಿದ ಉಪಾಹಾರ, ಊಟವನ್ನು ಮಾಡಬೇಕು, ರೇಷ್ಮೆ ಸೀರೆ ಬಗ್ಗೆ ಎಷ್ಟು ಆಸೆ, ಆಸಕ್ತಿ ಇದ್ದರೂ ಕೇಳದೆ ಸಾಧಾರಣ ಸೀರೆಯನ್ನೇ ತೊಡುತ್ತಾಳೆ. ಹಾಗೂ ವಾಸಸ್ಥಳ ಮತ್ತು ಜಮೀನಿನ ಒಡೆತನವೆಲ್ಲ ಮಹಿಳೆಯರಿಗೆ ಇರುವುದಿಲ್ಲ. ಇದರಿಂದಾಗಿ ಮಹಿಳೆ ಆಸ್ತಿಯ ಅನುಭೋಗದಿಂದ ದೂರ ಉಳಿಯುತ್ತಾಳೆ.

ಇದಕ್ಕೆ ಮುಖ್ಯ ಕಾರಣ ಅರ್ಥಶಾಸ್ತ್ರದಲ್ಲಿನ ಆರ್ಥಿಕ ಪರಿಕಲ್ಪನೆಗಳನ್ನು ಪುರುಷಶಾಹಿ ಆಧಾರದ ಮೇಲೆ ನಿರ್ವಚಿಸಿರುವುದೇ ಆಗಿದೆ. ಅರ್ಥಶಾಸ್ತ್ರವು ಅನುಭೋಗವನ್ನು ಅತ್ಯಂತ ಸೀಮಿತ ನೆಲೆಯಲ್ಲಿ ಪರಿಭಾವಿಸಿಕೊಂಡಿದೆ. ಸಿದ್ಧಸರಕುಗಳು ಮತ್ತು ಸೇವೆಗಳ ಬಳಕೆಯನ್ನು ಮಾತ್ರ ಅರ್ಥಶಾಸ್ತ್ರ ಅನುಭೋಗದ ವ್ಯಾಪ್ತಿಯಲ್ಲಿ ಸೇರಿಸಿಕೊಂಡಿದೆ. ಅಂದರೆ ಮಾರುಕಟ್ಟೆ ಪ್ರವೇಶಿಸುವ, ಕ್ರಯಪಟ್ಟಿಯನ್ನು ಉಳ್ಳ ಸರಕು ಸೇವೆಗಳು ಮಾತ್ರ ಇಲ್ಲಿ ಪರಿಗಣನೆಗೆ ಒಳಗಾಗುತ್ತವೆ. ಮಾರುಕಟ್ಟೆಯನ್ನು ಪ್ರವೇಶಿಸದ ಮತ್ತು ಕ್ರಯಪಟ್ಟಿ ಇಲ್ಲದ ಸರಕು ಸೇವೆಗಳನ್ನು ಅನುಭೋಗದ ಆರ್ಥಿಕ ಪರಿಕಲ್ಪನೆಯಿಂದ ಕೈಬಿಡಲಾಗಿದೆ.

ಅರ್ಥಶಾಸ್ತ್ರವು ಅನುಭೋಗವನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ಪರಿಭಾವಿಸಿಕೊಂಡಿದೆ. ಏಕೆಂದರೆ ಅನುಭೋಗದ ಲಿಂಗ ಸಂಬಂಧಿ ಸ್ವರೂಪವು ತುಂಬ ಸಂಕೀರ್ಣವಾದ ಒಂದು ಪ್ರಕ್ರಿಯೆಯಾಗಿದೆ. ಕುಟುಂಬದಲ್ಲಿ ಮಕ್ಕಳು ಪಡೆಯುವ ಆರೈಕೆ, ಪಾಲನೆಗಳು ಅರ್ಥಶಾಸ್ತ್ರದಲ್ಲಿ ಅನುಭೋಗ ಎನಿಸಿಕೊಳ್ಳುವುದಿಲ್ಲ. ಈ ಎಲ್ಲ ಕಾರ್ಯಗಳಲ್ಲಿ ಮಾನವನ ಬಯಕೆ ಈಡೇರಿದರೂ ಅವುಗಳ ಮೌಲ್ಯ ಹಣದ ಮೂಲಕ ನಿರ್ಧಾರಿತವಾಗದಿರುವುದರಿಂದ ಆ ಕಾರ್ಯಗಳು ಅನುಭೋಗದ ಪರಿಧಿಗೆ ಸೇರುವುದಿಲ್ಲ. ಅಡುಗೆ ಸಿದ್ಧಪಡಿಸುವುದು, ಬಟ್ಟೆ ತೊಳೆಯುವುದು, ನೀರು ಸಂಗ್ರಹಿಸುವುದು ಮುಂತಾದ ಗೃಹವಾರ್ತೆ ದುಡಿಮೆಯಿಂದ ಪ್ರಾಪ್ತವಾಗುವ ಅನುಭೋಗವನ್ನು ಇಲ್ಲಿ ಪರಿಗಣಿಸಬೇಕಾಗುತ್ತದೆ. ಮಹಿಳೆಯರ ಅನುಭೋಗದ ಸ್ವರೂಪ ಮತ್ತು ಪುರುಷರ ಅನುಭೋಗದ ಸ್ವರೂಪ ಒಂದೇ ತೆರನಾಗಿರುವುದಿಲ್ಲ. ವರಮಾನದ ನಿರ್ಬಂಧದ ಜೊತೆಗೆ ಅನೇಕ ಸಾಮಾಜಿಕ ನಿರ್ಬಂಧಗಳು ಮಹಿಳೆಯರ ಅನುಭೋಗದ ಮೇಲೆ ಪ್ರಭಾವ ಬೀರುತ್ತವೆ. ಅಲ್ಲದೆ ಸಾಮಾಜಿಕ ನಂಬಿಕೆ ಆಚರಣೆಗಳಿಂದಾಗಿ ಮಹಿಳೆಯರು ಅನೇಕ ಬಗೆಯ ಅನುಭೋಗದಿಂದ ವಂಚಿತರಾಗುತ್ತಾರೆ. ವರಮಾನದ ಒಡೆತನ ಪುರುಷರ ಕೈಯಲ್ಲಿ ಇರುವುದರಿಂದ ಮಹಿಳೆಯರು ತಾವು ಬಯಸುವ ಪ್ರತಿಯೊಂದು ಸರಕು ಸೇವೆಗಳ ಅನುಭೋಗಕ್ಕಾಗಿ ಪುರುಷರನ್ನೇ

ಅವಲಂಬಿಸಬೇಕಾಗಿದೆ. ಮಹಿಳೆಯರು ಊಟ ಮಾಡುವುದರಿಂದ ಹಿಡಿದು ಬಟ್ಟೆ ಹಾಗೂ ಮನೆಗೆ ಬೇಕಾದ ಅನುಭೋಗಿ ಸರಕುಗಳನ್ನು ಕೊಳ್ಳಲು ಪುರುಷರನ್ನು ಅವಲಂಬಿಸಿರುವುದು ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಬರುತ್ತಿದೆ.

ಮಹಿಳೆಯರ ಅನುಭೋಗದ ಮೇಲೆ ಕಾಲದ ಬಳಕೆಯು ತನ್ನದೇ ಆದ ಪ್ರಭಾವವನ್ನು ಬೀರಿದೆ ಕುಟುಂಬಗಳಲ್ಲಿ ಮಹಿಳೆಯರು ಸದಾಕಾಲ ಮನೆಗಾರ್ತೆಗಳ ಕೆಲಸದಲ್ಲಿ ನಿರತರಾಗಿರುತ್ತಾರೆ. ಇದರಿಂದಾಗಿ ಅವರು ಶಿಕ್ಷಣ, ಮನರಂಜನೆ, ಆರೋಗ್ಯ, ಉತ್ತಮ ಉಡುಗೆ ಮತ್ತು ಪೌಷ್ಟಿಕ ಆಹಾರ ಪಡೆಯುವುದರಿಂದಲೂ ವಂಚಿತರಾಗುತ್ತಾರೆ. ಮಹಿಳೆ ಅನಾರೋಗ್ಯದಿಂದ ನರಳುತ್ತಿದ್ದರೆ ಅವಳಿಗೆ ವೈದ್ಯಕೀಯ ಚಿಕಿತ್ಸೆ ಪಡೆಯಲು ಸಾಧ್ಯವಾಗುವುದಿಲ್ಲ. ಕುಟುಂಬದಲ್ಲಿ ಎಲ್ಲ ಸದಸ್ಯರು ಊಟ ಮಾಡಿದ ನಂತರ ಅವಳು ಊಟ ಮಾಡಬೇಕಾದ ಆಚರಣೆ ಇರುವುದರಿಂದ ಅವಳು ಅಳಸಿದ ಉಳಿದ ಆಹಾರವನ್ನು ಸೇವಿಸಬೇಕಾಗುತ್ತದೆ. ಅಲ್ಲದೆ ಅಪೌಷ್ಟಿಕತೆಯಿಂದ ನರಳಬೇಕಾಗುತ್ತದೆ. 'ಮಹಿಳೆಯರು ಪ್ರಜನನೋತ್ಪತ್ತಿ ದುಡಿಮೆ, ಕೌಟುಂಬಿಕ ದುಡಿಮೆ ಮತ್ತು ಉತ್ಪಾದನಾ ದುಡಿಮೆ ಎಂಬ ಮೂರು ಬಗೆಯ ದುಡಿಮೆಯಲ್ಲಿ ನಿರತರಾಗಿರುವುದರಿಂದ ಜೊತೆಗೆ ಸಂತಾನೋತ್ಪತ್ತಿ ಚಟುವಟಿಕೆಗಳನ್ನು ನಿರ್ವಹಿಸುತ್ತಿರುವುದರಿಂದ ಮಹಿಳೆಯರಿಗೆ ಬಿಡುವು ದೊರೆಯುವುದಿಲ್ಲ ಹಾಗೂ ಅನುಭೋಗಕ್ಕೆ ಸಮಯವೇ ಇರುವುದಿಲ್ಲ. ಇದರಿಂದಾಗಿ ಮಹಿಳೆಯರು ಅನುಭೋಗದಿಂದ ವಂಚಿತರಾಗುತ್ತಾರೆ.'' ಇಂತಹ ಒಂದು ಸ್ಥಿತಿಯು ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರಲ್ಲಿ ಅಧಿಕವಾಗಿ ಕಂಡುಬರುತ್ತಿದೆ.

ಅನೇಕ ಅಧ್ಯಯನಗಳು ದೃಢಪಡಿಸಿರುವಂತೆ ಕುಟುಂಬದ ಚೌಕಟ್ಟಿನಲ್ಲಿನ ಅಧಿಕಾರ ಸಂಬಂಧಗಳಲ್ಲಿ ಲಿಂಗವಾರು ಅಸಮಾನತೆಗಳಿರುವುದರಿಂದ ಅನುಭೋಗಕ್ಕೆ ಸಂಬಂಧಿಸಿದಂತೆ ಲಿಂಗವಾರು ತಾರತಮ್ಯ ಸಾಮಾನ್ಯವಾಗಿದೆ. ಕುಟುಂಬ ಮಟ್ಟದಲ್ಲಿ ಅಧಿಕಾರ ಸಂಬಂಧಗಳು ಸಾಮಾನ್ಯವಾಗಿ ಬಾಲಕರಿಗೆ ಆದ್ಯಗಮನ ಮತ್ತು ಆದ್ಯ ಸವಲತ್ತುಗಳನ್ನು ಒದಗಿಸಿದರೆ ಬಾಲಕಿಯರು ಅಂಚಿಗೆ ದೂಡಲ್ಪಡುತ್ತಾರೆ. ಬಾಲಕಿಯರಿಗೆ ಶಿಕ್ಷಣ ನೀಡುವಲ್ಲಿ, ಆಹಾರ ನೀಡುವಲ್ಲಿ, ಉಡುಗೆ ತೊಡುಗೆ ಒದಗಿಸುವಲ್ಲಿ ಮತ್ತು ಆರೋಗ್ಯ ಸೌಲಭ್ಯ ನೀಡುವಲ್ಲಿಯೂ ಸಹ ತಾರತಮ್ಯ ಮಾಡಲಾಗುತ್ತದೆ. ಇದು ಬಾಲಕಿಯರನ್ನು ಅನುಭೋಗದಿಂದ ವಂಚಿತರನ್ನಾಗಿ ಮಾಡುತ್ತದೆ. 'ಮಹಿಳೆಯರ ಆದಾಯದ ಆಯವ್ಯಯ ವಿವರಗಳನ್ನು ಕುರಿತು ನಡೆದ ಅನೇಕ ಅಧ್ಯಯನಗಳು ತಿಳಿಸಿರುವಂತೆ ಮಹಿಳೆಯರು ನಡೆಸುವ ಖರ್ಚು ವೆಚ್ಚಗಳಲ್ಲಿ ಪರಹಿತವಾದಿ ಅನುಭೋಗದ ದೃಷ್ಟಿಯಿಂದ ಕುಟುಂಬದ ಅನುಭೋಗಕ್ಕೆ ಪೂರ್ಣವಾಗಿ ಸಂದರೆ ಪುರುಷರು ನಡೆಸುವ ಖರ್ಚು ವೆಚ್ಚಗಳಲ್ಲಿ ಬಹಳಷ್ಟು ಭಾಗ ಪುರುಷರ ವೈಯಕ್ತಿಕ ಬಯಕೆಗಳನ್ನು ಪೂರೈಸುವುದಕ್ಕೆ ವ್ಯಯವಾಗುತ್ತದೆ. ಅಂದರೆ ಪುರುಷರು ತಮ್ಮ ಆದಾಯದ ಬಹುಪಾಲನ್ನು ತಮ್ಮ

ವೈಯಕ್ತಿಕ ಖರ್ಚುಗಳಾದ ಮದ್ಯ, ತಂಬಾಕು, ಬೀಡಿ, ಸೀಗರೇಟು ಸೇವನೆ, ಕಾಫಿ, ಚಹಾ ಇತ್ಯಾದಿಗಳ ಮೇಲೆ ವ್ಯಯ ಮಾಡುತ್ತಾರೆ.[೧೧]

ಅರ್ಥಶಾಸ್ತ್ರದಲ್ಲಿ ಅನುಭೋಗವನ್ನು ನಿರ್ಧರಿಸುವ ಬಹುಮುಖ್ಯ ಸಂಗತಿ ವರಮಾನವೆಂದು ಪ್ರತಿಪಾದಿಸಲಾಗುತ್ತದೆ. ಆದರೆ ಲಿಂಗಸಂಬಂಧಗಳ ದೃಷ್ಟಿಯಿಂದ ಕುಟುಂಬದ ಅನುಭೋಗವನ್ನು ನಿರ್ಧರಿಸುವ ಸಂಗತಿಯೆಂದರೆ ಲಿಂಗವಾರು ಪವರ್ ಸಂಬಂಧವಾಗಿದೆ. ಈ ಪವರ್ ಸಂಬಂಧ ಪುರುಷರ ಕೈಯಲ್ಲಿದ್ದು ಕುಟುಂಬದ ಎಲ್ಲ ವಿಧದ ಅನುಭೋಗವನ್ನು ನಿಯಂತ್ರಿಸುತ್ತದೆ. ಇಂತಹ ಸಂದರ್ಭದಲ್ಲಿ ಅನುಭೋಗದಿಂದ ವಂಚಿತಳಾಗುವವಳು ಮಹಿಳೆಯೇ ಆಗಿರುತ್ತಾಳೆ. ಉದಾಹರಣೆಗೆ ಶೈಕ್ಷಣಿಕ ಅನುಭೋಗವನ್ನೇ ತೆಗೆದುಕೊಂಡರೆ ಮಹಿಳೆಯರ ಸಾಕ್ಷರತೆಯ ಮಟ್ಟ ಕಡಿಮೆ ಇರುವುದು ಕಂಡು ಬರುತ್ತದೆ. ೨೦೦೧ರ ಭಾರತದ ಜನಗಣತಿಯನ್ನು ಗಮನಿಸಿದರೆ ಮಹಿಳೆಯರ ಸಾಕ್ಷರತೆ ಪ್ರಮಾಣ ಕೇವಲ ಶೇಕಡ ೫೪.೧೬ ಹಾಗೂ ಪುರುಷರ ಸಾಕ್ಷರತೆಯ ಪ್ರಮಾಣ ಶೇಕಡ ೭೫.೮೫ರಷ್ಟಿರುವುದು ಕಂಡುಬರುತ್ತದೆ. ಈ ಒಂದು ಅಂಕಿ ಸಂಖ್ಯೆಯು ಮಹಿಳೆಯರು ಶೈಕ್ಷಣಿಕ ಅನುಭೋಗದಿಂದ ಪುರುಷರಿಗಿಂತ ಶೇಕಡ ೨೧.೬೯ರಷ್ಟು ಕಡಿಮೆ ಇರುವುದು ತಿಳಿದು ಬರುತ್ತದೆ. ಅಲ್ಲದೆ 'ಇಡೀ ಪ್ರಪಂಚದಲ್ಲಿ ಹೆಣ್ಣು ಗಂಡುಗಳ ನಡುವೆ ಸಾಕ್ಷರತೆ ಪ್ರಮಾಣ ಸಮಾನವಾಗಿರುವುದು ಕೇವಲ ೩೦ ದೇಶಗಳಲ್ಲಿ ಮಾತ್ರ ಎಂಬುದು ೧೯೯೮ರ ಮಾನವ ಅಭಿವೃದ್ಧಿ ವರದಿ ತಿಳಿಸುತ್ತದೆ. ಇದು ಪ್ರಪಂಚದ ಬಹುತೇಕ ರಾಷ್ಟ್ರಗಳಲ್ಲಿ ಮಹಿಳೆಯರ ಶೈಕ್ಷಣಿಕ ಅನುಭೋಗ ಕಡಿಮೆ ಇರುವುದನ್ನು ತೋರಿಸುತ್ತದೆ.[೧೨]

ಅಲ್ಲದೆ ಜೈವಿಕ ನೀತಿಯ ಆಧಾರದ ಮೇಲೆ ಮಹಿಳೆಯರಿಗೆ ಪುರುಷರಿಗೆ ಸಮಾನವಾದ ಅನುಭೋಗ ಅಗತ್ಯವಿಲ್ಲವೆಂದು ಪ್ರತಿಪಾದಿಸಲಾಗುತ್ತಿದೆ. ಕಷ್ಟಸಾಧ್ಯವಾದ ಕೆಲಸಗಳನ್ನು ಮಾಡುವ ಸಾಮರ್ಥ್ಯ ಪುರುಷರ ದೇಹಕ್ಕೆ ಮಾತ್ರ ಇದೆ. ಆದ್ದರಿಂದ ಅವರಿಗೆ ಹೆಚ್ಚಿನ ಆಹಾರ ಹಾಗೂ ಪೌಷ್ಟಿಕ ಆಹಾರದ ಅವಶ್ಯಕತೆ ಇದೆ. ಮಹಿಳೆಯರು ಕಡಿಮೆ ದೈಹಿಕ ಶ್ರಮವಿರುವ ಕೆಲಸ ಮಾಡುವವರು ಮತ್ತು ಕೋಮಲ ಸ್ವಭಾವದವರು. ಆದ್ದರಿಂದ ಅವರಿಗೆ ಅಧಿಕ ಪ್ರಮಾಣದ ಆಹಾರ ಮತ್ತು ಪೌಷ್ಟಿಕ ಆಹಾರದ ಅಗತ್ಯತೆ ಕಡಿಮೆ ಇರುತ್ತದೆ ಎಂದು ಜೈವಿಕವಾಗಿ ಬಿಂಬಿಸಲಾಗುತ್ತಿದೆ. ಆದರೆ ಕೃಷಿಕಾರ್ಮಿಕರಾಗಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿಯುತ್ತಿರುವ ಮಹಿಳೆಯರು ಪುರುಷರಿಗೆ ಸಮಾನವಾದ ಮತ್ತು ಭಾರವಾದ ಕೆಲಸಗಳನ್ನು ದೈಹಿಕ ಶ್ರಮ ವಹಿಸಿ ಮಾಡುತ್ತಿದ್ದಾರೆ. ಈ ಅಂಶವನ್ನು ಗಮನಿಸಿದರೆ ಮಹಿಳೆಯರಿಗೆ ಹೆಚ್ಚಿನ ಆಹಾರದ ಅಗತ್ಯವಿಲ್ಲ. ಪೌಷ್ಟಿಕ ಆಹಾರದ ಅಗತ್ಯವಿಲ್ಲ, ಅವಳ ದೇಹವು ಕೋಮಲವಾದುದು ಎಂಬ ಸಂಗತಿಗಳು ಕೇವಲ ಪೂರ್ವಗ್ರಹಗಳು ಮತ್ತು ಮಹಿಳೆಯನ್ನು ಅಧೀನ ಸ್ಥಿತಿಗೆ ತಳ್ಳುವ ಪುರುಷಶಾಹಿ ವ್ಯವಸ್ಥೆಯ ತಂತ್ರಗಳು ಎಂದು ತಿಳಿದುಬರುತ್ತದೆ.

ಹೀಗೆ ಆರ್ಥಿಕತೆಯಲ್ಲಿ ಪುರುಷಶಾಹಿ ಚಿಂತನೆಗಳು ಕಾರ್ಯ ಮಾಡುತ್ತಿರುವವರಿಂದ ಮಹಿಳೆಗೆ ಆಹಾರದ ಅನುಭೋಗದಿಂದ ಹಿಡಿದು ಆಸ್ತಿ, ಸಂಪತ್ತಿನ ಅನುಭೋಗವು ದೊರೆಯದಂತೆ ಆರ್ಥಿಕ ಸಂರಚನೆಯನ್ನು, ಆರ್ಥಿಕ ಪರಿಕಲ್ಪನೆಗಳನ್ನು ರೂಪಿಸಿರುವುದು ಕಂಡುಬರುತ್ತದೆ.

**ಉತ್ಪಾದನೆ**

ಸಾಂಪ್ರದಾಯಿಕ ಅರ್ಥಶಾಸ್ತ್ರದ ಪರಿಭಾಷೆಯಲ್ಲಿ ಉತ್ಪಾದನೆ ಎಂದರೆ "ತುಷ್ಟಿಗುಣದ ಸೃಷ್ಟಿ ಅಥವಾ ನಿರ್ಮಾಣ ಎಂದು ಅರ್ಥ. ಕಚ್ಚಾವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯನ್ನು ಉತ್ಪಾದನೆ ಎಂದು ಕರೆಯಲಾಗುತ್ತದೆ. ಕಚ್ಚಾವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ಪರಿವರ್ತಿಸುವ ಪ್ರಕ್ರಿಯೆಯಲ್ಲಿ ಅನೇಕ ಸಂಗತಿಗಳು ಪಾಲ್ಗೊಳ್ಳುತ್ತವೆ. ಹೀಗೆ ಉತ್ಪಾದನೆಯಲ್ಲಿ ಪಾಲ್ಗೊಳ್ಳುವ ಸಂಗತಿಗಳನ್ನು ಉತ್ಪಾದನಾಂಗಗಳು ಎಂದು ಕರೆಯುತ್ತಾರೆ. ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಗಳ ಒಟ್ಟು ಪ್ರಯತ್ನದ ಫಲವೇ ಉತ್ಪಾದನೆಯಾಗಿದೆ. ಅರ್ಥಶಾಸ್ತ್ರದ ವಿಶಾಲ ಅರ್ಥದಲ್ಲಿ ಉತ್ಪಾದನೆ ಎಂದರೆ "ಯಾವುದೇ ಸರಕಿನಲ್ಲಿ ವಿನಿಮಯ ಮೌಲ್ಯ ಮತ್ತು ತುಷ್ಟಿಗುಣವನ್ನು ತುಂಬುವುದೇ" ಆಗಿದೆ. ಈ ವಿನಿಮಯ ಮೌಲ್ಯ ಮತ್ತು ತುಷ್ಟಿಗುಣವನ್ನು ಸರಕು ಮತ್ತು ಸೇವೆಗಳಲ್ಲಿ ತುಂಬುವ ಮೂಲಕ ಅವುಗಳನ್ನು ಮಾರುಕಟ್ಟೆ ಪ್ರವೇಶಿಸುವಂತೆ ಮಾಡುವ ಪ್ರಕ್ರಿಯೆ ಉತ್ಪಾದನೆಯಾಗಿದೆ.

ಉತ್ಪಾದನೆ ಎಂಬ ಪರಿಭಾವನೆಯನ್ನು ವಿವಿಧ ಅರ್ಥಶಾಸ್ತ್ರಜ್ಞರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಪ್ರೊ.ಹಿಕ್ಸ್ ಅವರು ವಿನಿಮಯದ ಮೂಲಕ ಬೇರೆ ಬೇರೆ ಜನರ ಬಯಕೆಗಳನ್ನು ಈಡೇರಿಸುವತ್ತಾ ನಿರ್ದೇಶಿತವಾದ ಯಾವುದೇ ಚಟುವಟಿಕೆ ಉತ್ಪಾದನೆಯಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ ಮೇಯರ್ಸ್ ಅವರು ವಿನಿಮಯಕ್ಕೋಸ್ಕರ ಸರಕು ಮತ್ತು ಸೇವೆಗಳನ್ನು ಸೃಷ್ಟಿಸುವ ಯಾವುದೇ ಚಟುವಟಿಕೆ ಉತ್ಪಾದನೆಯಾಗುತ್ತದೆ ಎಂದು ವ್ಯಾಖ್ಯಾನಿಸಿದ್ದಾರೆ.[೧೩] ಅರ್ಥಶಾಸ್ತ್ರಜ್ಞರ ಮತ್ತು ಅರ್ಥಶಾಸ್ತ್ರದ ನಿರ್ದಿಷ್ಟ ವ್ಯಾಖ್ಯಾನಗಳನ್ನು ಗಮನಿಸಿದರೆ ಉತ್ಪಾದನೆ ಎಂಬುದು ಮಾರುಕಟ್ಟೆಯನ್ನು ಪ್ರವೇಶಿಸುವ ಮತ್ತು ವಿನಿಮಯ ಮೌಲ್ಯ ಹೊಂದಿರುವ ಸರಕು ಸೇವೆಗಳನ್ನು ಸೃಷ್ಟಿಸುವ ಕ್ರಿಯೆ ಎಂಬುದು ತಿಳಿದುಬರುತ್ತದೆ.

ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದರೆ ಅರ್ಥಶಾಸ್ತ್ರದಲ್ಲಿ ಉತ್ಪಾದನೆಯ ನಿರ್ವಚನವು ಅತ್ಯಂತ ಸೀಮಿತ ಅರ್ಥವನ್ನು ನೀಡುತ್ತಿರುವುದು ಕಂಡುಬರುತ್ತಿದೆ. ಏಕೆಂದರೆ ಇಲ್ಲಿ ಉತ್ಪಾದನೆಯು ಮಾರುಕಟ್ಟೆಯನ್ನು ಪ್ರವೇಶಿಸುವ, ವಿನಿಮಯ ಮಹತ್ವವನ್ನು ಪಡೆದುಕೊಂಡ ಕ್ರಯಪಟ್ಟಿಯನ್ನು ತಲೆಗೆ ಹಚ್ಚಿಕೊಂಡ ಚಟುವಟಿಕೆಗಳನ್ನು ಮಾತ್ರ ಉತ್ಪಾದನೆ ಎಂದು ಪರಿಗಣಿಸಲಾಗುತ್ತದೆ. ಹೀಗಾಗಿ ಇಲ್ಲಿ ಉತ್ಪಾದನೆ ಎಂದರೆ

ಕುಟುಂಬದ ಹೊರಗಡೆ ನಡೆಯುವ ಚಟುವಟಿಕೆಗಳನ್ನು ಮಾತ್ರ ಪರಿಗಣಿಸಲಾಗುತ್ತದೆ ಎಂಬ ಅಂಶ ಕಂಡುಬರುತ್ತಿದೆ. ಇದರಿಂದಾಗಿ ಕೌಟುಂಬಿಕ ಚಟುವಟಿಕೆಗಳು, ಸಂತಾನೋತ್ಪತ್ತಿ ಚಟುವಟಿಕೆಗಳು, ಉತ್ಪಾದನೆಯ ವ್ಯಾಪ್ತಿಗೆ ಒಳಪಡುವುದಿಲ್ಲ. ಅಲ್ಲದೆ ಉತ್ಪಾದನೆಯ ವ್ಯಾಪ್ತಿಗೆ ಮಾರುಕಟ್ಟೆಯ ಚೌಕಟ್ಟಿಗೆ, ಮತ್ತು ಕ್ರಯಪಟ್ಟಿಗೆ ಸಲ್ಲದ ಚಟುವಟಿಕೆಗಳು ಎಷ್ಟೇ ಉಪಯುಕ್ತತೆಯನ್ನು ಪಡೆದಿದ್ದರೂ ಅವು ಉತ್ಪಾದನೆ ಎಂದು ಕರೆಸಿಕೊಳ್ಳುವುದಿಲ್ಲ. ಇಂತಹ ಚಟುವಟಿಕೆಗಳಲ್ಲಿಯೇ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ತೊಡಗಿರುವುದರಿಂದ ಅವರ ಚಟುವಟಿಕೆಗಳು ಉತ್ಪಾದನಾ ವ್ಯಾಪ್ತಿಗೆ ಮತ್ತು ಮಾರುಕಟ್ಟೆಯ ಚೌಕಟ್ಟಿಗೆ ಸೇರುವುದಿಲ್ಲ. ಅಂತಹ ಚಟುವಟಿಕೆಗಳನ್ನು ಅರ್ಥಶಾಸ್ತ್ರದಲ್ಲಿ ಉತ್ಪಾದನೆ ಎಂದು ಪರಿಗಣಿಸಲ್ಪಡು ವುದಿಲ್ಲ, ಮಹಿಳೆಯರು ಮಾಡುವ ಈ ಚಟುವಟಿಕೆಗಳಿಗೆ ವಿನಿಮಯ ಮೌಲ್ಯಕ್ಕಿಂತ ಉಪಯುಕ್ತತೆ ಮೌಲ್ಯ ಅಧಿಕವಾಗಿರುತ್ತದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಮಾರಾಟವನ್ನು ಲಾಭದ ಗುರಿಯಾಗಿಟ್ಟುಕೊಳ್ಳದ, ಮಾರುಕಟ್ಟೆ ಪ್ರವೇಶಿಸಿದ ಕ್ರಯಪಟ್ಟಿಯನ್ನು ಹಣೆಗೆ ಹಚ್ಚಿಕೊಳ್ಳದ ಅನೇಕ ಬಗೆಯ ಚಟುವಟಿಕೆಗಳಿವೆ. ಇವು ಸಮಾಜದ ಅಭ್ಯುದಯಕ್ಕೆ ಮತ್ತು ಪ್ರಗತಿಗೆ ಮಹತ್ವದ ಪಾತ್ರ ನಿರ್ವಹಿಸುತ್ತವೆ. ಇವುಗಳಿಗೆ ವಿನಿಮಯ ಮಹತ್ವ ಇರುವುದಿಲ್ಲ. ಅದರೆ ಉಪಯೋಗಿ ಮಹತ್ವವನ್ನು ಹೊಂದಿರುತ್ತವೆ. ಅಲ್ಲದೆ ಮಾನವನ ಬಯಕೆಯನ್ನು ಈಡೇರಿಸುವ ಗುಣವನ್ನು ಹೊಂದಿರುತ್ತವೆ. ಇಂತಹ ಚಟುವಟಿಕೆಗಳ ಮಹಿಳೆಯರೇ ಅಧಿಕ ಪ್ರಮಾಣದಲ್ಲಿ ಮಾಡುತ್ತಿರುತ್ತಾರೆ. ಈ ರೀತಿಯ ಚಟುವಟಿಕೆಗಳು ಸಂಗೋಪನಾ ಚಟುವಟಿಕೆಗಳೆಂದು ಕರೆಸಿಕೊಂಡು ಉತ್ಪಾದನೆ ಮತ್ತು ಉತ್ಪಾದನೆಯ ಪರಿಧಿಯಿಂದ ದೂರ ಉಳಿಯುತ್ತವೆ. ಉದಾಹರಣೆಗೆ ಮನೆಗಳಲ್ಲಿ ಗೃಹಿಣಿಯು ಮಾಡುವ ಅಡುಗೆ ಕೆಲಸವನ್ನೇ ನೋಡಬಹುದು. ಇದು ಒಂದು ವಿಧದ ದುಡಿಮೆ. ಇಲ್ಲಿ ಅಡುಗೆ ಮಾಡಲು ಗೃಹಿಣಿ ತನ್ನ ಶ್ರಮವನ್ನು ವ್ಯಯ ಮಾಡುತ್ತಾಳೆ. ಬಂಡವಾಳವನ್ನು ವಿನಿಯೋಗಿಸುತ್ತಾಳೆ. ಹೀಗಾಗಿ ಈ ಕಾರ್ಯ 'ಉತ್ಪಾದನೆ'ಯಾಗುತ್ತದೆ. ಆದರೆ ಅರ್ಥಶಾಸ್ತ್ರದಲ್ಲಿ ಇಂತಹ ಚಟುವಟಿಕೆಗಳನ್ನು ಉತ್ಪಾದನೆ ಎಂದು ಪರಿಗಣಿಸಲಾಗುವುದಿಲ್ಲ. ಮಹಿಳೆಯರೇ ಮಾಡುವ ಇಂತಹ ಅನೇಕ ಚಟುವಟಿಕೆಗಳು 'ಉತ್ಪಾದನೆ'ಯ ವ್ಯಾಪ್ತಿಯಿಂದ ದೂರ ಉಳಿದಿದೆ. ಉದಾಹರಣೆಗೆ ಬಟ್ಟೆ ತೊಳೆಯುವುದು, ಕಸ ಗುಡಿಸುವುದು, ಮುಸುರೆ ತಿಕ್ಕುವುದು, ಕಾಳುಗಳನ್ನು ಒಣಗಿಸುವುದು, ಕುಡಿಯಲು ನೀರು ಸಂಗ್ರಹ, ಉರುವಲು ಸಂಗ್ರಹ, ಮಕ್ಕಳ ಪೋಷಣೆ, ಉಪ್ಪಿನ ಕಾಯಿ ಹಪ್ಪಳ, ಸಂಡಿಗೆ ತಯಾರಿಕೆ, ಮನೆಯ ಶೃಂಗಾರ, ಪೂಜೆ ವ್ರತ, ಪುರಸ್ಕಾರ, ಸ್ವಂತ ಹೊಲಗದ್ದೆಗಳಲ್ಲಿ ದುಡಿಮೆ, ದನಕರುಗಳನ್ನು ಕಾಯುವುದು, ಹಾಲು ಹಿಂಡುವುದು, ಮೇವು, ಸೋಪ್ಪು, ಸೌದೆ ತರುವುದು ಇತ್ಯಾದಿ ಕೆಲಸಗಳು 'ಉತ್ಪಾದನೆ' ಎಂಬ ಅರ್ಥದಿಂದ ದೂರ ಉಳಿದಿವೆ. ಆದರೆ ಇದೇ ಚಟುವಟಿಕೆಗಳನ್ನು 'ಪುರುಷ'ರು ದೊಡ್ಡ ಪ್ರಮಾಣದಲ್ಲಿ ಉದ್ಯೋಗದ ದೃಷ್ಟಿಯಿಂದ ಮಾಡಿದರೆ ಅದಕ್ಕೆ ಮಾರುಕಟ್ಟೆ ಮಹತ್ವವಿರುತ್ತದೆ.

ಅಲ್ಲದೆ ವಿನಿಮಯ ಮೌಲ್ಯವು ದೊರೆತು 'ಉತ್ಪಾದನೆ'ಯ ಅರ್ಥವನ್ನು ಪಡೆದುಕೊಳ್ಳುತ್ತದೆ. ಉದಾಹರಣೆಗೆ 'ಪುರುಷ'ರು ಬಾಣಸಿಗನಾಗಿ ಮದುವೆ ಮತ್ತು ಸಮಾರಂಭಗಳಲ್ಲಿ ಅಡುಗೆ ತಯಾರಿಸುವುದು, ದನಕರುಗಳ ಪಾಲನೆ, ಕೃಷಿ ಚಟುವಟಿಕೆಗಳಲ್ಲಿ ತೊಡಗುವುದು ಇತ್ಯಾದಿ ಚಟುವಟಿಕೆಗಳು. ಆದ್ದರಿಂದ ಅರ್ಥಶಾಸ್ತ್ರದಲ್ಲಿ 'ಉತ್ಪಾದನೆ' ಎಂಬ ಪರಿಕಲ್ಪನೆಯನ್ನು ಲಿಂಗಸಂಬಂಧಿ ನೆಲೆಯಿಂದ ಗುರುತಿಸುತ್ತಿರುವುದು ಕಂಡುಬರುತ್ತದೆ.

### ಆರ್ಥಿಕೋತ್ಪಾದನೆ ಮತ್ತು ಸಂತಾನೋತ್ಪತ್ತಿ

ಅರ್ಥಶಾಸ್ತ್ರವು ಮಾರುಕಟ್ಟೆ ಮಹತ್ವ, ವಿನಿಮಯ ಮಹತ್ವವುಳ್ಳ ಚಟುವಟಿಕೆಗಳನ್ನು, ಕುಟುಂಬದ ಹೊರಗೆ ಲಾಭಗಳಿಸುವ ಉದ್ದೇಶದಿಂದ ನಡೆಸುವ ಚಟುವಟಿಕೆಗಳನ್ನು 'ಆರ್ಥಿಕ ಉತ್ಪಾದನೆ' ಎಂದು ಪರಿಗಣಿಸುತ್ತದೆ. ಇಂತಹ ಚಟುವಟಿಕೆಗಳು ಸಂಪಾದನಾ ಗುಣವನ್ನು ಒಳಗೊಂಡಿರುತ್ತವೆ. ಆದರೆ ಸಂತಾನೋತ್ಪತ್ತಿ ಚಟುವಟಿಕೆಗಳು ಸಂಗೋಪನ ಗುಣವನ್ನು ಹೊಂದಿರುತ್ತವೆ. ಇದರಿಂದಾಗಿ ಇವು ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲ ಹಾಗೂ ಇವುಗಳಿಗೆ ವಿನಿಮಯ ಮೌಲ್ಯ ಮತ್ತು ಕ್ರಯಪಟ್ಟಿ ಇರುವುದಿಲ್ಲ. ಹೀಗಾಗಿ ಈ ಚಟುವಟಿಕೆಗಳನ್ನು ಉತ್ಪಾದಕ ಚಟುವಟಿಕೆ ಎಂದು ಅರ್ಥಶಾಸ್ತ್ರದಲ್ಲಿ ಪರಿಗಣಿಸಲಾಗುವುದಿಲ್ಲ. ಅಲ್ಲದೆ ಅರ್ಥಶಾಸ್ತ್ರದಲ್ಲಿ ಆರ್ಥಿಕ ಉತ್ಪಾದನೆಯನ್ನು ಸಾರ್ವಜನಿಕವೆಂದು ಮತ್ತು ಸಂತಾನೋತ್ಪತ್ತಿ ಚಟುವಟಿಕೆಯನ್ನು ಖಾಸಗಿಯಾದುದೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ಸಂತಾನೋತ್ಪತ್ತಿ ಚಟುವಟಿಕೆಗಳನ್ನು ಮಹಿಳೆಯರಿಗೆ ಮೀಸಲಿಡಲಾಗಿದೆ. ಅಲ್ಲದೆ ಸಂತಾನೋತ್ಪತ್ತಿ ಚಟುವಟಿಕೆಗಳನ್ನು ನಿರ್ವಹಿಸಬೇಕಾದುದು 'ಜೈವಿಕ ನೀತಿ'ಎಂದು ಹೇಳಲಾಗುತ್ತದೆ. ಸಂತಾನೋತ್ಪತ್ತಿ, ಸಂಗೋಪನಾ ದುಡಿಮೆಯು ಸಂಪಾದನೆರಹಿತವು ಮತ್ತು ಕ್ರಯರಹಿತವು ಆದುದರಿಂದ ಉತ್ಪಾದನೆ ಪರಿಧಿಯಿಂದ ದೂರ ಉಳಿದಿದೆ.

ಅರ್ಥಶಾಸ್ತ್ರವು ಮಾರುಕಟ್ಟೆ ಪ್ರವೇಶಿಸುವ, ಹಣದ ರೂಪದಲ್ಲಿ ಕ್ರಯಪಟ್ಟಿಯುಳ್ಳ ಚಟುವಟಿಕೆಗಳನ್ನು ಮಾತ್ರ ಉತ್ಪಾದನೆ ಎಂದು ಪರಿಗಣಿಸುತ್ತದೆ. ಅಲ್ಲದೆ ಈ ಬಗೆಯ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿರುವ ಸಾಧನೆಗಳಿಗೆ ಮಾತ್ರ ಸಂಪಾದನೆಯನ್ನು ನೀಡುತ್ತದೆ. ಆದರೆ ಸಂಗೋಪನಾ ಚಟುವಟಿಕೆಗಳು ಎಷ್ಟೇ ಮಹತ್ವದ್ದಾಗಿದ್ದರು ಅವು ಇಲ್ಲಿ ಉತ್ಪಾದನೆ ಎನಿಸಿಕೊಳ್ಳುವುದಿಲ್ಲ. 'ಸಂತಾನೋತ್ಪತ್ತಿ ಮತ್ತು ಸಂಗೋಪನಾ ಚಟುವಟಿಕೆಗಳಿಲ್ಲದೆ ಕ್ರಯರಹಿತ ಸಂಪಾದನಾರಹಿತ ಚಟುವಟಿಕೆಗಳನ್ನು ಅರ್ಥಶಾಸ್ತ್ರವು ಗಣನೆ ಮಾಡುವುದಿಲ್ಲ. ಜನರು ಸಾಮುದಾಯಿಕ ನಿಯೋಗವಾದಿ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಇಂತಹ ಚಟುವಟಿಕೆಗಳನ್ನು ಅರ್ಥಶಾಸ್ತ್ರ ಉತ್ಪಾದನೆ ಎಂದು ಪರಿಗಣನೆ ಮಾಡುವುದಿಲ್ಲ. ಉದಾಹರಣೆಗೆ ಮಡಿಕೆ ಮಾಡುವ ಕುಂಬಾರನಿಗೆ ಕುಂಬಾರನ ಹೆಂಡತಿ ಮಣ್ಣನ್ನು ಕಲಸಿ ಮೆತ್ತಗೆ ಮಾಡಿ ಸರಬರಾಜು ಮಾಡಬಹುದು, ನೇಕಾರನಿಗೆ ಅವನ ಹೆಂಡತಿ ಲಾಳಿಯನ್ನು ಸಿದ್ಧಮಾಡಿಕೊಡುವುದು, ಹಾಲು ಹಿಂಡುವ

ಎಮ್ಮೆ, ಹಸು, ಆಕಳಿಗೆ ಮುಸುರೆ ಹಿಂಡಿ, ಕಲಗಚ್ಚು ಸಿದ್ಧ ಮಾಡಿಕೊಡಬಹುದು. ಇವೆಲ್ಲ ಚಟುವಟಿಕೆಗಳು ಉತ್ಪಾದನಾ ಚಟುವಟಿಕೆಗಳಾಗಿವೆ. ಆದರೆ ಅರ್ಥಶಾಸ್ತ್ರವು ಇವುಗಳನ್ನು ಉತ್ಪಾದನೆ ಎಂದು ಪರಿಗಣಿಸಿ ಮಾಡುವುದಿಲ್ಲ. ಏಕೆಂದರೆ ಇಲ್ಲಿ ಸಂಪಾದನೆ ಎಂಬುದು ಇರುವುದಿಲ್ಲ. ಅಲ್ಲದೆ ಈ ಚಟುವಟಿಕೆಗಳ ಮೌಲ್ಯವನ್ನು ಹಣದ ರೂಪದಲ್ಲಿ ಮಾಪನ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಈ ರೀತಿಯ ಚಟುವಟಿಕೆಗೆ ಯಾವುದೇ ಸ್ಥಾನವಿಲ್ಲ. ಹೀಗಾಗಿ ಆರ್ಥಿಕತೆಯು ಸಂತಾನೋತ್ಪತ್ತಿ, ಸಂಗೋಪನಾ ಚಟುವಟಿಕೆಗಳನ್ನು ಮತ್ತು ಕ್ರಯರಹಿತ, ಸಂಪಾದನಾರಹಿತ ಚಟುವಟಿಕೆಗಳನ್ನು ಉತ್ಪಾದನಾ ಚಟುವಟಿಕೆಗಳೆಂದು ಪರಿಗಣಿಸುವುದಿಲ್ಲ'.[೪]

**ಕುಟುಂಬಸಂಬಂಧಿ ಮತ್ತು ಮಾರುಕಟ್ಟೆಸಂಬಂಧಿ ಉತ್ಪಾದನೆ**

ಉತ್ಪಾದನಾ ಚಟುವಟಿಕೆಗಳನ್ನು ಮೂಲಭೂತವಾಗಿ ಕುಟುಂಬಸಂಬಂಧಿ ಮತ್ತು ಮಾರುಕಟ್ಟೆ ಸಂಬಂಧಿ ಚಟುವಟಿಕೆಗಳೆಂದು ವಿಂಗಡಿಸಲಾಗಿದೆ. ಕುಟುಂಬಸಂಬಂಧಿ ಚಟುವಟಿಕೆಗಳು ಎರಡು ರೀತಿಯಲ್ಲಿವೆ. ಮೊದಲನೆಯದನ್ನು ಅವರ್ಗೀಯವೆಂದು ಮತ್ತು ಎರಡನೆಯದನ್ನು ವರ್ಗೀಯವೆಂದು ವಿಭಾಗಿಸಲಾಗಿದೆ. ಯಾವ ಚಟುವಟಿಕೆಗಳು ಉತ್ಪಾದನೆಯಲ್ಲಿ ತೊಡಗಿರುವವರಿಗೆ ಬಾಹ್ಯವಾಗಿರುತ್ತವೋ, ಅನ್ಯವಾಗಿರುತ್ತವೋ ಅಂತಹ ಚಟುವಟಿಕೆಗಳನ್ನು ವರ್ಗೀಯವೆಂದು, ಯಾವ ಚಟುವಟಿಕೆಗಳು ಉತ್ಪಾದನೆಯಲ್ಲಿ ತೊಡಗಿರುವವರ ಅಂತರ್ಗತ ಅವಿಭಾಜ್ಯವಾಗಿರುವವೋ ಅಂತಹವನ್ನು ಅವರ್ಗೀಯವೆಂದು ವಿಭಜಿಸಲಾಗಿದೆ. ಅದೇ ರೀತಿ ಮಾರುಕಟ್ಟೆ ಸಂಬಂಧಿ ಚಟುವಟಿಕೆಗಳನ್ನು ಕುಟುಂಬದ ಒಳಗಿನ ಮತ್ತು ಕುಟುಂಬದ ಹೊರಗಿನ ಎಂದು ವರ್ಗೀಕರಿಸಬಹುದು. ಮಹಿಳೆಯರ ದುಡಿಮೆಯು ಕೇವಲ ಸಂತಾನೋತ್ಪತ್ತಿ ಸಂಗೋಪನಾ ಸ್ವರೂಪದ್ದು ಎಂದು ವರ್ಗೀಕರಿಸುವುದು ಸಾಧ್ಯವಿಲ್ಲ. ಏಕೆಂದರೆ ಮಹಿಳೆಯರು ಸಹ ಉತ್ಪಾದನಾ ಚಟುವಟಿಕೆಗಳಲ್ಲಿ ದುಡಿಯುತ್ತಿದ್ದಾರೆ. ಕಡುಬಡತನದಿಂದ ನರಳುವ ಕುಟುಂಬಗಳಲ್ಲಿ ಮಹಿಳೆಯರು ಬಡತನದ ಬೇಗೆಯನ್ನು ತಾಳಲಾರದ ಕುಟುಂಬಕ್ಕೆ ಆದಾಯ ತರುವ ಉದ್ದೇಶದಿಂದ ಮಹಿಳೆಯರು ಸಂಪಾದನಾ ಚಟುವಟಿಕೆಗಳಲ್ಲಿ ಅಧಿಕ ಸಂಖ್ಯೆಯಲ್ಲಿ ತೊಡಗಿರುವುದನ್ನು ಮಾನವ ಅಭಿವೃದ್ಧಿ ವರದಿ ೧೯೯೫ ಮತ್ತು ಕ್ಷೇತ್ರ ಕಾರ್ಯದಿಂದ ತಿಳಿದುಬಂದಿದೆ.

'ಆರ್ಥಿಕೋತ್ಪಾದನೆ' 'ಸಂಪಾದನೆ-ಸಂಗೋಪನೆ' ಎಂಬ ಎರಡೂ ನೆಲೆಗಳನ್ನು ಹೊಂದಿವೆ. 'ಬರಣಿ ಕುಳ್ಳುಗಳನ್ನು ಸಿದ್ಧಪಡಿಸುವಲ್ಲಿ ಮಹಿಳೆಯ ಪಾತ್ರ ದುಡಿಮೆಯು ಹೇಗೆ ಆರ್ಥಿಕೋತ್ಪಾದನೆ ಮತ್ತು ಸಂಪಾದನೆ-ಸಂಗೋಪನೆ ನೆಲೆಗಳನ್ನು ಹೊಂದಿದೆ ಎಂಬುದನ್ನು ರೋರ್ ಜೆಫ್ರಿ ಮತ್ತು ಇತರರು ತಮ್ಮ ಒಂದು ಅಧ್ಯಯನದಲ್ಲಿ ದೃಢಪಡಿಸಿದ್ದಾರೆ. ಬೆರಣಿಯನ್ನು ಸಿದ್ಧಪಡಿಸುವುದು ಒಂದು ಬಗೆಯಲ್ಲಿ ಕೃಷಿ ಸಂಬಂಧಿ ಚಟುವಟಿಕೆಯಾಗಿದೆ. ಬೆರಣಿಯು ಮಾರುಕಟ್ಟೆ ಮತ್ತು ವಿನಿಮಯ ಮಹತ್ವವುಳ್ಳ ಸರಕಾಗಿದೆ.

ಅದು ಅಡುಗೆ ಇಂಧನವಾಗಿ, ಅನುಭೋಗಿ ಸರಕಾಗಿ, ಮತ್ತು ಸಂತಾನೋತ್ಪತ್ತಿ ಚಟುವಟಿಕೆಯಾಗಿ ನಡೆಯುವ ಕ್ರಿಯೆಯಾಗಿದೆ. ಆದ್ದರಿಂದ ಮಹಿಳೆ ಮಾಡುವ ಚಟುವಟಿಕೆಗಳು ಸಂತಾನೋತ್ಪತ್ತಿ ಮತ್ತು ಆರ್ಥಿಕೋತ್ಪಾದನೆ ಎರಡನ್ನೂ ಒಳಗೊಂಡಿದೆ.[೧೫] ಆದರೆ ಆರ್ಥಿಕತೆಯಲ್ಲಿ 'ಉತ್ಪಾದನೆ' ಎಂಬುದು ಸೀಮಿತ ವ್ಯಾಪ್ತಿ ಹೊಂದಿರುವುದರಿಂದ ಮಹಿಳೆಯರು ಮಾಡುವ 'ಉತ್ಪಾದನೆ'ಯು 'ಉತ್ಪಾದನೆ' ಅಲ್ಲವೆಂಬಂತೆ ಬಿಂಬಿತವಾಗುತ್ತಿದೆ.

## ವಿನಿಮಯ

ವಿನಿಮಯವು ಅರ್ಥಶಾಸ್ತ್ರದಲ್ಲಿ ತನ್ನದೇ ಆದ ಮಹತ್ವವನ್ನು ಪಡೆದಿದೆ. ಉತ್ಪಾದಕನಿಂದ ಉತ್ಪಾದಿತ ಸರಕು-ಸೇವೆಗಳನ್ನು ಗ್ರಾಹಕರಿಗೆ ತಲುಪಿಸುವ ಕಾರ್ಯದಲ್ಲಿ 'ವಿನಿಮಯ' ಮುಖ್ಯಪಾತ್ರ ವಹಿಸುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ ವಿನಿಮಯ ಅಂದರೆ ಸರಕು ಮತ್ತು ಸೇವೆಗಳನ್ನು ಬದಲಾಯಿಸಿಕೊಳ್ಳುವ ಕ್ರಿಯೆಯಾಗಿದೆ. ಅಂದರೆ ನಮ್ಮಲ್ಲಿರುವ ವಸ್ತುಗಳನ್ನು ಕೊಟ್ಟು ನಮ್ಮಲ್ಲಿ ಇಲ್ಲದ ಸರಕುಗಳನ್ನು ಪಡೆಯುವುದು ವಿನಿಮಯವಾಗಿದೆ. ನಿರ್ದಿಷ್ಟವಾಗಿ ಅರ್ಥಶಾಸ್ತ್ರದಲ್ಲಿ ವಿನಿಮಯ ಎಂದರೆ ಮಾರುಕಟ್ಟೆಯಲ್ಲಿ ಸರಕು-ಸೇವೆಗಳ ಬೇಡಿಕೆ ಮತ್ತು ಪೂರೈಕೆಗಳ ನಡುವಿನ ಸಂಬಂಧವನ್ನು 'ವಿನಿಮಯ' ಎಂದು ಕರೆಯುತ್ತಾರೆ. ಇಲ್ಲಿ ಅನುಭೋಗವು ಬೇಡಿಕೆಯನ್ನು ಮತ್ತು ಉತ್ಪಾದನೆಯು ಪೂರೈಕೆಯನ್ನು ಪ್ರತಿನಿಧಿಸಿದರೆ ವಿನಿಮಯವು ಅವೆರಡರ ನಡುವೆ ಸಂಬಂಧ ಕಲ್ಪಿಸುವ ಕೊಂಡಿಯಾಗಿದೆ. ಆರ್ಥಿಕತೆಯಲ್ಲಿ ವಸ್ತುಗಳ ವಿನಿಮಯ ನಡೆಯಬೇಕಾದರೆ ಅವುಗಳ 'ಮೌಲ್ಯ' ನಿರ್ಧಾರವಾಗಬೇಕು. ಅರ್ಥಶಾಸ್ತ್ರದಲ್ಲಿ 'ಮೌಲ್ಯ' ಎಂದರೆ ಕೊಳ್ಳುವ ಶಕ್ತಿ ಎಂದು ಅರ್ಥವಾಗುತ್ತದೆ. ಕೊಳ್ಳುವ ಶಕ್ತಿ ಎಂದರೆ ಸರಕು ಮತ್ತು ಸೇವೆಗಳ ವಿನಿಮಯ ದರ, ವಸ್ತುಗಳ ಆ ವಿನಿಮಯ ದರವೇ 'ಮೌಲ್ಯ' ಎನಿಸಿಕೊಳ್ಳುತ್ತದೆ.

ವಸ್ತುಗಳಿಗೆ ಮೌಲ್ಯ ಬರಬೇಕಾದರೆ ಅವು ಮುಖ್ಯವಾಗಿ ಎರಡು ಗುಣಗಳನ್ನು ಹೊಂದಿರಬೇಕು. ಒಂದು ವಸ್ತುಗಳು ತುಷ್ಟಿಗುಣ ಹೊಂದಿರಬೇಕು ಮತ್ತು ಎರಡನೆಯದು ಅವು ಹಣಕ್ಕೆ ವಿನಿಮಯ ವಾಗುವಂತಿರಬೇಕು. ಈ ಎರಡು ಗುಣಗಳನ್ನು ಹೊಂದಿರುವಂತಹ ವಸ್ತುಗಳನ್ನು ಅಥವಾ ಸರಕು ಸೇವೆಗಳನ್ನು ಅರ್ಥಶಾಸ್ತ್ರದಲ್ಲಿ 'ವಿನಿಮಯ'ಕ್ಕೆ ಯೋಗ್ಯ ವಸ್ತುಗಳೆಂದು ಪರಿಗಣಿಸಲಾಗುತ್ತದೆ. ಆರ್ಥಿಕತೆ ಯಲ್ಲಿ ಒಂದು ವಸ್ತುವಿಗೆ ವಿನಿಮಯ ಮೌಲ್ಯವಿರಬೇಕಾದರೆ ಆ ವಸ್ತು ಐದು ಲಕ್ಷಣಗಳನ್ನು ಹೊಂದಿರ ಬೇಕಾಗುತ್ತದೆ. ಆ ಐದು ಲಕ್ಷಣಗಳೆಂದರೆ

೧. ತುಷ್ಟಿಗುಣ, ೨. ಕೊರತೆ, ೩. ಬೆಲೆ, ೪. ಬಾಹ್ಯ ರೂಪಿತ ಮತ್ತು ೫. ವರ್ಗವಣೆ[೧೬] ಈ ಐದು ಲಕ್ಷಣಗಳನ್ನು ಹೊಂದಿರುವ ವಸ್ತುಗಳನ್ನು ಮಾತ್ರ ಆರ್ಥಿಕತೆಯಲ್ಲಿ ಅಥವಾ ಅರ್ಥವ್ಯವಸ್ಥೆಯಲ್ಲಿ ವಿನಿಮಯ ಮೌಲ್ಯವುಳ್ಳ ವಸ್ತುಗಳೆಂದು ಪರಿಗಣಿಸಲಾಗುತ್ತದೆ. ಈ ಐದು ಲಕ್ಷಣಗಳನ್ನು ಹೊಂದಿರದ

ಮತ್ತು ವಿನಿಮಯ ಮೌಲ್ಯ ಇಲ್ಲದ ಯಾವುದೇ ವಸ್ತುಗಳನ್ನು ಅಥವಾ ಸರಕು ಸೇವೆಗಳನ್ನು ಅರ್ಥಶಾಸ್ತ್ರದಲ್ಲಿ ವಿನಿಮಯ ಯೋಗ್ಯ ಸರಕೆಂದು ಪರಿಗಣಿಸಲ್ಪಡುವುದಿಲ್ಲ. ಅಲ್ಲದೆ ಅವು ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲ.

ಆದರೆ ಮಹಿಳೆಯರು ಉತ್ಪಾದಿಸುವ ವಸ್ತುಗಳಿಗೆ ವಿನಿಮಯ ಮೌಲ್ಯವಿರುವುದಿಲ್ಲ. ಹೀಗಾಗಿ ಅವರು ಉತ್ಪಾದಿಸುವ ವಸ್ತುಗಳು ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲ. ಅವು ಕುಟುಂಬದ ಒಳಗಡೆಯೇ ಅನುಭೋಗಿಸಲ್ಪಡುತ್ತವೆ. ಉದಾಹರಣೆಗೆ ರೊಟ್ಟಿ, ಚಟ್ನಿ, ಸಂಡಿಗೆ, ಹಪ್ಪಳ, ಉಪ್ಪಿನಕಾಯಿ ಇತ್ಯಾದಿ ವಸ್ತುಗಳನ್ನು ನೋಡಬಹುದು. ಮಹಿಳೆಯರು ತಯಾರಿಸಿದ ಈ ವಸ್ತುಗಳು ಯಾಕೆ ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲ. ವಿನಿಮಯ ಮತ್ತು ಮಾರುಕಟ್ಟೆ ಚಟುವಟಿಕೆಗಳಲ್ಲಿ ಯಾಕೆ ಮಹಿಳೆಯರು ತೊಡಗಿ ಕೊಂಡಿರುವುದಿಲ್ಲ? ಈ ವಿನಿಮಯ ಪ್ರಪಂಚದ ಲಿಂಗಸ್ವರೂಪ ಯಾವ ಬಗೆಯದು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡರೆ 'ವಿನಿಮಯದ' ಲಿಂಗತಾರತಮ್ಯ ತಿಳಿದುಬರುತ್ತದೆ.

ಮಾರುಕಟ್ಟೆಯು ಪುರುಷ ಪ್ರಪಂಚವಾಗಿದ್ದು ಮಹಿಳೆಯರಿಗೆ ಮಾಡಿಸಿದ್ದ ಎಂದು ಭಾವಿಸಲಾಗಿದೆ. ಹೀಗಾಗಿ ಮಾರುಕಟ್ಟೆಯು ಲಿಂಗ ನಿರಪೇಕ್ಷ ಸಂಸ್ಥೆಯಾಗಿದೆ. ಮಾರುಕಟ್ಟೆಯು ಕುಟುಂಬದ ಹೊರಗೆ ಸಾರ್ವಜನಿಕ ಕ್ಷೇತ್ರದಲ್ಲಿ ನಡೆಯುವ ಚಟುವಟಿಕೆಯಾಗಿದೆ. ಈ ಚಟುವಟಿಕೆಯು ಅಪಾರವಾದ ಸಂಚಾರ-ಸಾಗಾಣಿಕೆಯನ್ನು ಬಯಸುತ್ತದೆ. ಇಲ್ಲಿನ ವ್ಯವಹಾರವು ಹಣಕಾಸು, ಬ್ಯಾಂಕಿಂಗ್ ಚಟುವಟಿಕೆಗಳನ್ನು ಒಳಗೊಂಡಿದೆ. ಮಹಿಳೆಯರ ಕಾರ್ಯಕ್ಷೇತ್ರವು ಕುಟುಂಬ ಆಗಿರುವುದರಿಂದ ಅದು ಖಾಸಗಿ ಚೌಕಟ್ಟನ್ನು ಹೊಂದಿರುವುದರಿಂದ ಮಾರುಕಟ್ಟೆಯ ಸಾರ್ವಜನಿಕ ಕ್ಷೇತ್ರದಲ್ಲಿ ಮಹಿಳೆಯು ಪ್ರವೇಶಿಸುವುದು ಸಾಧ್ಯವಿಲ್ಲವಾಗಿದೆ. ಇಲ್ಲಿನ ಚಟುವಟಿಕೆಗಳು ಅಪಾರವಾದ ಸಂಚಾರ ಸಂಚಲನೆಯನ್ನು ಒಳಗೊಂಡಿರುವುದರಿಂದ ಅವು ಮಹಿಳೆಯರಿಗೆ ತಕ್ಕವಲ್ಲ. ಹಣಕಾಸು ಬ್ಯಾಕಿಂಗ್, ಸಾಲ, ಬಡ್ಡಿ ಮುಂತಾದ ವಾಣಿಜ್ಯ ವ್ಯವಹಾರಗಳನ್ನು ವಿನಿಮಯವು ಒಳಗೊಂಡಿರುವುದರಿಂದ ಅದು ಪುರುಷ ಪ್ರಪಂಚವಾಗಿದೆ.

'ವಿನಿಮಯ'ವು ಪುರುಷಪ್ರಧಾನ ಚಟುವಟಿಕೆಯಾಗಿರುವುದರಿಂದ ಮಾರುಕಟ್ಟೆಯು ಪುರುಷಶಾಹಿ ಸಂಸ್ಥೆಯಾಗಿದೆ. ಈ ವಲಯವನ್ನು ಮಹಿಳೆಯರು ಪ್ರವೇಶಿಸುವುದು ಕಷ್ಟಸಾಧ್ಯವಾಗುತ್ತದೆ. ಈ ವ್ಯವಹಾರ ಗಳ ಮುಖ್ಯ ಗುಣ ಪೈಪೋಟಿಯಾಗಿದ್ದು, ಅದು ಲಾಭ ಸಂಪಾದನೆಯ ಗುರಿಯನ್ನು ಹೊಂದಿದೆ. ಹೀಗಾಗಿ 'ಸಂಗೋಪನ' ಗುಣ ಹೊಂದಿರುವ ಮಹಿಳೆಯರು ಇಲ್ಲಿ ಏಗುವುದು ಕಷ್ಟಸಾಧ್ಯವಾಗುತ್ತದೆ. ಆದ್ದರಿಂದ ಮಾರುಕಟ್ಟೆಯಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಕಂಡುಬರುವುದಿಲ್ಲ. ಅವರು ಕುಟುಂಬದಲ್ಲಿ ಮನೆಗೆ ಮಾತ್ರ ಸೀಮಿತವಾಗಿರುವುದರಿಂದ ಅವರನ್ನು ಅನುಭೋಗಿಗಳೆಂದು ಅಥವಾ ಕೊಳ್ಳುವವರೆಂದು ಪರಿಗಣಿಸಲಾಗುತ್ತದೆ. 'ಮಹಿಳೆಯರು ಉತ್ಪಾದನೆಯ ಚಟುವಟಿಕೆಗಳಲ್ಲಿ ತೊಡಗಿದ್ದರೂ ಮಾರಾಟಗಾರರಾಗಿ ಮಾರುಕಟ್ಟೆಗೆ ಹೋಗುವುದಿಲ್ಲ. ಆದರೆ ಚಿಲ್ಲರೆ ಮಾರಾಟದಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಅಲ್ಲದೆ ದೊಡ್ಡ ಪ್ರಮಾಣದ ಮಾರಾಟ ನಡೆದಾಗ ಪುರುಷಪ್ರಧಾನತೆ ಅಡ್ಡಿ ಬರುವುದರಿಂದ ದೊಡ್ಡ ಪ್ರಮಾಣದ ಮಾರುಕಟ್ಟೆಯಲ್ಲಿ ಮಹಿಳೆಯರ ಪ್ರಮಾಣ ಕಡಿಮೆ ಇರುತ್ತದೆ.[೯೭]

ವಾಸ್ತವಿಕವಾಗಿ 'ವಿನಿಮಯ' ಮತ್ತು 'ಮಾರುಕಟ್ಟೆ'ಯಲ್ಲಿ ಮಹಿಳೆಯರ ಭಾಗವಹಿಸುವಿಕೆಯನ್ನು ಗಮನಿಸಿದರೆ ಅವರು ಹೆಚ್ಚಾಗಿ ಚಿಲ್ಲರೆ ವ್ಯಾಪಾರದಲ್ಲಿ ತೊಡಗಿರುವುದು ಕಂಡುಬರುತ್ತಿದೆ. ಅವರು ಮಾರಾಟ ಮಾಡುವ ವಸ್ತುಗಳು ಅತೀ ಅವಶ್ಯವಾದ, ಬೇಗ ನಶಿಸುವ ಮತ್ತು ದಿನಬಳಕೆಗೆ ಉಪಯೋಗಿಸುವ ವಸ್ತುಗಳಾಗಿವೆ. ಮಹಿಳೆಯರು ಮಾರಾಟದಲ್ಲಿ ತೊಡಗಿರುವ ಸ್ವರೂಪ ಭಿನ್ನವಾಗಿದೆ. ಅವರು ರಸ್ತೆ ಬದಿ ವ್ಯಾಪಾರದಲ್ಲಿ ತಲೆ ಮೇಲೆ ಬುಟ್ಟಿ ಹೊತ್ತು, ಕಾಯಿಪಲ್ಲೆ, ಹಣ್ಣುಗಳ ವ್ಯಾಪಾರ, ಗೃಹಕೈಗಾರಿಕೆಗಳಾದ ಮಡಿಕೆ ಮಾರಾಟ, ಖಾದಿ ತಯಾರಿಕೆ, ಪೊರಕೆ ಮಾರಾಟ, ಬಟ್ಟೆವ್ಯಾಪಾರ, ಬುಟ್ಟಿಹೊಲಿಯುವುದು, ಬಳೆ ವ್ಯಾಪಾರ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. 'ಚಿಲ್ಲರೆ' ವ್ಯಾಪಾರದಲ್ಲಿ ಸೇರ್ಪಡೆಯಾಗುವ ಎಲ್ಲ ಚಟುವಟಿಕೆಗಳು ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳಾಗಿವೆ. ಆದ್ದರಿಂದ ಇಂತಹ 'ವಿನಿಮಯ' ಚಟುವಟಿಕೆಗಳಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಯಾವ ವ್ಯಾಪಾರ, ವಾಣಿಜ್ಯ ಮತ್ತು ಮಾರಾಟ ಚಟುವಟಿಕೆಗಳು ಕೇವಲ 'ಹೊಟ್ಟೆ ಬಟ್ಟೆ' ತುಂಬಿಸುವ ಸಂಗತಿಗಳಾಗಿರುತ್ತವೆಯೋ ಅಂತಹ ವ್ಯವಹಾರದಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಾರೆ. ಮಹಿಳೆಯರೇ ಉತ್ಪಾದಿಸಿದ ಆಹಾರ ದಿನಿಸುಗಳಾದ ಸಂಡಿಗೆ, ಅಪ್ಪಳ, ಉಪ್ಪಿನಕಾಯಿ ಮತ್ತು ಸಂಸ್ಕರಿತ ಆಹಾರ ಪೊಟ್ಟಣಗಳು ಮಾರುಕಟ್ಟೆಯನ್ನು, ಪ್ರವೇಶಿಸಿದ ನಂತರ ಪುರುಷರ ಒಡೆತನದಲ್ಲಿ ವಿನಿಮಯಗೊಳ್ಳುತ್ತವೆ. ಎಲ್ಲಿ 'ಲಾಭ' ಅಧಿಕ ಪ್ರಮಾಣದಲ್ಲಿರುತ್ತದೆಯೋ, ಎಲ್ಲಿ ದೊಡ್ಡ ಪ್ರಮಾಣದ ಮಾರುಕಟ್ಟೆ ವ್ಯವಸ್ಥೆ ಇರುತ್ತದೆಯೋ ಅಲ್ಲಿ ಮಾರಾಟಗಾರರು ಪುರುಷರೇ ಆಗಿರುತ್ತಾರೆ. ಇದರಿಂದಾಗಿ ಮಾರುಕಟ್ಟೆಯು ಪುರುಷಶಾಹಿಯಾಗಿ ಪರಿಣಮಿಸಿದೆ.

ಮಹಿಳೆಯರು ಉದ್ಯಮ ಸಾಹಸದ ಕೊರತೆ, ವ್ಯವಹಾರದ ತರಬೇತಿಯ ಕೊರತೆ ಮತ್ತು ಬಂಡವಾಳದ ಕೊರತೆಯನ್ನು ಅನುಭವಿಸುತ್ತಿರುವುದರಿಂದ ದೊಡ್ಡ ಪ್ರಮಾಣದ ಮಾರುಕಟ್ಟೆಯಲ್ಲಿ ವಿನಿಮಯ ಚಟುವಟಿಕೆಯನ್ನು ನಡೆಸಲು ಸಾಧ್ಯವಾಗುತ್ತಿಲ್ಲವಾಗಿದೆ. ಆದರೆ ಇಂದಿನ ದಿನಗಳಲ್ಲಿ ಮಹಿಳೆಯರು ಸ್ತ್ರೀಶಕ್ತಿ ಮತ್ತು ಸ್ವಸಹಾಯ ಗುಂಪಿನ ಮೂಲಕ ಸಂಘಟಿತರಾಗಿ ತಾವೇ ತಯಾರಿಸಿದ ಕರಕುಶಲ ವಸ್ತುಗಳು ಮತ್ತು ಸಂಸ್ಕರಿಸಿದ ಆಹಾರ ಸಾಮಗ್ರಿಗಳನ್ನು ನೇರವಾಗಿ ದೊಡ್ಡ ಪ್ರಮಾಣದ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿರುವುದು ಕಂಡುಬರುತ್ತಿದೆ. ಇದು ಮಹಿಳೆಯರಿಗೆ ದೊಡ್ಡ ಪ್ರಮಾಣದ ಮಾರುಕಟ್ಟೆಯಲ್ಲಿ ವ್ಯವಹರಿಸುವ ಮತ್ತು ಲಾಭ ಸಂಪಾದಿಸುವ ಆಶಾಭಾವನೆಯನ್ನು ಬೆಳೆಸಿದೆ. ಆದರೂ 'ವಿನಿಮಯ' ಚಟುವಟಿಕೆ ಪುರುಷಶಾಹಿ ಒಡೆತನದಲ್ಲಿದ್ದು ಮಹಿಳೆಯರು ದೊಡ್ಡ ಪ್ರಮಾಣದ ವಾಣಿಜ್ಯ ವ್ಯವಹಾರ ಕೈಗೊಳ್ಳದಂತೆ ಕಾಣದ ಕೈಯಾಗಿ ಕೆಲಸ ಮಾಡುತ್ತಿದೆ.

## ವಿತರಣೆ ಅಥವಾ ಹಂಚಿಕೆ

ಅರ್ಥಶಾಸ್ತ್ರದಲ್ಲಿ ವಿತರಣೆ ಅಥವಾ ಹಂಚಿಕೆಗೆ ಮಹತ್ವದ ಸ್ಥಾನ ನೀಡಲಾಗಿದೆ. ಅಪರಿಮಿತವಾದ ಮಾನವನ ಬಯಕೆಗಳನ್ನು ತೃಪ್ತಿಪಡಿಸಲು ಸರಕು-ಸೇವೆಗಳು ಬೇಕಾಗುತ್ತವೆ. ಈ ಸರಕು-ಸೇವೆಗಳು ಉತ್ಪಾದನಾ ಕ್ರಿಯೆಯಿಂದ ದೊರೆಯುತ್ತವೆ. ಈ ಉತ್ಪಾದನಾ ಕ್ರಿಯೆಯಲ್ಲಿ ವಿವಿಧ ಉತ್ಪಾದನಾಂಗಗಳು ಪಾಲ್ಗೊಳ್ಳುತ್ತವೆ. ಹೀಗೆ ಉತ್ಪಾದನೆಯು ನಾಲ್ಕು ಉತ್ಪಾದನಾಂಗಗಳ ಸಹಾಯದಿಂದ ನಡೆಯುವ ಪ್ರಕ್ರಿಯೆಯಾಗಿದೆ. ಈ ಉತ್ಪಾದನಾ ಕ್ರಿಯೆಯಲ್ಲಿ ತೊಡಗಿದ್ದಕ್ಕಾಗಿ ನಾಲ್ಕು ಉತ್ಪಾದನಾಂಗಗಳು ಆದಾಯವನ್ನು ಪಡೆಯುತ್ತವೆ. ಇದನ್ನು ವಿತರಣೆ ಅಥವಾ ಹಂಚಿಕೆ ಎಂದು ಕರೆಯಲಾಗುತ್ತದೆ. ಉತ್ಪಾದನಾ ಕ್ರಿಯೆಯಲ್ಲಿ ಉತ್ಪಾದನಾಂಗಗಳಾದ ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆಗಳು ಪಾಲ್ಗೊಳ್ಳುತ್ತವೆ. ಅದಕ್ಕೆ ಪ್ರತಿಫಲವಾಗಿ ಭೂಮಿ-ಗೇಣಿಯನ್ನು, ಶ್ರಮ-ಕೂಲಿಯನ್ನು, ಬಂಡವಾಳ-ಬಡ್ಡಿಯನ್ನು ಮತ್ತು ಸಂಘಟನೆ ಲಾಭವನ್ನು ಪಡೆಯುತ್ತವೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ಹಂಚಿಕೆ ಎಂದರೆ ಉತ್ಪಾದನೆಯಲ್ಲಿ ಭಾಗವಹಿಸುವ ವಿವಿಧ ಉತ್ಪಾದನಾಂಗಗಳಿಗೆ ಪ್ರತಿಫಲ ನೀಡುವುದೇ ಆಗಿದೆ.

ಅರ್ಥಶಾಸ್ತ್ರದ ವಿಶಾಲಾರ್ಥದಲ್ಲಿ ಹಂಚಿಕೆ ಅಥವಾ ವಿತರಣೆ ಅಂದರೆ ರಾಷ್ಟ್ರೀಯ ವರಮಾನವನ್ನು ಉತ್ಪಾದನಾಂಗಗಳಿಗೆ ಪ್ರತಿಫಲ ರೂಪದಲ್ಲಿ ಹಂಚುವುದು ಎಂದು ಅರ್ಥವಾಗುತ್ತದೆ. ಅಂದರೆ ರಾಷ್ಟ್ರೀಯ ಉತ್ಪನ್ನದಲ್ಲಿ ತೊಡಗಿದ ಉತ್ಪಾದನಾಂಗಗಳಿಗೆ 'ರಾಷ್ಟ್ರೀಯ ವರಮಾನವನ್ನು ಹಂಚುವುದು ಎಂದು ಪರಿಭಾವಿಸಲಾಗಿದೆ. ಅರ್ಥಶಾಸ್ತ್ರಜ್ಞ ಚಾಪ್‌ಮನ್ ಅವರು ಸಮುದಾಯದ ಸಂಪತ್ತನ್ನು ಉತ್ಪಾದನಾಂಗಗಳಿಗೆ ಹಂಚುವುದನ್ನು ವಿತರಣೆ ಅಥವಾ ಹಂಚಿಕೆ ಎಂದಿದ್ದಾರೆ. ಚಾಪ್‌ಮನ್ ಅವರ ಪ್ರಕಾರ "ವಿತರಣೆಯ ಅರ್ಥಶಾಸ್ತ್ರವು ಒಂದು ಸಮುದಾಯವು ಉತ್ಪಾದಿಸಿದ ಸಂಪತ್ತನ್ನು ಉತ್ಪಾದನೆಯಲ್ಲಿ ಕ್ರಿಯಾಶೀಲವಾಗಿರುವ ಉತ್ಪಾದನಾ ನಿಯೋಗಿಗಳ ನಡುವೆ ಅಥವಾ ಉತ್ಪಾದನಾ ಘಟಕಗಳ ಒಡೆಯರಿಗೆ ಹಂಚುವುದಕ್ಕೆ ಸಂಬಂಧಿಸಿದುದಾಗಿದೆ." ಪ್ರೊ.ಜಾನ್‌ಪೆಂಗನ್ ಅವರು ಹಂಚಿಕೆಯನ್ನು ಈ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

"The Theory of distribution shares attempts to explain the share of the total national income that each factory or probection receives. It enquires in to the Percentage that labour rectoves, or the whole and also in to the shares of, inerest rent and prof it now, individual income raipients disapper the horizon"[೧೮] ಪ್ರೊ.ಜಾನ್‌ಪೆಂಗನ್ ಅವರು ಉತ್ಪಾದನಾಂಗಗಳು ರಾಷ್ಟ್ರೀಯ ಆದಾಯದಲ್ಲಿ ವೈಯಕ್ತಿಕ ನೆಲೆಗನುಗುಣವಾಗಿ ಕೂಲಿ, ಬಾಡಿಗೆ, ಬಡ್ಡಿ ಮತ್ತು ಲಾಭವನ್ನು ಪಡೆಯುವುದೇ ಹಂಚಿಕೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಹಂಚಿಕೆ ಅಥವಾ ವಿತರಣೆ ಎಂದರೆ ರಾಷ್ಟ್ರೀಯ ಆದಾಯದಲ್ಲಿ ಉತ್ಪಾದನಾಂಗಗಳು ತಮ್ಮ ಪ್ರತಿಫಲವನ್ನು ಪಡೆಯುವ ಪ್ರಕ್ರಿಯೆಯಾಗಿದೆ. ಆದರೆ ಈ ಪ್ರಕ್ರಿಯೆಯಲ್ಲಿ ಪುರುಷರು ಮತ್ತು ಮಹಿಳೆಯರು ಸಮಾನವಾಗಿ ಭಾಗವಹಿಸುತ್ತಾರೆ. ಆದರೆ ಅವರು ಪಡೆಯುವ ಪ್ರತಿಫಲ ಮಾತ್ರ ವ್ಯತ್ಯಾಸದಿಂದ ಕೂಡಿರುತ್ತದೆ. ಹಂಚಿಕೆಯಲ್ಲಿ ಯಾಕೆ ಲಿಂಗ ಅಸಮಾನತೆ ಕಂಡುಬರುತ್ತದೆ ಉತ್ಪಾದನಾಂಗಗಳಾಗಿ ಮಹಿಳೆಯರು ಉತ್ಪಾದನಾ ಕ್ರಿಯೆಯಲ್ಲಿ ಭಾಗವಹಿಸುವುದಿಲ್ಲವೆ? ರಾಷ್ಟ್ರೀಯ ಆದಾಯದ ಹಂಚಿಕೆಯಲ್ಲಿ ಮಹಿಳೆಯರಿಗೆ ಸಮಪಾಲು ದೊರೆಯುತ್ತದೆಯೇ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡಾಗ ಅರ್ಥಶಾಸ್ತ್ರದ ಹಂಚಿಕೆ ಅಥವಾ ವಿತರಣೆಗೆ ಒಂದು ಅರ್ಥ ಬರುತ್ತದೆ.

ಅರ್ಥಶಾಸ್ತ್ರದಲ್ಲಿ ಉತ್ಪಾದನೆಯಲ್ಲಿ ತೊಡಗಿರುವ ಉತ್ಪಾದನಾಂಗಗಳ ಪಾಲು ಅಥವಾ ಸಂಭಾವನೆಯನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಅರ್ಥಶಾಸ್ತ್ರದಲ್ಲಿ ಕೂಲಿ ಎಂದರೆ ಕೂಲಿ ಅದಕ್ಕೆ ಪುರುಷರ ಕೂಲಿ ಅಥವಾ ಮಹಿಳೆಯರ ಕೂಲಿ ಎಂಬುದಿಲ್ಲ. ಉತ್ಪಾದನಾಂಗಗಳ ಪರಿಭಾವನೆಯು ಉತ್ಪಾದನಾಂಗಗಳ ಮಾಲೀಕರಿಗೆ ಸಲ್ಲುತ್ತದೆ. ಗೇಣಿಯು ಭೂಮಿಯ ಒಡೆಯನಿಗೆ ಸಲ್ಲುತ್ತದೆ, ಕೂಲಿಯು ಕೂಲಿಕಾರ ಅಥವಾ ಶ್ರಮಿಕನಿಗೆ ಸಲ್ಲುತ್ತದೆ. ಬಡ್ಡಿಯು ಬಂಡವಾಳದಾರನಿಗೆ ಸಲ್ಲುತ್ತದೆ ಮತ್ತು ಉದ್ಯಮ ಸಂಘಟನಕಾರನಿಗೆ ಲಾಭಾಂಶ ದೊರೆಯುತ್ತದೆ. ಹೀಗಾಗಿ ಅರ್ಥಶಾಸ್ತ್ರದಲ್ಲಿ ಉತ್ಪಾದನಾಂಗಗಳಾದ ಗೇಣಿ, ಕೂಲಿ, ಬಡ್ಡಿ ಮತ್ತು ಲಾಭಗಳು ಅರ್ಥಶಾಸ್ತ್ರದಲ್ಲಿ ಲಿಂಗ ನಿರಪೇಕ್ಷ ಪರಿಭಾವನೆಗಳಾಗಿವೆ. ಈ ಉತ್ಪಾದನಾಂಗಗಳ ಮಾಲೀಕತ್ವದ ಹಕ್ಕು ಸರ್ವಸಾಮಾನ್ಯವಾಗಿ ಪುರುಷರ ವಶದಲ್ಲಿರುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇರುವಂತಹ ಕೇರಳದ ನಾಯರ್ ಮತ್ತು ಕೆಲವು ಬುಡಕಟ್ಟು ಸಮುದಾಯಗಳಲ್ಲಿ ಮಾತ್ರ ಮಾಲೀಕತ್ವದ ಹಕ್ಕು ಮಹಿಳೆಯರಲ್ಲಿರುತ್ತದೆ. ಮಾಲೀಕತ್ವದ ಹಕ್ಕಿನಿಂದಾಗಿ ವಂಚಿತಳಾದ ಮಹಿಳೆಯು ಸಹಜವಾಗಿಯೇ ಉತ್ಪನ್ನದಲ್ಲಿ ತನ್ನ ಪಾಲನ್ನು ಪಡೆಯುವುದಿಲ್ಲ. ಏಕೆಂದರೆ ಪುರುಷಶಾಹಿಯು ಆರ್ಥಿಕೋತ್ಪಾದನೆಯ ವಲಯದಿಂದ ಮಹಿಳೆಯರನ್ನು ಹೊರಗಿಟ್ಟಿರುವುದರಿಂದ ಅವರಿಗೆ ಉತ್ಪನ್ನದಲ್ಲಿ ಪಾಲು ದೊರೆಯುವುದು ಸಾಧ್ಯವಿಲ್ಲವಾಗುತ್ತದೆ. ಅಲ್ಲದೆ ಆರ್ಥಿಕೋತ್ಪಾದನೆಗೆ ಮಹಿಳೆಯರ ಕಾಣಿಕೆ ಶೂನ್ಯ ಎಂಬ ವಿಚಾರವನ್ನು ಪುರುಷಶಾಹಿಯು ಕಟ್ಟಿಬಿಟ್ಟಿದೆ. ಆದ್ದರಿಂದ ಅವಳಿಗೆ ಉತ್ಪಾದನೆಯಲ್ಲಿ ಭಾಗಿಯಾಗಿದ್ದಕ್ಕಾಗಿ ನೀಡುವ ಪ್ರತಿಫಲ ದೊರೆಯುವುದಿಲ್ಲ.

ಅರ್ಥಶಾಸ್ತ್ರದಲ್ಲಿ ವಿತರಣೆಯು ಲಿಂಗ ನಿರಪೇಕ್ಷವಾದ ಸಂಗತಿ ಎಂಬುದು ಪುರುಷಶಾಹಿ ಕಟ್ಟಿರುವ ಒಂದು ಸಂಕಥನವಾಗಿದೆ. ಅನೇಕ ಅಧ್ಯಯನಗಳು ಮತ್ತು ವರದಿಗಳು ತೋರಿಸಿರುವಂತೆ ಭಾರತದ ಒಟ್ಟು ದುಡಿಮೆಗಾರರ ವರ್ಗದಲ್ಲಿ ಮಹಿಳೆಯರ ಪ್ರಮಾಣ ಸರಿಸುಮಾರು ೧%ರಷ್ಟಿದೆ. ಈ ಅಂಶವನ್ನು ಗಮನಿಸಿದರೆ ಆರ್ಥಿಕೋತ್ಪಾದನೆಯಲ್ಲಿ ಮಹಿಳೆಯರ ಪಾಲು ಅಥವಾ ಕಾಣಿಕೆ ಅಪಾರವಾಗಿರುವುದು ತಿಳಿದು ಬರುತ್ತದೆ. ಮಹಿಳೆಯರು ಸಂಘಟಿತ ವಲಯದ ಉದ್ಯಮ ಕ್ಷೇತ್ರ, ಅಸಂಘಟಿತ ವಲಯದ

ಉದ್ಯೋಗ ಕ್ಷೇತ್ರಗಳಲ್ಲಿ ಮತ್ತು ಉದ್ಯಮ ಸಾಹಸದ ಕೆಲಸಗಳನ್ನು ಮಾಡುತ್ತಿದ್ದಾರೆ. ಅಲ್ಲದೆ ದೇಶಿಯ ಉತ್ಪನ್ನಕ್ಕೆ ತಮ್ಮ ಅಪಾರ ಕೊಡುಗೆಯನ್ನು ಸಲ್ಲಿಸುತ್ತಿದ್ದಾರೆ. ಆದ್ದರಿಂದ ವಿತರಣೆ ಅಥವಾ ಹಂಚಿಕೆ ಎಂಬ ಸಂಗತಿಯನ್ನು ಲಿಂಗಸಂಬಂಧಿ ನೆಲೆಯಿಂದ ನೋಡುವ ಅಗತ್ಯತೆ ಇದೆ. ಅಲ್ಲದೆ ಆರ್ಥಿಕ ವ್ಯವಸ್ಥೆಯಲ್ಲಿ ಅಥವಾ ಕಾರ್ಮಿಕ ಪೇಟೆಯಲ್ಲಿ ಮಹಿಳೆಯರ ಕೂಲಿ ನಿರ್ಧಾರವಾಗುವ ಪರಿಯು ಪುರುಷರ ಕೂಲಿ ನಿರ್ಧಾರವಾಗುವ ಪರಿಗಿಂತ ಭಿನ್ನವಾಗಿದೆ. ಉದ್ಯಮವನ್ನು ಸಂಘಟಿಸುವ ಕಾರ್ಯದಲ್ಲಿ ಮಹಿಳೆಯರು ಎದುರಿಸುವ ಸಮಸ್ಯೆಗಳು ಮತ್ತು ಸವಾಲುಗಳು ಆ ಕೆಲಸದಲ್ಲಿ ಪುರುಷರು ಎದುರಿಸುವ ಸಮಸ್ಯೆ ಮತ್ತು ಸವಾಲುಗಳಿಗಿಂತ ಭಿನ್ನವಾಗಿರುತ್ತವೆ. ಆದ್ದರಿಂದ ಆರ್ಥಿಕ ಅಂಶಗಳನ್ನು ಲಿಂಗಸಂಬಂಧಿ ನೆಲೆಯಿಂದ ಅಧ್ಯಯನ ಮಾಡುವುದು ಅವಶ್ಯವೆನಿಸುತ್ತದೆ.

ಹಂಚಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ದೊಡ್ಡ ಸಮಸ್ಯೆ ಎಂದರೆ ಸಂಭಾವನೆ, ವೇತನ ಕೂಲಿಯಲ್ಲಿನ ಲಿಂಗತಾರತಮ್ಯ ಅರ್ಥಶಾಸ್ತ್ರವು ಈ ಲಿಂಗತಾರತಮ್ಯವನ್ನು ಮನ್ನಿಸುವುದೇ ಇಲ್ಲ. ಅದೊಂದು ಸಮಸ್ಯೆಯೇ ಅಲ್ಲವೆಂಬಂತೆ ಅರ್ಥಶಾಸ್ತ್ರ ತನ್ನ ಸಿದ್ಧಾಂತಗಳನ್ನು ರೂಪಿಸಿ ಬಿಟ್ಟಿದೆ. ಇಂದು ಅನೇಕ ಆರ್ಥಿಕ ಚಟುವಟಿಕೆಗಳಲ್ಲಿ ಮಹಿಳೆ ತೊಡಗಿದ್ದರೂ ಅವಳು ಸಂಭಾವನೆ, ವೇತನ ಮತ್ತು ಕೂಲಿ ಎಂಬ ಪ್ರತಿಫಲದಿಂದ ವಂಚಿತಳಾಗಿದ್ದಾಳೆ. ಏಕೆಂದರೆ ಮಹಿಳೆ ಮಾಡುವ ಕೆಲಸವನ್ನು ಕೆಲಸವೆಂದು ಪರಿಗಣಿಸದೆ ಅದೊಂದು ಸೇವೆ ಎಂದು ದುಡಿಸಿಕೊಳ್ಳಲಾಗುತ್ತದೆ. ಇದರಿಂದಾಗಿ ಮಹಿಳೆಯರಿಗೆ ಬರಬೇಕಾದ ಪ್ರತಿಫಲದ ಪಾಲು ದೊರೆಯದಾಗುತ್ತದೆ. ಒಂದು ರಾಷ್ಟ್ರದ ರಾಷ್ಟ್ರೀಯ ಆದಾಯದ ಹಂಚಿಕೆಯನ್ನು ತೆಗೆದುಕೊಂಡರೂ ಅದರಲ್ಲಿ ಅಧಿಕ ಪಾಲು ಪುರುಷರು ಪಡೆಯುತ್ತಾರೆ. ಆದರೆ ಇದರಲ್ಲಿ ಮಹಿಳೆಯರ ಪಾಲು ಕಡಿಮೆ ಇರುತ್ತದೆ. ಅಂದರೆ ಉತ್ಪಾದನಾಂಗಗಳಿಗೆ ರಾಷ್ಟ್ರೀಯ ಆದಾಯವನ್ನು ಹಂಚುವ ಸಂದರ್ಭದಲ್ಲಿಯೂ ಮಹಿಳೆಯರು ಪ್ರತಿಫಲದಿಂದ ವಂಚಿತರಾಗುವ ಸಾಧ್ಯತೆ ಅಧಿಕವಾಗಿರುತ್ತದೆ. ರಾಷ್ಟ್ರೀಯ ಆದಾಯದ ಮಾಪನದಿಂದ ಮಹಿಳೆಯ ದುಡಿಮೆಯನ್ನು ಕೈಬಿಟ್ಟಿರುವುದರಿಂದ ಅವರು ಪ್ರತಿಫಲ ಪಡೆಯುವಲ್ಲಿ ವಿಫಲರಾಗುತ್ತಾರೆ. ಆದ್ದರಿಂದ ಅರ್ಥವ್ಯವಸ್ಥೆಯಲ್ಲಿ ಈ ಹಂಚಿಕೆ ಸಿದ್ಧಾಂತವು ಲಿಂಗಸಂಬಂಧಿ ನೆಲೆಯಿಂದ ಪುನಾರಚನೆಗೊಂಡಾಗ ಅದು ಒಂದು ಪೂರ್ಣ ಸಿದ್ಧಾಂತವಾಗುತ್ತದೆ. ಇಲ್ಲವಾದರೆ ಅದು ಒಂದು ಆಂಶಿಕ ಅಥವಾ ಭಾಗಶಃ ಸಿದ್ಧಾಂತವಾಗುತ್ತದೆ.

## ೩.೩. ದುಡಿಮೆಯ ಅರ್ಥ ಮತ್ತು ಮಹಿಳಾ ದುಡಿಮೆಯ ಸ್ವರೂಪ

ಅರ್ಥಶಾಸ್ತ್ರದಲ್ಲಿ 'ದುಡಿಮೆ', ಕೆಲಸ ಅಥವಾ ಉದ್ಯೋಗ ಎಂಬುದಕ್ಕೆ ಒಂದು ನಿರ್ದಿಷ್ಟ ಅರ್ಥವನ್ನು ನೀಡಲಾಗುತ್ತದೆ. ಅಲ್ಲದೆ ಸೀಮಿತವಾದ ವ್ಯಾಪ್ತಿಯಲ್ಲಿ ಈ ಪರಿಭಾವನೆಯನ್ನು ಬಳಸಲಾಗುತ್ತಿದೆ. ಇಲ್ಲಿ 'ದುಡಿಮೆ' ಅಥವಾ 'ಉದ್ಯೋಗ' ಎಂದರೆ ಪುರುಷರ 'ದುಡಿಮೆ' ಅಥವಾ ಪುರುಷರು ಮಾಡುವ ಉದ್ಯೋಗ ಅಥವಾ ಪುರುಷರು ಮಾಡುವ ಕೆಲಸ ಎಂಬ ಅರ್ಥದಲ್ಲಿ 'ದುಡಿಮೆ' ಎಂಬ ಪರಿಕಲ್ಪನೆಯನ್ನು

ನೋಡಲಾಗುತ್ತಿದೆ ಹಾಗೂ ಬಳಸಲಾಗುತ್ತಿದೆ. ಅರ್ಥಶಾಸ್ತ್ರದ ಜ್ಞಾನಶಾಖೆಯಲ್ಲಿ ಆರ್ಥಿಕ ಸಿದ್ಧಾಂತಗಳನ್ನು ಮತ್ತು ಆರ್ಥಿಕ ಪರಿಕಲ್ಪನೆಗಳನ್ನು ರೂಪಿಸುವವರು ಪುರುಷರೇ ಆಗಿರುವುದರಿಂದ ಈ ಜ್ಞಾನಶಾಖೆಯ ಪ್ರತಿಯೊಂದು 'ಪರಿಕಲ್ಪನೆ'ಗಳು ಪುರುಷಾಹಿ ದೃಷ್ಟಿಕೋನದಿಂದಲೇ ನಿರ್ಮಾಣಗೊಂಡಿವೆ. ಅದಕ್ಕೆ 'ದುಡಿಮೆ' ಎಂಬ ಪರಿಕಲ್ಪನೆಯು ಹೊರತಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಹಣವನ್ನು ಸಂಪಾದಿಸುವ, ಮಾರುಕಟ್ಟೆಯನ್ನು, ಪ್ರವೇಶಿಸುವ ಪುರುಷರು ಮಾಡುವ ಕೆಲಸವನ್ನು ಮಾತ್ರ ದುಡಿಮೆ ಎಂದು ಪರಿಗಣಿಸಲಾಗುತ್ತದೆ ಹಾಗೂ ಪುರುಷರನ್ನು ದುಡಿಮೆಗಾರರೆಂದು ಪರಿಗಣಿಸುತ್ತದೆ. ಆದರೆ ದೇಶದ ಆರ್ಥಿಕ ಅಭಿವೃದ್ಧಿಗಾಗಿ ಪುರುಷರಿಗೆ ಸಮಾನವಾಗಿ 'ದುಡಿಮೆ' ಮಾಡುವ ಹಾಗೂ ಪುರುಷರ ದುಡಿಮೆಗೆ ಪರೋಕ್ಷವಾಗಿ ಸಹಕರಿಸುವ ಮೂಲಕ ರಾಷ್ಟ್ರೀಯ ಆದಾಯಕ್ಕೆ ಕೊಡುಗೆಯನ್ನು ನೀಡುವ ಮಹಿಳೆಯರನ್ನು ಹಾಗೂ ಅವರ ದುಡಿಮೆಯನ್ನು 'ದುಡಿಮೆ' ಎಂದು ಪರಿಗಣಿಸಲಾಗುತ್ತಿಲ್ಲ. ಇಲ್ಲಿ ದುಡಿಮೆ ಎಂದರೆ 'ಪುರುಷರ ದುಡಿಮೆ' ಮತ್ತು ದುಡಿಮೆಗಾರರು ಎಂದರೆ 'ಪುರುಷರು' ಎಂದು ಪರಿಗಣಿಸಿರುವುದರಿಂದ ಮತ್ತು ಮಹಿಳೆಯರ ದುಡಿಮೆಯನ್ನು ಮನೆವಾರ್ತೆ ಕುಟುಂಬಸಂಬಂಧಿ ದುಡಿಮೆಗೆ ಸೀಮಿತಗೊಳಿಸಿರುವುದರಿಂದ ಅವಳ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ಅರ್ಥಶಾಸ್ತ್ರದಲ್ಲಿ 'ದುಡಿಮೆ' ಅಥವಾ 'ಉದ್ಯೋಗ' ಎಂಬ ಪರಿಕಲ್ಪನೆಯನ್ನು ನಿರ್ದಿಷ್ಟವಾದ ಅರ್ಥದಲ್ಲಿ ವಾಖ್ಯಾನಿಸಿರುವುದೇ ಆಗಿದೆ.

ದುಡಿಮೆ ಎಂದರೆ ಏನು? ಅರ್ಥಶಾಸ್ತ್ರದಲ್ಲಿ 'ದುಡಿಮೆ' ಅಥವಾ ಉದ್ಯೋಗವನ್ನು ಯಾವ ರೀತಿ ವ್ಯಾಖ್ಯಾನಿಸಲಾಗಿದೆ? ಮಹಿಳೆಯರು ಮಾಡುವ ದುಡಿಮೆ ದುಡಿಮೆ ಅಲ್ಲವೆ? ಮಹಿಳೆಯರ ದುಡಿಮೆಯ ಸ್ವರೂಪ ಎಂತಹದ್ದು? ಮಹಿಳೆಯರ ದುಡಿಮೆಯ ಮಾಪನ ಸಾಧ್ಯವಿಲ್ಲವೆ? ರಾಷ್ಟ್ರೀಯ ಆದಾಯದ ಮಾಪನದಲ್ಲಿ ಮಹಿಳೆಯ ದುಡಿಮೆಯನ್ನು ಯಾಕೆ ಪರಿಗಣಿಸುತ್ತಿಲ್ಲ? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡು ಕೊಂಡಾಗ 'ದುಡಿಮೆ'ಯ ಅರ್ಥ ಮತ್ತು ದುಡಿಮೆಯ ಸ್ವರೂಪವನ್ನು ತಿಳಿಯಬಹುದು ಆ ಒಂದು ಪ್ರಯತ್ನವನ್ನು ಈ ಭಾಗದಲ್ಲಿ ಮಾಡಲಾಗಿದೆ.

### ದುಡಿಮೆ ಎಂದರೇನು?

'ದುಡಿಮೆ' ಎಂಬ ಪರಿಕಲ್ಪನೆಗೆ ಸಾರ್ವತ್ರಿಕವಾಗಿ ಸ್ವೀಕೃತವಾದ ವ್ಯಾಖ್ಯೆಯನ್ನು ನೀಡುವುದು ಬಹಳ ಕಷ್ಟದ ಕೆಲಸವಾಗಿದೆ. ಅರ್ಥಶಾಸ್ತ್ರದಲ್ಲಿ 'ದುಡಿಮೆ' ಎಂದರೆ ಕೂಲಿ, ಸಂಬಳ ಅಥವಾ ವೃತ್ತಿ ಸಂಭಾವನೆ ಪಡೆಯುವ ದೈಹಿಕ ಮತ್ತು ಮಾನಸಿಕ ಶ್ರಮಗಳನ್ನೊಳಗೊಂಡ ಉತ್ಪಾದನಾ ಚಟುವಟಿಕೆ'ಯಾಗಿದೆ. ಕಿಂಮಂಡ್ ಪಿರ್ತೆ ಎಂಬ ಅರ್ಥಶಾಸ್ತ್ರಜ್ಞ 'ದುಡಿಮೆ' ಎಂಬ ಪದವನ್ನು "ಆದಾಯ ತರುವ ಕಾರ್ಯ ಅಥವಾ ವಿಶ್ರಾಂತಿ ಅಥವಾ ಸಂತೋಷದ ತ್ಯಾಗದೊಂದಿಗೆ ಶಕ್ತಿಯ ವ್ಯಯವನ್ನು ಒಳಗೊಂಡ ಉದ್ದೇಶಯುಕ್ತ ಚಟುವಟಿಕೆ" ಎಂದು ವ್ಯಾಖ್ಯಾನಿಸಿದ್ದಾರೆ.[೧೯] ಅರ್ಥಶಾಸ್ತ್ರದಲ್ಲಿ ಪ್ರತಿಫಲ ನಿರೀಕ್ಷೆಯಿಂದ

ಮಾಡಲಾಗುವುದಿಲ್ಲ ಎಲ್ಲ ದೈಹಿಕ ಅಥವಾ ಮಾನಸಿಕ ಮಾನವ ಪ್ರಯತ್ನಗಳನ್ನು ದುಡಿಮೆ ಎಂದು ಕರೆಯಲಾಗುತ್ತದೆ. ಅರ್ಥಶಾಸ್ತ್ರದ ನೆಲೆಯಿಂದ ವ್ಯಾಖ್ಯಾನಿಸಲಾದ ಮೇಲಿನ ಎಲ್ಲ ವ್ಯಾಖ್ಯಾನಗಳನ್ನು ಗಮನಿಸಿದರೆ 'ದುಡಿಮೆ' ಎಂಬುದು ಆದಾಯ ತರುವ ಹಾಗೂ ಪ್ರತಿಫಲ ನಿರೀಕ್ಷೆಯಿಂದ ಮಾಡಲಾಗುವ ಎಲ್ಲ ವಿಧದ ದೈಹಿಕ, ಮಾನಸಿಕ ಚಟುವಟಿಕೆಗಳನ್ನು ಒಳಗೊಂಡಿದೆ. ಆದ್ದರಿಂದ ಅರ್ಥಶಾಸ್ತ್ರದಲ್ಲಿ ದುಡಿಮೆ ಎಂದರೆ ಹಣ ಗಳಿಸುವ, ಸಂಪಾದನೆ ಮಾಡುವ ಚಟುವಟಿಕೆಯಾಗಿದ್ದು ಈ ಚಟುವಟಿಕೆಗಳಲ್ಲಿ ತೊಡಗಿದವರು ಮಾತ್ರ 'ದುಡಿಮೆ'ಗಾರರಾಗುತ್ತಾರೆ.

ಪ್ರಾಚೀನ ಕಾಲದಲ್ಲಿ ದುಡಿಮೆ ಅಥವಾ ದೈಹಿಕ ಶ್ರಮಕ್ಕೆ ಮಹತ್ವದ ಸ್ಥಾನವಿದ್ದು ಶ್ರಮಮಾನ್ಯ ತತ್ವ ಆಚರಣೆಯಲ್ಲಿತ್ತು. ಇಂದು ಆಧುನಿಕ ಜಗತ್ತಿನಲ್ಲಿ ಹಣದ ಮಾರುಕಟ್ಟೆ ಬೆಳೆದಂತೆ 'ದುಡಿಮೆ'ಯ ವ್ಯಾಖ್ಯಾನ ಕೂಡ ಬದಲಾಗಿದೆ. ದುಡಿಮೆ ಎಂದರೆ 'ದೈಹಿಕ ಶ್ರಮ' ಅಥವಾ 'ಮಾನಸಿಕ ಶ್ರಮ' ಎನ್ನುವ ಬದಲು ದುಡಿಮೆ ಎಂದರೆ 'ಅರ್ಥ ಅಥವಾ ಹಣ' ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ. ಇಂದು ಶ್ರಮವಹಿಸಿ ದುಡಿಯದೇ ಹಣವನ್ನು ಬಂಡವಾಳರೂಪದಲ್ಲಿ ಮರು ಹೂಡಿಕೆ ಮಾಡಿ ಹಣಗಳಿಸುವ ವ್ಯವಸ್ಥೆ ನಿರ್ಮಾಣವಾಗಿದೆ. ಈ ಹಣರೂಪಿ ದುಡಿಮೆ ಮತ್ತು ಬಂಡವಾಳರೂಪಿ ದುಡಿಮೆ ಮಹಿಳೆಯ ದುಡಿಮೆಯ ನಿರ್ವಚನವನ್ನೇ ಬದಲಿಸಿದೆ.[೨೦]

ಅರ್ಥಶಾಸ್ತ್ರದ ಪರಿಭಾಷೆಯಲ್ಲಿ 'ದುಡಿಮೆ' ಎಂಬುದಕ್ಕೆ ವಿಶೇಷ ಅರ್ಥವನ್ನು ನೀಡಲಾಗಿದೆ. ಇಲ್ಲಿ 'ದುಡಿಮೆ' ಎಂಬ ಪರಿಕಲ್ಪನೆಯನ್ನು 'ಗಳಿಕೆ' ಅಥವಾ 'ವರಮಾನ' ಎಂಬ ಅರ್ಥದಲ್ಲಿ ಬಳಸಲಾಗಿದೆ. ಆದ್ದರಿಂದ ವರಮಾನವನ್ನು ಗಳಿಸುವ ಅಥವಾ ಆದಾಯ ತರುವ ಅಥವಾ 'ಹಣ'ವನ್ನು ಸಂಪಾದಿಸುವ ಯಾವುದೇ ಚಟುವಟಿಕೆ ಅರ್ಥಶಾಸ್ತ್ರದಲ್ಲಿ ದುಡಿಮೆ ಎಂದು ಕರೆಸಿಕೊಳ್ಳುತ್ತದೆ. ಹಣ ಗಳಿಸದ ಅಥವಾ ಆದಾಯ ತರದ ಯಾವುದೇ 'ಆರ್ಥಿಕ ಚಟುವಟಿಕೆ' 'ದುಡಿಮೆ' ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಅರ್ಥಶಾಸ್ತ್ರದಲ್ಲಿ 'ದುಡಿಮೆ' ಎಂದರೆ 'ಆದಾಯ'ಗಳಿಸುವಂತ ಮತ್ತು 'ಹಣ ಸಂಪಾದಿಸುವ' ಯಾವುದೇ ಚಟುವಟಿಕೆ ದುಡಿಮೆ ಎನಿಸಿಕೊಳ್ಳುತ್ತದೆ. ಈ ರೀತಿಯ ದುಡಿಮೆಯು ಅಥವಾ ಆರ್ಥಿಕ ಚಟುವಟಿಕೆಯು ಕುಟುಂಬದ ಹೊರಗಡೆ ನಡೆಯುತ್ತಿದ್ದು ಶ್ರಮ ಮಾರುಕಟ್ಟೆಯಲ್ಲಿ ತನ್ನ ಮೌಲ್ಯವನ್ನು ನಿರ್ಧರಿಸಿಕೊಂಡು ಸಾರ್ವಜನಿಕವಾಗಿ ನಡೆಯುತ್ತದೆ. ಆದರೆ ಮಹಿಳೆಯ ದುಡಿಮೆ ಅಥವಾ ಆರ್ಥಿಕ ಚಟುವಟಿಕೆಯು ಹಣ ಗಳಿಸುವ ಅಥವಾ ಆದಾಯ ಗಳಿಸುವ ದುಡಿಮೆಯಾಗಿರುವುದಿಲ್ಲ. ಅವಳ ದುಡಿಮೆಯು ಕುಟುಂಬ ಸಂಬಂಧಿ ಹಾಗೂ ಸಂಗೋಪನಾ ಸ್ವರೂಪದಾಗಿದ್ದು ಖಾಸಗಿಯಾಗಿ ನಡೆಯುವ ಚಟುವಟಿಕೆಯಾಗಿರುತ್ತದೆ. ಆದ್ದರಿಂದ ಅದು ಶ್ರಮ ಮಾರುಕಟ್ಟೆಯಿಂದ ದೂರ ಉಳಿಯುತ್ತದೆ. ಹೀಗಾಗಿ ಅವಳ ಆರ್ಥಿಕ ಚಟುವಟಿಕೆಗಳು ದುಡಿಮೆ ಎಂದು ಪರಿಗಣಿಸಲ್ಪಡುವುದಿಲ್ಲ.

ಅರ್ಥವ್ಯವಸ್ಥೆಯಲ್ಲಿ ಹಣ ತನ್ನ ಪ್ರಾಬಲ್ಯವನ್ನು ಸಾಧಿಸಿದೆ. ಆ ಮೂಲಕ ಪ್ರತಿಯೊಂದು ಸಂಪತ್ತನ್ನು ಅಂದರೆ ಭೂ ಸಂಪತ್ತು, ಅರಣ್ಯ ಸಂಪತ್ತು, ಜಲ ಸಂಪತ್ತು, ಮಾನವ ಸಂಪತ್ತು, ಖನಿಜ

ಸಂಪತ್ತು ಮತ್ತು ಶೈಕ್ಷಣಿಕ ಸಂಪತ್ತು ಮತ್ತು ಆರೋಗ್ಯ ಸಂಪತ್ತು ಇತ್ಯಾದಿಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಪ್ರತಿಯೊಂದು ಚರ ಮತ್ತು ಸ್ಥಿರ ಸಂಪತ್ತಿಗೆ ಮೌಲ್ಯವನ್ನು ನಿರ್ಧರಿಸುತ್ತಿದೆ. ವಿನಿಮಯ ಕಾರ್ಯಕ್ಕಾಗಿ ಸಾಂಕೇತಿಕವಾಗಿ ಬಳಸಲಾಗುತ್ತಿದ್ದ 'ಹಣ' ಎಂಬ ಸಾಧನ ಇಂದು ಆರ್ಥಿಕತೆಯಲ್ಲಿ ಪ್ರಾಬಲ್ಯವನ್ನು ಪಡೆದು ಸಂಪತ್ತಿನ ಮೌಲ್ಯವನ್ನು ನಿರ್ಧರಿಸುತ್ತಿದೆ. ಅಲ್ಲದೆ ಪ್ರತಿಯೊಂದು ಚಟುವಟಿಕೆಯ ಬೆಲೆಯನ್ನು ಅಥವಾ ಮೌಲ್ಯವನ್ನು ನಿಗದಿಪಡಿಸುತ್ತದೆ. ಈ ರೀತಿಯ ಮೌಲ್ಯ ನಿರ್ಧರವು ಮಾರುಕಟ್ಟೆಯ ಮೂಲಕ ಸಾರ್ವಜನಿಕವಾಗಿ ನಡೆಯುತ್ತದೆ. ಇಂತಹ ಮೌಲ್ಯವನ್ನು ಪಡೆದ ಸಂಪತ್ತು ಮತ್ತು ಚಟುವಟಿಕೆಗಳು ಮಾತ್ರ 'ಹಣ'ವನ್ನು ಪಡೆಯುತ್ತವೆ. ಅಥವಾ ಸಂಭಾವನೆಯನ್ನು ಪಡೆಯುತ್ತವೆ. ಹೀಗಾಗಿ ಹಣವೇ 'ದುಡಿಮೆ'ಯನ್ನು ನಿರ್ಧರಿಸುವ ಮಾನದಂಡವಾಗಿದೆ. ಹಣ ರೂಪದಲ್ಲಿ ಸಂಭಾವನೆ ಅಥವಾ ವರಮಾನ ಅಥವಾ ಕೂಲಿಯನ್ನು ಪಡೆಯುವ ಚಟುವಟಿಕೆಗಳು ಮಾತ್ರ ದುಡಿಮೆಯ ವ್ಯಾಪ್ತಿಗೆ ಒಳಪಡುತ್ತವೆ. ಇಂತಹ ದುಡಿಮೆಗಳು ಪುರುಷರು ಮಾಡುವ ದುಡಿಮೆಗಳಾಗಿವೆ. ಆದ್ದರಿಂದ ಪುರುಷರನ್ನು ದುಡಿಮೆಗಾರ ಎಂದು ಕರೆಯಲಾಗುತ್ತದೆ. ಹೀಗಾಗಿ 'ದುಡಿಮೆ' ಎಂಬ ಪರಿಭಾವನೆಯು ಪುರುಷವಾಚಿಯಾಗಿ ಜ್ಞಾನ ಶಿಸ್ತುಗಳಲ್ಲಿ ಬಳಕೆಯಾಗುತ್ತಿದೆ.

ಆರ್ಥಿಕತೆಯಲ್ಲಿ ಯಾವುದೇ ಚಟುವಟಿಕೆಯು 'ದುಡಿಮೆ' ಎಂದು ಕರೆಸಿಕೊಳ್ಳಬೇಕಾದರೆ ಅದು ಕೆಲವೊಂದು ಲಕ್ಷಣಗಳನ್ನು ಹೊಂದಿರಬೇಕಾಗುತ್ತದೆ. 'ದುಡಿಮೆ'ಯ ಆ ಲಕ್ಷಣಗಳೆಂದರೆ

೧. ಸಂಪಾದನಾ ಚಟುವಟಿಕೆಯಾಗಿರಬೇಕು
೨. ಮಾರುಕಟ್ಟೆಯನ್ನು ಗುರಿಯನ್ನಾಗಿಟ್ಟುಕೊಂಡಿರಬೇಕು
೩. ವರಮಾನ ಸಂಬಂಧಿಯಾಗಿರಬೇಕು
೪. ವಿನಿಮಯ ಮಹತ್ವ ಪಡೆದಿರಬೇಕು
೫. ಕುಟುಂಬದ ಹೊರಗೆ ನಡೆಯುತ್ತಿರಬೇಕು
೬. ಸಾರ್ವಜನಿಕ ಗುಣ ಹೊಂದಿರಬೇಕು
೭. ಗಣನೆ ಅಥವಾ ಮಾಪನ ಮಾಡಲು ಬರುವಂತಿರಬೇಕು

ಇಂತಹ ಲಕ್ಷಣಗಳನ್ನು ಒಳಗೊಂಡ ಯಾವುದೇ ಚಟುವಟಿಕೆಯು ದುಡಿಮೆ ಎಂದು ಪರಿಗಣಿಸಲ್ಪಡುತ್ತದೆ.[೨೧]

ಮಹಿಳೆ ಮಾಡುವ ಬಹುತೇಕ ಚಟುವಟಿಕೆಗಳು ಮೇಲೆ ಸೂಚಿಸಿದ ಲಕ್ಷಣಗಳನ್ನು ಹೊಂದಿರುವುದಿಲ್ಲ. ಆದರೆ ಮಹಿಳೆಯರ ಯಾವ ದುಡಿಮೆಗೆ ಮೇಲೆ ತಿಳಿಸಿದ ಲಕ್ಷಣಗಳಲ್ಲಿ ಕೆಲವೊಂದು ಲಕ್ಷಣಗಳಾದರೂ ಇರುತ್ತವೋ ಅಂತಹ ದುಡಿಮೆಯನ್ನು ಅಧ್ಯಯನ ಶಿಸ್ತುಗಳು ದುಡಿಮೆ ಎಂದು ಪರಿಗಣಿಸುತ್ತವೆ. ಉದಾಹರಣೆಗೆ ಕೃಷಿಕಾರ್ಮಿಕ ಚಟುವಟಿಕೆ, ನಿರ್ಮಾಣ ಕಾರ್ಮಿಕ ಚಟುವಟಿಕೆ, ಸರಕಾರಿ ಉದ್ಯೋಗ,

ಬುಟ್ಟಿ ನೇಯುವುದು ಇತ್ಯಾದಿ ಚಟುವಟಿಕೆಗಳು ಆದರೆ ಮಹಿಳೆಯರು ಮಾಡುವ ಬಹುತೇಕ ದುಡಿಮೆ ಅಥವಾ ಚಟುವಟಿಕೆಗಳು. ಕುಟುಂಬ ಸಂಬಂಧಿ ಸಂಗೋಪನ ಗುಣ ಹೊಂದಿರುವುದರಿಂದ ಅವುಗಳನ್ನು ದುಡಿಮೆ ಎಂದು ಪರಿಗಣಿಸಲಾಗುತ್ತಿಲ್ಲ. ಏಕೆಂದರೆ ಇಂತಹ ದುಡಿಮೆಯು ವಿನಿಮಯ ಗುಣಕ್ಕಿಂತ ಉಪಯೋಗಿ ಮಹತ್ವವನ್ನು ಪಡೆದಿದ್ದು, ಕುಟುಂಬದ ಒಳಗಡೆ ನಡೆಯುತ್ತಿರುತ್ತದೆ. ಆದ್ದರಿಂದ ಅದು ಖಾಸಗಿ ದುಡಿಮೆಯಾಗುತ್ತದೆ. ಅಲ್ಲದೆ ಇಂತಹ ದುಡಿಮೆಯನ್ನು ಪರಿಮಾಣಾತ್ಮಕವಾಗಿ ಹಣದ ರೂಪದಲ್ಲಿ ಗಣನೆ ಅಥವಾ ಮಾಪನ ಮಾಡುವುದು ಕಷ್ಟಸಾಧ್ಯವಾಗುತ್ತದೆ. ಆದ್ದರಿಂದ ಇಂತಹ ದುಡಿಮೆಯನ್ನು ಅರ್ಥಶಾಸ್ತ್ರದಲ್ಲಿ 'ದುಡಿಮೆ' ಎಂದು ಪರಿಗಣಿಸುವುದಿಲ್ಲ. ಉದಾಹರಣೆಗೆ ಮಕ್ಕಳ ಲಾಲನೆ ಪಾಲನೆ, ಅಡಿಗೆ ಮಾಡುವುದು, ಸ್ವಂತ ಹೊಲದಲ್ಲಿನ ದುಡಿಮೆ, ಉರುವಲು ಕಟ್ಟಿಗೆ ಮತ್ತು ನೀರು ಸಂಗ್ರಹ, ಬಟ್ಟೆ ತೊಳೆಯುವುದು ಇತ್ಯಾದಿ ಚಟುವಟಿಕೆಗಳು.

ಜ್ಞಾನ ಶಿಸ್ತುಗಳು ದುಡಿಮೆಗೆ ನೀಡಿರುವ ನಿರ್ವಚನದ ಮೂಲದಲ್ಲಿ ಜೈವಿಕ ನಿಯತಿಯು ಕೆಲಸ ಮಾಡುತ್ತಿದೆ. ಗಂಡ, ಮಕ್ಕಳು, ಕುಟುಂಬ ಇವುಗಳ ನಡುವೆ ಮಹಿಳೆಯ 'ಜಗತ್ತು' ನೆಲೆಗೊಂಡಿದೆ. ಇದರಿಂದಾಗಿ ಅವಳ ದುಡಿಮೆ ಖಾಸಗಿ ಎನಿಸಿಕೊಂಡಿದೆ. ಕುಟುಂಬದ ಖಾಸಗಿ ಜಗತ್ತಿಗೆ ಮೀಸಲಾದ ದುಡಿಮೆ ಸಮಾಜವಿಜ್ಞಾನಗಳಲ್ಲಿ 'ದುಡಿಮೆ' ಎಂದು ಎನಿಸಿಕೊಳ್ಳುವುದಿಲ್ಲ. ಸಮಾಜವಿಜ್ಞಾನಗಳು ಭೌತಿಕ ಸರಕು ಮತ್ತು ಸೇವೆಗಳ ಉತ್ಪಾದನೆಯನ್ನು ಮಾತ್ರ ಉತ್ಪಾದನೆ ಎಂದು ಪರಿಗಣಿಸಿವೆ. ಅಲ್ಲದೆ ಮಾರುಕಟ್ಟೆ ಪ್ರವೇಶಿಸುವ, ಕ್ರಯಪಟ್ಟಿಗೆ ಒಳಗಾಗುವ, ವಿನಿಮಯ ಮಹತ್ವವುಳ್ಳ ಸರಕು ಮತ್ತು ಸೇವೆಗಳ ಉತ್ಪಾದನೆಯನ್ನು ಮಾತ್ರ 'ದುಡಿಮೆ' ಎಂದು ನಿರ್ವಚಿಸಿವೆ.[೨೨]

ಮಹಿಳೆಯರು ಮಾಡುವ ಅನೇಕ ಕೆಲಸಗಳು ಕುಟುಂಬಸಂಬಂಧಿಯಾಗಿರುವುದರಿಂದ ಅವಳ ಕೆಲಸದ ಸ್ವರೂಪವನ್ನು "ಗುಂಪು ಕೆಲಸ" ಅಥವಾ "ರಾಶಿ ಕೆಲಸ" ಎಂದು ಸಂಬೋಧಿಸಲಾಗಿದೆ. ಸ್ವತಃ ' ಅಮರ್ತ್ಯಸೇನ್ ಅವರೇ ಮಹಿಳೆಯರು ಮಾಡುವ ಮನೆಗೆಲಸವನ್ನೇ 'ಕುಳಿತು ಮಾಡುವ ಕೆಲಸ' ಆ ಕೆಲಸ ಮಾಡುವುದಕ್ಕೆ ಕಡಿಮೆ ಶಕ್ತಿ ವ್ಯಯವಾಗುತ್ತದೆ ಅದಕ್ಕಾಗಿ ಅವರಿಗೆ ಕಡಿಮೆ ಪ್ರಮಾಣದ ಕ್ಯಾಲರಿ ಆಹಾರ ಸಾಕಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. WHO ಮತ್ತು FAOಗಳ ಉನ್ನತ ಸಮಿತಿಯ ವರದಿಯಾಗಿದ್ದ "Hand Book of Human Nutrition Requirement" ಎಂಬ ಪುಸ್ತಕದಲ್ಲಿ ಮಹಿಳೆ ಮಾಡುವ ಮನೆಕೆಲಸವನ್ನು ಹೆಚ್ಚು ಕುಳಿತು ಮಾಡುವ ಕೆಲಸ (Sedentary) ಎಂದು ಪರಿಗಣಿಸಲಾಗಿದೆ.[೨೩]

ಹೀಗೆ ಮಹಿಳೆಯರು ಕುಟುಂಬದ ಹೊರಗಿನ ಕೆಲಸದ ಜೊತೆಗೆ ಕುಟುಂಬದ ಒಳಗಿನ ಕೆಲಸಗಳನ್ನು ಮಾಡುತ್ತಾರೆ. ಕುಟುಂಬದ ಒಳಗಡೆ ನಡೆಯುವ ಇಂತಹ ಕೆಲಸವನ್ನು ಅಥವಾ ದುಡಿಮೆಯನ್ನು

ಅರ್ಥಶಾಸ್ತ್ರದಲ್ಲಿ 'ದುಡಿಮೆ' ಎಂದು ಪರಿಗಣಿಸಲಾಗುವುದಿಲ್ಲ. ಮಹಿಳೆಯರು ಮಾಡುವ ಇಂತಹ ಕೆಲಸವನ್ನು 'ಒಂದು ವಿಧದ ಸೇವೆ' ಎಂದು ಪರಿಗಣಿಸಿ 'ದುಡಿಮೆ'ಯ ಪರಿಧಿಯಿಂದ ದೂರ ಇಡಲಾಗಿದೆ.

**ಮಹಿಳೆಯರ ದುಡಿಮೆಯ ಜಗತ್ತು**

ಲಿಂಗ ಸಂಬಂಧಗಳ ಬಗ್ಗೆ ಬದ್ಧರಾದ ಹಾಗೂ ಲಿಂಗ ಸಂಬಂಧ ನೆಲೆಯಲ್ಲಿ ಅಧ್ಯಯನ ಮಾಡುತ್ತಿರುವ ಕೆಲಸವು ವಿದ್ವಾಂಸರು ಮಹಿಳೆಯ 'ದುಡಿಮೆ' ಕುರಿತಂತೆ ಅಧ್ಯಯನವನ್ನು ಕೈಗೊಂಡಿದ್ದಾರೆ. ಆ ಅಧ್ಯಯನದ ಆಧಾರದ ಮೇಲೆ ಮಹಿಳೆಯರ ದುಡಿಮೆಯ ಜಗತ್ತನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಮಹಿಳೆಯರ ದುಡಿಮೆಯು ಕುಟುಂಬಸಂಬಂಧಿ, ಹೊಟ್ಟೆ-ಬಟ್ಟೆ ಉತ್ಪಾದನೆ ಮತ್ತು ಸಂಗೋಪನಾ ಕಾರ್ಯಗಳನ್ನು ಒಳಗೊಂಡಿದ್ದರಿಂದ ಅವಳ ದುಡಿಮೆಯ ಜಗತ್ತನ್ನು ಕುಟುಂಬದ ನೆಲೆಯಲ್ಲಿ ವಿವರಿಸಿದ್ದಾರೆ.

ರಿಚರ್ಡ್ ಲೆನಾಯ್ ಅವರು "ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯು ಪುರುಷರ ದುಡಿಮೆಯನ್ನು ಮಾತ್ರ ತನ್ನೊಳಗೆ ಅಂತರ್ಗತ ಮಾಡಿಕೊಂಡಿರುವುದರಿಂದ ಹೊಟ್ಟೆ-ಬಟ್ಟೆ ಉತ್ಪಾದನಾ ವಲಯದಲ್ಲಿ ಮಹಿಳೆಯರ ದುಡಿಮೆ ಮಾತ್ರ ಉಳಿದುಕೊಂಡು ಬಿಡುತ್ತದೆ. ಹೊಟ್ಟೆ ಬಟ್ಟೆ ಉಪ್ಪಾದನೆಯು ಕೌಟುಂಬಿಕ ನೆಲೆಯನ್ನು ಹೊಂದಿರುವುದರಿಂದ ಅದಕ್ಕೆ ಅಲ್ಪ ದುಡಿಮೆಯು ಪ್ರಧಾನವಾಗುತ್ತದೆ. ಪುರುಷ ವರ್ಗವು ಸಂಪಾದನೆಯನ್ನು ಅರಸಿಕೊಂಡು ಬಂಡವಾಳ ಉತ್ಪಾದನೆಯ ವಲಯವನ್ನು ಪ್ರವೇಶಿಸಿರುವುದರಿಂದ ಹೊಟ್ಟೆ-ಬಟ್ಟೆ ಉತ್ಪಾದನಾ ವಲಯದಲ್ಲಿ ಮಹಿಳೆಯರು ಉಳಿದುಕೊಂಡು ಬಿಡುತ್ತಾರೆ. ಪುರುಷ ದುಡಿಮೆಗಾರರು ಮಾರುಕಟ್ಟೆ ವ್ಯವಸ್ಥೆಯಲ್ಲಿ ಸ್ಥಾನ ಪಡೆದುಕೊಂಡರೆ ಮಹಿಳಾ ದುಡಿಮೆಗಾರರು ಕುಟುಂಬ ವ್ಯವಸ್ಥೆಯಲ್ಲಿ ಮುಂದುವರೆಯುತ್ತಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೨]" ಇವರ ಈ ಅಭಿಪ್ರಾಯವು ಮಹಿಳೆಯರ ದುಡಿಮೆಯ ಜಗತ್ತು ಕುಟುಂಬಕ್ಕೆ ಸೀಮೀತವಾಗಿದೆ ಎಂಬುದನ್ನು ಪ್ರತಿಬಿಂಬಿಸುತ್ತಿದೆ. ಅಂದರೆ ಪುರುಷರ ದುಡಿಮೆಯು ಮಾರುಕಟ್ಟೆ ಮೌಲ್ಯ ಮತ್ತು ವಿನಿಮಯ ಮೌಲ್ಯವನ್ನು ಪಡೆದಿರುವುದರಿಂದ ಹಾಗೂ ಅದು ಸಂಪಾದನಾ ಸ್ವರೂಪದ್ದಾಗಿರುವುದರಿಂದ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ಥಾನ ಪಡೆದು ಉತ್ಪಾದನಾ ಚಟುವಟಿಕೆಯಲ್ಲಿ ತೊಡಗುವ ಉತ್ಪಾದನಾ ಸಂಬಂಧಿ ದುಡಿಮೆಯಾಗಿದೆ. ಆದರೆ ಮಹಿಳೆಯರ ದುಡಿಮೆಗೆ ವಿನಿಮಯ ಮೌಲ್ಯ, ಮಾರುಕಟ್ಟೆ ಮೌಲ್ಯ ಮತ್ತು ಕ್ರಯಪಟ್ಟಿ ಇಲ್ಲದೆ ಸಂಗೋಪನ ಸ್ವರೂಪದ ದುಡಿಮೆಯಾಗಿದ್ದರಿಂದ ಬಂಡವಾಳಶಾಹಿ ವ್ಯವಸ್ಥೆಯ ಉತ್ಪಾದನಾ ಪ್ರಕ್ರಿಯೆಯಲ್ಲಿ ಸ್ಥಾನ ಕಳೆದುಕೊಳ್ಳುತ್ತದೆ ಅಲ್ಲದೆ ಅವಳ ದುಡಿಮೆಯು ಕುಟುಂಬ ಸಂಬಂಧಿ ಹೊಟ್ಟೆ-ಬಟ್ಟೆ ಚಟುವಟಿಕೆಗೆ ಅಥವಾ ದುಡಿಮೆಗೆ ಸೀಮಿತವಾಗುತ್ತದೆ.

ಮಹಿಳೆಯ ದುಡಿಮೆ ಕುಟುಂಬ-ಸಂಬಂಧದಲ್ಲಿ ನೆಲೆಗೊಳ್ಳಲು ಕೇವಲ ಹೊಟ್ಟೆ-ಬಟ್ಟೆ ಉತ್ಪಾದನೆ ಮಾತ್ರ ಸಂಬಂಧಿಸಿರುವುದಿಲ್ಲ. ಅದರ ಜೊತೆ ಸಮಾಜದಲ್ಲಿನ ಜಾತಿ ಮತ್ತು ವರ್ಗನೆಲೆಗಳು ಕಾರಣ

ವಾಗುತ್ತವೆ. ಉತ್ತಮ ಜಾತಿ ವರ್ಗಗಳ ಮಹಿಳೆಯರು ಹೊಟ್ಟೆ-ಬಟ್ಟೆ ದುಡಿಮೆಯಿಂದ ಬಿಡುಗಡೆಯನ್ನು ಪಡೆದರೆ ಕೆಳಜಾತಿಯ ಮತ್ತು ಕೆಳವರ್ಗದ ಮಹಿಳೆಯರು ಕುಟುಂಬ ಸಂಬಂಧಿ ಸಂಗೋಪನಾ ಚಟುವಟಿಕೆಗಳ ಜೊತೆಗೆ ಹೊಟ್ಟೆ-ಬಟ್ಟೆ ಸಂಬಂಧಿ ಉತ್ಪಾದನಾ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಕೆಳಜಾತಿ ವರ್ಗಗಳ ಬಹುತೇಕ ಮಹಿಳೆಯರು ಹೊಟ್ಟೆ-ಬಟ್ಟೆ ದುಡಿಮೆಯಿಂದ ಬಿಡುಗಡೆಯನ್ನು ಪಡೆದರೆ ಕೆಳಜಾತಿಯ ಮತ್ತು ಕೆಳವರ್ಗದ ಮಹಿಳೆಯರು ಕುಟುಂಬ ಸಂಬಂಧಿ ಸಂಗೋಪನಾ ಚಟುವಟಿಕೆಗಳ ಜೊತೆಗೆ ಹೊಟ್ಟೆ-ಬಟ್ಟೆ ಸಂಬಂಧಿ ಉತ್ಪಾದನಾ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಕೆಳಜಾತಿ ವರ್ಗಗಳ ಬಹುತೇಕ ಮಹಿಳೆಯರು ಹೊಟ್ಟೆ-ಬಟ್ಟೆ ಸಂಬಂಧಿ ಉತ್ಪಾದನಾ ಚಟುವಟಿಕೆಗಾಗಿ ಅಧಿಕ ಸಂಖ್ಯೆಯಲ್ಲಿ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವುದನ್ನು ಟುವರ್ಡ್ಸ್ ಈಕ್ವಾಲಿಟಿ ವರದಿ-೧೯೭೪, ಆಲ್ಫಾ ನೇಟಿವ್ ಸರ್ವೆ-೧೯೯೮ ಮತ್ತು ಬಿಂಜಿಂಗ್ ಮಹಿಳಾ ಸಮಾವೇಶದ ವರದಿ-೧೯೯೫, ಇತ್ಯಾದಿ ವರದಿಗಳು ತಿಳಿಸುತ್ತವೆ.

ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಮಹಿಳೆಯರ ದುಡಿಮೆಯು ಕೇವಲ ಕುಟುಂಬ ಸಂಬಂಧಿ ಚಟುವಟಿಕೆಗಳಿಗೆ ಮತ್ತು ಹೊಟ್ಟೆ ಬಟ್ಟೆ ಸಂಬಂಧಿ ಉತ್ಪಾದನಾ ಚಟುವಟಿಕೆಗಳಿಗೆ ಮೀಸಲಾಗಿರುತ್ತದೆ. ಈ ಬಗೆಯ ಬದಲಾವಣೆಯನ್ನು ಬಂಡವಾಳಶಾಹಿಯು ಉದ್ದೇಶಪೂರ್ವಕವಾಗಿ ಬಳಸುತ್ತಿದೆ. ಬಂಡವಾಳ ಶಾಹಿ ಉತ್ಪಾದನಾ ವ್ಯವಸ್ಥೆಯು ಶ್ರೇಷ್ಠವಾದ ಸ್ಥಾನವನ್ನು ಹೊಂದಿದ್ದ ಹೊಟ್ಟೆ-ಬಟ್ಟೆ ಉತ್ಪಾದನಾ ವ್ಯವಸ್ಥೆಯ ಕನಿಷ್ಠ ಸ್ಥಾನಮಾನ ಹೊಂದಿರುತ್ತದೆ. ಕನಿಷ್ಠ ಸ್ಥಾನಮಾನವನ್ನು ಹೊಂದಿರುವ ಹೊಟ್ಟೆ ಬಟ್ಟೆ ಉತ್ಪಾದನಾ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ಎರಡನೇ ದರ್ಜೆಯ ದುಡಿಮೆಗಾರರಾಗಿರುತ್ತಾರೆ. ಬಂಡವಾಳಶಾಹಿ ಉತ್ಪಾದನಾ ವಲಯದಲ್ಲಿ ದುಡಿಯುವ ದುಡಿಮೆಗಾರರು ಉನ್ನತ ದರ್ಜೆಯ ದುಡಿಮೆಗಾರರಾಗಿರುತ್ತಾರೆ. ಹಾಗೂ ಹೊಟ್ಟೆ-ಬಟ್ಟೆ ಉತ್ಪಾದನಾ ವ್ಯವಸ್ಥೆಯಲ್ಲಿ ಸಾಮಂತವಾದಿ ಸಂಬಂಧಗಳು, ಕುಲಸಂಬಂಧಿ ಸಂಗತಿಗಳು, ಉದ್ಯೋಗಗಳು ಮುಂದುವರೆದಿರುತ್ತವೆ. ಇಂತಹ ಉತ್ಪಾದನಾ ವ್ಯವಸ್ಥೆಯಲ್ಲಿ ಪುರುಷರು ದುಡಿಮೆಗಾರರಾಗಿರುತ್ತಾರೆ. ಆದರೆ ಅವರು ಹೊಟ್ಟೆ-ಬಟ್ಟೆ ಉತ್ಪಾದನಾ ವಲಯವನ್ನು ತೊರೆದು ಬಂಡವಾಳಶಾಹಿ ಉತ್ಪಾದನಾ ವಲಯವನ್ನು ಸೇರಿ ಬಂಡವಾಳಶಾಹಿ ಶೋಷಣೆಯಿಂದ ನರಳುತ್ತಿದ್ದಾರೆ. ಆದರೆ ಹೊಟ್ಟೆ-ಬಟ್ಟೆ ಉತ್ಪಾದನಾ ವಲಯವನ್ನು ಬಿಡಲಾರದೆ ಅಲ್ಲಿಯೇ ಮುಂದುವರೆದ ಮಹಿಳಾ ದುಡಿಮೆಗಾರರು ಸಾಮಂತವಾದಿ ಉತ್ಪಾದನಾ ಸಂಬಂಧಗಳು ಮತ್ತು ಪುರುಷಶಾಹಿ ಶೋಷಣೆಗೆ ಒಳಗಾಗುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ಮಹಿಳೆಯರ ದುಡಿಮೆಯ ಜಗತ್ತು ಎಂಬುದು ಕುಟುಂಬಸಂಬಂಧಿ ಹೊಟ್ಟೆ-ಬಟ್ಟೆ ಉತ್ಪಾದನಾ ವಲಯ ಮತ್ತು ಕುಟುಂಬಸಂಬಂಧಿ ಸಂಗೋಪನಾ ಕಾರ್ಯಕ್ಕೆ ಸಂಬಂಧಿಸಿರುವುದರಿಂದ

ಮಹಿಳೆಯರ ದುಡಿಮೆಯ ಜಗತ್ತು ಎಂಬುದು 'ಕುಟುಂಬವೇ' ಆಗಿದೆ. ಅದನ್ನು ಈ ಕೆಳಗಿನ ರೇಖಾ ಚಿತ್ರದ ಮೂಲಕ ನೋಡಬಹುದು.




**ಮೂಲ :** ಮೈತ್ರೇಯಿ ಕೃಷ್ಣರಾಜ್, ೧೯೯೨ ವುಮೆನ್ ಕ್ರಾಫ್ಟ್ ವರ್ಕರ್ಸ್ ಆಫ್ ಸೆಕ್ಯುರಿಟಿ ಫಾರ್ ಫ್ಯಾಮಿಲಿ ಸಬ್‌ಸಿಸ್ಟೆನ್ಸ್, EPW, Vol-xxvii No.17 p:ws II

ಮೇಲಿನ ರೇಖಾಚಿತ್ರದಲ್ಲಿ ತೋರಿಸಿದಂತೆ ಮಹಿಳೆಯರ ದುಡಿಮೆಯ ಜಗತ್ತು ನಾಲ್ಕು ಸ್ತರಗಳನ್ನು ಹೊಂದಿದೆ. ಇಲ್ಲಿ ಕೇಂದ್ರ ಮತ್ತು ಅಂಚು ಇದ್ದು ಕೇಂದ್ರ ಮತ್ತು ಅಂಚುಗಳ ನಡುವೆ ಎರಡು ಸ್ತರಗಳಿವೆ. ಚಿತ್ರದಲ್ಲಿ ತೋರಿಸಿದಂತೆ ಕೇಂದ್ರವು ಸಂಪೂರ್ಣವಾಗಿ ಮಹಿಳೆಯರ ಜಗತ್ತಾಗಿದೆ. ಅಂಚಿನಲ್ಲಿ ವಿಶ್ವಾತ್ಮಕ ವಿಶಾಲ ಆರ್ಥಿಕತೆ ಇದೆ. ಕೇಂದ್ರವು ಲಿಂಗ ನಿರ್ದಿಷ್ಟವಾದರೆ ಅಂಚು ಲಿಂಗ ಸಾಪೇಕ್ಷವಾಗಿದೆ. ಇವೆರಡು ಸ್ತರಗಳ ನಡುವೆ ಮತ್ತೆ ಎರಡು ಸ್ತರಗಳಿವೆ. ಎರಡನೇ ಸ್ತರ ಕೌಟುಂಬಿಕ ದುಡಿಮೆ ಮತ್ತು ಹೊಟ್ಟೆ ಬಟ್ಟೆ ದುಡಿಮೆ ಕೇಂದ್ರಕ್ಕೆ ಸಮೀಪದಲ್ಲಿ ಇರುವುದರಿಂದ ಕೇಂದ್ರ ಮತ್ತು ಎರಡನೇ ಸ್ತರಗಳ ನಡುವೆ ಪರಸ್ಪರ ವರ್ಗವರ್ಗ ಸಂಬಂಧ ನಡೆಯುತ್ತದೆ. ಮೂರನೇ ಸ್ತರವಾದ ಶ್ರಮ ಮಾರುಕಟ್ಟೆ ಮತ್ತು ವಾಣಿಜ್ಯ ದುಡಿಮೆಯು ಹಂಚಿಗೆ ಸಮೀಪವಿರುವುದರಿಂದ ಅಂದರೆ ಆರ್ಥಿಕತೆಗೆ ಸಮೀಪ ಇರುವುದರಿಂದ ಇವೆರಡರ ನಡುವೆ ಕೊಡುಕೊಳ್ಳುವ ಸಂಬಂಧ ನಡೆಯುತ್ತದೆ.

ಚಿತ್ರದಲ್ಲಿ ತೋರಿಸಿದಂತೆ ಕೇಂದ್ರವು ಮಹಿಳಾ ಜಗತ್ತು ಆಗಿದೆ. ಇಲ್ಲಿ ಕುಟುಂಬವು ಪ್ರಧಾನವಾದ ಸಂಸ್ಥೆಯಾಗಿರುವುದರಿಂದ ಇದನ್ನು 'ಕುಟುಂಬಸಂಬಂಧಿ ಆರ್ಥಿಕತೆ' ಎಂದು ಹೇಳಬಹುದು. ಇಲ್ಲಿ ಎರಡು ಬಗೆಯ 'ಕುಟುಂಬಸಂಬಂಧಿ ದುಡಿಮೆ' ಇರುವುದು ಕಂಡುಬರುತ್ತದೆ. ಒಂದು 'ಕುಟುಂಬ ಸಂಬಂಧಿ ಸಂಗೋಪಾನ' ದುಡಿಮೆಯಾದರೆ ಎರಡನೆಯದು 'ಕುಟುಂಬಸಂಬಂಧಿ ಸಂಪಾದನಾ

ದುಡಿಮೆ'ಯಾಗಿದೆ. ಇವೆರಡು ಬಗೆಯ ದುಡಿಮೆಗಳು ಲಿಂಗನಿರ್ದಿಷ್ಟ ದುಡಿಮೆಗಳಾಗಿವೆ. ಆದ್ದರಿಂದ ಕೇಂದ್ರವು ಮಹಿಳೆಯರ ಖಾಸಗಿ ಜಗತ್ತಾಗಿದೆ.

**೧. ಕುಟುಂಬಸಂಬಂಧಿ ಸಂಗೋಪನಾ ದುಡಿಮೆ**

ಮಹಿಳೆಯರು ಕುಟುಂಬದ ಒಳಗಡೆ ಮಾಡುವ ಖಾಸಗಿ ದುಡಿಮೆಗಳಾದ ಮತ್ತು ಜೈವಿಕ ನಿಯತಿಯ ಕಾರ್ಯಗಳಾದ ಮಕ್ಕಳನ್ನು ಹೆರುವುದು, ಪಾಲನೆ, ಪೋಷಣೆ, ಗಂಡ-ಮಕ್ಕಳ ಯೋಗಕ್ಷೇಮ, ಅಡುಗೆ ಮಾಡುವುದು, ಮಾಡಿದ ಅಡುಗೆಯನ್ನು ಬಡಿಸುವುದು, ದವಸ ಧಾನ್ಯ ಕ್ಲೀನ್ ಮಾಡುವುದು, ಕಸ, ಬಟ್ಟೆ, ಮುಸುರೆ ತಿಕ್ಕುವುದು, ಗುಡಿಸುವುದು, ಸಾರಿಸುವುದು, ಅತಿಥಿ ಅಭ್ಯಾಗತರು ಹಿರಿಯರು, ವೃದ್ಧರನ್ನು ನೋಡಿಕೊಳ್ಳುವುದು ಇತ್ಯಾದಿಗಳು ಕುಟುಂಬಸಂಬಂಧಿ ಸಂಗೋಪಾನ ಕಾರ್ಯಗಳಾಗಿವೆ.

**೨. ಕುಟುಂಬಸಂಬಂಧಿ ಸಂಪಾದನಾ ದುಡಿಮೆ**

ಮಹಿಳೆಯರೇ ಕುಟುಂಬದಲ್ಲಿ ಕೈಗೊಳ್ಳುವ ಚಟುವಟಿಕೆಗಳಾದ ಆಕಳು, ಎಮ್ಮೆಗಳನ್ನು ನೋಡಿಕೊಳ್ಳುವುದು, ಹಾಲು-ಹೈನು ಸಂಸ್ಕರಿಸುವುದು, ತೋಟ, ಹೊಲಗದ್ದೆಯಲ್ಲಿ ದುಡಿಯುವುದು, ಉರುವಲು ಸಂಗ್ರಹ, ಅರಣ್ಯ ಉತ್ಪನ್ನಗಳ ಸಂಗ್ರಹ, ನೀರು, ಮೇವು ಸಂಗ್ರಹಿಸುವುದು, ಹಾಲು-ಹೈನು, ಮೊಟ್ಟೆ, ಕೋಳಿ ಇತ್ಯಾದಿ ಉತ್ಪನ್ನಗಳನ್ನು ಮಾರಾಟ ಮಾಡುವುದು ಇತ್ಯಾದಿ ಚಟುವಟಿಕೆಗಳು ಕುಟುಂಬ ಸಂಬಂಧಿ ಸಂಪಾದನಾ ದುಡಿಮೆಗಳಾಗಿವೆ.

ಮೇಲಿನ ಎರಡು ಬಗೆಯ ದುಡಿಮೆಗಳು ಕುಟುಂಬಸಂಬಂಧಿ ದುಡಿಮೆಗಳಾಗಿದ್ದು ಈ ರೀತಿಯ ದುಡಿಮೆಯಲ್ಲಿ ಪುರುಷರ ಸಹಭಾಗಿತ್ವ ಕಡಿಮೆ ಇರುತ್ತದೆ. ಈ ದುಡಿಮೆಗಳನ್ನು ಜೈವಿಕವೆಂದು ವರ್ಗೀಕರಿಸಿರುವುದರಿಂದ ಈ ಎಲ್ಲ ದುಡಿಮೆಗಳು ಮಹಿಳೆಯರಿಗೆ ಮೀಸಲಾಗಿವೆ. ಆದ್ದರಿಂದಾಗಿ ಈ ಬಗೆಯ ದುಡಿಮೆಯನ್ನು 'ಇನ್ ವಿಸಿಬಲ್' ಎಂದು ಪರಿಗಣಿಸಿ ಕ್ರಯಪಟ್ಟಿಯಿಂದ ದೂರ ಇಡಲಾಗಿದೆ. ಹೀಗಾಗಿ ಇಂತಹ ದುಡಿಮೆಗಳು ಆರ್ಥಿಕತೆಯ ಅಂಚಿನಿಂದ ದೂರ ಉಳಿಯುತ್ತವೆ.

ಇಂತಹ 'ಕುಟುಂಬಸಂಬಂಧಿ ಸಂಗೋಪನಾ' ಮತ್ತು 'ಕುಟುಂಬಸಂಬಂಧಿ ಉತ್ಪಾದನಾ' ದುಡಿಮೆಗಳು ಉತ್ಪಾದನಾ ಕ್ರಿಯೆಗೆ ಪೂರಕವಾಗುವ ಉತ್ಪಾದನಾ ಚಟುವಟಿಕೆಗಳಾಗಿದ್ದರೂ ಇದನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲ. ಏಕೆಂದರೆ ಇವು ವೆಚ್ಚ ಉಳಿತಾಯದ ಚಟುವಟಿಕೆಗಳಾಗಿವೆ. ಮೂರ್ತ ಎ.ಬೆನ್ ಅವರು ಮಹಿಳೆಯರು ಮಾಡುವ ಇಂತಹ ದುಡಿಮೆಯನ್ನು "ವೆಚ್ಚ ಉಳಿತಾಯ ಮಾಡುವ ಚಟುವಟಿಕೆ" (Expentitur Savlng acttvites) ಎಂದು ಕರೆದಿದ್ದಾರೆ. ಏಕೆಂದರೆ ಮಹಿಳೆಯರು ಮಾಡುವ ಈ ಚಟುವಟಿಕೆಗಳಿಂದ ಕುಟುಂಬಕ್ಕೆ ಹೊರೆಯಾಗುವ ವೆಚ್ಚಗಳು ಉಳಿಯುವುದರಿಂದ ಈ ದುಡಿಮೆಯನ್ನು "ವೆಚ್ಚ ಉಳಿತಾಯ ಚಟವಟಿಕೆಗಳು" ಎಂದು ಕರೆಯಲಾಗಿದೆ. ಉದಾಹರಣೆಗೆ ಉರುವಲು ಕಟ್ಟಿಗೆ, ಹಸು

ಎಮ್ಮೆಗೆ ಮೇವು ತರುವುದು, ಸ್ವಂತ ಹೊಲ-ಗದ್ದೆಯಲ್ಲಿ ದುಡಿಯುವುದು, ಇತ್ಯಾದಿ ಚಟುವಟಿಕೆಗಳು ಇಂತಹ ಚಟುವಟಿಕೆಗಳಿಂದ ಕುಟುಂಬ ಈ ಕಾರ್ಯಕ್ಕಾಗಿ ನೀಡಬಹುದಾದ ಹಣರೂಪದ ಆದಾಯ ಉಳಿತಾಯವಾಗುತ್ತದೆ. ಆದ್ದರಿಂದಾಗಿ ಈ ಚಟುವಟಿಕೆಗಳು ವೆಚ್ಚ ಉಳಿತಾಯ ಚಟುವಟಿಕೆಗಳಾಗಿವೆ. ಇಂತಹ ಚಟುವಟಿಕೆಗಳನ್ನು ಆರ್ಥಿಕತೆಯು ದುಡಿಮೆ ಎಂದು ಪರಿಗಣಿಸುತ್ತಿಲ್ಲವಾದ್ದರಿಂದ ಇವು ಕೇಂದ್ರದಲ್ಲಿ ಅಥವಾ ಕುಟುಂಬದಲ್ಲಿ ಕೇಂದ್ರೀಕೃತವಾಗಿವೆ.[೨೬]

## ಮಹಿಳಾ ದುಡಿಮೆಯ ಪ್ರಕಾರಗಳು

ನಮ್ಮ ಸಮಾಜದಲ್ಲಿ ಮಹಿಳೆಯರು ಭರಿಸುತ್ತಿರುವ ದುಡಿಮೆಯ ಪ್ರಮಾಣ ಹಾಗೂ ಅದಕ್ಕೆ ಸಂಬಂಧಿಸಿದ ಹೊರೆ ಹಾಗೂ ಹೊಣೆಗಳು ಪುರುಷವರ್ಗಕ್ಕಿಂತ ಅಧಿಕವಾಗಿರುವುದು ಅಧ್ಯಯನಗಳಿಂದ ತಿಳಿದು ಬರುತ್ತಿದೆ(ಉದಾಹರಣೆಗೆ ಟುವರ್ಡ್ ಈಕ್ವಾಲಿಟಿ ವರದಿ-೧೯೭೪, ಮಾನವ ಅಭಿವೃದ್ಧಿ ವರದಿ-೧೯೯೮ ಮತ್ತು ಮಾನವ ಅಭಿವೃದ್ಧಿ ವರದಿ-೨೦೦೫ ಇತ್ಯಾದಿಗಳು). ಮಹಿಳೆಯರು ಕುಟುಂಬದ ಹೊರಗೆ ಕುಟುಂಬಕ್ಕೆ ಆದಾಯ ತರುವ 'ಸಂಪಾದನಾ ದುಡಿಮೆ' ಜೊತೆಗೆ ಕುಟುಂಬದ ಒಳಗೆ ಇತರ ಎರಡು ಬಗೆಯ ದುಡಿಮೆಯನ್ನು ಮಾಡುತ್ತಿದ್ದಾಳೆ. ಆದ್ದರಿಂದ 'ಮಹಿಳೆಯ ದುಡಿಮೆ' ಎಂಬುದು ಮೂರು ಬಗೆಯಲ್ಲಿ ಕಂಡುಬರುತ್ತಿದೆ. ಆ ಮೂರು ಬಗೆಯ ದುಡಿಮೆಗಳೆಂದರೆ

೧. ಸಂತಾನೋತ್ಪತ್ತಿ ದುಡಿಮೆ
೨. ಕೌಟುಂಬಿಕ ದುಡಿಮೆ
೩. ಉತ್ಪಾದನಾ ದುಡಿಮೆ

**೧. ಸಂತಾನೋತ್ಪತ್ತಿ ದುಡಿಮೆ :** ಸಂತಾನೋತ್ಪತ್ತಿ ದುಡಿಮೆಯು ಸ್ತ್ರೀಯರಿಗೆ ನಿಸರ್ಗವೇ ನೀಡಿರುವ ವಿಶಿಷ್ಟವಾದ ದುಡಿಮೆಯಾಗಿದೆ. ಸ್ತ್ರೀಯು ಗರ್ಭ ಧರಿಸುವ, ಒಂಬತ್ತು ತಿಂಗಳು ಹೊಟ್ಟೆಯಲ್ಲಿಟ್ಟುಕೊಂಡು ಮಗುವನ್ನು ಹೆರುವ, ಮೊಲೆ ಹಾಲುಣಿಸುವ, ಮಗುವಿನ ಪೋಷಣೆ ಮಾಡುವ ದುಡಿಮೆಯನ್ನು ಸಂತಾನೋತ್ಪತ್ತಿ ದುಡಿಮೆ ಎಂದು ಕರೆಯಲಾಗುತ್ತದೆ. ಈ ದುಡಿಮೆಯು ಜೈವಿಕ ನೀತಿಯನ್ನು ಆಧರಿಸಿ ಮಹಿಳೆ ಮಾಡುವ ದುಡಿಮೆಯಾಗಿದೆ. ಸಂತಾನೋತ್ಪತ್ತಿ ದುಡಿಮೆಯು ಮಕ್ಕಳನ್ನು ಹೆರುವ ಕೆಲಸದಲ್ಲದೆ, ಶಿಶುಪಾಲನೆಯನ್ನು ಒಳಗೊಂಡಿದೆ. ಶಿಶುಪಾಲನಾ ಕಾರ್ಯ ಲಿಂಗನಿರ್ದಿಷ್ಟ ಕಾರ್ಯವೇನಲ್ಲ. ಅದನ್ನು ಪುರುಷರು ಮಾಡಬಹುದು. ಆದರೆ ಪುರುಷಶಾಹಿ ವಿಚಾರ ಪ್ರಣಾಳಿಕೆಯು ಸಂತಾನೋತ್ಪತ್ತಿಯ ಪೂರ್ಣ ಜವಾಬ್ದಾರಿಯನ್ನು ಮಹಿಳೆಯರಿಗೆ ಮೀಸಲಿಟ್ಟಿದೆ. ಅಲ್ಲದೆ ಈ ಕಾರ್ಯವನ್ನು ಜೈವಿಕ ಕ್ರಿಯೆ ಎಂದು ಬಿಂಬಿಸಿ ಲಿಂಗ ನಿರ್ದಿಷ್ಟ ಕಾರ್ಯವನ್ನಾಗಿ ಮಾಡಲಾಗಿದೆ. ಹೀಗಾಗಿ ಈ ಕಾರ್ಯವನ್ನು ಮಹಿಳೆಯರೇ ಕೈಗೊಳ್ಳಬೇಕಾಗಿದೆ.

**೨. ಕೌಟುಂಬಿಕ ದುಡಿಮೆ :**

ಸಮಾಜ ಮತ್ತು ಕುಟುಂಬಗಳು ಮಹಿಳೆಯರಿಗೆ ಮೀಸಲಿಟ್ಟ ದುಡಿಮೆಯೇ ಗೃಹವಾರ್ತೆಯ ದುಡಿಮೆ ಅಥವಾ ಕೌಟುಂಬಿಕ ದುಡಿಮೆ. ಇದು ಸಂಭಾವನೆರಹಿತ ದುಡಿಮೆಯಾಗಿದೆ. ಅರ್ಥಶಾಸ್ತ್ರವು ಕೌಟುಂಬಿಕ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸಿಲ್ಲ. ಏಕೆಂದರೆ ಕೌಟುಂಬಿಕ ದುಡಿಮೆಗೆ ಮಾರುಕಟ್ಟೆ ವ್ಯಾಪ್ತಿ ಇಲ್ಲ. ಅವುಗಳಿಗೆ ಉಪಯುಕ್ತತೆ ಮಾತ್ರ ಇದೆ. ಗಂಡ ಮತ್ತು ಮಕ್ಕಳ ಸೇವೆಯ ಜೊತೆಗೆ ಉರುವಲು ಶೇಖರಿಸುವುದು, ನೀರು ಸಂಗ್ರಹಿಸುವುದು, ಅಡುಗೆ ಮಾಡುವುದು, ಧಾನ್ಯ ಕ್ಲೀನ್ ಮಾಡುವುದು, ಬಟ್ಟೆ ತೊಳೆಯುವುದು ಮತ್ತು ಮನೆ ಗುಡಿಸುವುದು ಇತ್ಯಾದಿ ಕೆಲಸಗಳು ಈ ದುಡಿಮೆಯಲ್ಲಿ ಸೇರುತ್ತವೆ. ಈ ರೀತಿಯ ದುಡಿಮೆಯನ್ನು ಉತ್ಪಾದನಾ ದುಡಿಮೆ ಎಂದು ಪರಿಗಣಿಸಲಾಗುತ್ತಿಲ್ಲ. ಇದೇ ಕೆಲಸವನ್ನು ಕೂಲಿ ಆಳುಗಳಿಂದ ಮಾಡಿಸಿದರೆ ಕೂಲಿ ನೀಡಲಾಗುತ್ತದೆ. ಅದು ದುಡಿಮೆ ಎಂದು ಪರಿಗಣಿತವಾಗುತ್ತದೆ. ಆದರೆ ಅದೇ ಕೆಲಸವನ್ನು ಗೃಹಿಣಿ ಮಾಡಿದರೆ ಕೂಲಿ ಅಥವಾ ವೇತನವನ್ನು ನೀಡಲಾಗುವುದಿಲ್ಲ.

**೩. ಉತ್ಪಾದನಾ ದುಡಿಮೆ :** 'ಸಂತಾನೋತ್ಪತ್ತಿ ದುಡಿಮೆ' ಮತ್ತು 'ಕೌಟುಂಬಿಕ ದುಡಿಮೆ'ಗಳಲ್ಲಿದೆ ಮಹಿಳೆಯರು ಸಂಭಾವನೆ ಸಹಿತ ಕೂಲಿ, ವೇತನ ಮತ್ತು ಸಂಬಳ ಪಡೆಯುವ ದುಡಿಮೆಯಲ್ಲಿ ನಿರತರಾಗಿರುತ್ತಾರೆ. ಕೃಷಿ ಕ್ಷೇತ್ರದಲ್ಲಿ ಮಹಿಳೆಯರು ಅನೇಕ ಬಗೆಯ ದುಡಿಮೆಯಲ್ಲಿ ತೊಡಗುತ್ತಾರೆ. ಪೈರಿನ ಸಸಿ ನೆಡುವ ಕ್ರಿಯೆಯಿಂದ ಹಿಡಿದು ಫಸಲನ್ನು ರಾಶಿ ಮಾಡುವವರೆಗೆ ವಿವಿಧ ಹಂತದ ಚಟುವಟಿಕೆಯಲ್ಲಿ ಮಹಿಳೆಯರು ಭಾಗಿಗಳಾಗಿರುತ್ತಾರೆ. ಆದ್ದರಿಂದ 'ಕೃಷಿಯು ಭಾರತದ ಬೆನ್ನೆಲುಬಾಗಿದೆ. ಮಹಿಳೆಯು ಕೃಷಿಯ ಬೆನ್ನೆಲುಬಾಗಿದ್ದಾಳೆ'. ಅಲ್ಲದೆ ನಿರ್ಮಾಣ ಉದ್ಯಮದಲ್ಲಿ ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿದ್ದಾಳೆ. ಈ ವಲಯಗಳಲ್ಲಿ ಕೂಲಿ ಆಳುಗಳಾಗಿ ದುಡಿಯುವುದರ ಮೂಲಕ ಕುಟುಂಬಕ್ಕೆ ವರಮಾನವನ್ನು ತಂದು ಕೊಡುತ್ತಾಳೆ. ಇಂತಹ ಕೆಲಸಗಳಲ್ಲಿ ಕೆಳವರ್ಗದ ಮಹಿಳೆಯರು ದುಡಿದರೆ ಮಧ್ಯಮ ಮತ್ತು ಉನ್ನತ ವರ್ಗದ ಮಹಿಳೆಯರು ಖಾಸಗಿ ಮತ್ತು ಸರಕಾರಿ ಸೇವೆಯಲ್ಲಿ ತಿಂಗಳ ಸಂಬಳಕ್ಕಾಗಿ ದುಡಿಯುತ್ತಿರುತ್ತಾರೆ. ಆದ್ದರಿಂದ ಮಹಿಳೆಯರು ಎರಡೂ ವಿಧದ ದುಡಿಮೆಯ ಜೊತೆಗೆ ಉತ್ಪಾದನಾ ದುಡಿಮೆಯಲ್ಲಿ ದುಡಿಯುತ್ತಿದ್ದಾರೆ.[೨೨]

ಒಟ್ಟಾರೆಯಾಗಿ ಹೇಳುವುದಾದರೆ ಮಹಿಳೆಯರು ಮೂರು ಬಗೆಯ 'ದುಡಿಮೆ'ಯಲ್ಲಿ ತೊಡಗಿದ್ದಾರೆ. ಅಲ್ಲದೆ ಈ ಮೂರು ಬಗೆಯ ದುಡಿಮೆಗಳನ್ನು ಏಕಕಾಲದಲ್ಲಿ ಮಾಡುತ್ತಿರುತ್ತಾರೆ. ಪರಿಣಾಮವಾಗಿ ಮಹಿಳೆಯರು ಪ್ರತಿದಿನ ಎರಡು ದುಡಿಮೆ ದಿನಗಳನ್ನು ಮಾಡುತ್ತಿರುವುದು ಕಂಡುಬರುತ್ತಿದೆ. ಕಡು ಬಡತನದಿಂದ ನರಳುವ ಕುಟುಂಬಗಳಲ್ಲಿ ಮಹಿಳೆಯರು ಮೇಲೆ ತಿಳಿಸಿದ ಮೂರು ಬಗೆಯ ದುಡಿಮೆಗಳಲ್ಲಿ ೧೬ ರಿಂದ ೧೮ ಗಂಟೆಗಳ ಕಾಲ ದುಡಿಯುತ್ತಿರುವುದು ಕಂಡುಬರುತ್ತಿದೆ. ಹೀಗೆ ಮಹಿಳೆ ಮೂರು ವಿಧದ

ದುಡಿಮೆಯಲ್ಲಿ ಭಾಗವಹಿಸಿದರೂ ಜ್ಞಾನ ಶಾಖೆಗಳು ಮಹಿಳೆಯ ದುಡಿಮೆಯನ್ನು 'ದುಡಿಮೆ' ಎಂದು ಪರಿಗಣಿಸುತ್ತಿಲ್ಲ. ಅರ್ಥಶಾಸ್ತ್ರದಲ್ಲಿ ಮಹಿಳೆಯರು ಮಾಡುವ ಉತ್ಪಾದನಾ ದುಡಿಮೆಯನ್ನು ಮಾತ್ರ ದುಡಿಮೆ ಎಂದು ಪರಿಗಣಿಸಿದೆ. ಇತರ ಎರಡು ವಿಧದ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸದೆ ಅದನ್ನು ಒಂದು ವಿಧದ ಸೇವೆ ಎಂದು ಪರಿಗಣಿಸಿದೆ.

ಹೀಗೆ ಮಹಿಳೆಯರು ಮಾಡುವ 'ಸಂತಾನೋತ್ಪತ್ತಿ ದುಡಿಮೆ' ಮತ್ತು 'ಕೌಟುಂಬಿಕ ದುಡಿಮೆ'ಯನ್ನು ಅರ್ಥಶಾಸ್ತ್ರದಲ್ಲಿ ದುಡಿಮೆ ಎಂಬ ವ್ಯಾಪ್ತಿಯಿಂದ ದೂರ ಮಾಡಿರುವುದು ದುಡಿಮೆ ವಾಖ್ಯಾನದ ಸಂಕುಚಿತ ವ್ಯಾಪ್ತಿಗೆ ಹಿಡಿದ ಕೈಗನ್ನಡಿಯಾಗಿದೆ ಎನ್ನಬಹುದು.

### ೩.೪. ಮಹಿಳೆಯರ ದುಡಿಮೆಯ ಸಹಭಾಗಿತ್ವ

ಅರ್ಥವ್ಯವಸ್ಥೆಯಲ್ಲಿ ಮಹಿಳೆಯ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲವಾದರು ಆರ್ಥಿಕತೆಯಲ್ಲಿ ಅವರ ದುಡಿಮೆಯ ಸಹಭಾಗಿತ್ವ ಅಧಿಕವಾಗುತ್ತಲೇ ಇದೆ. ಮಹಿಳೆಯರ ದುಡಿಮೆಯ ಸಹಭಾಗಿತ್ವವು ಒಂದು ದೇಶದಲ್ಲಿ ದುಡಿಯುವ ದುಡಿಮೆಗಾರರಲ್ಲಿ ಮಹಿಳೆಯರು ಎಷ್ಟಿದ್ದಾರೆ ಎಂಬುದನ್ನು ತಿಳಿಸುತ್ತದೆ. ಒಂದು ದೇಶದ ಒಟ್ಟು ಜನಸಂಖ್ಯೆಯಲ್ಲಿ ದುಡಿಮೆಗಾರ ವರ್ಗದ ಪ್ರಮಾಣ ಎಷ್ಟಿದೆಯೋ ಅದನ್ನು ದುಡಿಮೆ ಸಹಭಾಗಿತ್ವ ಎಂದು ಕರೆಯಲಾಗುತ್ತದೆ. ಅಂದರೆ ಒಟ್ಟು ಜನಸಂಖ್ಯೆ ಮತ್ತು ಒಟ್ಟು ದುಡಿಮೆಗಾರರ ಸಂಖ್ಯೆಗಳ ನಡುವಿನ ಅನುಪಾತವೇ ದುಡಿಮೆಯ ಸಹಭಾಗಿತ್ವ. ಒಂದು ದೇಶ ಅಥವಾ ಪ್ರದೇಶದ ಒಟ್ಟು ಮಹಿಳೆಯರ ಜನಸಂಖ್ಯೆ ಮತ್ತು ಮಹಿಳಾ ದುಡಿಮೆಗಾರರ ನಡುವಿನ ಅನುಪಾತವೇ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವಾಗಿದೆ.

ಪುರುಷರಿಗೆ ಹೋಲಿಸಿದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣವು ಕಡಿಮೆ ಇರುವುದು ಕಂಡುಬರುತ್ತಿದೆ ಹಾಗೂ ವರ್ಷದಿಂದ ವರ್ಷಕ್ಕೆ ದುಡಿಮೆಯ ಸಹಭಾಗಿತ್ವವು ಏರಿಳಿತಕ್ಕೆ ಒಳಗಾಗುತ್ತಿರುವುದು ಅಂಕಿ ಸಂಖ್ಯೆಗಳ ಮಾಹಿತಿಯಿಂದ ತಿಳಿದು ಬರುತ್ತಿದೆ.

### ಭಾರತದಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣ

ಭಾರತದಲ್ಲಿ ದುಡಿಮೆಯ ಸಹಭಾಗಿತ್ವದ ಪ್ರಮಾಣವು ಶೇಕಡ ೫೦ಕ್ಕಿಂತಲೂ ಅಧಿಕವಾಗಿರುವುದು ಅಂಕಿ ಸಂಖ್ಯೆಯಿಂದ ತಿಳಿದುಬರುತ್ತದೆ. ೧೯೯೯-೨೦೦೦ ಅಂಕಿ ಸಂಖ್ಯೆಯನ್ನು ಗಮನಿಸಿದ ಗ್ರಾಮೀಣ ಪ್ರದೇಶದಲ್ಲಿ ಪುರುಷರ ದುಡಿಮೆ ಸಹಭಾಗಿತ್ವವು ಶೇಕಡ ೫೩.೫೩೧ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೨೯.೯ರಷ್ಟಿರುವುದು ಕಂಡುಬರುತ್ತಿದೆ. ನಗರ ಪ್ರದೇಶದಲ್ಲಿ ಪುರುಷರ ದುಡಿಮೆಯ ಸಹಭಾಗಿತ್ವವು ಶೇಕಡ ೫೧.೮ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವವು ಶೇಕಡ ೧೩.೯ರಷ್ಟಿರುವುದು ಕಂಡುಬರುತ್ತಿದೆ.

ಕೋಷ್ಟಕ ೧

ಭಾರತದಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣ(ಶೇಕಡವಾರು)

| ವರ್ಷ | ಗ್ರಾಮೀಣ | | ನಗರ | |
|---|---|---|---|---|
| | ಪುರುಷ | ಮಹಿಳೆ | ಪುರುಷ | ಮಹಿಳೆ |
| ೧೯೭೨-೭೩ | ೫೪.೫ | ೩೧.೮ | ೫೦.೧ | ೧೩.೪ |
| ೧೯೭೭-೭೮ | ೫೫.೨ | ೩೩.೧ | ೫೦.೮ | ೧೫.೬ |
| ೧೯೮೩- | ೫೪.೭ | ೩೪.೦ | ೫೧.೨ | ೧೫.೧ |
| ೧೯೮೭-೮೮ | ೫೩.೯ | ೩೨.೩ | ೫೦.೬ | ೧೫.೨ |
| ೧೯೯೩-೯೪ | ೫೫.೩ | ೩೨.೮ | ೫೨.೧ | ೧೫.೫ |
| ೧೯೯೪-೯೫ | ೫೬.೦ | ೩೧.೭ | ೫೧.೯ | ೧೩.೬ |
| ೧೯೯೫-೯೬ | ೫೫.೧ | ೨೯.೫ | ೫೨.೫ | ೧೨.೪ |
| ೧೯೯೬-೯೭ | ೫೫.೦ | ೨೯.೧ | ೫೨.೧ | ೧೩.೧ |
| ೧೯೯೮- | ೫೩.೯ | ೨೬.೩ | ೫೦.೯ | ೧೧.೪ |
| ೧೯೯೯-೨೦೦೦ | ೫೩.೧ | ೨೯.೯ | ೫೧.೮ | ೧೩.೯ |

ಮೂಲ : ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೇಷನ್[೨೮]

ಕೋಷ್ಟಕ-೧ನ್ನು ಗಮನಿಸಿದರೆ ಭಾರತದಲ್ಲಿ ಪುರುಷರ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಏರಿಳಿತಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ೧೯೭೨-೭೩ರಲ್ಲಿ ದೇಶದ ಗ್ರಾಮೀಣ ಭಾಗದಲ್ಲಿ ಪುರುಷರ ದುಡಿಮೆಯ ಸಹಭಾಗಿತ್ವ ಶೇಕಡ ೫೪.೫ರಷ್ಟಿದ್ದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಶೇ. ೩೦.೮ರಷ್ಟಿದೆ. ಆದರೆ ನಗರ ಪ್ರದೇಶದಲ್ಲಿ ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇಕಡ ೩೦.೧ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಬಾಗಿತ್ವದ ಪ್ರಮಾಣ ಶೇ ೧೩.೪ರಷ್ಟಿರುವುದು ಕಂಡುಬರುತ್ತಿದೆ. ೧೯೯೯-೨೦೦೦ರಲ್ಲಿ ಗ್ರಾಮೀಣ ಪ್ರದೇಶದ ಪುರುಷ ದುಡಿಮೆಗಾರರ ಸಹಭಾಗಿತ್ವದ ಪ್ರಮಾಣ ಶೇಕಡ ೫೩.೧ರಷ್ಟು ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೨೯.೯ರಷ್ಟು ಇರುವುದು ಕಂಡುಬರುತ್ತಿವೆ. ಆದರೆ ನಗರ ಪ್ರದೇಶದಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೧.೮ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೧೩.೯ರಷ್ಟು ಇರುವುದು ಅಂಕಿ ಸಂಖ್ಯೆಯಿಂದ ತಿಳಿದು ಬರುತ್ತಿದೆ. ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ದುಡಿಮೆಯ ಸಹಭಾಗಿತ್ವದ ಪ್ರಮಾಣ ವರ್ಷದಿಂದ ವರ್ಷಕ್ಕೆ ಏರಿಳಿತಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ಅಲ್ಲದೆ ಪುರುಷರ ದುಡಿಮೆ ಸಹಭಾಗಿತ್ವಕ್ಕೆ ಹೋಲಿಸಿದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತದೆ.

## ಭಾರತದ ವಿವಿಧ ರಾಜ್ಯಗಳ ದುಡಿಮೆ ಸಹಭಾಗಿತ್ವದ ಪ್ರಮಾಣ ೧೯೯೯-೨೦೦೦

ದೇಶದ ವಿವಿಧ ರಾಜ್ಯಗಳಲ್ಲಿನ ದುಡಿಮೆ ಸಹಭಾಗಿತ್ವವನ್ನು ಗಮನಿಸಿದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಅಧಿಕವಾಗಿರುವುದು ಕಂಡುಬರುತ್ತಿದೆ. ಆದರೆ ಪುರುಷರಿಗೆ ಹೋಲಿಸಿದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತದೆ. ಗ್ರಾಮೀಣ ಭಾಗದಲ್ಲಿ ಪುರುಷರ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಅಧಿಕ ಪ್ರಮಾಣದಲ್ಲಿ ಕಂಡು ಬಂದರೆ ನಗರ ಪ್ರದೇಶದಲ್ಲಿ ಪುರುಷರ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ತಿಳಿಯುತ್ತದೆ. ಇದನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ಕೋಷ್ಟಕ ೨**

**ವಿವಿಧ ರಾಜ್ಯಗಳಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಣ ಶೇಕಡವಾರು**

| ಕ್ರ.ಸಂ | ರಾಜ್ಯಗಳು | ಗ್ರಾಮೀಣ | | ನಗರ | |
|---|---|---|---|---|---|
| | | ಮಹಿಳೆ | ಪುರುಷ | ಮಹಿಳೆ | ಪುರುಷ |
| ೧. | ಆಂಧ್ರಪ್ರದೇಶ | ೪೭.೮ | ೬೦.೫ | ೧೭.೮ | ೫೧.೧ |
| ೨. | ಅರುಣಾಚಲ ಪ್ರದೇಶ | ೩೧.೦ | ೪೨.೨ | ೧೦.೦ | ೩೯.೯ |
| ೩. | ಅಸ್ಸಾಂ | ೧೫.೧ | ೫೨.೯ | ೧೧.೨ | ೫೨.೨ |
| ೪. | ಬಿಹಾರ | ೧೭.೩ | ೪೯.೨ | ೭.೫ | ೪೩.೨ |
| ೫. | ಗೋವಾ | ೧೮.೧ | ೫೩.೯ | ೧೦.೬ | ೪೯.೮ |
| ೬. | ಗುಜರಾತ್ | ೪೧.೩ | ೫೮.೪ | ೧೩.೫ | ೫೩.೬ |
| ೭. | ಹರಿಯಾಣ | ೨೦.೨ | ೪೭.೫ | ೯.೮ | ೫೦.೬ |
| ೮. | ಹಿಮಾಚಲ ಪ್ರದೇಶ | ೪೭.೧ | ೫೩.೬ | ೧೩.೦ | ೪೯.೯ |
| ೯. | ಜಮ್ಮು ಮತ್ತು ಕಾಶ್ಮೀರ | ೩೨.೭ | ೫೪.೮ | ೬.೨ | ೪೭.೮ |
| ೧೦. | ಕರ್ನಾಟಕ | ೩೮.೦ | ೫೯.೫ | ೧೭.೮ | ೫೪.೫ |
| ೧೧. | ಕೇರಳ | ೨೩.೮ | ೫೫.೩ | ೨೦.೩ | ೫೫.೮ |
| ೧೨. | ಮಧ್ಯಪ್ರದೇಶ | ೩೮.೨ | ೫೩.೬ | ೧೩.೪ | ೪೮.೮ |
| ೧೩. | ಮಹಾರಾಷ್ಟ್ರ | ೪೩.೪ | ೫೩.೧ | ೧೩.೭ | ೫೩.೨ |
| ೧೪. | ಮಣಿಪುರ | ೨೫.೩ | ೪೯.೫ | ೨೧.೧ | ೪೪.೫ |
| ೧೫. | ಮೇಘಾಲಯ | ೪೧.೮ | ೫೫.೭ | ೧೯.೭ | ೩೯.೩ |
| ೧೬. | ಮಿಜೋರಾಂ | ೪೪.೦ | ೫೫.೫ | ೨೫.೯ | ೪೭.೧ |

| | | | | | |
|---|---|---|---|---|---|
| ೧೭. | ನಾಗಾಲ್ಯಾಂಡ್ | ೪೪.೧ | ೫೧.೮ | ೧೯.೯ | ೩೯.೩ |
| ೧೮. | ಒರಿಸ್ಸ | ೨೯.೯ | ೫೫.೧ | ೧೪.೫ | ೪೭.೫ |
| ೧೯. | ಪಂಜಾಬ್ | ೨೮.೦ | ೫೩.೦ | ೧೨.೫ | ೫೪.೯ |
| ೨೦. | ರಾಜಸ್ತಾನ | ೩೮.೮ | ೫೦.೦ | ೧೩.೮ | ೪೮.೬ |
| ೨೧. | ಸಿಕ್ಕಿಂ | ೨೪.೧ | ೫೦.೨ | ೨೦.೦ | ೫೧.೯ |
| ೨೨. | ತಮಿಳುನಾಡು | ೪೩.೦ | ೫೯.೪ | ೨೧.೫ | ೫೬.೩ |
| ೨೩. | ತ್ರಿಪುರ | ೭.೩ | ೫೦.೪ | ೭.೫ | ೪೯.೪ |
| ೨೪. | ಉತ್ತರ ಪ್ರದೇಶ | ೨೦.೧ | ೪೮.೧ | ೯.೪ | ೪೯.೪ |
| ೨೫. | ಪಶ್ಚಿಮ ಬಂಗಾಳ | ೧೬.೦ | ೫೩.೪ | ೧೧.೭ | ೫೬.೭ |
| ೨೬. | ಭಾರತ | ೨೯.೯ | ೫೩.೧ | ೧೩.೯ | ೫೧.೮ |

ಮೂಲ : ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೆಷನ್

ಕರ್ನಾಟಕ ರಾಜ್ಯದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇ.೩೮ರಷ್ಟು ಮತ್ತು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇ.೫೯.೫ರಷ್ಟಿದೆ ಹಾಗೂ ನಗರ ಪ್ರದೇಶದಲ್ಲಿ ಮಹಿಳಾ ದುಡಿಮೆ ಸಹಭಾಗಿತ್ವದ ಪ್ರಮಾಣದ ಶೇ.೧೭.೮ರಷ್ಟು ಮತ್ತು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇ.೫೪.೫ರಷ್ಟಿರುವುದು ಕಂಡುಬರುತ್ತದೆ.[೨೯]

ಕೋಷ್ಟಕ-೨ನ್ನು ಗಮನಿಸಿದರೆ ವಿವಿಧ ರಾಜ್ಯಗಳಲ್ಲಿ ವಿವಿಧ ರೀತಿಯ ದುಡಿಮೆಯ ಸಹಭಾಗಿತ್ವ ಕಂಡು ಬರುತ್ತಿದೆ. ದೇಶದ ಗ್ರಾಮೀಣ ಭಾಗದಲ್ಲಿ ಪುರುಷರ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಿದೆ. ಹಾಗೂ ನಗರ ಪ್ರದೇಶದಲ್ಲಿ ಪುರುಷರ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತಿದೆ. ಅಧಿಕ ಪ್ರಮಾಣದ ದುಡಿಮೆ ಸಹಭಾಗಿತ್ವದ ಪ್ರಮಾಣ ಆಂದ್ರಪ್ರದೇಶದಲ್ಲಿ ಕಂಡುಬರುತ್ತಿದೆ. ಆಂಧ್ರ ಪ್ರದೇಶದ ಗ್ರಾಮೀಣ ಭಾಗದಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೬೦.೫ರಷ್ಟಿದ್ದರೆ, ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ೪೭.೮ರಷ್ಟು ಮತ್ತು ನಗರ ಪ್ರದೇಶದಲ್ಲಿ ಮಹಿಳೆಯರ ದುಡಿದು ಸಹಭಾಗಿತ್ವದ ಪ್ರಮಾಣವು ಶೇಕಡ ೧೭.೮ ಹಾಗೂ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೧.೧ರಷ್ಟಿರುವುದು ಕಂಡುಬರುತ್ತಿದೆ. ಕೇರಳ ರಾಜ್ಯವನ್ನು ಗಮನಿಸಿದರೆ ಗ್ರಾಮೀಣ ಭಾಗದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೨೩.೮ರಷ್ಟಿದ್ದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೫.೩ರಷ್ಟಿರುವುದು ಕಂಡುಬರುತ್ತಿದೆ. ಹಾಗೂ ನಗರ ಪ್ರದೇಶದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೨೦.೩ರಷ್ಟಿದ್ದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೫.೮ರಷ್ಟಿರುವುದು ಕಂಡುಬರುತ್ತಿದೆ.

ಮಧ್ಯಪ್ರದೇಶವನ್ನು ಗಮನಿಸಿದರೆ ಗ್ರಾಮೀಣ ಭಾಗದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೩೮.೨ರಷ್ಟು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೫೩.೬ರಷ್ಟು ಹಾಗೂ ನಗರಭಾಗದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವು ೧೩.೪ರಷ್ಟು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೪೮.೮ರಷ್ಟಿರುವುದು ಕಂಡುಬರುತ್ತಿದೆ. ದೇಶದಲ್ಲಿ ಅತ್ಯಂತ ಕಡಿಮೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವು ತ್ರಿಪುರ ರಾಜ್ಯದಲ್ಲಿ ಕಂಡುಬರುತ್ತಿದೆ. ತ್ರಿಪುರದ ಗ್ರಾಮೀಣ ಭಾಗದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಅತ್ಯಂತ ಕಡಿಮೆ ಶೇಕಡ ೭.೩ರಷ್ಟು ಮತ್ತು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೦.೪ರಷ್ಟಿರುವುದು ಹಾಗೂ ನಗರ ಪ್ರದೇಶದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೦೭.೫ರಷ್ಟು ಮತ್ತು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣವು ಶೇಕಡ ೪೯.೪ರಷ್ಟಿರುವುದು ಕಂಡುಬರುತ್ತಿದೆ. ಸರಾಸರಿಯಾಗಿ ಹೇಳುವುದಾದರೆ ಭಾರತದಲ್ಲಿ ಗ್ರಾಮೀಣ ಭಾಗದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೨೯.೯ರಷ್ಟು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೩.೧ರಷ್ಟು ಹಾಗೂ ನಗರ ಪ್ರದೇಶದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೧೩.೯ ಮತ್ತು ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೧.೮ರಷ್ಟಿರುವುದು ಕಂಡುಬರುತ್ತಿದೆ. ಈ ಅಂಕಿ ಸಂಖ್ಯೆಯು ಕರ್ನಾಟಕದ ದುಡಿಮೆಯ ಸಹಭಾಗಿತ್ವದ ಪ್ರಮಾಣಕ್ಕೆ ಸಮೀಪದಲ್ಲಿರುವುದನ್ನು ತಿಳಿಸುತ್ತದೆ.

### ಕರ್ನಾಟಕದಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣ

ಕರ್ನಾಟಕದ ದುಡಿಮೆಯ ಸಹಭಾಗಿತ್ವವನ್ನು ಗಮನಿಸಿದರೆ ದಶಕದಿಂದ ದಶಕಕ್ಕೆ ದುಡಿಮೆಯ ಸಹಭಾಗಿತ್ವದ ಪ್ರಮಾಣ ಅಧಿಕವಾಗುತ್ತಿರುವುದು ಕಂಡುಬರುತ್ತಿದೆ. ಪುರುಷರ ದುಡಿಮೆಯ ಸಹಭಾಗಿತ್ವಕ್ಕೆ ಹೋಲಿಸಿದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತಿದೆ.

**ಕೋಷ್ಟಕ ೩**

**ಕರ್ನಾಟಕದಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣ (ಶೇಕಡವಾರು)**

ದುಡಿಮೆ ಸಹಭಾಗಿತ್ವದ ಪ್ರಮಾಣ

| ವರ್ಷ | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ೧೯೮೧ | ೫೪.೦೬ | ೨೫.೦೩ | ೪೦.೦೨ |
| ೧೯೯೧ | ೫೪.೦೧ | ೨೯.೩೦ | ೪೨.೦೦ |
| ೨೦೦೧ | ೫೬.೦೯ | ೩೧.೦೯ | ೪೪.೦೬ |

**ಮೂಲ :** ಕರ್ನಾಟಕ ಸರಕಾರ(೨೦೦೩)ಆರ್ಥಿಕ ಸಮೀಕ್ಷೆ ೨೦೦೨-೦೩, ಪು.ಸಂ.೨೬೫[೩೦]

ಕೋಷ್ಟಕ ೩ರ ಪ್ರಕಾರ ಕರ್ನಾಟಕದಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣವು ದಶಕದಿಂದ ದಶಕಕ್ಕೆ ಅಧಿಕವಾಗುತ್ತಿರುವುದು ಕಂಡುಬರುತ್ತಿದೆ. ೧೯೮೧ರಲ್ಲಿ ಶೇಕಡ ೪೦.೨ರಷ್ಟಿದ್ದ ದುಡಿಮೆ ಸಹಭಾಗಿತ್ವದ ಪ್ರಮಾಣವು ೧೯೯೧ರಲ್ಲಿ ಶೇಕಡ ೪೨.೦೦ರಷ್ಟು ಮತ್ತು ೨೦೦೧ರಲ್ಲಿ ಶೇಕಡ ೪೪.೦೬ರಷ್ಟು ಇರುವುದು ಕಂಡುಬರುತ್ತಿದೆ. ಪುರುಷರಿಗೆ ಹೋಲಿಸಿದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದು ಮೇಲಿನ ಅಂಕಿ ಸಂಖ್ಯೆಗಳಿಂದ ತಿಳಿದುಬರುತ್ತಿದೆ. ೧೯೮೧ರಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೪.೦೬ರಷ್ಟಿದ್ದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣವು ಶೇಕಡ ೨೫.೦೩ರಷ್ಟು ಇದೆ. ೧೯೯೧ರಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೪.೦೧ರಷ್ಟಿದ್ದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಶೇಕಡ ೨೯.೩೦ರಷ್ಟಿದೆ ಮತ್ತು ೨೦೦೧ರಲ್ಲಿ ದುಡಿಮೆ ಸಹಭಾಗಿತ್ವದ ಪ್ರಮಾಣ ಅಧಿಕವಾಗಿರುವುದು ಕಂಡು ಬರುತ್ತಿದೆ. ೨೦೦೧ರಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೬.೯ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೩೧.೯ರಷ್ಟಿರುವುದು ಮೇಲಿನ ಅಂಕಿ ಸಂಖ್ಯೆಗಳಿಂದ ತಿಳಿದು ಬರುತ್ತಿದೆ.

ಅಧಿಕೃತ ಅಂಕಿ ಸಂಖ್ಯೆಗಳು ತೋರಿಸುವಂತೆ ಮಹಿಳೆಯರ ದುಡಿಮೆ ಸಹಬಾಗಿತ್ವವು ಪುರುಷರ ದುಡಿಮೆ ಸಹಭಾಗಿತ್ವಕ್ಕಿಂತ ಕಡಿಮೆ ಇರುವುದು ಕಂಡುಬರುತ್ತಿದೆ. ಆದರೂ ಅನೇಕ ಅಧ್ಯಯನಗಳು ಮತ್ತು ಸಮೀಕ್ಷೆಗಳು ತೋರಿಸಿರುವಂತೆ ಹಾಗೂ ಕ್ಷೇತ್ರಕಾರ್ಯದ ಸಮೀಕ್ಷೆಯಂತೆ ಮಹಿಳೆಯರು ಪ್ರತಿದಿನ ಎರಡು ದುಡಿಮೆ ದಿನಗಳಲ್ಲಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಭಾರತೀಯ ಸಮಾಜಶಾಸ್ತ್ರಜ್ಞ ಎಂ.ಎನ್.ಶ್ರೀನಿವಾಸ್ ಅವರ ಅಧ್ಯಯನವು(೧೯೭೭)ಮಹಿಳೆಯರ ದುಡಿಮೆಯು ಬೆಳಗಿನ ಜಾವ ೪.೩೦ಕ್ಕೆ ಪ್ರಾರಂಭವಾಗಿ ಸಂಜೆವರೆಗೂ ನಡೆಯುತ್ತದೆ ಎಂದು ತಿಳಿಸುತ್ತದೆ. ಮತ್ತು ಎನ್.ಚರ್ಕವರ್ತಿ ಅವರ ಅಧ್ಯಯನವು ಮಹಿಳೆಯರ ದುಡಿಮೆಯು ಬೆಳಗಿನ ಜಾವ ೪.೩೦ಕ್ಕೆ ಅಥವಾ ೫ರಿಂದ ಪ್ರಾರಂಭವಾಗಿ ರಾತ್ರಿ ೯ರಿಂದ ೧೦ಗಂಟೆವರೆಗೂ ನಡೆಯುತ್ತದೆ ಎಂದು ತಿಳಿಸುತ್ತದೆ. ಮತ್ತು ಕ್ಷೇತ್ರಕಾರ್ಯದ ಸಮೀಕ್ಷೆಯು ಶೇಕಡ ೭೯.೬೭ರಷ್ಟು ಮಹಿಳೆಯರು ಬೆಳಗಿನ ಜಾವ ೫.೦೦ಗಂಟೆಗೆ ಎದ್ದು ರಾತ್ರಿ ೧೦.೦೦ ಗಂಟೆವರೆಗೆ ದುಡಿಯುತ್ತಿರುವುದನ್ನು ತಿಳಿಸುತ್ತದೆ. ಹೀಗೆ ಇದು ಮಹಿಳೆಯರು ಎರಡು ವಿಧದ ದುಡಿಮೆಯಲ್ಲಿ ನಿರತರಾಗಿರುವುದನ್ನು ತಿಳಿಸುತ್ತಿದೆ.

ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣವು ಪುರುಷರಿಗೆ ಹೋಲಿಸಿದರೆ ಕಡಿಮೆ ಇರುವುದು ಕಂಡುಬರುತ್ತಿದೆ. ಇದಕ್ಕೆ ಕಾರಣ ಏನು ಎಂಬುದು ಅನೇಕ ಚಿಂತಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಿರ್ಮಲ ಬ್ಯಾನರ್ಜಿಯವರು 'ಮಹಿಳೆಯರ ದುಡಿಮೆಯು ಕುಟುಂಬ ಸಂಬಂಧಿಯಾಗಿರುವುದು, ಪುರುಷಶಾಹಿ ಆಳ್ವಿಕೆ ಅಥವಾ ಸಮಾಜ ಅವಳ ಚಲನೆಯ ಮೇಲೆ ನಿಯಂತ್ರಣ ಏರಿರುವುದು ಮತ್ತು ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ನೀಡದಿರುವುದು

ಇತ್ಯಾದಿಗಳು ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಕಡಿಮೆ ಇರುವುದಕ್ಕೆ ಕಾರಣವಾದ ಅಂಶಗಳಾಗಿವೆ ಎಂದಿದ್ದಾರೆ.[೩೧] ಎಂ.ಎನ್.ಶ್ರೀನಿವಾಸ್ ಅವರು ಮಹಿಳೆಯರ ದುಡಿಮೆ ಸಹಭಾಗಿತ್ವ ಕಡಿಮೆ ಇರಲು 'ಇಮ್ಯೂರ್‌ಮೆಂಟ್' ಕಾರಣವಾಗಿದೆ ಎಂದಿದ್ದಾರೆ ಅವರ ಪ್ರಕಾರ ಕುಟುಂಬದ ಆರ್ಥಿಕ ಸ್ಥಿತಿಗತಿಗಳು ಸುಧಾರಿಸಿದಂತೆ ಸದರಿ ಕುಟುಂಬಗಳ ಮಹಿಳೆಯರು ಮನೆಯ ಹೊರಗಿನ ದುಡಿಮೆಯನ್ನು ಕೈಬಿಟ್ಟು ಕೇವಲ ಮನೆಯ ಒಳಗಿನ ದುಡಿಮೆಯನ್ನು ಮಾತ್ರ ಕೈಗೊಳ್ಳುತ್ತದೆ. ಹೀಗಾಗಿ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಕಡಿಮೆಯಾಗುತ್ತದೆ ಎಂದಿದ್ದಾರೆ.[೩೨] ಕುಟುಂಬದ ಆದಾಯ ಹೆಚ್ಚಾದಂತೆ ಮಹಿಳೆಯರ ದುಡಿಮೆ ಸಹಭಾಗಿತ್ವ ಕಡಿಮೆಯಾಗುವುದನ್ನು ಎಂ.ಎನ್.ಶ್ರೀನಿವಾಸ್‌ರವರು ಇಮ್ಯಾರ್ ಮೆಂಟ್ ಎಂದು ಕರೆದಿದ್ದಾರೆ. ಇವರ ಈ ಅಭಿಪ್ರಾಯವನ್ನು ಕೆಳಗಿನ ರೇಖಾಚಿತ್ರದ ಮೂಲಕ ಗಮನಿಸಬಹುದು.




ಶ್ರಮದ ಪ್ರಮಾಣ ಮತ್ತು ಪೂರೈಕೆ

ಮೂಲ : ಹೌಜ ಎಚ್.ಎಲ್., ಆಡ್ವಾನ್ಸ್‌ಡ್ ಎಕನಾಮಿಕ್ ಥೇಯರಿ ಮೈಕ್ರೋ ಎಕನಾಮಿಕ್ ಆನಾಲಿಸಿಸ್, ಪು.೯೫

ಮೇಲಿನ ರೇಖಾ ಚಿತ್ರದಲ್ಲಿ ತೋರಿಸಿದಂತೆ ಮಹಿಳಾ ಕಾರ್ಮಿಕರ ಕೂಲಿಯು ಕಡಿಮೆ ಇದ್ದಾಗ (W1)ಅವರ ಶ್ರಮದ ಪೂರೈಕೆಯು ಕಡಿಮೆ ಇರುತ್ತದೆ(N1). ಶ್ರಮಕ್ಕೆ ಬೇಡಿಕೆ ಬಂದು ಅವರ ಬೇಡಿಕೆಯು ಹೆಚ್ಚಾದಾಗ(N2)ಅವರ ಕೂಲಿಯ ದರವು ಸಹ(W2)ಹೆಚ್ಚಾಗುತ್ತದೆ. ಮಹಿಳಾ ಕಾರ್ಮಿಕರ ಕೂಲಿಯ ದರ (ಆದಾಯ) ಹೆಚ್ಚಾದಂತೆ ಅವರ ಶ್ರಮದ ಪೂರೈಕೆಯು ಸಹ ಕಡಿಮೆಯಾಗುತ್ತದೆ. ಕೂಲಿದರ ಇದ್ದಾಗ (W3)ಅವರ ಶ್ರಮದ ಪೂರೈಕೆ(N3) ಇಳಿಯುತ್ತದೆ. ಇದರಿಂದಾಗಿ ಕುಟುಂಬದ ಆದಾಯ ಹೆಚ್ಚಾದಂತೆ ಮಹಿಳಾ ಕಾರ್ಮಿಕರ ದುಡಿಮೆಯ ಸಹಭಾಗಿತ್ವ ಕಡಿಮೆಯಾಗುತ್ತಿರುವುದು ಕಂಡುಬರುತ್ತದೆ.

ಮಹಿಳೆಯರ ಶ್ರಮವು ಕುಟುಂಬದ ಚೌಕಟ್ಟಿಗೆ, ಸಂಗೋಪನಾ ಚಟುವಟಿಕೆಗಳಿಗೆ ಸೀಮಿತವಾಗಿದೆ ಎಂಬುದನ್ನು ಮಹಿಳಾ ಶ್ರಮದ ಬೇಡಿಕೆಯ ರೇಖೆ ವಿವರಿಸುತ್ತದೆ. ಇದರ ಪ್ರಕಾರ ಮಹಿಳೆಯರು ಕ್ರಿಯೆರಹಿತ ಕುಟುಂಬ ಸಂಬಂಧಿ ದುಡಿಮೆಯಲ್ಲಿ ಮಾತ್ರ ತೊಡಗಿರುತ್ತಾರೆ. ಶ್ರಮದ ಮಾರುಕಟ್ಟೆಯಲ್ಲಿ ಇವರ ಶ್ರಮಕ್ಕೆ ಬೇಡಿಕೆ ಇಲ್ಲದಿರುವುದೇ ಆಗಿದೆ. ಅಲ್ಲದೆ ಅವರ ದುಡಿಮೆಯಿಂದ ಬರುವ ಪ್ರತಿಫಲವು ಪುರುಷರ ದುಡಿಮೆಯಿಂದ ಬರುವ ಪ್ರತಿಫಲಕ್ಕಿಂತ ಕಡಿಮೆ ಇರುತ್ತದೆ. ಆದ್ದರಿಂದ ಮಹಿಳೆಯರ ದುಡಿಮೆಗೆ ಬೇಡಿಕೆ ಕಡಿಮೆ ಇರುತ್ತದೆ. ಆದ್ದರಿಂದ ಅವರು ಕೌಟುಂಬಿಕ ದುಡಿಮೆಯಲ್ಲಿ ಸಂತಾನೋತ್ಪತ್ತಿ ದುಡಿಮೆಯಲ್ಲಿ ಸಂಗೋಪನ ದುಡಿಮೆಯಲ್ಲಿ ನಿರತರಾಗಿರುತ್ತಾರೆ ಎಂದು ತಿಳಿದುಬರುತ್ತಿದೆ.[೩೩]

ಹೀಗೆ ಹಲವಾರು ಕಾರಣಗಳಿಂದ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಕಡಿಮೆ ಇದ್ದರೂ ಸಹ ಆರ್ಥಿಕತೆಗೆ ಅವರು ನೀಡುವ ಕೊಡುಗೆ ಅಪಾರವಾಗಿದೆ.

**ಮಹಿಳೆಯರು ಆರ್ಥಿಕತೆಗೆ ನೀಡುವ ಕೊಡುಗೆ**

ಅಭಿವೃದ್ಧಿಶೀಲ ಬಡದೇಶಗಳಲ್ಲಿ ವಯಸ್ಕರು ಮತ್ತು ಮಕ್ಕಳು ಕುಟುಂಬದ ಅಗತ್ಯತೆಗಳನ್ನು ಪೂರೈಸುವ ಆರ್ಥಿಕ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಈ ಬಗೆಯ ದುಡಿಮೆಯು ಹೊಟ್ಟೆ ಬಟ್ಟೆ ದುಡಿಮೆಯಾಗಿರುತ್ತದೆ. ಭಾರತದಂತಹ ಅಭಿವೃದ್ಧಿಶೀಲ ಬಡರಾಷ್ಟ್ರಗಳಲ್ಲಿ ಪುರುಷರು, ಮಹಿಳೆಯರು, ಮತ್ತು ಮಕ್ಕಳು ಕೃಷಿಚಟುವಟಿಕೆ, ಕೃಷಿ ಸಂಬಂಧಿ ಚಟುವಟಿಕೆ, ಗೃಹನಿರ್ಮಾಣಕಾರ್ಯ ಮತ್ತು ಇತರೆ ಆರ್ಥಿಕ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಆ ಮೂಲಕ ಆರ್ಥಿಕತೆಗೆ ತಮ್ಮ ಕೊಡುಗೆಯನ್ನು ಸಲ್ಲಿಸುತ್ತಾರೆ. ವಿಶೇಷವಾಗಿ ಮಹಿಳೆಯರು ಆರ್ಥಿಕತೆಗೆ ನೀಡುವ ಕಾಣಿಕೆಯನ್ನು ಗುರುತಿಸಲು ಮತ್ತು ಮಾಪನ ಮಾಡಲು ಅವರ ದುಡಿಮೆಯನ್ನು ನಾಲ್ಕು ಬಗೆಯಲ್ಲಿ ಗುರುತಿಸಲಾಗುತ್ತದೆ. ಆ ದುಡಿಮೆಯ ನಾಲ್ಕು ಬಗೆಗಳನ್ನು ಈ ಕೆಳಗಿನಂತೆ ನೋಡಬಹುದು.

೧. ಸಂಭಾವನಾ ಸಹಿತ ದುಡಿಮೆ
೨. ಮಾರುಕಟ್ಟೆ ಆಧಾರಿತ ದುಡಿಮೆ
೩. ಹೊಸ ಪ್ರಮಾಣಕ ದುಡಿಮೆ
೪. ಒಟ್ಟು ದುಡಿಮೆ

**೧. ಸಂಭಾವನಾಸಹಿತ ದುಡಿಮೆ :** ಈ ದುಡಿಮೆಯು ಸೀಮಿತ ವ್ಯಾಪ್ತಿಯನ್ನು ಹೊಂದಿರುತ್ತದೆ. ಇಲ್ಲಿ ಕೂಲಿ, ವೇತನ ಪಡೆಯುವ ಚಟುವಟಿಕೆಗಳು ಮಾತ್ರ ದುಡಿಮೆ ಎಂದು ಪರಿಗಣಿಸಲ್ಪಡುತ್ತವೆ. ಯಾರು ನಿರ್ದಿಷ್ಟ ಕಾಲಾವಧಿಗೆ ಕೂಲಿ, ವೇತನ, ಸಂಬಳ ರೂಪದಲ್ಲಿ ವರಮಾನವನ್ನು ಪಡೆಯುತ್ತಾರೋ ಅವರನ್ನು ದುಡಿಮೆಗಾರರೆಂದು, ವರಮಾನ ಪಡೆಯುವ ಚಟುವಟಿಕೆಗಳನ್ನು ದುಡಿಮೆ ಎಂದು ಪರಿಗಣಿಸಲಾಗು

ತ್ತದೆ. ಇಂತಹ ವಿಧದ ದುಡಿಮೆ ಮತ್ತು ದುಡಿಮೆಯಿಂದ ಬರುವ ವರಮಾನವು ರಾಷ್ಟ್ರೀಯ ಉತ್ಪನ್ನದ ಗಣನೆಯಲ್ಲಿ ಸೇರುತ್ತದೆ.

೨. **ಮಾರುಕಟ್ಟೆ ಆಧಾರಿತ ದುಡಿಮೆ :** ವಿನಿಮಯ ವರ್ಗಕ್ಕೆ(ವ್ಯವಹಾರಕ್ಕೆ) ಸಂಬಂಧಿಸಿದ ಎಲ್ಲ ಬಗೆಯ ಆರ್ಥಿಕ ಚಟುವಟಿಕೆಗಳನ್ನು ಈ ದುಡಿಮೆ ಒಳಗೊಂಡಿರುತ್ತದೆ. ಇಲ್ಲಿನ ದುಡಿಮೆಯು ರಾಷ್ಟ್ರೀಯ ಉತ್ಪನ್ನದ ಗಣನೆಗೆ ಸೇರುತ್ತದೆ. ಈ ಬಗೆಯ ದುಡಿಮೆಗಳೆಂದರೆ ಸ್ವಯಂ ಉದ್ಯೋಗ ಮತ್ತು ವ್ಯವಹಾರ, ವ್ಯಾಪಾರ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ.

೩. ನವೀನ ಪ್ರಮಾಣಕ ದುಡಿಮೆ : ಮಾರುಕಟ್ಟೆಗಾಗಿ ಉತ್ಪಾದಿಸಿದ ಸರಕು-ಸೇವೆ ಮತ್ತು ಕೌಟುಂಬಿಕವಾಗಿ ತಯಾರಾದ ಕಚ್ಚಾಸಾಮಗ್ರಿಗಳನ್ನು ಈ ಪ್ರಕಾರದ ದುಡಿಮೆ ಒಳಗೊಂಡಿರುತ್ತದೆ. ಈ ದುಡಿಮೆಯಲ್ಲಿ ಕೌಟುಂಬಿಕ ಉತ್ಪಾದನಾ ಚಟುವಟಿಕೆಗಳು ಸೇರುತ್ತವೆ. ಆದರೆ ಕೌಟುಂಬಿಕ ಸಂತಾನೋತ್ಪತ್ತಿ ದುಡಿಮೆಯನ್ನು ಮಾತ್ರ ಇಲ್ಲಿ ಗಣನೆ ಮಾಡುವುದಿಲ್ಲ.

೩. **ಒಟ್ಟು ದುಡಿಮೆ :** ಮೇಲೆ ಗುರುತಿಸಿರುವ ಮೂರು ಬಗೆಯ ಹಾಗೂ ಕೌಟುಂಬಿಕ ಉಪಯೋಗಕ್ಕೆ ಸಲ್ಲುವ ಕಚ್ಚಾಸಾಮಗ್ರಿಗಳ ಪರಿಷ್ಕರಣೆ, ಸಿದ್ಧವಸ್ತುಗಳ ಪರಿಷ್ಕರಣೆ ಮತ್ತು ಇತರೆ ಕುಟುಂಬ ಸಂಬಂಧಿ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಉದಾಹರಣೆಗೆ ಅಡುಗೆ ತಯಾರಿಸುವುದು, ಅದನ್ನು ಬಡಿಸುವುದು, ಮನೆಕೆಲಸ, ಮುಸುರೆ ತಿಕ್ಕುವುದು, ಬಟ್ಟೆ ಸ್ವಚ್ಛಗೊಳಿಸುವುದು, ಇಸ್ತ್ರಿ ಮಾಡುವುದು, ವೃದ್ಧರ ಮತ್ತು ಅಥಿತಿ ಅಭ್ಯಾಗತರನ್ನು ನೋಡಿಕೊಳ್ಳುವುದು ಇತ್ಯಾದಿ ಚಟುವಟಿಕೆಗಳು. ಇಂತಹ ದುಡಿಮೆಗೆ ಯಾವುದೇ ರೀತಿಯ ಸಂಭಾವನೆಯನ್ನು ಗೃಹಿಣಿಗೆ ನೀಡಲಾಗುವುದಿಲ್ಲ. ಅವರು ಇಂತಹ ದುಡಿಮೆ ಆರ್ಥಿಕ ದುಡಿಮೆಗೆ ಸಹಕಾರವಾಗುವುದರಿಂದ ಇಂತಹ ಚಟುವಟಿಕೆಗಳನ್ನು ದುಡಿಮೆ ಎಂದು ಪರಿಗಣಿಸಬೇಕಾಗುತ್ತದೆ.

ಆದರೆ ಇಂದು ರಾಷ್ಟ್ರೀಯ ಉತ್ಪನ್ನದ ಗಣನೆಯಲ್ಲಿ ಉತ್ಪಾದನೆ ಅಥವಾ ಆರ್ಥಿಕ ಮಹತ್ವವುಳ್ಳ ಅನೇಕ ಕುಟುಂಬಸಂಬಂಧಿ ದುಡಿಮೆಯು ಸೇರಿಕೆಯಾಗಿಲ್ಲ. ಅಭಿವೃದ್ಧಿಶೀಲ ಆರ್ಥಿಕತೆಗಳಲ್ಲಿ ಶೇಕಡ ೪೦ರಿಂದ ಶೇಕಡ ೬೫ರಷ್ಟು ದುಡಿಮೆಯು ಇಂತಹ ಬಗೆಯದ್ದಾಗಿರುತ್ತದೆ. ಮತ್ತು ಜಿ.ಎನ್.ಪಿ (GNP)ಯ ಶೇಕಡ ೨೫ರಿಂದ ಶೇಕಡ ೫೦ರಷ್ಟು ಆದಾಯ ಇಂತಹ ದುಡಿಮೆಗಳಿಂದ ಹರಿದು ಬರುತ್ತದೆ. ಅಂದರೆ ರಾಷ್ಟ್ರೀಯ ಆದಾಯದ ಶೇಕಡ ೫೦ರಷ್ಟು ಭಾಗ ಮಹಿಳೆಯರ ದುಡಿಮೆಯ ಕೊಡುಗೆ ಎಂಬುದನ್ನು ೧೯೯೫ರ ಮಾನವ ಅಭಿವೃದ್ಧಿ ವರದಿಯಿಂದ ತಿಳಿದು ಬರುತ್ತಿದೆ. ಭಾರತದಂತಹ ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಶೇಕಡ ౭೦ರಷ್ಟು ಮಹಿಳೆಯರು ಕೃಷಿ ಕೂಲಿಕಾರ್ಮಿಕರಾಗಿ, ಕೃಷಿಕರಾಗಿ ಮತ್ತು ಕೃಷಿಸಂಬಂಧಿ ಚಟುವಟಿಕೆಗಳಲ್ಲಿ ನಿರತರಾಗಿರುತ್ತಾರೆ. ಆ ಮೂಲಕ ರಾಷ್ಟ್ರೀಯ ಆದಾಯಕ್ಕೆ ತಮ್ಮ ಕೊಡುಗೆಯನ್ನು ನೀಡುತ್ತಿದ್ದಾರೆ. ಅಲ್ಲದೆ ನಿರ್ಮಾಣ ಕಾರ್ಯಗಳಾದ ರಸ್ತೆ, ಸೇತುವೆ, ಮತ್ತು ಕಟ್ಟಡ ನಿರ್ಮಾಣ ಕೆಲಸಗಳಲ್ಲಿ ದುಡಿದು ರಾಷ್ಟ್ರೀಯ ಆದಾಯಕ್ಕೆ ಕಾಣಿಕೆಗಳನ್ನು ಸಲ್ಲಿಸುತ್ತಿದ್ದಾರೆ. ಆಫ್ರಿಕನ್

ಅರ್ಥಶಾಸ್ತ್ರಜ್ಞ ವಿಸ್ತರ್ ಭೋಸರಪ್ ಅವರು ತಮ್ಮ ಕೃತಿಯಾದ 'ವುಮೆನ್ಸ್ ರೂಲ್ ಇನ್ ಎಕನಾಮಿಕ್ ಡೆವಲಪ್‌ಮೆಂಟ್'ದಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಕೃಷಿ ಚಟುವಟಿಕೆಯಲ್ಲಿ ತೊಡಗಿರುತ್ತಾರೆ. ಆ ಮೂಲಕ ಕುಟುಂಬಕ್ಕೆ ಆದಾಯ ತರುತ್ತಾರೆ. ಆದ್ದರಿಂದ ಕೃಷಿ ಅವಲಂಬಿತ ಕುಟುಂಬಗಳಲ್ಲಿ ಪುರುಷರು ಬಹುಪತ್ನಿಯರನ್ನು ಹೊಂದಿರುತ್ತಾರೆ'' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೩೪] ಎಲ್ಲಾ ಅಂಶಗಳನ್ನು ಗಮನಿಸಿದರೆ ಆರ್ಥಿಕತೆಗೆ ಅಥವಾ ರಾಷ್ಟ್ರೀಯ ಆದಾಯಕ್ಕೆ ಮಹಿಳೆಯರು ನೀಡುವ ಕೊಡುಗೆ ಅಧಿಕವಾಗಿರುವುದು ಕಂಡುಬರುತ್ತಿದೆ. ಅದನ್ನು ಈ ಕೆಳಗಿನ ರೇಖಾ ಚಿತ್ರದಲ್ಲಿ ಕಾಣಬಹುದು.




ದುಡಿಮೆಯ ವಿವಿಧ ಬಗೆಗಳು ಮತ್ತು ಮಹಿಳೆಯರು ಹಾಗೂ ಪುರುಷರ ಪ್ರಮಾಣ ೧೯೮೩.

**ಮೂಲ :** ರೊಮಿ ಬರುವ ಮತ್ತು ಇತರರು ೧೯೯೪ಳ ಕ್ಯಾಪ್ಚರಿಂಗ್ ಕಾಂಪ್ಲಿಕ್ಸಿಟೀಸ್ ಪು.೨೯೨

ಮೇಲಿನ ರೇಖಾಚಿತ್ರದಲ್ಲಿ ತೋರಿಸಿದಂತೆ ಮಹಿಳೆಯರ ದುಡಿಮೆಯ ಸಹಭಾಗಿತ್ವವು ಮನೆಯ ಹೊರಗಿನ ದುಡಿಮೆಯಲ್ಲಿ ಅತ್ಯಂತ ಕಡಿಮೆ ಹಾಗೂ ಹಂಗಾಮಿಯಾಗಿರುತ್ತದೆ. ಮನೆಯ ಒಳಗಿನ ದುಡಿಮೆಯಲ್ಲಿ ಮಹಿಳೆಯರ ದುಡಿಮೆಯ ಸಹಭಾಗಿತ್ವವು ಅಧಿಕವಾಗಿರುವುದನ್ನು ತಿಳಿಸುತ್ತದೆ. ಅಂದರೆ ಕುಟುಂಬದ ಹೊರಗೆ ವೇತನ, ಕೂಲಿ ಅಥವಾ ಸಂಬಳಕ್ಕಾಗಿ ಮಾಡುವ ದುಡಿಮೆಯಲ್ಲಿ ಮಹಿಳೆಯರ ದುಡಿಮೆಯ ಸಹಭಾಗಿತ್ವವು ಕೇವಲ ಶೇಕಡ ೧೪ರಷ್ಟಿದ್ದರೆ ಮನೆಯ ಒಳಗೆ ಅಥವಾ ಕುಟುಂಬದ ಒಳಗೆ ಮಾಡುವ ಕುಟುಂಬ ಸಂಬಂಧಿ ದುಡಿಮೆಯಲ್ಲಿ ಅವರ ದುಡಿಮೆಯ ಸಹಭಾಗಿತ್ವವು ಶೇಕಡ ೪೧ರಷ್ಟಿರುವುದು ಕಂಡುಬರುತ್ತಿದೆ.

ಮಾರುಕಟ್ಟೆ ಆಧಾರಿತ ನಗದು ಸಂಭಾವನೆ, ಸಂಪಾದನೆ ಇರುವ ವಲಯದಲ್ಲಿ ಪುರುಷರು ಪ್ರಧಾನವಾಗಿ ಕಂಡುಬಂದರೆ ನಗದು ವ್ಯವಹಾರವಿಲ್ಲದ ಹೊಟ್ಟೆ-ಬಟ್ಟೆ ದುಡಿಮೆಯಲ್ಲಿ ಮಹಿಳೆಯರು ಅಧಿಕವಾಗಿದ್ದಾರೆ. ಸಂಭಾವನೆ, ಸಂಪಾದನೆರಹಿತ ಕೌಟುಂಬಿಕ ದುಡಿಮೆಯಲ್ಲಿ ಮಹಿಳೆಯರ ಪಾಲು ಶೇಕಡ ೬೦ರಷ್ಟಿದ್ದರೆ ಕೌಟುಂಬಿಕ ದುಡಿಮೆಯಲ್ಲಿ ಅವರ ಪಾಲು ಶೇಕಡ ೯೮ರಷ್ಟಿರುವುದನ್ನು ಮೇಲಿನ ರೇಖಾಚಿತ್ರ ತೋರಿಸುತ್ತದೆ. ಪುರುಷರು ಸಂಭಾವನೆಸಹಿತ, ಮಾರುಕಟ್ಟೆ ಮೌಲ್ಯವಿರುವ ದುಡಿಮೆಯಲ್ಲಿ ಅಧಿಕವಾಗಿ ತೊಡಗಿದ್ದಾರೆ. ಮಹಿಳೆಯರು ಸಂಭಾವನೆರಹಿತ ಸಂಪಾದನಾರಹಿತ ಕುಟುಂಬಸಂಬಂಧಿ ದುಡಿಮೆಯಲ್ಲಿ ಅಧಿಕವಾಗಿರುವುದನ್ನು ರೇಖಾಚಿತ್ರ ತಿಳಿಸುತ್ತದೆ.

**ಮಹಿಳಾ ದುಡಿಮೆಯ ಮಾಪನ**

ಮಹಿಳೆಯ ದುಡಿಮೆಯು ಕುಟುಂಬಸಂಬಂಧಿ ಸಂಪಾದನೆ ಮತ್ತು ಸಂಗೋಪನಾ ಚಟುವಟಿಕೆಗಳಿಗೆ ಸಂಬಂಧಿಸಿರುವುದರಿಂದ ಅವಳ ದುಡಿಮೆಯನ್ನು ಮಾಪನ ಮಾಡುವುದು ತೊಂದರೆದಾಯಕ ಕಾರ್ಯವಾಗಿದೆ. ಅಲ್ಲದೆ ಮಹಿಳೆಯರ ಕೆಲಸವು ಪರಹಿತವಾದಿ ದುಡಿಮೆ ಆಗಿರುವುದರಿಂದ ಅದನ್ನು ಮಾಪನ ಮಾಡುವುದು ಸಾಧ್ಯವಾಗುವುದಿಲ್ಲ. ಆದ್ದರಿಂದ ಅಂತಹ ದುಡಿಮೆಯನ್ನು ರಾಷ್ಟ್ರೀಯ ಆದಾಯದ ಮಾಪನದಿಂದ ಕೈಬಿಡಲಾಗುತ್ತಿದೆ. ಆದರು ಕೆಲವೊಂದು ಅಂಶಗಳ ಆಧಾರದ ಮೇಲೆ ಅವಳ ದುಡಿಮೆಯನ್ನು ಮಾಪನ ಮಾಡಲಾಗುತ್ತದೆ. ಹಾಗಾದರೆ ಮಹಿಳೆಯರ ಎಂತಹ ದುಡಿಮೆಯನ್ನು ರಾಷ್ಟ್ರೀಯ ಆದಾಯದಲ್ಲಿ ಸೇರಿಸಲಾಗುತ್ತದೆ? ಮಹಿಳಾ ದುಡಿಮೆಯನ್ನು ಮಾಪನ ಮಾಡುವ ಮಾನದಂಡಗಳಾವುವು? ಎಂಬ ಅಂಶಗಳನ್ನು ಚರ್ಚಿಸಿದರೆ ಮಹಿಳೆಯ ದುಡಿಮೆಯನ್ನು ಮಾಪನ ಮಾಡುವ ವಿಧಾನಗಳು ತಿಳಿದು ಬರುತ್ತವೆ.

**ರಾಷ್ಟ್ರೀಯ ವರಮಾನದಲ್ಲಿ ಮಹಿಳಾ ದುಡಿಮೆಯ ಪರಿಗಣನೆ**

ರಾಷ್ಟ್ರೀಯ ಆದಾಯವು ಒಂದು ರಾಷ್ಟ್ರದ ಪ್ರಗತಿಯ ಅಳತೆಗೋಲಾಗಿದೆ. ರಾಷ್ಟ್ರೀಯ ಆದಾಯದ ಆಧಾರದ ಮೇಲೆ ಆ ರಾಷ್ಟ್ರವು ಆರ್ಥಿಕವಾಗಿ ಪ್ರಗತಿ ಹೊಂದಿರುತ್ತದೆಯೇ, ಆರ್ಥಿಕ ಜಡತ್ವ ಹೊಂದಿದೆಯೇ, ಇಲ್ಲವೆ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದೆಯೇ ಎಂಬುದನ್ನು ತಿಳಿದುಕೊಳ್ಳಲು ಸಹಾಯ ಮಾಡುತ್ತದೆ. ರಾಷ್ಟ್ರೀಯ ಆದಾಯವೆಂದರೆ "ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದನೆಯಾದ ಎಲ್ಲ ವಿಧದ ಸರಕು-ಸೇವೆಗಳ ಮೊತ್ತದ ಹಣರೂಪಿ ಮೌಲ್ಯವೇ ಆಗಿದೆ." ರಾಷ್ಟ್ರೀಯ ಆದಾಯದ ಉತ್ಪಾದನೆಯಲ್ಲಿ ನಾಲ್ಕು ಉತ್ಪಾದನಾಂಗಗಳು ಭಾಗ ವಹಿಸುತ್ತವೆ. ಅಲ್ಲದೆ ಅದಕ್ಕೆ ಪ್ರತಿಯಾಗಿ ಪ್ರತಿಫಲವನ್ನು ಪಡೆಯುತ್ತವೆ. ಶ್ರಮವು ಒಂದು ಉತ್ಪಾದನಾಂಗವಾಗಿದ್ದು ಅದು ಸಹ ರಾಷ್ಟ್ರೀಯ ಆದಾಯದ ಉತ್ಪಾದನೆಯಲ್ಲಿ ಪಾತ್ರ ವಹಿಸುತ್ತದೆ ಮತ್ತು ಪ್ರತಿಫಲವನ್ನೂ ಸಹ ಪಡೆಯುತ್ತದೆ. ಇಂತಹ

ಶ್ರಮವು ಪುರುಷರದ್ದಾಗಿರಬಹುದು ಅಥವಾ ಮಹಿಳೆಯರದ್ದಾಗಿರಬಹುದು. ಶ್ರಮದ ಯಾವ ದುಡಿಮೆ ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ಪರಿಗಣಿಸಲಾಗುತ್ತದೆ. ಶ್ರಮದ ಯಾವ ದುಡಿಮೆಯನ್ನು ರಾಷ್ಟ್ರೀಯ ಆದಾಯದ ಲೆಕ್ಕಾಚಾರದಲ್ಲಿ ಪರಿಗಣಿಸಲ್ಪಡುವುದಿಲ್ಲ ಎಂಬುದು ಅತೀ ಮಹತ್ವದ ಅಂಶ ವಾಗಿದೆ.

ಯಾವ ದುಡಿಮೆಯು ಮಾರುಕಟ್ಟೆ ಸಂಬಂಧಿಯಾಗಿರುತ್ತದೆಯೋ ಯಾವ ದುಡಿಮೆಯು ಹಣರೂಪದಲ್ಲಿರುತ್ತದೆಯೋ ಅಂತಹ ದುಡಿಮೆ ಮಾತ್ರ ರಾಷ್ಟ್ರೀಯ ವರಮಾನದ ಮಾಪನದಲ್ಲಿ ಗಣನೆಗೆ ಒಳಗಾಗುತ್ತದೆ. ಅಲ್ಲದೆ ಯಾವ ಸರಕು ಸೇವೆಗಳು ಮಾರುಕಟ್ಟೆಯನ್ನು ಪ್ರವೇಶಿಸಿ ವಿನಿಮಯ ಮೌಲ್ಯ ಪಡೆಯುತ್ತವೆಯೋ ಅಂತಹ ಸರಕು ಸೇವೆಗಳು ರಾಷ್ಟ್ರೀಯ ಆದಾಯದ ಮಾಪನದಲ್ಲಿ ಸೇರಿಕೊಳ್ಳುತ್ತವೆ. ಆದರೆ ಸ್ವಾನುಭೋಗದ ಸರಕುಗಳು ಮತ್ತು ಪ್ರೀತಿಗಾಗಿ, ಆತ್ಮಸಂತೋಷಕ್ಕಾಗಿ, ಜನತೆಯ ಸೇವೆಗಾಗಿ ಮತ್ತು ಕುಟುಂಬಕ್ಕಾಗಿ ಮಾಡುವ ಸೇವೆಗಳು ಹಣದ ವ್ಯಾಪ್ತಿಗೆ ಒಳಪಟ್ಟು ವಿನಿಮಯ ಮೌಲ್ಯವನ್ನು ಪಡೆದಿರುವುದಿಲ್ಲ. ಅಲ್ಲದೆ ಅಂತಹ ಸರಕುಗಳು ಮಾರುಕಟ್ಟೆಯನ್ನು ಪ್ರವೇಶಿಸುವುದಿಲ್ಲವಾದ್ದರಿಂದ ಅಂತಹ ಸರಕು ಸೇವೆಗಳು ರಾಷ್ಟ್ರೀಯ ಆದಾಯದ ಮಾಪನದಲ್ಲಿ ಪರಿಗಣಿಸಲ್ಪಡುವುದಿಲ್ಲ.[೩೫] ಇಂತಹ ಸರಕು ಮತ್ತು ಸೇವೆಗಳನ್ನು ಉತ್ಪಾದಿಸುವವರು ಮಹಿಳೆಯರೇ ಆಗಿದ್ದರಿಂದ ಅವರು ಉತ್ಪಾದಿಸಿದ ಇಂತಹ ಸರಕು ಸೇವೆಗಳು ರಾಷ್ಟ್ರೀಯ ಆದಾಯದ ಮಾಪನದ ವ್ಯಾಪ್ತಿಗೆ ಒಳಪಡುವುದಿಲ್ಲ. ಉದಾಹರಣೆಗೆ ಅಡುಗೆ ಮಾಡುವುದು, ಮಕ್ಕಳ ಲಾಲನೆ ಪಾಲನೆ, ಬಟ್ಟೆ ತೊಳೆಯುವುದು, ಉರುವಲು ಕಟ್ಟಿಗೆ ಸಂಗ್ರಹ, ಅತಿಥಿ ಅಭ್ಯಾಗತರನ್ನು ನೋಡಿಕೊಳ್ಳುವುದು. ಮತ್ತು ತಮ್ಮ ಸ್ವಂತ ಹೊಲಗದ್ದೆಗಳಲ್ಲಿ ದುಡಿಯುವುದು ಇತ್ಯಾದಿ. ಮಹಿಳೆಯರು ಮಾಡುವ ಇಂತಹ ಕೆಲಸಗಳಿಗೆ ವರಮಾನವನ್ನು ಅಥವಾ ಕೂಲಿಯನ್ನು ನೀಡಲಾಗುವುದಿಲ್ಲವಾದ್ದರಿಂದ ಅವರ ದುಡಿಮೆಯು ರಾಷ್ಟ್ರೀಯ ವರಮಾನದಲ್ಲಿ ಸೇರುವುದಿಲ್ಲ.

ಆದರೆ ಅದೇ ಮಹಿಳೆಯು ಉತ್ಪಾದಕ ಚಟುವಟಿಕೆಗಳಾದ ಕೃಷಿ ಚಟುವಟಿಕೆ, ನಿರ್ಮಾಣ ಕಾರ್ಯ ಹಾಗೂ ಸೇವೆಗಳಲ್ಲಿ ತೊಡಗಿದ್ದು ಅದಕ್ಕೆ ಪ್ರತಿಫಲವಾಗಿ ನಿರ್ಧಿಷ್ಟ ಅವಧಿಗೆ ನಿರ್ಧಿಷ್ಟ ಪ್ರಮಾಣದ ವೇತನ ಪಡೆಯುತ್ತಿದ್ದರೆ. ಅವರ ಉತ್ಪಾದನೆಯು ರಾಷ್ಟ್ರೀಯ ಆದಾಯದ ಮಾಪನದಲ್ಲಿ ಪರಿಗಣಿಸಲ್ಪಡುತ್ತದೆ. ಹೀಗಾಗಿ ಮಹಿಳೆಯರು ಮಾಡುವ ದುಡಿಮೆಯಲ್ಲಿ ಶೇಕಡ ೭೫ರಷ್ಟು ದುಡಿಮೆ, ಪರಹಿತವಾದಿ ಸೇವಾ ಮನೋಭಾವನೆಯಿಂದ ಕೂಡಿದ ದುಡಿಮೆ ಆಗಿರುವುದರಿಂದ ಅಂತಹ ದುಡಿಮೆಯು ರಾಷ್ಟ್ರೀಯ ಆದಾಯದ ಮಾಪನದಿಂದ ದೂರ ಉಳಿಯುತ್ತದೆ. ಉಳಿದ ಶೇಕಡ ೨೫ರಷ್ಟು ದುಡಿಮೆ ಮಾತ್ರ ಆದಾಯ ಗಳಿಸುವ ದುಡಿಮೆಯನ್ನು ಒಳಗೊಂಡಿದ್ದು ರಾಷ್ಟ್ರೀಯ ಆದಾಯದ ಮಾಪನದಲ್ಲಿ ಪಾಲನ್ನು ಪಡೆದಿರುತ್ತದೆ. ಆದ್ದರಿಂದ ಮಹಿಳೆಯರು ಮಾಡುವ ದುಡಿಮೆಯು ಮಾರುಕಟ್ಟೆಯನ್ನು

ಪ್ರವೇಶಿಸುತ್ತಿದ್ದು, ವಿನಿಮಯ ಮೌಲ್ಯ ಪಡೆಯುತ್ತಿದ್ದರೆ ಅಂತಹ ದುಡಿಮೆಯು ರಾಷ್ಟ್ರೀಯ ವರಮಾನದ ಪರಿಗಣನೆಗೆ ಒಳಗಾಗುತ್ತದೆ.

**ಮಹಿಳೆಯರ ದುಡಿಮೆಯ ಮಾಪನ**

ಮಹಿಳೆಯರು ಅನೇಕ ವಿಧದ ದುಡಿಮೆಗಳಲ್ಲಿ ತೊಡಗಿದ್ದಾರೆ. ಉದಾಹರಣೆಗೆ ಸ್ವಯಂ ಉದ್ಯೋಗಿ ದುಡಿಮೆ, ಅಡುಗೆ, ಊಟ ಸಿದ್ಧಪಡಿಸುವ ದುಡಿಮೆ, ಕುಟುಂಬಸಂಬಂಧಿ ಕೃಷಿ ದುಡಿಮೆ, ಹೈನುಗಾರಿಕೆ ದುಡಿಮೆ, ಕೈತೋಟದಲ್ಲಿ ದುಡಿಮೆ, ಕಾಳುಶುದ್ಧಿ ಮಾಡುವ ದುಡಿಮೆ, ಮನೆ ಗುಡಿಸುವ, ಸಾರಿಸುವ, ರಿಪೇರಿ ಮಾಡುವ ದುಡಿಮೆ, ನೀರು ಸೇದುವ ಸಂಗ್ರಹಿಸುವ ದುಡಿಮೆ, ಬಟ್ಟೆ ತೊಳೆಯುವ, ಪಾತ್ರೆ ತೊಳೆಯುವ ದುಡಿಮೆ, ಶಿಶುಪಾಲನಾ ದುಡಿಮೆ, ಮನೆಯ ಹಿರಿಯರ ಸೇವಾ ಸಂಬಂಧಿ ದುಡಿಮೆ ಇತ್ಯಾದಿಗಳು. ಹೀಗೆ ಮಹಿಳೆಯರು ಮಾಡುವ ಇಂತಹ ಹತ್ತಾರು ಬಗೆಯ ದುಡಿಮೆಗಳು ಇಂದು ರಾಷ್ಟ್ರೀಯ ಆದಾಯದ ಮಾಪನದಲ್ಲಿ ಸೇರುವುದಿಲ್ಲ. ಇಂತಹ ಕುಟುಂಬಸಂಬಂಧಿ ಗೃಹವಾರ್ತೆ ಚಟುವಟಿಕೆಗಳಲ್ಲಿ ಮಹಿಳೆಯರು ಅಧಿಕ ಪ್ರಮಾಣದಲ್ಲಿ ಶ್ರಮ ವಹಿಸಿದರು. ಅದು ರಾಷ್ಟ್ರೀಯ ವರಮಾನದ ಗಣನೆಗೆ ಒಳಗಾಗುವುದಿಲ್ಲ.

ಯಾಕೆಂದರೆ ಆರ್ಥಿಕತೆಯಲ್ಲಿರುವ ಪುರುಷಶಾಹಿ ಚಿಂತನೆ ಮಹಿಳೆಯರ ದುಡಿಮೆಯನ್ನು ರಾಷ್ಟ್ರೀಯ ವರಮಾನದ ಮಾಪನದಿಂದ ದೂರಮಾಡಿದೆ. ಮಹಿಳೆಯರು ಮಾಡುವ ದುಡಿಮೆ ಬಹುತೇಕವಾಗಿ ಕುಟುಂಬಸಂಬಂಧಿ ಮತ್ತು ಗೃಹವಾರ್ತೆಗೆ ಸಂಬಂಧಿಸಿದ್ದರಿಂದ ಅಂತಹ ದುಡಿಮೆಗೆ ವಿನಿಮಯ ಮೌಲ್ಯ ಮತ್ತು ಮಾರುಕಟ್ಟೆ ಮೌಲ್ಯ ಇರುವುದಿಲ್ಲವಾದ್ದರಿಂದ ಅದನ್ನು ಮಾಪನ ಮಾಡುವುದು ಅಸಾಧ್ಯ ಎಂದು ಪರಿಗಣಿಸಲಾಗಿದೆ. ಹೀಗಾಗಿ ಮಹಿಳೆಯರ ದುಡಿಮೆ ರಾಷ್ಟ್ರೀಯ ವರಮಾನದ ಮಾಪನದಿಂದ ದೂರ ಉಳಿಯುವಂತಾಗಿದೆ. ಆದರು ರಾಷ್ಟ್ರೀಯ ಆದಾಯಕ್ಕೆ ಶೇಕಡ ೨೫ರಿಂದ ೫೦ರಷ್ಟು ಕಾಣಿಕೆಯನ್ನು ಸಲ್ಲಿಸುತ್ತಿರುವ ಮಹಿಳೆಯರ ದುಡಿಮೆಯನ್ನು ಮಾಪನ ಮಾಡುವುದು ಸಾಧ್ಯ ಎಂಬ ಅಂಶವನ್ನು ಅನೇಕ ಅಧ್ಯಯನಗಳು ಮತ್ತು ವರದಿಗಳು ತೋರಿಸಿಕೊಟ್ಟಿವೆ. ಮಹಿಳೆಯ ದುಡಿಮೆಯನ್ನು ಮಾಪನ ಮಾಡುವ ಕೆಲವು ವಿಧಾನಗಳನ್ನು ಈ ಕೆಳಗಿನಂತೆ ನೋಡಬಹುದು.

೧. ಕುಟುಂಬಸಂಬಂಧಿ ಚಟುವಟಿಕೆಗಳಿಂದ ಹರಿದುಬರುವ ಸರಕು ಸೇವೆಗಳ ಪರಿಮಾಣವನ್ನು ಅಂದಾಜು ಮಾಡುವುದು.

೨. ಅಂದಾಜು ಮಾಡಿದ ಕುಟುಂಬಸಂಬಂಧಿ ಸರಕು ಮತ್ತು ಸೇವೆಗಳ ಪರಿಮಾಣಕ್ಕೆ ಮಾರುಕಟ್ಟೆ ಮೌಲ್ಯವನ್ನು ಗಣನೆ ಮಾಡುವುದು.

೩. ಕುಟುಂಬಸಂಬಂಧಿ ಚಟುವಟಿಕೆಗಳಲ್ಲಿ ಕೆಲವನ್ನು ಸರಕು ಸೇವೆಗಳ ರೂಪದಲ್ಲಿ ಅಂದಾಜು ಮಾಡುವುದು ಸಾಧ್ಯವಿಲ್ಲ. ಇಂತಹ ಸಂದರ್ಭದಲ್ಲಿ ಕುಟುಂಬ ಸಂಬಂಧಿ ಚಟುವಟಿಕೆಗಳ ದುಡಿಮೆಯನ್ನು ಕಾಲಾವಧಿಯ

ಆಧಾರದ ಮೇಲೆ ಅಂದಾಜು ಮಾಡುವುದು. ದುಡಿಮೆಯನ್ನು ಕಾಲಾವಧಿಯ ಆಧಾರದ ಮೇಲೆ ಅಂದಾಜು ಮಾಡಿದ ಮೇಲೆ ಅದರ ಹಣರೂಪಿ ಮೌಲ್ಯವನ್ನು ದುಡಿಮೆಗೆ ನೀಡುವುದು.[೩೬]

ಹೀಗೆ ಈ ಮೂರು ವಿಧಾನಗಳ ಮೂಲಕ ಮಹಿಳೆಯರ ಕುಟುಂಬಸಂಬಂಧಿ ಸಂಭಾವನೆರಹಿತ ದುಡಿಮೆಯನ್ನು ಮಾಪನ ಮಾಡಬಹುದು ಹಾಗೂ ರಾಷ್ಟ್ರೀಯ ಆದಾಯದ ಮಾಪನದಲ್ಲಿ ಪರಿಗಣನೆ ಮಾಡಬಹುದು. ಆದರೂ ಮಹಿಳೆಯರ ಇಂತಹ ದುಡಿಮೆಯನ್ನು ಈ ವಿಧಾನಗಳ ಮೂಲಕ ರಾಷ್ಟ್ರೀಯ ಆದಾಯದ ಗಣನೆಯಲ್ಲಿ ಸೇರಿಸಿಕೊಳ್ಳದಿರುವುದು ಕಂಡುಬರುತ್ತಿದೆ. ೧೯೯೫ರ ಮಾನವ ಅಭಿವೃದ್ಧಿ ವರದಿಯು ಮೊದಲಬಾರಿಗೆ ವಿಶ್ವಾಸದ ಆದಾಯದಲ್ಲಿ ಸಂಪಾದನಾರಹಿತ ದುಡಿಮೆಯ ಪಾಲು ಮತ್ತು ಮಹಿಳೆಯರ ಪಾಲು ಎಷ್ಟು ಎಂಬುದನ್ನು ತೋರಿಸಿಕೊಡುವ ಮೂಲಕ ಮಹಿಳೆಯರ ದುಡಿಮೆಯು ಅಗಣಿತವಾದದ್ದು ಎಂಬುದನ್ನು ನಿರೂಪಿಸಿದೆ. ೧೯೯೫ರ ಮಾನವ ಅಭಿವೃದ್ಧಿ ವರದಿಯ ಪ್ರಕಾರ ವಿಶ್ವದ ವರಮಾನದ ಗಾತ್ರ ೨೩ ಟ್ರಿಲಿಯನ್ ಡಾಲರುಗಳು. ಇದರಲ್ಲಿ ಮಹಿಳೆಯರು ಮತ್ತು ಪುರುಷರು ಸಂಪಾದನಾರಹಿತ ದುಡಿಮೆಯ ಭಾಗ ೧೬ ಟ್ರಿಲಿಯನ್ ಪಾಲರುಗಳು. ಈ ೧೬ ಟ್ರಿಲಿಯನ್ ಡಾಲರುಗಳಲ್ಲಿ ಮಹಿಳೆಯರ ಅದೃಶ್ಯ ಮತ್ತು ಸಂಪಾದನಾರಹಿತ ದುಡಿಮೆಯ ಭಾಗ ೧೧ ಟ್ರಿಲಿಯನ್ ಡಾಲರುಗಳು ಅಂದರೆ ವಿಶ್ವದ ವರಮಾನದಲ್ಲಿ ಮಹಿಳೆಯರ ಕಾಣಿಕೆಯ ಪಾಲು ಶೇಕಡ ೪೭.೮೩ ಆದ್ದರಿಂದಾಗಿ ಮಹಿಳೆಯರು ಪುರುಷರಂತೆ ದುಡಿಮೆಗಾರರು ಮತ್ತು ಅವರ ದುಡಿಮೆಯು ಆರ್ಥಿಕ ಮಹತ್ವ ಪಡೆಯುವಂತಹದು ಎಂಬುದನ್ನು ೧೯೯೫ರ ಮಾನವ ಅಭಿವೃದ್ಧಿ ವರದಿ ತಿಳಿಸುತ್ತದೆ.[೩೭]

ಮಹಿಳೆಯರ ದುಡಿಮೆಯನ್ನು ಅಳತೆ ಮಾಡದೇ ಇರುವುದಕ್ಕೆ ಕಾರಣಗಳು

ಮೇಲೆ ತಿಳಿಸಿದ ಮೂರು ವಿಧಾನಗಳ ಮೂಲಕ ಮಹಿಳೆಯರ ದುಡಿಮೆಯನ್ನು ಮಾಪನ ಮಾಡಲು ಸಾಧ್ಯವಿದೆ. ಆದರೂ ಅವಳ ದುಡಿಮೆಯನ್ನು ಪರಿಮಾಣಾತ್ಮಕವಾಗಿ ಮಾಪನ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅವಳ ದುಡಿಮೆಗೆ ಕ್ರಯಪಟ್ಟಿ ಇರುವುದಿಲ್ಲ ಮತ್ತು ಅದಕ್ಕೆ ಮಾರುಕಟ್ಟೆ ಮಹತ್ವ ಇಲ್ಲದಿರುವುದು. ಆದ್ದರಿಂದ ಅವಳ ದುಡಿಮೆಯನ್ನು ಪರಿಮಾಣಾತ್ಮಕವಾಗಿ ಮಾಪನ ಮಾಡಲು ಸಾಧ್ಯವಾಗುವುದಿಲ್ಲ. ಅದಕ್ಕೆ ಅನೇಕ ಕಾರಣಗಳನ್ನು ಗುರುತಿಸಬಹುದು.

೧. ಮಹಿಳೆಯರ ದುಡಿಮೆಯಲ್ಲಿ ಬಹುಪಾಲು ಕುಟುಂಬಸಂಬಂಧಿಯಾಗಿರುತ್ತದೆ. ಅವಳ ದುಡಿಮೆಯನ್ನು ಸಂತಾನೋತ್ಪತ್ತಿ ಎಂದು ವರ್ಗೀಕರಿಸಲಾಗುತ್ತದೆ. ಇಂತಹ ದುಡಿಮೆಗೆ ಮಾರುಕಟ್ಟೆಯ ಮೌಲ್ಯವಾಗಲಿ, ವಿನಿಮಯ ಮೌಲ್ಯವಾಗಲಿ ಇರುವುದಿಲ್ಲ. ಆದ್ದರಿಂದ ಇಂತಹ ದುಡಿಮೆಯನ್ನು ಹಣರೂಪದಲ್ಲಿ ಮಾಪನ ಮಾಡಲು ಸಾಧ್ಯವಾಗುವುದಿಲ್ಲ.

೨. ಮಹಿಳೆಯರ ದುಡಿಮೆಯ ಒಂದು ವಿಶಿಷ್ಟ ಲಕ್ಷಣವೆಂದರೆ ಅವರು ಏಕಕಾಲದಲ್ಲಿ ಎರಡು ಅಥವಾ ಎರಡಕ್ಕಿಂತ ಅಧಿಕ ಕೆಲಸಗಳನ್ನು ಮಾಡುತ್ತಿರುತ್ತಾರೆ. ಉದಾಹರಣೆಗೆ ಮಗುವನ್ನು ಆಡಿಸುತ್ತಲೇ

ಅಡಿಗೆ ಮಾಡುವುದು, ಅಡುಗೆ ಮಾಡುತ್ತಲೇ ಕಸಗುಡಿಸುವುದು, ಬಟ್ಟೆ ಜೋಡಿಸುವುದು, ಇಸ್ತ್ರೀ ಮಾಡುತ್ತಲೇ ಮಕ್ಕಳಿಗೆ ಪಾಠ ಹೇಳುವುದು ಇತ್ಯಾದಿ ಕೆಲಸಗಳು ಇಂತಹ ಕೆಲಸಗಳನ್ನು ಮಹಿಳೆಯರು ಏಕಕಾಲದಲ್ಲಿ ಮಾಡುವುದರಿಂದ ಅವುಗಳ ಮಾಪನ ಕಷ್ಟಸಾಧ್ಯವಾಗುತ್ತದೆ.

೩. ಮಹಿಳೆಯರ ಕುಟುಂಬಸಂಬಂಧಿ ದುಡಿಮೆಯು ಸಾಮಾಜಿಕ ಉತ್ಪಾದನಾಸಂಬಂಧಿ ದುಡಿಮೆಯ ಅವಿಭಾಜ್ಯ ಅಂಗವೇ ಆಗಿದೆ. ಆದರೆ ಇಲ್ಲಿ ಮಹಿಳೆಯರಿಗೆ ಉತ್ಪಾದನಾಸಂಬಂಧಿ ದುಡಿಮೆಯಲ್ಲಿ ಸ್ಥಾನವನ್ನೇ ನೀಡಿರುವುದಿಲ್ಲವಾದ್ದರಿಂದ ಅವರ ದುಡಿಮೆ ಕುಟುಂಬಸಂಬಂಧಿ ಸಂತಾನೋತ್ಪತ್ತಿ ದುಡಿಮೆಗೆ ಸೀಮಿತವಾಗಿರುತ್ತದೆ. ಹೀಗಾಗಿ ಇಂತಹ ದುಡಿಮೆಯನ್ನು ಮಾಪನ ಮಾಡುವುದು ಕಷ್ಟವಾಗುತ್ತದೆ.

೪. ಜನಗಣತಿಯ ಪ್ರಕಾರ ವ್ಯಕ್ತಿಗಳು ವರ್ಷದಲ್ಲಿ ಕನಿಷ್ಠ ೧೮೭ ದಿನಗಳವರೆಗೆ ದುಡಿಮೆಯಲ್ಲಿ ನಿರತರಾಗಿದ್ದಾರೆ. ಮತ್ತು ಆ ದುಡಿಮೆಯ ಫಲದಲ್ಲಿ ಸ್ವಲ್ಪ ಭಾಗವಾದರೂ ಮಾರುಕಟ್ಟೆ ಪ್ರವೇಶಿಸು ವಂತ್ತಿದ್ದರೆ ಅಂತಹ 'ಚಟುವಟಿಕೆ' ಅಥವಾ 'ದುಡಿಮೆ'ಯನ್ನು ಎಂದು ದುಡಿಮೆ ದುಡಿಯುವವರನ್ನು 'ದುಡಿಮೆಗಾರರು' ಎಂದು ಪರಿಗಣಿಸಲಾಗುತ್ತದೆ. ಆದರೆ ಮಹಿಳೆಯರು ಈ ರೀತಿಯ ದುಡಿಮೆಗಾರರ ನಿರ್ವಚನ ವ್ಯಾಪ್ತಿಯಿಂದ ಹೊರಗೆ ಉಳಿದು ಬಿಡುತ್ತಾರೆ. ಇದರಿಂದಾಗಿ ಅವರ ದುಡಿಮೆಯ ಗಣನೆ ಸಾಧ್ಯವಾಗುವುದಿಲ್ಲ.

೫. ಸಾಮಾಜಿಕವಾಗಿ ಮಹಿಳೆಯರ ದುಡಿಮೆಯನ್ನು ಆರ್ಥಿಕೋತ್ಪಾದನೆ ಎಂದು ನಮ್ಮ ಸಮಾಜ ಪರಿಗಣಿಸುತ್ತಿಲ್ಲ. ಸಂತಾನೋತ್ಪತ್ತಿ ದುಡಿಮೆಯನ್ನು ಅಳತೆ ಮಾಡುವ ವಿಧಾನಗಳು ಇನ್ನೂ ರೂಪು ಗೊಂಡಿಲ್ಲ. ಉದಾಹರಣೆಗೆ ಮನೆಯಲ್ಲಿ ಅಡುಗೆ ಮಾಡಲು, ಕಸ ಗುಡಿಸಲು ಒಬ್ಬ ಹೆಣ್ಣಾಳಿದ್ದರೆ ಅವಳ ಆ ಕೆಲಸಕ್ಕೆ ಕೂಲಿ ದೊರೆಯುತ್ತದೆ. ಅದು ಆರ್ಥಿಕ ಉತ್ಪಾದನೆ ಎಂದು ಪರಿಗಣಿಸಲ್ಪಡುತ್ತದೆ. ಆದರೆ ಅದೇ ಹೆಣ್ಣಾಳು ಮನೆಯೊಡತಿ ಆದರೆ ಆಗ ಅವಳು ಮಾಡುವ ಅಡುಗೆ ಕೆಲಸ, ಕಸ, ಮುಸುರೆ ಕೆಲಸ ಆರ್ಥಿಕೋತ್ಪಾದನೆ ಎನಿಸಿಕೊಳ್ಳುವುದಿಲ್ಲ. ಏಕೆಂದರೆ ಮನೆಯ ಒಡತಿಗೆ ಕೂಲಿ ದೊರೆಯುವುದಿಲ್ಲ.

ಹೀಗೆ ಮೇಲಿನ ಐದು ಕಾರಣಗಳಿಂದಾಗಿ ಮಹಿಳೆಯರ ದುಡಿಮೆಯನ್ನು ಮಾಪನ ಮಾಡಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ಮಹಿಳೆಯರು ದುಡಿಮೆಯ ಜಗತ್ತು ಕುಟುಂಬ ಸಂಬಂಧಿ ಚಟುವಟಿಕೆಗೆ ಸೀಮಿತವಾಗಿರುವುದರಿಂದ ಅವಳ ದುಡಿಮೆಗೆ ಕ್ರಯಪಟ್ಟಿ ಇಲ್ಲದಿರುವುದರಿಂದ ಮತ್ತು ಮಾರುಕಟ್ಟೆಯ ಮಹತ್ವ ಇಲ್ಲದಿರುವುದರಿಂದ ಅವಳ ದುಡಿಮೆಯನ್ನು 'ದುಡಿಮೆ' ಎಂದು ಪರಿಗಣಿಸುತ್ತಿಲ್ಲ. ಇದರಿಂದಾಗಿ ಮಹಿಳೆಯರ 'ದುಡಿಮೆ' ಅದೃಶ್ಯವಾಗುತ್ತಿದೆ.

## ೩.೪. ಶ್ರಮವಿಭಜನೆ

ಶ್ರಮವಿಭಜನೆ ಎಂಬ ಕಲ್ಪನೆಯನ್ನು ಅರ್ಥಶಾಸ್ತ್ರದಲ್ಲಿ ನಿರ್ದಿಷ್ಟ ಅರ್ಥದಲ್ಲಿ ಬಳಸಲಾಗುತ್ತದೆ. ಈ ಕಲ್ಪನೆಯನ್ನು ಮೊಟ್ಟಮೊದಲಿಗೆ 'ಆ್ಯಡಂಸ್ಮಿತ್'ಅವರು ಪರಿಚಯಿಸಿದರು. ಅವರ ಪ್ರಕಾರ "ಒಂದು ವಸ್ತು ಅಥವಾ ಸರಕಿನ ಉತ್ಪಾದನೆಯು ವಿವಿಧ ಹಂತಗಳನ್ನು ಹೊಂದಿದ್ದು ಒಂದೊಂದು ಹಂತದಲ್ಲಿ ಒಬೊಬ್ಬ ಕಾರ್ಮಿಕ ವಿಶಿಷ್ಟತೆ ಹೊಂದುವವನ್ನು ಶ್ರಮ ವಿಭಜನೆ ಎಂದು ಕರೆದಿದ್ದಾರೆ." ಅದಕ್ಕೆ ಅವರು ಗುಂಡುಸೂಜಿ ತಯಾರಿಕೆಯು ೧೮ ಹಂತಗಳಲ್ಲಿ ನಡೆಯುವುದನ್ನು ಉದಾಹರಣೆಯಾಗಿ ಸೂಚಿಸಿದ್ದಾರೆ. ಆದ್ದರಿಂದ ಇಲ್ಲಿ ಶ್ರಮ ವಿಭಜನೆ ಎಂದರೆ ಕೆಲಸಗಳನ್ನು ವಿವಿಧ ಹಂತಗಳಲ್ಲಿ ವಿಂಗಡಿಸುವುದು ಎಂದು ಅರ್ಥವಾಗುತ್ತದೆ. ಸರಳವಾಗಿ ಹೇಳುವುದಾದರೆ ಒಬ್ಬ ವ್ಯಕ್ತಿಗೆ ಅಥವಾ ವ್ಯಕ್ತಿಗಳ ಗುಂಪಿಗೆ ಒದು ನಿರ್ದಿಷ್ಟ ಕೆಲಸವನ್ನು ಹಂಚುವ ಪದ್ಧತಿಯೇ ಶ್ರಮವಿಭಜನೆಯಾಗಿದೆ.

ಈ ಶ್ರಮ ವಿಭಜನೆಯು ಲಿಂಗಸಂಬಂಧಿ ನೆಲೆಯಲ್ಲಿ ಅನಾಗರಿಕ ಕಾಲದಿಂದಲೂ ಜಾರಿಯಲ್ಲಿರುವುದನ್ನು ಮಾನವ ಚರಿತ್ರೆ ತಿಳಿಸುತ್ತದೆ. ಮಾನವ ತನ್ನ ಅಲೆಮಾರಿ ಜೀವನವನ್ನು ಕೊನೆಗೊಳಿಸಿ ಒಂದೆಡೆ ನೆಲೆ ನಿಂತಾಗಿನಿಂದಲೂ ಮಾನವ ಶ್ರಮವಿಭಜನೆಯನ್ನು ಕೂಡಿಸಿಕೊಂಡಿದ್ದಾನೆ. ಮನೆಯ ಹೊರಗಿನ ಕೆಲಸಗಳಾದ ಬೇಟೆಗಾರಿಕೆ ಮತ್ತು ದೈಹಿಕ ಶ್ರಮ ಅಧಿಕವಿರುವಂತಹ ಕೆಲಸಗಳನ್ನು ಪುರುಷ ವಹಿಸಿಕೊಂಡು ಭಾರವಿರದ ನೈಪುಣ್ಯತೆಯಿಂದ ಮಾಡುವ ಮತ್ತು ಸೂಕ್ಷ್ಮವಾದ ಕೆಲಸಗಳನ್ನು ಹಾಗೂ ಮನೆಯಲ್ಲಿಯೇ ಕುಳಿತು ಮಾಡುವಂತ ಕೆಲಸಗಳನ್ನು ಮಹಿಳೆಯರಿಗೆ ಹಂಚಿದ್ದಾನೆ. ಅಲ್ಲದೆ ಮಹಿಳೆ ದೈಹಿಕವಾಗಿ ಕೋಮಲಳು, ಮೃದು ಸ್ವಭಾವದವಳು ಮತ್ತು ಗರ್ಭ ಧರಿಸಿದ ಸಂದರ್ಭದಲ್ಲಿ, ಬಾಣಂತನದ ಸಂದರ್ಭದಲ್ಲಿ, ಮಾನಸಿಕ ಋತುಸ್ರಾವದ ಸಂದರ್ಭದಲ್ಲಿ ಮಹಿಳೆಯ ದೇಹವು ಕೆಲಸ ಮಾಡುವ ಸ್ಥಿತಿಯಲ್ಲಿರುವುದಿಲ್ಲ ಎಂಬ ಕಾರಣ ನೀಡಿ ಅವಳ ಕೆಲಸವನ್ನು ಕುಟುಂಬದ ಒಳಗೆ ಕುಳಿತು ಮಾಡುವ ಕೆಲಸಗಳಿಗೆ ಸೀಮಿತಗೊಳಿಸಲಾಗಿದೆ. ಅಲ್ಲದೆ ಮಹಿಳೆಯ ಚಲನಶೀಲತೆ ಮತ್ತು ಲೈಂಗಿಕತೆಯ ಮೇಲೆ ನಿರ್ಬಂಧವನ್ನು ಏರಿ ಅವಳನ್ನು ಕುಟುಂಬದ ಒಳಗೆ ನಾಲ್ಕು ಗೋಡೆಗಳ ಮಧ್ಯೆ ಕೆಲಸ ನಿರ್ವಹಿಸುವಂತೆ ಮಾಡಲಾಗಿದೆ.[೩೮]

ಇಂದು ಶ್ರಮ ವಿಭಜನೆಯು ಎಲ್ಲ ರಂಗಗಳಲ್ಲಿ ಕಂಡುಬರುತ್ತಿದೆ. ಮಹಿಳೆಯರು ಕೇವಲ ಸಂಗೋಪನಾ (ಸೇವೆ) ಸ್ವರೂಪದ ಕೆಲಸ ಮಾಡಲು ಮೀಸಲಾದವರು ಎಂದು ಭಾವಿಸಲಾಗಿದೆ. ಅಕ್ಷರಜ್ಞಾನ ಹೊಂದಿದ ಮಹಿಳೆಯು ಪುರುಷರ ಅಧೀನದಲ್ಲಿ ಸೇವೆ ಸಲ್ಲಿಸಬೇಕೆಂದು ನಿರೀಕ್ಷಿಸುತ್ತಿದೆ ಈ ಪುರುಷಶಾಹಿ ಸಮಾಜ. ಅಲ್ಲದೆ ಮಹಿಳೆಗೆ ನೀಡುವ ಶಿಕ್ಷಣ ಮತ್ತು ತರಬೇತಿಯು ಅವರನ್ನು ಅಂತಹದೇ ವೃತ್ತಿಯಲ್ಲಿ ಮುಂದುವರೆಯುವಂತೆ ಪ್ರೇರೇಪಿಸುತ್ತದೆ. ಇದರಿಂದಾಗಿ ಅಧಿಕ ಸಂಖ್ಯೆಯ

ಮಹಿಳೆಯರು ಅಂಗನವಾಡಿ ಶಿಕ್ಷಕಿಯಾಗಿ, ಕಾರ್ಯಕರ್ತೆಯಾಗಿ, ಶಿಕ್ಷಕಿಯಾಗಿ, ದಾದಿಯಾಗಿ, ಸೇವಕಿಯಾಗಿ, ವೈದ್ಯೆಯಾಗಿ, ಟೈಪಿಸ್ಟ್ ಮತ್ತು ಟೈಲರ್‌ಗಳಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಅಲ್ಲದೆ ಅನಕ್ಷರತೆಯನ್ನು ಹೊಂದಿರುವ ಅಧಿಕ ಸಂಖ್ಯೆಯ ಮಹಿಳೆಯರು ಈ ಶ್ರಮವಿಭಜನೆಗೆ ಒಳಗಾಗಿ ಅಧಿಕ ಸಂಖ್ಯೆಯಲ್ಲಿ ಅಸಂಘಟಿತ ವಲಯದ ವಿವಿಧ ವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ. ಉದಾಹರಣೆಗೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸಗಳಲ್ಲಿ ಪುರುಷರು ಮತ್ತು ಮಹಿಳೆಯರ ನಡುವೆ ಶ್ರಮ ವಿಭಜನೆ ಅಧಿಕ ಪ್ರಮಾಣದಲ್ಲಿರುವುದನ್ನು ಅನೇಕ ವರದಿಗಳು ಮತ್ತು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದು ಬರುತ್ತಿದೆ. ಎಂ.ಎನ್.ಶ್ರೀನಿವಾಸ್‌ರ ಒಂದು ಅಧ್ಯಯನವು ಭೂರಹಿತ ಮಹಿಳಾ ಕೃಷಿ ಕಾರ್ಮಿಕರು ತುಂಬಾ ಕಷ್ಟದ ಕೆಲಸಗಳಾದ ಸಸಿ ನಡೆಸುವುದು, ಕಳೆ ಕೀಳುವುದು, ಬೆಳೆಗೆ ಗೊಬ್ಬರ ಇಡುವುದು, ಶೇಂಗಾ ಹರಿಯುವುದು ಕೀಳುವುದು ಇತ್ಯಾದಿ ಕೆಲಸಗಳಲ್ಲಿ ತೊಡಗಿರುತ್ತಾರೆ. ಆದರೆ ಪುರುಷರು ಆರಾಮದಾಯಕ ಕೆಲಸಗಳಾದ ನೇಗಿಲು ಒಡೆಯುವುದು, ತೂರುವುದು, ರಾಶಿ ಮಾಡುವುದು ಮತ್ತು ಮಾರುಕಟ್ಟೆ ವ್ಯವಹಾರ ಇತ್ಯಾದಿ ಕೆಲಸಗಳಲ್ಲಿ ತೊಡಗಿರುತ್ತಾರೆ ಎಂಬುದನ್ನು ತಿಳಿಸುತ್ತದೆ.

ಹಾಗೇ ಅಸ್ತ ಮತ್ತು ಉಮ್ರಾ ಅವರ ಒಂದು ಅಧ್ಯಯನವು ಸಹ ಶ್ರಮ ವಿಭಜನೆಯು ಕೃಷಿ ಮತ್ತು ಕೃಷಿ ಆಧಾರಿತ ಕುಟುಂಬಗಳಲ್ಲಿ ಪುರುಷಪ್ರಧಾನ ವ್ಯವಸ್ಥೆಯ ರೂಪದಂತೆ ಕಂಡುಬರುತ್ತದೆ ಎಂಬುದನ್ನು ತಿಳಿಸುತ್ತದೆ. ಪುರುಷರು ಕಡಿಮೆ ಭಾರದ ಮತ್ತು ನಿರ್ವಹಣೆಯ ಕೆಲಸಗಳಲ್ಲಿ ನಿರತರಾದರೆ ಮಹಿಳೆಯರು ಮನೆ ಮತ್ತು ಹೊಲಗದ್ದೆಗಳಲ್ಲಿ ಅಧಿಕ ಬಾರದ ಮತ್ತು ತ್ರಾಸದಾಯಕ ಕೆಲಸಗಳಲ್ಲಿ ನಿರತರಾಗಿರುತ್ತಾರೆ ಎಂಬುದನ್ನು ಆಸ್ತಿ ಮತ್ತು ಉಮ್ರಾ ಅವರ ಅಧ್ಯಯನ ವಿವರಿಸುತ್ತದೆ. ಅದನ್ನು ಈ ಕೆಳಗಿನ ರೇಖಾಚಿತ್ರದ ಮೂಲಕ ನೋಡಬಹುದು.

## ರೇಖಾ ಚಿತ್ರ

### ಅಸ್ತ ಮತ್ತು ಉಮ್ರಾ ಅವರ ಕುಟುಂಬದೊಳಗೆ ಲಿಂಗಸಂಬಂಧಿ ಶ್ರಮ ವಿಭಜನೆ




ಮೂಲ:- Economic and Political weekly, February 10, 2007, Pp-526[೩೯]

ಈ ಮೇಲಿನ ರೇಖಾಚಿತ್ರವನ್ನು ಗಮನಿಸಿದರೆ ಅಸ್ತ ಮತ್ತು ಉಮ್ರಾ ಅವರು ಕುಟುಂಬದೊಳಗೆ ಲಿಂಗಸಂಬಂಧಿ ಶ್ರಮವಿಭಜನೆ ಮಾಡಿರುವುದು ತಿಳಿದುಬರುತ್ತಿದೆ. ಅವರ ಪ್ರಕಾರ ಮಹಿಳೆ ಕುಟುಂಬದಲ್ಲಿ ಗೃಹಿಣಿಯಾಗಿ ಅಡುಗೆ ಮಾಡುವುದು, ಧಾನ್ಯ ಕ್ಲೀನ್ ಮಾಡುವುದು, ಸ್ವಚ್ಛಗೊಳಿಸುವುದು, ಮಕ್ಕಳ ಪಾಲನೆ, ನೀರು ಸಂಗ್ರಹಣೆ ಅಥವಾ ನೀರು ತರುವುದು, ಉರುವಲು ಕಟ್ಟಿಗೆ ಆಯ್ದುಕೊಂಡು ಬರುವುದು ಮತ್ತು ಸಂಗ್ರಹಿಸುವುದು, ಆಹಾರ ಸಂಸ್ಕರಣೆ ಮತ್ತು ಸಂಗ್ರಹಣೆ, ಪಶುಪಾಲನಾ ಚಟುವಟಿಕೆಗಳಲ್ಲಿ

ತೊಡಗಿರುತ್ತಾರೆ. ತಮ್ಮ ಸ್ವಂತ ಹೊಲ ಗದ್ದೆಯಲ್ಲಿ ಹೊಲ ಸ್ವಚ್ಛಗೊಳಿಸುವುದು, ಮಡಿ ಮಾಡುವುದು, ಬೀಜ ಬಿತ್ತುವುದು, ತಿಪ್ಪೆಗೊಬ್ಬರ ಹಾಕುವುದು, ಕಳೇಕೀಳುವುದು, ಪೈರು ಕೊಯ್ಲು ಮಾಡುವುದು, ತೆನೆ ಒಡೆಯುವುದು, ಕಾಳುಗಳನ್ನು ಒಣಗಿಸುವುದು ಮತ್ತು ಸ್ವಚ್ಛ ಮಾಡುವುದು ಹಾಗೂ ಕೂಲಿ ಕೆಲಸಗಾರರಾಗಿ ಕುಟುಂಬದ ಹೊರಗಡೆಯೂ ದುಡಿಯುತ್ತಾರೆ. ಅಂದರೆ ಮಹಿಳೆಯರು ಗೃಹಕೃತ್ಯ, ಸ್ವಂತ ಹೊಲಗದ್ದೆಯಲ್ಲಿ ಕೆಲಸ ಹಾಗೂ ಕೂಲಿಕೆಲಸಗಾರರಾಗಿ ದುಡಿಯುವವರಾಗಿರುತ್ತಾರೆ.

ಆದರೆ ಪುರುಷರು ಗೃಹಕೃತ್ಯ, ಸ್ವಂತ ಹೊಲಗದ್ದೆ ಮತ್ತು ಕೂಲಿಕೆಲಸಗಳಲ್ಲಿ ನಿರತರಾದರೂ ಅವರು ಮಾಡುವ ಕೆಲಸದ ಸ್ವರೂಪ ಬೇರೆಯಾಗಿರುತ್ತದೆ ಎಂಬುದು ಅಸ್ತ ಮತ್ತು ಉಮ್ಮಾ ಅವರ ಅಭಿಪ್ರಾಯ, ಪುರುಷರು ಗೃಹಕೃತ್ಯದಲ್ಲಿ ಉರುವಲು ಕಟ್ಟಿಗೆ ತರುವ ಮತ್ತು ಸಂಗ್ರಹಿಸುವ ಕೆಲಸ, ಪಶುಪಾಲನಾ ಚಟುವಟಿಕೆ ಮತ್ತು ಆಹಾರ ಸಂಗ್ರಹಿಸುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಸ್ವಂತ ಹೊಲಗದ್ದೆಯಲ್ಲಿ ಮಣ್ಣು ಒಡೆಯುವುದು, ಭೂಮಿ ಸ್ವಚ್ಛಗೊಳಿಸುವುದು, ಭಿತ್ತನೆ ಮಾಡುವುದು, ಒಳಗೆ ರಸಗೊಬ್ಬರ ಮತ್ತು ರಾಸಾಯನಿಕಗಳನ್ನು ಸಿಂಪಡಿಸುವುದು, ಬೆಳೆಗೆ ನೀರು ಹಾಯಿಸುವುದು, ತೋಟರಕ್ಷಣೆ, ಕೊಯ್ಲುಮಾಡುವುದು ಮತ್ತು ಮಾರುಕಟ್ಟೆಸಂಬಂಧಿ ಚಟುವಟಿಕೆಯಲ್ಲಿ ತೊಡಗಿರುತ್ತಾರೆ. ಜೊತೆಗೆ ಕೂಲಿಕೆಲಸಗಾರರಾಗಿ ಮತ್ತು ಇತರ ವ್ಯಾವಹಾರಿಕ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ ಎಂದು ಸ್ತ್ರೀ ಮತ್ತು ಪುರುಷರ ಕೆಲಸಗಳನ್ನು ಅಸ್ತ ಮತ್ತು ಉಮ್ಮಾ ಅವರು ವಿಂಗಡಿಸಿದ್ದಾರೆ.[೪೦]

ಪುರುಷರಿಗಿಂತ ಮಹಿಳೆಯರೇ ಅಧಿಕ ಕೆಲಸದ ಒತ್ತಡವನ್ನು ಹೊಂದಿರುವುದು ಅಸ್ತ ಮತ್ತು ಉಮ್ಮಾ ಅವರ ಅಧ್ಯಯನ ತಿಳಿಸುತ್ತದೆ. ಇವರ ಒಂದು ಅಧ್ಯಯನ ಎಂ.ಎನ್.ಶ್ರೀನಿವಾಸ್ ಅವರ ಅಧ್ಯಯನಕ್ಕೆ ಪೂರಕವಾಗಿದೆ.

ಅಸಂಘಟಿತ ವಲಯದಲ್ಲಿ ಬರುವ ಕಟ್ಟಡ ನಿರ್ಮಾಣ ಕಾರ್ಯದಂತಹ ವೃತ್ತಿಗಳಲ್ಲಿ ಶ್ರಮ ವಿಭಜನೆಯು ಪುರುಷಪ್ರಧಾನವಾಗಿರುವುದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬರುತ್ತಿದೆ. ಈ ಕೆಲಸದಲ್ಲಿ ಪುರುಷ ಕಾರ್ಮಿಕರು ಗಂಡಾಳುಗಳಾಗಿ, ಗಾರೆಕೆಲಸದವರಾಗಿ, ಮೇಸ್ತ್ರಿ ಕೆಲಸದವರಾಗಿ, ಮತ್ತು ಕಾಂಟ್ರ್ಯಾಕ್ಟರ್ ಆಗಿ ವಿವಿಧ ಹಂತಗಳಿಗೆ ಬಡ್ತಿ ಹೊಂದಿ ದುಡಿಯುತ್ತಿದ್ದಾರೆ. ಆದರೆ ಮಹಿಳೆಯರು ಭಾರವಾದ ಕೆಲಸಗಳಾದ ಉಸುಕು ಹೊರುವ, ಇಟ್ಟಂಗಿ ಅಥವಾ ಕಲ್ಲು ಹೊರುವ, ಸಿಮೆಂಟ್ ಹೊರುವ, ಕಟ್ಟಡಕ್ಕೆ ನೀರು ಹಾಯಿಸುವ ಮತ್ತು ಕಂಕರ್ ಕಲಿಸುವ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಆ ಕೆಲಸದ ಬಗ್ಗೆ ೧೫ರಿಂದ ೨೦ ವರ್ಷ ಅನುಭವವಿದ್ದರೂ ಅವರಿಗೆ ಮೇಲಿನ ಹಂತದ ಕೆಲಸಕ್ಕೆ ಬಡ್ತಿ ದೊರೆಯುತ್ತಿಲ್ಲ. ಇದರಿಂದಾಗಿ ಮಹಿಳೆ ಪುರುಷನ ಅಧೀನದಲ್ಲಿ ಕೆಲಸ ಮಾಡುವಂತಾಗಿದೆ.

ಹೀಗೆ ಶ್ರಮವಿಭಜನೆಯು ಎಲ್ಲ ವಲಯಗಳಲ್ಲಿ ಎಲ್ಲ ಹಂತದಲ್ಲಿ ಕಂಡುಬರುತ್ತಿದ್ದು. ಆ ಮೂಲಕ ಮಹಿಳೆಯರನ್ನು ಪುರುಷರ ಅಧೀನದಲ್ಲಿ ಕಡಿಮೆ ಕೂಲಿ ಅಥವಾ ಕಡಿಮೆ ಆದಾಯ ದೊರೆಯುವಂತಹ

ಕೆಲಸಗಳಲ್ಲಿ ದುಡಿಯುವಂತೆ ಮಾಡಿದೆ ಹಾಗೂ ಪುರುಷರನ್ನು ಅಧಿಕ ಆದಾಯ ಅಥವಾ ಅಧಿಕ ಕೂಲಿ ದೊರೆಯುವ ಮತ್ತು ಅಧಿಕಾರ ಚಲಾಯಿಸುವಂತ ಕೆಲಸಗಳಲ್ಲಿ ದುಡಿಯುವಂತೆ ಮಾಡಿದೆ. ಇದಕ್ಕೆ ಮುಖ್ಯ ಕಾರಣ ಪುರುಷಶಾಹಿ ಪ್ರಾಬಲ್ಯ ಕಾಣದ ಕೈಯಂತೆ ಶ್ರಮವಿಭಜನೆಯ ಹಿಂದೆ ಕಾರ್ಯ ಮಾಡುತ್ತಿರುವುದೇ ಆಗಿದೆ.

### ೩.೫. ಸ್ತ್ರೀವಾದಿ ವಿಮರ್ಶೆ

ಸಾಮಾಜಿಕ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಗಳು ಲಿಂಗಸಂಬಂಧಿ ನೆಲೆಯಲ್ಲಿ ಲಿಂಗ ತಾರತಮ್ಯವನ್ನು ಮಾಡುತ್ತಿವೆ. ಸಾಮಾಜಿಕ ವ್ಯವಸ್ಥೆಯು ಪುರುಷಪ್ರಧಾನತೆಯ ಆಧಾರದಲ್ಲಿ ರಚನೆಯಾಗಿ ಮಹಿಳೆಯರ ಶೋಷಣೆಗೆ ಕಾರಣವಾದರೆ ಆರ್ಥಿಕ ವ್ಯವಸ್ಥೆಯು ಮಾರುಕಟ್ಟೆ ಮೌಲ್ಯ ಮತ್ತು ಹಣರೂಪಿ ಮೌಲ್ಯವುಳ್ಳ ಚಟುವಟಿಕೆಗಳನ್ನು 'ದುಡಿಮೆ' ಎಂದು ಪರಿಗಣಿಸುವ ಮೂಲಕ ಮಹಿಳಾ ದುಡಿಮೆಗೆ 'ಮೌಲ್ಯ' ಇಲ್ಲದಂತೆ ಮಾಡಿದೆ. ಅಲ್ಲದೆ ಆರ್ಥಿಕತೆಯು ಮೂಲ ಪರಿಕಲ್ಪನೆಗಳ ವ್ಯಾಖ್ಯಾನದಿಂದಲೇ ಅವಳನ್ನು ದೂರ ತಳ್ಳಿದೆ, ಇಂತಹ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಪುರುಷಪ್ರಧಾನತೆಯ ನೆಲೆಯಲ್ಲಿ ಮಹಿಳೆಯ ಶೋಷಣೆಗೆ ಕಾರಣವಾಗಿವೆ ಎಂಬ ಅಂಶವನ್ನು ಪ್ರಶ್ನಿಸಿ ಸ್ತ್ರೀವಾದಿ ಚಿಂತನೆ ಬೆಳೆಯಿತು. ಮಹಿಳೆಯರ ಶೋಷಣೆಗೆ ಕುಟುಂಬ ಮತ್ತು ಅವಳ ಜೈವಿಕತೆಯೇ ಅಥವಾ ಲೈಂಗಿಕತೆಯೇ ಮೂಲಕಾರಣ. ಇದರಿಂದಾಗಿ ಅವಳಿಗೆ ಕುಟುಂಬದ ಹೊರಗೆ ದುಡಿಯಲು ಸಾಧ್ಯವಾಗುವುದಿಲ್ಲ ಇದು ಅವಳನ್ನು ಪರಾವಲಂಬಿಯನ್ನಾಗಿ ಮಾಡುತ್ತದೆ ಎಂಬುದು ಸ್ತ್ರೀವಾದಿಗಳ ಅಭಿಪ್ರಾಯ. ಅಲ್ಲದೆ ಉತ್ಪಾದನಾ ಕಾರ್ಯ ಮತ್ತು ಸಂತಾನೋತ್ಪತ್ತಿ ಕಾರ್ಯಗಳೆಂಬ ವಿಂಗಡನೆಯಲ್ಲಿ ಮಹಿಳೆಯರ ಶೋಷಣೆ ಮತ್ತು ಲಿಂಗ ಅಸಮಾನತೆ ಅಡಗಿವೆ ಎಂಬುದನ್ನು ಸ್ತ್ರೀವಾದಿ ಸಿದ್ಧಾಂತಗಳು ಗುರುತಿಸಿವೆ. ಆ ಮೂಲಕ ಪುರುಷಶಾಹಿ ಸಾಮಾಜಿಕ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಯನ್ನು ಸ್ತ್ರೀವಾದಿ ನೆಲೆಯಿಂದ ಪುನಾರಚಿಸಿದರೆ ಮಹಿಳೆಯರ ಶೋಷಣೆಯನ್ನು ತಡೆಯಬಹುದೆಂಬುದು ಸ್ತ್ರೀವಾದದ ಪ್ರತಿಪಾದನೆಯಾಗಿದೆ. ಅದಕ್ಕೆ ಪೂರಕವಾಗಿ ಕೆಲವೊಂದು ಸಿದ್ಧಾಂತಗಳ ವಿಶ್ಲೇಷಣೆಯನ್ನು ಇಲ್ಲಿ ನೋಡಬಹುದು.

#### ಉದಾರವಾದಿ ಸ್ತ್ರೀವಾದ

೧೮ ಮತ್ತು ೧೭ನೇ ಶತಮಾನದಲ್ಲಿ ಅರಳಿದ ಉದಾರವಾದದೊಂದಿಗೆ ಉದಾರವಾದಿ ಸ್ತ್ರೀವಾದ ಜನ್ಮ ತಾಳಿತು. ಯುರೋಪಿನ ಮೇರಿ ವೋಲ್ ಸ್ಟೋನ್‌ಕ್ರಾಫ್ಟ್, ಎಲಿಜಬೆತ್ ಲೇಡಿ ಸ್ಟ್ಯಾಂಟನ್, ಹ್ಯಾರಿಯಟ್ ಟೇಲರ್‌ಮಿಲ್, ಬೆಟ್ಟಿಫ್ರೀಡಮ್ ಮತ್ತು ಜಾನ್ ಸ್ಟುವರ್ಟ್‌ಮಿಲ್ ಅವರು ಉದಾರವಾದಿ ಸ್ತ್ರೀವಾದದ ಪ್ರತಿಪಾದಕರು. ಉದಾರವಾದಿ ಸ್ತ್ರೀವಾದಿಗಳು ಅತ್ಯಂತ ಸೀಮಿತ ನೆಲೆಯಲ್ಲಿ ಮತ್ತು ಸುಧಾರಣಾವಾದಿ ನೆಲೆಯಲ್ಲಿ ಮಹಿಳೆಯರ ಶೋಷಣೆಯ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಬೆಟ್ಟಿ ಫ್ರೀಡನ್ನಳು ಹೆಂಡತಿ, ತಾಯಿ ಎಂಬ ಜೈವಿಕವಾದಿ ಪಾತ್ರ ಚೌಕಟ್ಟುಗಳಿಗೆ ಮಹಿಳೆಯರನ್ನು

ಕಟ್ಟಿಹಾಕಿರುವ ಪರಿಯೇ ಹೆಣ್ಣಿನ ಶೋಷಣೆಗೆ ಕಾರಣವಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೪೧] ಮಹಿಳೆಯರು ಮನೆಯ ಹೊರಗೆ ಬಿರದೆಮನೆ, ಕುಟುಂಬ ಮಕ್ಕಳು ಮುಂತಾ ಸಂಗತಿಗಳಿಗೆ ಅಂಟಿಕೊಂಡಿರುವುದರಿಂದ ಸಮಾಜವು ಅವರನ್ನು ಪರಾವಲಂಬಿಗಳಂತೆ ನೋಡುತ್ತದೆ ಎಂಬುದು ಉದಾರವಾದಿ ಸ್ತ್ರೀವಾದಿಗಳ ವಾದವಾಗಿದೆ.

ಮುಂದುವರೆದು ಅವರು ಮಹಿಳೆಯರು ತಮ್ಮ ಸ್ಥಿತಿಯನ್ನು ತಾವೇ ಉತ್ತಮ ಪಡಿಸಿಕೊಳ್ಳಬೇಕೆಂದು ಒತ್ತಿಹೇಳುತ್ತಾರೆ. ಮಹಿಳೆಯರು ಪುರುಷರ ವೃತ್ತಿಗಳನ್ನು ಉದಾಹರಣೆಗೆ ಕಾನೂನು, ಬ್ಯಾಂಕಿಂಗ್ ವ್ಯವಹಾರ, ಆರಕ್ಷಕ, ಸೈನ್ಯ, ತಾಂತ್ರಿಕ ಕ್ಷೇತ್ರಗಳನ್ನು ಪ್ರವೇಶಿಸಲು ಮತ್ತು ನಿರ್ಧಾರ ಕೈಗೊಳ್ಳುವ ಸ್ಥಾನಗಳನ್ನು ಪಡೆಯಲು ಪ್ರೋತ್ಸಾಹಿಸಬೇಕೆಂದು ಸಲಹೆ ನೀಡುತ್ತಾರೆ. ಅಲ್ಲದೆ ಈಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಇದ್ದುಕೊಂಡು ಕುಟುಂಬ ಹಾಗೂ ವೃತ್ತಿಗಳೆರಡರಲ್ಲಿ ಹೊಂದಿಕೊಂಡು ಲಿಂಗ ಸಮಾನತೆ ಪಡೆಯಲು ಯತ್ನಿಸಬೇಕೆಂದು ಅಭಿಪ್ರಾಯ ಪಡುತ್ತಾರೆ.

### ತೀವ್ರಗಾಮಿ ಸ್ತ್ರೀವಾದ

ತೀವ್ರಗಾಮಿ ಸ್ತ್ರೀವಾದವು ೬೦ರ ದಶಕದ ಕೊನೆಯಲ್ಲಿ ಪಶ್ಚಿಮದಲ್ಲಿ ಹುಟ್ಟಿಕೊಂಡ ಹೊಸ ಮಹಿಳಾ ವಿಮೋಚನಾ ಚಳುವಳಿಯೊಂದಿಗೆ ಉದಯವಾಯಿತು. ಶೊಲಮಿಥ್, ಫೈರ್‌ಸ್ಟೋನ್, ಮಾಚ್‌ಪರ್ನಿಯ, ಆನ್ ಓಕ್ಲ್ ಎಪ್ರಿಯನ್‌ರಿಚ್, ಜೈಫನರ್ ಅಲೆನ್ ಮತ್ತು ಕೇಟ್ ಮಿಲೇಟ್ ಅವರು ತೀವ್ರಗಾಮಿ ಸ್ತ್ರೀವಾದದ ಪ್ರತಿಪಾದಕರು. ಸ್ತ್ರೀಯರ ಶೋಷಣೆಯ ಮೂಲದಲ್ಲಿ ಲಿಂಗಸಂಬಂಧಿ ಶ್ರಮ ವಿಭಜನೆಯ ಮೂಲ, ಜೈವಿಕ ನಿಯತಿ ಕೆಲಸ ಮಾಡುತ್ತದೆ. ಎಂದು ತೀವ್ರಗಾಮಿ ಸ್ತ್ರೀವಾದಿಗಳು ಪ್ರತಿಪಾದಿಸುತ್ತಾರೆ.

ಮುಂದುವರೆದು 'ತಾಯ್ತನವೇ ಮಹಿಳೆಯ ಶೋಷಣೆಯ ಮೂಲ ಅವಳ ಜೈವಿಕ ಕ್ರಿಯೆಗಳ ಮೇಲೆ ನಿಯಂತ್ರಣ ಹೇರುವುದರ ಮೂಲಕ ಅವಳ ಸ್ವಾತಂತ್ರ್ಯ ಮತ್ತು ವ್ಯಕ್ತಿತ್ವ ಬೆಳವಣಿಗೆಯನ್ನು ಕುಂಠಿತಗೊಳಿಸಲಾಗಿದೆ ಹಾಗೂ ಲಿಂಗ ತಾರತಮ್ಯವನ್ನು ವಿವಾಹ, ಕುಟುಂಬ ವ್ಯವಸ್ಥೆ, ಲಿಂಗಾಧರಿತ ಶ್ರಮವಿಭಜನೆ ಮತ್ತು ಸಾಮಾಜಿಕ ಕಟ್ಟುಪಾಡುಗಳ ಮೂಲಕ ಮುಂದುವರಿಸಿಕೊಂಡು ಹೋಗಲಾಗುತ್ತಿದೆ. ಪುರುಷ ಪ್ರಧಾನತೆಯು ಮೂಲ ಪುರುಷರ ನಡುವಿನ ಭಿನ್ನತೆಯಲ್ಲಿದೆ. ಆದ್ದರಿಂದ ಸಮಾಜ ಎಲ್ಲ ವ್ಯವಸ್ಥೆ ಸ್ತರಗಳಲ್ಲೂ ಪುರುಷರು ಮಹಿಳೆಯರನ್ನು ಆಳುತ್ತಾ ಬಂದಿದ್ದಾರೆ' ಎಂಬುದು ತೀವ್ರವಾದಿ ಸ್ತ್ರೀವಾದಿಗಳ ಅಭಿಪ್ರಾಯವಾಗಿದೆ.[೪೨]

ಸ್ತ್ರೀಯರನ್ನು ಸಂತಾನೋತ್ಪತ್ತಿ ಮೂಲವೆಂದು ಪರಿಗಣಿಸಿರುವುದೇ ಮಹಿಳೆಯರ ಶೋಷಣೆಗೆ ಮೂಲವಾಗಿದೆ. ಆದ್ದರಿಂದ 'ಅನ್‌ಓಕ್ಲೆ' ಎಂಬ ಸ್ತ್ರೀವಾದಿಯು "ತಾಯಿತನಕ್ಕೆ ಸಂಬಂಧಿಸಿದ ಅನೇಕ

ಸಂಗತಿಗಳನ್ನು ಪ್ರಶ್ನಿಸುತ್ತಾಳೆ. ತಾಯ್ತನವು ಮಹಿಳೆಯರಿಗೆ ಖಡ್ಡಾಯವಾದ ಸಂಗತಿಯಾಗಬೇಕಿಲ್ಲ. ಅಲ್ಲದೆ ಮಕ್ಕಳ ಪಾಲನೆ ಪೋಷಣೆಯು ಸ್ತ್ರೀಯರ ಗುತ್ತಿಗೆಯಾಗಬೇಕಿಲ್ಲ ಎಂದು ಪ್ರಶ್ನಿಸುತ್ತಾಳೆ."[೪೩] ಈ ಕಾರ್ಯಗಳನ್ನು ಪುರುಷರು ಮಾಡಬಹುದು ಎಂಬುದು ಅವರ ವಾದ. ಮತ್ತೊಬ್ಬ ತೀವ್ರಗಾಮಿ ಸ್ತ್ರೀವಾದಿಯ ತಾಯ್ತನವನ್ನು ಒಂದು ಸಾಂಸ್ಥಿಕ ವ್ಯವಸ್ಥೆಯನ್ನಾಗಿ ಪುರುಷಶಾಹಿ ವ್ಯವಸ್ಥೆ ಬಳಸುತ್ತದೆ ಎಂದು ವಾದಿಸುತ್ತಾರೆ. ಹಾಗೆ ಕೇಟ್ ಮಿಲ್ಲೆಟ್ ಎಂಬ ಸ್ತ್ರೀವಾದಿಯು "ಪುರುಷಶಾಹಿ ಮೌಲ್ಯ ವ್ಯವಸ್ಥೆಯಲ್ಲಿ ಸ್ತ್ರೀಯರ ಶೋಷಣೆಯ ಮೂಲವಿದೆ ಎಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ."[೪೪] ಪುರುಷಶಾಹಿ ಅಧಿಕಾರವನ್ನು ಕಿತ್ತೊಗೆಯದೆ ಸ್ತ್ರೀಯರ ವಿಮೋಚನೆ ಸಾಧ್ಯವಿಲ್ಲ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಹೀಗೆ ತೀವ್ರವಾದಿ ಸ್ತ್ರೀವಾದಿಗಳು ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ಸ್ತ್ರೀಪುರುಷರ ನಡುವಿನ ಜೈವಿಕ ಭಿನ್ನತೆ ಮತ್ತು ಪುರುಷಶಾಹಿ ವ್ಯವಸ್ಥೆ ಮೂಲ ಕಾರಣವಾಗಿದೆ ಎಂದು ವಾದಿಸುತ್ತಾರೆ.

**ಮಾರ್ಕ್ಸ್‌ವಾದಿ ಸ್ತ್ರೀವಾದಿ**

ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಖಾಸಗಿ ಆಸ್ತಿ ಹಕ್ಕು ಮತ್ತು ಸಂಪತ್ತಿನ ಒಡೆತನದ ಅಧಿಕಾರವೇ ಸ್ತ್ರೀಶೋಷಣೆಯ ಮೂಲ ಎಂದು ವಾದಿಸುತ್ತಾರೆ. ಫ್ರೆಡರಿಕ್ ಏಂಗೆಲ್ಸ್ ರವರ ಗ್ರಂಥ "ಆರಿಜನ್ ಆಫ್ ದಿ ಫ್ಯಾಮಿಲಿ ಪ್ರೈವೇಟ್ ಪ್ರಾಪರ್ಟಿ ಆ್ಯಂಡ್ ಸ್ಟೇಟ್ಸ್" ಮಾರ್ಕ್ಸ್‌ವಾದಿ ಸ್ತ್ರೀವಾದದ ಮೂಲವಾಗಿದೆ. ಫ್ರೆಡರಿಕ್ ಏಂಗಲ್ಸ್, ಮಾರ್ಗರೇಟ್ ಬೆನಸ್ಟನ್ನ್ ದಲ್ಲಾಕೂಸ್ತಾ, ಸ್ಮೊಜೇಮ್ಸ್, ಬಾರ್ಬಾರ ಬೆರ್ಗಿಮನ್ ಬ್ರೆನರ್ ಮತ್ತು ಹೋಮ್ ಸ್ಕಾಮ್ ಅವರು ಮಾರ್ಕ್ಸ್‌ವಾದಿ ಸ್ತ್ರೀವಾದದ ಪ್ರತಿಪಾದಕರು.

ಏಂಗೆಲ್ಸ್ ಅವರು ಏಕಪತ್ನಿತ್ವ ಸ್ತ್ರೀಯನ್ನು ಖಾಸಗಿ ಆಸ್ತಿಯನ್ನಾಗಿಸಿ ಅವಳ ಶೋಷಣೆಗೆ ಕಾರಣ ವಾಯಿತು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮುಂದುವರೆದು ಪುರುಷನು ಸ್ತ್ರೀಯ ಲೈಂಗಿಕತೆ ಮತ್ತು ದುಡಿಮೆಯ ಮೇಲೆ ನಿಯಂತ್ರಣ ಹೇರಿ ಅವಳನ್ನು ಪರಾವಲಂಬಿಯನ್ನಾಗಿ ಮಾಡಿದನು. ಸ್ತ್ರೀಯು ಸ್ವಾವಲಂಬಿಯಾಗಬೇಕಾದರೆ ಅವಳು ಆದಾಯ ಗಳಿಸುವ ಚಟುವಟಿಕೆಯಲ್ಲಿ ತೊಡಗಬೇಕು ಎಂಬ ಸಲಹೆಯನ್ನು ನೀಡುತ್ತಾರೆ.

'ಮಹಿಳೆಯ ತುಳಿತವು ವರ್ಗತುಳಿತದೊಂದಿಗೆ ಸೇರಿಕೊಂಡಿವೆ. ವರ್ಗ ಕಲಹ ಕೊನೆಗೊಂಡರೆ ಸ್ತ್ರೀಯರ ಶೋಷಣೆ ತಾನಾಗಿಯೇ ಕೊನೆಗೊಳ್ಳುತ್ತದೆ. ಆದರೆ ಬಂಡವಾಳಶಾಹಿಯ ವರ್ಗ ಅಸಮಾನತೆಯ ಶೋಷಣೆಯ ಮೂಲ ಇದು ಸ್ತ್ರೀಶೋಷಣೆಗೆ ದಾರಿ ಮಾಡಿಕೊಟ್ಟಿದೆ. ಅದಕ್ಕಾಗಿ ಬಂಡವಾಳಶಾಹಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ತೊಡೆದುಹಾಕಿದರೆ ಮಾತ್ರ ಲಿಂಗ ಸಮಾನತೆ ತರಲು ಸಾಧ್ಯ ಎಂಬುದು

ಮಾರ್ಕ್ಸ್‌ವಾದಿ ಸ್ತ್ರೀವಾದಿಗಳ ಅಭಿಪ್ರಾಯವಾಗಿದೆ. ಮುಂದುವರೆದು ಖಾಸಗಿ ಆಸ್ತಿಯ ಹಕ್ಕನ್ನು ತೆಗೆದುಹಾಕಿದರೆ ಮಹಿಳೆಯರ ಮೇಲಿನ ದೌರ್ಜನ್ಯ ಶೋಷಣೆ ತಾನಾಗಿಯೇ ಅಳಿಸುತ್ತದೆ ಎಂದು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ವಾದಿಸುತ್ತಾರೆ.[೪೫]

ಬಂಡವಾಳಶಾಹಿಯು ಪುರುಷರನ್ನು ಮಾತ್ರ ಉತ್ಪಾದಕರೆಂದು ಮತ್ತು ಸ್ತ್ರೀಯರನ್ನು ಅನುಭೋಗಿಗಳೆಂದು ವರ್ಗೀಕರಿಸಿದೆ. ಆದಕ್ಕಾಗಿ ಬಂಡವಾಳ ಶಾಹಿಯ ನಿರ್ಮೂಲನದಿಂದ ಸ್ತ್ರೀಯರ ಶೋಷಣೆ ಕೊನೆಗೊಳ್ಳುವುದಿಲ್ಲ. ಜೊತೆಗೆ ಪುರುಷಶಾಹಿಯ ನಿರ್ಮೂಲನದಿಂದ ಮಾತ್ರ ಮಹಿಳೆಯರ ಶೋಷಣೆಯನ್ನು ನಾಶಪಡಿಸಬಹುದು ಎಂಬುದು ಆಧುನಿಕ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳ ಅಭಿಪ್ರಾಯ ವಾಗಿದೆ.

**ಸಮಾಜವಾದಿ ಸ್ತ್ರೀವಾದ**

ಉದಾರವಾದಿ ಸ್ತ್ರೀವಾದ ಮತ್ತು ಮಾರ್ಕ್ಸ್‌ವಾದಿ ಸ್ತ್ರೀವಾದದ ತತ್ವಗಳ ಆಧಾರದ ಮೇಲೆ ಸಮಾಜವಾದಿ ಸ್ತ್ರೀವಾದ ಉದಯವಾಗಿದೆ. ಈ ವಾದವು ಮಾರ್ಕ್ಸ್‌ವಾದದಂತೆ ಆರ್ಥಿಕ ಮೂಲವನ್ನೇ ಅಸಮಾನತೆಯ ಪ್ರಧಾನ ನೆಲೆ ಎಂದು ಗುರುತಿಸುತ್ತದೆ. ಹಾಯ್ದ ಹಾರ್ಟ್‌ಮನ್, ಜೂಲಿಯಟ್ ಮಿಶೆಪಲ್, ಅಲಿಸನ್ ಜ್ಯಾಗರ್ ಮತ್ತು ಡಿರಿಸ್‌ಯಂಗ್ ಎಂಬುವವರು ಸಮಾಜವಾದಿ ಸ್ತ್ರೀವಾದದ ಪ್ರತಿಪಾದಕರು. ಮಾರ್ಕ್ಸ್‌ವಾದವು ಖಾಸಗಿ ಆಸ್ತಿ, ದುಡಿಮೆ ಹಾಗೂ ಗಳಿಕೆಗಳಿಗೆ ಸಾಮಾಜಿಕರಿಗೆ ಲಭ್ಯವಾಗುವ ಅವಕಾಶಗಳು ಮೂಲತಃ ಸಂಪನ್ಮೂಲ ವಿತರಣೆಯಲ್ಲಿ ಅಸಮಾನತೆಯನ್ನು ಜಾರಿಗೊಳಿಸುವ ತಂತ್ರಗಳೆಂದು ಗುರುತಿಸುತ್ತದೆ. ಆದರೂ ಸಾಮಾಜಿಕ ಶ್ರೇಣೀಕರಣದ ತಂತ್ರವೇ ಈ ನೆಲೆಗಳನ್ನು ಜಾರಿಗೊಳಿಸುತ್ತದೆ ಎಂದು ಸಮಾಜವಾದವು ವ್ಯಾಖ್ಯಾನಿಸುತ್ತದೆ.[೪೬]

'ಉದಾರವಾದಿ ಸ್ತ್ರೀವಾದವು ಹೊಸ ಸಮಾಜವನ್ನು ಕಟ್ಟುವಲ್ಲಿ ಸ್ತ್ರೀಪುರುಷರಿಬ್ಬರೂ ಒಟ್ಟಾಗಿ ಸೇರಿ ಕೆಲಸ ಮಾಡಬೇಕು. ಎಲ್ಲ ಪ್ರಕಾರದ ಅನ್ಯಾಯಗಳನ್ನು ಹೋಗಲಾಡಿಸಲು ಎಲ್ಲ ವರ್ಗದ ಮಹಿಳೆಯರು ಒಗ್ಗೂಡಬೇಕು. ಖಾಸಗಿ ಆಸ್ತಿಯ ಕಲ್ಪನೆಯೇ ಸ್ತ್ರೀ ಶೋಷಣೆಗೆ ಮೂಲ ಕಾರಣ. ಆದರೆ ಖಾಸಗಿ ಆಸ್ತಿಯ ಪರಿಕಲ್ಪನೆ ಹುಟ್ಟುವುದಕ್ಕಿಂತ ಪೂರ್ವದಲ್ಲಿ ಪುರುಷಪ್ರಧಾನತೆ ಇತ್ತು. ಆದರೆ ಖಾಸಗಿ ಆಸ್ತಿ ಹೋದ ತಕ್ಷಣ ಪುರುಷಪ್ರಧಾನತೆ ಅಳಿಸಿ ಹೋಗುತ್ತದೆ ಎಂದು ಹೇಳಲಾಗದು. ಪುರುಷಪ್ರಧಾನತೆಯೇ ಮಹಿಳೆಯ ಸಶಕ್ತೀಕರಣಕ್ಕೆ ಅಡ್ಡಿ. ಆದ್ದರಿಂದ ಪುರುಷಪ್ರಧಾನತೆಯನ್ನು ಹೋಗಲಾಡಿಸದ ಹೊರತು ಲಿಂಗ ಸಮಾನತೆ ಅಸಾಧ್ಯ ಎಂದು ವಾದಿಸುತ್ತದೆ.

ಜೂಲಿಯಟ್ ಮಿಶೆಲ್ ಎಂಬ ಉದಾರವಾದಿ ಸ್ತ್ರೀವಾದಿಯು 'ವುಮನ್ ದಿ ಲಾಂಗೆಸ್ಟ್ ರೆವಿಲ್ಯೂಶನ್' ಎಂಬ ಪ್ರಬಂಧದಲ್ಲಿ ಮಹಿಳೆಯರ ಇಂದಿನ ಅಧೀನ ಸ್ಥಿತಿಗೆ ಒಂದೇ ತರದ ಪರಿಹಾರ

ಸಿಗುವುದು ಕಠಿಣ ಸಂತಾನೋತ್ಪತ್ತಿ, ಉತ್ಪಾದನಾ ವ್ಯವಸ್ಥೆ, ಮಕ್ಕಳ ಸಮಾಜೀಕರಣ ಮತ್ತು ಲೈಂಗಿಕತೆಗಳು ಪರಸ್ಪರ ಹೆಣೆದುಕೊಂಡಿವೆ. ಈ ನಾಲ್ಕು ರಚನೆಗಳೂ ಕ್ರಾಂತಿಕಾರಕವಾಗಿ ಬದಲಾಗಬೇಕು. ಸಂತಾನ ನಿಯಂತ್ರಣವೊಂದೇ ಮಹಿಳೆಯರನ್ನು ಸ್ವತಂತ್ರರನ್ನಾಗಿ ಮಾಡುವುದಿಲ್ಲ. ಆಕೆ ಇಷ್ಟಪಟ್ಟು ತಾಯ್ತನದ ಕ್ರಿಯೆಯನ್ನು ಆಯ್ಕೆ ಮಾಡಿದರೂ ಮಗುವಿನ ಸಮಾಜೀಕರಣದ ಹೊರೆ ಆಕೆಯ ಮೇಲೆಯೇ ವಿಶೇಷವಾಗಿ ಬೀಳುತ್ತದೆ. ಹೀಗಾಗಿ ಸ್ತ್ರೀಪರ ಬದಲಾವಣೆಗಳಾಗಬೇಕಾದರೆ ಮಾನಸಿಕ ಮತ್ತು ಭೌತಿಕ ಕ್ರಾಂತಿಗಳೆರಡು ಅಪೇಕ್ಷಣೀಯವಾಗುತ್ತವೆ' ಎಂದು ಜೂಲಿಯಟ್ ಮಿಶೆಲ್ ಅವರು ಹೇಳುತ್ತಾರೆ. ಸ್ತ್ರೀ ಶೋಷಣೆಯ ಮೂಲ ಮಹಿಳೆಯರ ಮನದಾಳದಲ್ಲಿ ನೆಲೆಗೊಂಡಿರುವುದರಿಂದ ಸಾಮಾಜಿಕ ಸುಧಾರಣೆಗಳಾಗಲಿ, ಅಭಿವೃದ್ಧಿಯಾಗಲಿ, ಸ್ತ್ರೀಯರ ಸ್ಥಾನಮಾನದ ಸುಧಾರಣೆಯಾಗಲಿ ಮತ್ತು ಲಿಂಗ ಸಮಾನತೆಯಾಗಲಿ ತರಲು ಸಾಧ್ಯವಿಲ್ಲ. ಆದರೆ ಸ್ತ್ರೀಯರ ಮನಸ್ಸಿನಾಳದಲ್ಲಿಯೇ ಮಾನಸಿಕ ಬದಲಾವಣೆಯಾದರೆ ಮಾತ್ರ ಲಿಂಗಸಮಾನತೆ ತರಲು ಸಾಧ್ಯ ಎಂಬುದು ಮಿಶೆಲ್ ಅವರ ಅಭಿಪ್ರಾಯವಾಗಿದೆ.

ಮಿಶೆಲ್ ಬ್ಯಾಕೆಟ್ ಎಂಬ ಮತ್ತೊಬ್ಬ ಸಮಾಜವಾದಿ ಚಿಂತಕಿ "ವಿಭಜಿತ ಕುಟುಂಬದಲ್ಲಿ ಆರ್ಥಿಕ ಕ್ರೌರ್ಯದ ಕುರಿತು ಮಹಿಳೆಯರ ಮೇಲೆ ಪುರುಷಪ್ರಧಾನತೆ ಮಾಡುವ ದಬ್ಬಾಳಿಕೆಯ ಕುರಿತು ಚರ್ಚಿಸುತ್ತಾರೆ. ಮನೆಗೆಲಸ ಮತ್ತು ಹೊರಗಿನ ಉದ್ಯೋಗ ಇವೆರಡರ ನಡುವಿನ ಒತ್ತಡಕ್ಕೆ ಮಹಿಳೆಯರು ತುತ್ತಾಗುತ್ತಾರೆ ಎಂಬುದನ್ನು ಗುರುತಿಸುತ್ತಾರೆ." ಮಹಿಳೆಯರು ಗೃಹ ಕೆಲಸದ ಜೊತೆಗೆ ಆದಾಯ ತರುವಂತ ಕುಟುಂಬದ ಹೊರಗಿನ ದುಡಿಮೆಯಲ್ಲಿ ತೊಡಗಿರುತ್ತಾರೆ. ಕುಟುಂಬದಲ್ಲಿನ ಪಿತೃಪ್ರಧಾನತೆಯ ದಬ್ಬಾಳಿಕೆಯಿಂದಾಗಿ ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾರೆ ಎಂಬ ಅಭಿಪ್ರಾಯವನ್ನು ಮಿಶಲ್ ಬ್ಯಾಕೆಟ್ ವ್ಯಕ್ತಪಡಿಸುತ್ತಾರೆ.[೪೭]

'ಆರ್ಥಿಕ ವ್ಯವಸ್ಥೆಯು ಆರ್ಥಿಕೋತ್ಪಾದನೆಯನ್ನು ಗಂಡಿಗೆ ನಿರ್ದಿಷ್ಟಪಡಿಸಿದರೆ ಸಂತಾನೋತ್ಪತ್ತಿಯನ್ನು ಹೆಣ್ಣಿಗೆ ನಿರ್ಧಿಷ್ಟಪಡಿಸಿದೆ. ಆ ಮೂಲಕ ಹಿಂದೆಂದಿಗಿಂತಲೂ ಇಂದು ಹೆಚ್ಚು ಆಕ್ರಮಣಕಾರಿಯಾಗಿ ಮಹಿಳಾ ಶೋಷಣೆಯನ್ನು ಮಾಡುತ್ತ ಬಂದಿದೆ ಎಂದು ಎಚ್.ಎಸ್.ಶ್ರೀಮತಿ ಅವರು ಅಭಿಪ್ರಾಯ ಪಡುತ್ತಾರೆ. ಈ ಹಿನ್ನೆಲೆಯಲ್ಲಿ ಎಲ್ಲ ಸ್ತ್ರೀವಾದಿ ಸಿದ್ಧಾಂತಗಳು ಮಹಿಳೆಯ ಆರ್ಥಿಕ ಶೋಷಣೆಗೆ ಖಾಸಗಿ ಆಸ್ತಿಯ ಹಕ್ಕು ಲೈಂಗಿಕತೆ ಮತ್ತು ಸಂತಾನೋತ್ಪತ್ತಿ ಶಕ್ತಿಗಳೇ ಕಾರಣವೆಂದು ಇವುಗಳ ಒಡೆತನ ಪುರುಷಪ್ರಧಾನ ಸ್ವರೂಪಗಳಾದ ಪುರುಷರ ಅಧೀನದಲ್ಲಿ ಇರುತ್ತವೆ. ಆ ಮೂಲಕ ಅವಳ ಚಲನಶೀಲತೆ ಯನ್ನು ನಿಯಂತ್ರಿಸಿ ಅವಳನ್ನು ಪುರುಷ ಅವಲಂಬಿಯನ್ನಾಗಿ ಅಥವಾ ಪರಾವಲಂಬಿಯನ್ನಾಗಿ ಮಾಡಿವೆ. ಅವಳ ಈ ಪರಾವಲಂಬಿತನವೇ ಅವಳ ಶೋಷಣೆಗೆ ಕಾರಣ ಎಂದು ಸ್ತ್ರೀವಾದಿಗಳು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ.

ಆರ್ಥಿಕ ಪರಿಕಲ್ಪನೆಗಳಾದ ಮೂಲಭೂತ ಆರ್ಥಿಕ ಸಮಸ್ಯೆಗಳು, ಉಪಭೋಗ, ಉತ್ಪಾದನೆ, ವಿನಿಮಯ ಮತ್ತು ಹಂಚಿಕೆ ದುಡಿಮೆ ಮತ್ತು ಶ್ರಮ ವಿಭಜನೆ ಎಂಬ ಪರಿಭಾವನೆಗಳು ಸಹ ಪುರುಷ

ಪ್ರಧಾನತೆಯ ಪ್ರಭಾವಕ್ಕೆ ಒಳಗಾಗಿದ್ದು ಸ್ತ್ರೀಯನ್ನು ಅವಳ ಆರ್ಥಿಕ ಚಟುವಟಿಕೆಗಳಲ್ಲಿ ಕೆಲವನ್ನು ಆರ್ಥಿಕ ಚಟುವಟಿಕೆಗಳೆಂದು ಪರಿಗಣಿಸಿ ಬಹುತೇಕ ಚಟುವಟಿಕೆಗಳನ್ನು ಆರ್ಥಿಕ ಮಾನದಂಡದಿಂದ ಕೈಬಿಡಲಾಗುತ್ತಿದೆ. ಅಲ್ಲದೆ ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ಪುರುಷ ಪ್ರಧಾನತೆ ಬಲಗೊಂಡು ಲಿಂಗ ಅಸಮಾನತೆಗೆ ಕಾರಣವಾಗಿರುವುದು ಮೇಲಿನ ಆರ್ಥಿಕ ಪರಿಕಲ್ಪನೆಗಳ ವಿಶ್ಲೇಷಣೆಯಿಂದ ವ್ಯಕ್ತವಾಗುತ್ತದೆ. ಅಲ್ಲದೆ ಆರ್ಥಿಕ ಕಲ್ಪನೆಗಳ ಆಧಾರದ ಮೇಲೆ ಅಭಿವೃದ್ಧಿಪಡಿಸಿದ ಅಭಿವೃದ್ಧಿಯ ಪರಿಕಲ್ಪನೆ, ಅಭಿವೃದ್ಧಿ ಸಿದ್ಧಾಂತಗಳು, ಲಿಂಗಸಂಬಂಧಿ ಅಭಿವೃದ್ಧಿಯ ಪರಿಭಾವನೆ ಮತ್ತು ಶ್ರಮ ಮಾರುಕಟ್ಟೆ ಸಿದ್ಧಾಂತಗಳು ಮಹಿಳೆಯ ಅಭಿವೃದ್ಧಿ ಮತ್ತು ಪ್ರಗತಿಯನ್ನು ಯಾವ ರೀತಿ ಪರಿಭಾವಿಸಿವೆ ಎಂಬುದನ್ನು ತಿಳಿದರೆ ಮಹಿಳೆಯರ ಆರ್ಥಿಕ ಪ್ರಗತಿ ಮತ್ತು ಬೆಳವಣಿಗೆಯ ಅಂಶಗಳು ತಿಳಿದುಬರುತ್ತವೆ.

**ಅಡಿಟಿಪ್ಪಣಿಗಳು**

೧. ಅಹುಜ ಎಚ್.ಎಲ್., ೧೯೭೦, ಅಡ್ವಾನ್ಸ್‌ಡ್ ಎಕನಾಮಿಕ್ ಥೇರಿ, ದ ಸ್ಕೋಪ್ ಆಫ್ ಎಕನಾಮಿಕ್ ಥೇರಿ, ಪ್ರಾಬ್ಲಮ್ ಆಫ್ ಎಕನಾಮಿಕ್ ಎಫೀಸೆನ್ಸಿ, ಪು.೬

೨. ಅದೇ, ಪು.೭

೩. ಅದೇ, ಪು.೮

೪. ಅದೇ, ಪು.೮-೯

೫. ಅದೇ, ಪು.೯-೧೦

೬. ಅದೇ, ಪು.೧೦

೭. ಸುಂದರಂ ಕೆ.ಪಿ.ಎಂ. ಮತ್ತು ವೈಶ್ಯ ಎಂ.ಸಿ., ೧೯೫೯, ಪ್ರಿನ್ಸಿಪಲ್ಸ್ ಆಫ್ ಎಕನಾಮಿಕ್ಸ್, ಪು.೬೭

೮. ಪ್ರಭಾಕರ ಶಿಶಿಲ, ೧೯೯೫, ಮೂಲಾಂಶ ಅರ್ಥಶಾಸ್ತ್ರ, *ಅನುಭೋಗ*, ಪು.೫೨

೯. ಎಡ್ವರ್ಡ್ ಶಫೀರ್, ೧೯೯೨, ಮ್ಯಾಕ್ರೋ ಎಕನಾಮಿಕ್ ಅನಾಲಿಸಿಸ್, ನ್ಯಾಷನಲ್ ಇನ್‌ಕಮ್ ಅಕೌಂಟಿಂಗ್, ಪು.೨೧-೩೬ ಮತ್ತು ಕನಸ್ಯೂಮಸನ್ ಆ್ಯಂಡ್ ಇನ್‌ವೆಸ್ಟ್‌ಮೆಂಟ್ ಸ್ಪೆಂಡಿಂಗ್, ಪು.೬೮-೬೯

೧೦. ಶ್ರೀಮತಿ ಎಚ್.ಎಸ್.(ಸಂ), ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, *ಸಾಮಾಜಿಕ ನಿರೀಕ್ಷೆಯಲ್ಲಿ ಹೆಂಗಸಿನ ದುಡಿಮೆ ಮತ್ತು ಬಿಡುವು*, ಪು.೪೨

೧೧. ಶ್ರೀಮತಿ ಎಚ್.ಎಸ್.(ಸಂ), ೨೦೦೦, ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ಶೇಷಾದ್ರಿ ಬಿ., ಮಹಿಳೆ *ವಿವಾಹ ಮತ್ತು ಕುಟುಂಬ ಒಂದು ಪ್ರಕ್ರಿಯೆ*, ಪು.೬೬-೬೬

೧೨. ಯುಎನ್‌ಡಿಪಿ, ೧೯೯೮, ವುಮನ್ ಡೆವಲಪ್‌ಮೆಂಟ್ ರಿಪೋರ್ಟ್, ಪು.೧೩

೧೩. ಅಹುಜ ಎಚ್.ಎಲ್., ೧೯೭೦, ಮೈಕ್ರೋ ಎಕನಾಮಿಕ್ ಅನಾಲೀಸಿಸ್, ಪು.೩೫೪

೧೪. ಚಂದ್ರಶೇಖರ್ ಟಿ.ಆರ್., ೨೦೦೦, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪು.ಸಂ-೧೫

೧೫. ಅದೇ, ಪು.೧೬-೧೭

೧೬. ಅಹುಜ ಎಚ್.ಎಲ್., ೧೯೭೦, ಮೈಕ್ರೋ ಎಕನಾಮಿಕ್ ಅನಾಲೀಸಿಸ್, ಪು.೪೯೮ ಮತ್ತು ಡಾ.ಪ್ರಭಾಕರ ಶಿಶಿಲ, ೧೯೯೫, ಮೂಲಾಂಶ ಅರ್ಥಶಾಸ್ತ್ರ, ಪು.೧೫೦

೧೭. ಶ್ರೀಮತಿ ಎಚ್.ಎಸ್.(ಸಂ), ೨೦೦೭, ಮಹಿಳಾ ಆರ್ಥಿಕತೆ, ಹೇಮಲತಾ ಎಚ್.ಎಂ., ಮಹಿಳೆಯರ ದುಡಿಮೆಯ ಸಹಭಾಗಿತ್ವ, ಪು.೩೬

೧೮. ಅಹುಜ ಎಚ್.ಎಲ್., ೧೯೭೦, ಮೈಕ್ರೋ ಎಕನಾಮಿಕ್ ಅನಾಲೀಸಿಸ್, ಪು.೪೯೮

೧೯. ಸುಬ್ರಮಣ್ಯ ಜಿ., ೨೦೦೨, ಪ್ರಿನ್ಸಿಪಲ್ಸ್ ಆಫ್ ಸೋಸಿಯಾಲಾಜಿ, ಪು.೬೫-೮೮

೨೦. ಶ್ರೀಮತಿ ಎಚ್.ಎಸ್., ೨೦೦೪, ಹೆಣ್ಣು-ಹೆಂಗಸು, ಮಹಿಳೆ, ದುಡಿಮೆ ಮತ್ತು ಸ್ತ್ರೀ ಸಮಾನತೆಯ ಪ್ರಶ್ನೆ, ಪು.೧೧೭

೨೧. ರೀತು ದಿವಾನ್, ೧೯೯೮, ಜೆಂಡರ್ ಇನ್ ನಿಯೋ ಕ್ಲಾಸಿಕಲ್ ಎಕನಾಮಿಕ್ ಕಾನ್ಸ್‌ಪ್ಟೆಚುಲ್, ಅವರ್ ವೀವ್, ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ, ವ್ಯಾಲುಮ್ ೩೦, ನಂ.೧೭, ಡಬ್ಲ್ಯೂ ೫೪೬-೫೫೮

೨೨. ಚಂದ್ರಶೇಖರ್.ಟಿ.ಆರ್, ೨೦೦೩, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಪು.೧೨೦-೧೩೭

೨೩. ಜಾನ್ ಡ್ರೀಜ್ ಮತ್ತು ಅಮರ್ತ್ಯಸೇನ್, ೧೯೯೫, ಇಂಡಿಯಾ : ಎಕನಾಮಿಕ್ ಡೆವಲಪ್‌ಮೆಂಟ್ ಆಯ್ಯಂಡ್ ಸೋಸಿಯಲ್ ಆಪಾರ್ಚುನಿಟಿ, ಪು.೩೨೦

೨೪. ಚಂದ್ರಶೇಖರ್ ಟಿ.ಆರ್., ೨೦೦೦, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪು.೪೭

೨೫. ಮೈತ್ರೆ ಕೃಷ್ಣರಾಜನ್, ೧೯೯೨, ವುಮನ್ ಕ್ರಾಫ್ಟ್ ವರ್ಕ್‌ರ್ಸ್ ಆರ್ ಸೆಕ್ಯೂರಿಟಿ ಫಾರ್ ಫ್ಯಾಮಿಲಿ ಸಬೆಸೆಸ್ಸನ್ಸ್, ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ, ಪು.ಡಬ್ಲ್ಯೂ ೫-೭-೧೮

೨೬. ಮರ್ತ್ ಎ.ಚೆನ್, ೧೯೮೯, ವುಮನ್ ವರ್ಕರ್ ಇನ್ ಇಂಡಿಯಾ ಅಗ್ರಿಕಲ್ಚರ್ ಬೈ ಆಗ್ರೋ ಇಕಾಲೈಜೆಡ್ ಜಾನ್ಸ್ ಮುಟರಿಂಗ್ ನೀಡ್ಸ್ ಫಾರ್ ಲ್ಯಾಂಡ್‌ಲೆಸ್ ಆ್ಯಂಡ್ ಲ್ಯಾಂಡ್ ಪ್ಯೂರ್ ವುಮನ್, ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ, ಪು.ಡಬ್ಲ್ಯೂ ೫-೭೯-೯೦

೨೭. ಚಂದ್ರಶೇಖರ್.ಟಿ.ಆರ್, ೨೦೦೩, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಪು.೧೧೨

೨೮. ಗೌರ್ನಮೆಂಟ್ ಆಫ್ ಇಂಡಿಯಾ, ೨೦೦೧, ವುಮನ್ ಆ್ಯಂಡ್ ಮೆನ್ ಇನ್ ಇಂಡಿಯಾ, ಸೆಂಟ್ರಲ್ ಸ್ಟೆಟಿಸ್ಟಿಕಲ್ ಆರ್ಗನೈಸೇಸನ್ಸ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕಲ್ ಆಯ್ಯಂಡ್ ಪ್ರೋಗ್ರಾಂ ಇಪ್ಲಿಮೆಂಟೆಸನ್ಸ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೩೯, ಟೇಬಲ್ ೨೭

೨೯. ಅದೇ, ಪು.೪೦, ಟೇಬಲ್ ೩೦

೩೦. ಕರ್ನಾಟಕ ಸರಕಾರ, ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫, ಪು.೧೯೧ ಮತ್ತು ಕರ್ನಾಟಕ ಸರಕಾರ (೨೦೦೩) ಆರ್ಥಿಕ ಸಮೀಕ್ಷೆ, ೨೦೦೨-೦೩, ಪು.೨೭೫

೩೧. ನಿರ್ಮಲಾ ಬ್ಯಾನರ್ಜಿ, ೧೯೯೮, ವಾಟವೇರ್ ಹ್ಯಾಪೆಂಡೆಂಟ್ ಟು ದಿ ಡ್ರೀಮ್ಸ್ ಆಫ್ ಮಾಡ್ರಾನೀಟಿ ದಿ ನ್ಯೂಟ್ರೇಸನ್ ಈರಾ ಆ್ಯಂಡ್ ವುಮೆನ್ಸ್ ಪೂಸೀಸೆನ್ಸ್, ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ, ಪು.ಡಬ್ಲ್ಯೂ ೨-೮

೩೨. ಶ್ರೀನಿವಾಸ್ ಎಂ.ಎನ್., ೧೯೭೮, ದಿ ಚೇಜಿಂಗ್ ಪೂಸೀಸೆನ್ಸ್ ಆರ್ ಇಂಡಿಯಾನ್ ವುಮೆನ್, ಪು.೧೨

೩೩. ನೈಲಾ ಕಬೀರ್, ೧೯೯೬, ರಿವೈಸೆಡ್ ರಿಯಾಲೀಟಿಸ್ ಜೆಂಡರ್ ಐರಾರ್ಕಿ ಇನ್ ಡೆವಲಮೆಂಟ್ ಥಾಟ್, ಕಾಲಿ ಫಾರ್ ವುಮೆನ್, ಪು.೧೦೫

೩೪. ಹೇಮಲತಾ ಎಚ್.ಎಂ, ೨೦೦೪, ಮಹಿಳಾ ಅಧ್ಯಯನ ೨, *ವಿಸ್ತರ್ ಬೊಸರಪ್ಪ್‌ರವರ ಕೃಷಿ ಮಹಿಳೆಯರ* ದುಡಿಮೆಯ ವಿಶ್ಲೇಷಣೆ ಪು.೧೦೬

೩೫. ಎಡ್ವರ್ಡ್ ಶಫೀರ್, ೧೯೯೨, ಮ್ಯಾಕ್ರೋ ಎಕನಾಮಿಕ್ ಅನಾಲಿಸಿಸ್, ನ್ಯಾಷನಲ್ ಇನ್‌ಕಮ್ ಆಕೌಟಿಂಗ್, ಪು.೧೮-೪೯

೩೬. ಚಂದ್ರಶೇಖರ್ ಟಿ.ಆರ್., ೨೦೦೦, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪು.೫೦

೩೭. ಯುಎನ್‌ಡಿಪಿ, ೧೯೯೮, ವುಮನ್ ಡೆವಲಪ್‌ಮೆಂಟ್ ರಿಪೋರ್ಟ್, ಪು.೯೭

೩೮. ಶ್ರೀಮತಿ ಎಚ್.ಎಸ್.(ಅನು), ದ ಸೆಕೆಂಡ್ ಸೆಕ್ಸ್, ಚಾರಿತ್ರಿಕ ವಸ್ತುಮೂಲವಾದ ದೃಷ್ಟಿಕೋನ, ಸಿಮಾನ್ ದ ಬೊವಾ, ೬೧-೬೫

೩೯. ನಿರೋ ಚೌಧರಿ ಡಿ.ಪಾರ್ಥಸಾರಥಿ, ೨೦೦೭, *ಜೆಂಡರ್ ವರ್ಕ್ ಆ್ಯಂಡ್ ಹೌಸ್ ಹೋಲ್ಡ್ ಫುಡ್ ಸೆಕ್ಯೂರಿಟಿ,* ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವಿಕ್ಲಿ, ಪು.ಡಬ್ಲ್ಯೂ ೩೨೪-೫೩೬

೪೦. ಅದೇ, ಪು.೩೨೪

೪೧. ಕಿಶೋರಿ ನಾಯಕ್, ೧೯೯೯, ಸ್ತ್ರೀವಾದ: ನೆಲೆಗಳು ಹಾಗೂ ನಿಲುವುಗಳು, ಪು.೧೨-೧೩

೪೨. ಹೇಮಲತಾ ಎಚ್.ಎಂ, ೨೦೦೪, ಮಹಿಳಾ ಅಧ್ಯಯನ ೧, ಪು.೫೯

೪೩. ಚಂದ್ರಶೇಖರ್ ಟಿ.ಆರ್., ೨೦೦೦, ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪು.೪೦

೪೪. ಕಿಶೋರಿ ನಾಯಕ್, ೧೯೯೯, ಸ್ತ್ರೀವಾದ: ನೆಲೆಗಳು ಹಾಗೂ ನಿಲುವುಗಳು, ಪು.೧೩

೪೫. ಹೇಮಲತಾ ಎಚ್.ಎಂ, ೨೦೦೪, ಮಹಿಳಾ ಅಧ್ಯಯನ ೧, ಪು.೫೯

೪೬. ಶ್ರೀಮತಿ ಎಚ್.ಎಸ್., ೨೦೦೩, ಸ್ತ್ರೀವಾದ, ಪು.೩೬

೪೭. ಕಿಶೋರಿ ನಾಯಕ್, ೧೯೯೯, ಸ್ತ್ರೀವಾದ: ನೆಲೆಗಳು ಹಾಗೂ ನಿಲುವುಗಳು, ಪು.೨೧

೪೮. ಅಮರ್ತ್ಯಸೇನ್, ೨೦೦೬, ದಿ ಆರ್ಗ್ಯೂಮೆಂಟಿವ್ ಇಂಡಿಯಾ ಮೆನಿ ಫೀ ಆಫ್ ಜಂಡರ್ ಇನ್ ಇಕ್ವಾಲಿಟಿ

# ಅಧ್ಯಾಯ ನಾಲ್ಕು

# ಪ್ರಚಲಿತ ಆರ್ಥಿಕ ಅಭಿವೃದ್ಧಿ ಸಿದ್ಧಾಂತಗಳ ಸ್ತ್ರೀವಾದಿ ಚರ್ಚೆ

೪.೧. ಸಂಪ್ರದಾಯ ಪಂಥದ ಅಭಿವೃದ್ಧಿ ಸಿದ್ಧಾಂತ

೪.೨. ಮಾರ್ಕ್ಸ್‌ವಾದಿ ಅಭಿವೃದ್ಧಿ ಸಿದ್ಧಾಂತ

೪.೩. ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತ

೪.೪. ಶ್ರಮ ಮಾರುಕಟ್ಟೆ ಸಿದ್ಧಾಂತಗಳು ಅಥವಾ ಕೂಲಿ ಸಿದ್ಧಾಂತಗಳು

೪.೫. ಕಲ್ಯಾಣಪರ ಅಭಿವೃದ್ಧಿ ಸಿದ್ಧಾಂತ

# ನಾಲ್ಕು

## ಪ್ರಚಲಿತ ಆರ್ಥಿಕ ಅಭಿವೃದ್ಧಿ ಸಿದ್ಧಾಂತಗಳ ಸ್ತ್ರೀವಾದಿ ಚರ್ಚೆ

'ಆರ್ಥಿಕ ಅಭಿವೃದ್ಧಿ' ಎಂಬ ಪದವು ಇತ್ತೀಚೆಗೆ ೨೦ನೇ ಶತಮಾನದಲ್ಲಿ ಬಳಸಲಾಗುತ್ತಿರುವ ಪದವಾಗಿದ್ದು, ವಿಶ್ವ ಆರ್ಥಿಕ ಮುಗ್ಗಟ್ಟು(೧೯೩೦) ಮತ್ತು ಎರಡನೇ ಪ್ರಪಂಚ ಯುದ್ಧ(೧೯೪೦)ದ ನಂತರ ಪ್ರಾಮುಖ್ಯತೆ ಪಡೆದ ಒಂದು ಆರ್ಥಿಕ ಪರಿಕಲ್ಪನೆಗೆ ನಿರ್ದಿಷ್ಟ ವ್ಯಾಖ್ಯಾನ ನೀಡುವುದು ತುಂಬ ಕಷ್ಟದ ಸಂಗತಿಯಾಗಿದೆ. 'ಅಭಿವೃದ್ಧಿ' ಎಂದರೆ ಏನು? ಎಂಬ ವಿಚಾರದ ಬಗ್ಗೆ ಅರ್ಥಶಾಸ್ತ್ರಜ್ಞರಲ್ಲಿಯೇ ಒಮ್ಮತ ಅಭಿಪ್ರಾಯವಿಲ್ಲ. ಕೆಲವರು ರಾಷ್ಟ್ರೀಯ ಆದಾಯದಲ್ಲಿನ ಹೆಚ್ಚಳವನ್ನು ಅಭಿವೃದ್ಧಿ ಎಂದು ಕರೆದರೆ, ಕೆಲವರು 'ತಲಾ ಆದಾಯ'ದಲ್ಲಿನ ಹೆಚ್ಚಳವನ್ನು ಅಭಿವೃದ್ಧಿ ಎಂದು ಕರೆದಿದ್ದಾರೆ. ಮತ್ತೆ ಕೆಲವರು ಆರ್ಥಿಕ ಯೋಗಕ್ಷೇಮದಲ್ಲಿನ ಸುಧಾರಣೆಯೇ ಅಭಿವೃದ್ಧಿ ಎಂದು ಕರೆದಿದ್ದಾರೆ. ಹೀಗೆ ಅಭಿವೃದ್ಧಿಯ ಬಗ್ಗೆ ಭಿನ್ನ ಅಭಿಪ್ರಾಯವನ್ನು ಅರ್ಥಶಾಸ್ತ್ರಜ್ಞರು ವ್ಯಕ್ತಪಡಿಸಿರುವುದು ಕಂಡುಬರುತ್ತಿದೆ. ಅರ್ಥಶಾಸ್ತ್ರದ ಪರಿಭಾಷೆಯಲ್ಲಿ ಆರ್ಥಿಕ ಅಭಿವೃದ್ಧಿ ಎಂದರೆ ಬಡರಾಷ್ಟ್ರಗಳು ತನ್ನ ಜನ ಸಮುದಾಯಕ್ಕೆ ಉನ್ನತ ಮಟ್ಟದ ನೈಜ ತಲಾ ಆದಾಯ ಮತ್ತು ಸುಧಾರಿತ ಜೀವನ ಮಟ್ಟವನ್ನು ಸಾಧಿಸುವುದಾಗಿದೆ.

ಇಂದು ಅಭಿವೃದ್ಧಿಯನ್ನು ತುಂಬಾ ವಿಶಾಲವಾದ ಅರ್ಥದಲ್ಲಿ ಬಳಸಲಾಗುತ್ತಿದೆ. ಅಭಿವೃದ್ಧಿಯನ್ನು ರಾಷ್ಟ್ರೀಯ ಆದಾಯದಲ್ಲಿನ ಹೆಚ್ಚಳ, ತಲಾ ಆದಾಯದಲ್ಲಿನ ಹೆಚ್ಚಳ, ಜನರಿಗೆ ಕಲ್ಯಾಣವನ್ನು ಒದಗಿಸುವುದರ ಜೊತೆಗೆ ಲಿಂಗಸಂಬಂಧಿ ಅಭಿವೃದ್ಧಿ ಮತ್ತು ಲಿಂಗಸಮಾನತೆಯನ್ನು ಸಹ ಅಭಿವೃದ್ಧಿ ಎಂದು ಪರಿಗಣಿಸಲಾಗುತ್ತದೆ. ಹೀಗೆ ಕಾಲಾಂತರದಲ್ಲಿ ಅಭಿವೃದ್ಧಿಯ ಪರಿಕಲ್ಪನೆಯು ಬದಲಾವಣೆಗೆ ಒಳಗಾಗುತ್ತಾ ಬಂದಿದೆ. ಆದರೆ ಈ ಅಭಿವೃದ್ಧಿ ಸಿದ್ಧಾಂತಗಳನ್ನು ವಿಶ್ಲೇಷಿಸಿದರೆ ಸಂಪ್ರದಾಯ ಪಂಥದ ಅಭಿವೃದ್ಧಿ ಸಿದ್ಧಾಂತಗಳು, ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತಗಳು ಮತ್ತು ಶ್ರಮ ಮಾರುಕಟ್ಟೆ ಸಿದ್ಧಾಂತಗಳು ಲಿಂಗ ನಿರಪೇಕ್ಷ ಮತ್ತು ಪುರುಷಶಾಹಿ ಧೋರಣೆಯನ್ನು ಒಳಗೊಂಡ ಸಿದ್ಧಾಂತಗಳಾಗಿರುವುದು ಕಂಡುಬರುತ್ತದೆ. ಆದರೆ ಇತ್ತೀಚೆಗೆ ೨೧ನೇ ಶತಮಾನದಲ್ಲಿ ಲಿಂಗ ಅಭಿವೃದ್ಧಿಯನ್ನು ಆರ್ಥಿಕ ಅಭಿವೃದ್ಧಿಯಲ್ಲಿ ಪರಿಗಣಿಸಲ್ಪಡುತ್ತಿರುವುದು ಕಂಡುಬರುತ್ತದೆ. ಹೀಗಾಗಿ ಅಭಿವೃದ್ಧಿಯ ಪರಿಕಲ್ಪನೆಯು ಕಾಲಕಾಲಕ್ಕೆ ಬದಲಾಗುತ್ತಿರುವುದು ಕಂಡುಬರುತ್ತದೆ.

## ೪.೧. ಸಂಪ್ರದಾಯ ಪಂಥದ ಅಭಿವೃದ್ಧಿ ಸಿದ್ಧಾಂತಗಳು

ಸಂಪ್ರದಾಯ ಪಂಥವು ೧೯೭೬ರಲ್ಲಿ 'ಅಡಂಸ್ಮಿತ್' ಅವರು "ವೆಲ್ತ್ ಆಫ್ ನೇಷನ್ಸ್" ಎಂಬ ಗ್ರಂಥವನ್ನು ಬರೆದು ಪ್ರಕಟಿಸಿದಾಗಿನಿಂದ ಪ್ರಾರಂಭಗೊಂಡು ಕಾರ್ಲ್ ಮಾರ್ಕ್ಸ್ ಮತ್ತು ಕೇನ್ಸ್ ಅವರ ಕಾಲದವರೆಗೂ ಪ್ರಚಲಿತವಾಗಿತ್ತು. ಈ ಪಂಥದ ಅರ್ಥಶಾಸ್ತ್ರಜ್ಞರು ಕೃಷಿ ಕ್ಷೇತ್ರಕ್ಕೆ ಅಧಿಕ ಪ್ರಾಮುಖ್ಯತೆ ನೀಡಿದರು. ಅಲ್ಲದೆ ಮಾನವ ಸಂಪತ್ತು ಅಥವಾ ಶ್ರಮ ಮತ್ತು ಬಂಡವಾಳ ಸಂಚಯನಕ್ಕೆ ಹೆಚ್ಚು ಪ್ರಾಸ್ತ್ಯವನ್ನು ನೀಡಿದರು. ಹಾಗೂ ಪರಿಪೂರ್ಣ ಪೈಪೋಟಿ ಮತ್ತು ಮುಕ್ತ ವ್ಯಾಪಾರಕ್ಕೆ ಅವಕಾಶ ನೀಡುವ ಮೂಲಕ ಅಭಿವೃದ್ಧಿಯಲ್ಲಿ ಸರಕಾರದ ಆಸ್ತಕ್ಷೇಪವನ್ನು ವಿರೋಧಿಸಿ ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ.

ಆ್ಯಡಂಸ್ಮಿತ್, ಡೇವಿಡ್ ರಿಕಾರ್ಡೋ, ಥಾಮಸ್ ರಾಬರ್ಟ್ ಮಾಲ್ಥಸ್ ಮತ್ತು ಜೆ.ಎಸ್.ಮಿಲ್ ಅವರು ಪ್ರಮುಖ ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರಾಗಿದ್ದಾರೆ.

### ಆ್ಯಡಂಸ್ಮಿತ್

ಆ್ಯಡಂಸ್ಮಿತ್ ಅವರು ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರಾಗಿದ್ದು, ೧೯೭೬ರಲ್ಲಿ 'ವೆಲ್ತ್ ಆಫ್ ನೇಷನ್ಸ್' ಎಂಬ ಗ್ರಂಥವನ್ನು ಬರೆದಿದ್ದಾರೆ ಮತ್ತು ಆ ಗ್ರಂಥದಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಕುರಿತು ಚರ್ಚಿಸುತ್ತಾರೆ. ಆರ್ಥಿಕ ಅಭಿವೃದ್ಧಿಯಲ್ಲಿ ವ್ಯವಹಾರಗಳು ಮುಕ್ತವಾಗಿ ನಡೆಯಬೇಕು ಅದಕ್ಕಾಗಿ ಯಾವುದೇ ತರಹದ ನಿರ್ಬಂಧ ಹಸ್ತಕ್ಷೇಪ ಇರಬಾರದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. "ಅರ್ಥವ್ಯವಸ್ಥೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಹಿತಕ್ಕಾಗಿ ದುಡಿಯುತ್ತಾನೆ. ಪ್ರತಿಯೊಬ್ಬ ವ್ಯಕ್ತಿಯನ್ನು ಸ್ವತಂತ್ರವಾಗಿ ಬಿಟ್ಟಲ್ಲಿ ತನಗೆ ಯಾವುದು ಒಳ್ಳೆಯದು ಎಂದು ತೀರ್ಮಾನಿಸುತ್ತಾನೆ. ಪ್ರತಿಯೊಬ್ಬ ವ್ಯಕ್ತಿಯು ಅವನ ಒಳಿತು ಕೆಡಕಿನ ಬಗ್ಗೆ ಅವನೇ ನ್ಯಾಯಾಧೀಶನಿದ್ದಂತೆ" ಹೀಗೆ ಪ್ರತಿಯೊಬ್ಬರು ತಮ್ಮ ತಮ್ಮ ಹಿತಕ್ಕಾಗಿ ದುಡಿದಾಗ ತನ್ನಿಂದ ತಾನೇ ಸಮಾಜದ ಅಥವಾ ರಾಷ್ಟ್ರದ ಹಿತ ಸಾಧನೆಯಾಗುತ್ತದೆ. ಇದನ್ನೇ ಆ್ಯಡಂಸ್ಮಿತ್ 'ಕಾಣದ ಕೈ' ಎಂದು ಕರೆದಿದ್ದಾರೆ".[೧] ಈ ಮೂಲಕ ಸ್ತ್ರೀ ಮತ್ತು ಪುರುಷರು ತಮಗಿಷ್ಟ ಬಂದ ಕೆಲಸ ಮಾಡಲು ಸ್ವತಂತ್ರರು ಎಂಬುದನ್ನು ಪ್ರತಿಪಾದಿಸುತ್ತಾರೆ.

'ಆರ್ಥಿಕ ಅಭಿವೃದ್ಧಿ ಉಂಟಾಗಲು ಪರಿಪೂರ್ಣ ಪೈಪೋಟಿ ಮಾರುಕಟ್ಟೆ ವ್ಯಕ್ತಿಗಳ ಆರ್ಥಿಕ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆ ನೀಡುವ ಮೂಲಕ ಮುಕ್ತ ವ್ಯಾಪಾರ ಮತ್ತು ಮುಕ್ತ ಆರ್ಥಿಕತೆಯನ್ನು ಪ್ರತಿಪಾದಿಸುತ್ತಾರೆ. ಮತ್ತು ಶ್ರಮವು ಸಂಪತ್ತಿನ ಮೂಲ ಶ್ರಮದ ವಿಭಜನೆಯು ಶ್ರಮದ ಉತ್ಪಾದಕತೆಯನ್ನು ಹೆಚ್ಚಿಸುವ ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಿ ಆರ್ಥಿಕ ಅಭಿವೃದ್ಧಿಗೆ ಕಾರಣವಾಗುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸುವ ಮೂಲಕ ಉತ್ಪಾದನೆಯಲ್ಲಿ "ಶ್ರಮ ವಿಭಜನೆ"ಯನ್ನು ಪ್ರೋತ್ಸಾಹಿಸುತ್ತಾರೆ. ಆರ್ಥಿಕ ಅಭಿವೃದ್ಧಿಯಲ್ಲಿ ಬಂಡವಾಳ ಮಹತ್ವದ ಪಾತ್ರ ವಹಿಸುತ್ತದೆ. ಈ ಬಂಡವಾಳ ಸಂಚಯನ

ಉಳಿತಾಯವನ್ನು ಅವಲಂಬಿಸಿದೆ. ಆದರೆ ಉಳಿತಾಯ ಮಾಡುವವರು ಬಂಡವಾಳಶಾಹಿಗಳು ಮತ್ತು ಭೂಮಾಲೀಕರು. ಶ್ರಮಿಕರು ಉಳಿತಾಯ ಮಾಡಲು ಅಸಮರ್ಥರು. ಏಕೆಂದರೆ ಅವರು ಪಡೆಯುವ ಕೂಲಿ 'ಜೀವನಾವಶ್ಯಕ ಕೂಲಿ' ಆಗಿರುತ್ತದೆ. ಇದರಿಂದ ಅವರು ಜೀವನಾವಶ್ಯಕ ವಸ್ತುಗಳನ್ನು ಕೊಳ್ಳಬಹುದು. ಉಳಿತಾಯ ಮಾಡಲು ಸಾಧ್ಯವಿಲ್ಲ. ಅದಕ್ಕಾಗಿ ಶ್ರಮಿಕರು ಉಳಿತಾಯ ಮಾಡುವಂತಾಗಲು 'ಕೂಲಿ ನಿಧಿ'ಯನ್ನು ಹೆಚ್ಚಿಸಬೇಕು. ಆಗ ಅವರು ಜೀವನಾವಶ್ಯಕ ಕೂಲಿಗಿಂತ ಅಧಿಕ ಕೂಲಿ ಪಡೆಯುತ್ತಾರೆ. ಆಗ ಅವರಿಂದ ಉಳಿತಾಯ ಸಾಧ್ಯವಾಗುತ್ತದೆ ಎಂದು ತಮ್ಮ ಸಿದ್ಧಾಂತವನ್ನು ಮಂಡಿಸುತ್ತಾರೆ.[೨] ಹೀಗೆ ಆರ್ಥಿಕ ಅಭಿವೃದ್ಧಿಯಲ್ಲಿ ಶ್ರಮ ಮಹತ್ವದ ಪಾತ್ರ ವಹಿಸುತ್ತದೆ ಎಂದು ಪ್ರತಿಪಾದಿಸಿ ಶ್ರಮಿಕರಿಗೆ ಅಧಿಕ ಕೂಲಿ ನೀಡಬೇಕು ಆಗ ಅವರು ಬಂಡವಾಳಶಾಹಿಗಳು ಮತ್ತು ಭೂಮಾಲೀಕರಿಗಿಂತ ಉಳಿತಾಯ ಮಾಡಿ ಆರ್ಥಿಕ ಅಭಿವೃದ್ಧಿಗೆ ಕಾರಣವಾಗುತ್ತಾರೆ ಎಂದು ಸಿದ್ಧಾಂತವನ್ನು ಮಂಡಿಸುತ್ತಾರೆ. ಆ ಮೂಲಕ ಶ್ರಮದಾಯಕ ಕೆಲಸ ಮಾಡುವ ಸ್ತ್ರೀ ಮತ್ತು ಪುರುಷರು ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಲ್ಲಿ ಪಾಲುದಾರರು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

**ಡೇವಿಡ್ ರಿಕಾರ್ಡೋ ಅವರ ಅಭಿವೃದ್ಧಿ ಸಿದ್ಧಾಂತ**

ಡೇವಿಡ್ ರಿಕಾರ್ಡೋ ಅವರು ಸಂಪ್ರದಾಯ ಪಂಥದ ನಾಯಕರಾಗಿದ್ದು, ೧೮೧೭ರಲ್ಲಿ "ದ ಪ್ರಿನ್ಸಿಪಲ್ಸ್ ಆಫ್ ಪೊಲಿಟಿಕಲ್ ಎಕಾನಮಿ ಆ್ಯಂಡ್ ಟ್ಯಾಕ್ಸೆಷನ್" ಎಂಬ ಕೃತಿಯನ್ನು ಬರೆಯುತ್ತಾರೆ. ಅದರಲ್ಲಿ ಅವರು ಆರ್ಥಿಕ ಅಭಿವೃದ್ಧಿ ಸಿದ್ಧಾಂತವನ್ನು ವಿವರಿಸಿದ್ದಾರೆ. ರಿಕಾರ್ಡೋ ಅವರು ತಮ್ಮ ಅಭಿವೃದ್ಧಿ ಸಿದ್ಧಾಂತದಲ್ಲಿ ಆದಾಯದ ಹಂಚಿಕೆ ಮತ್ತು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಅಲ್ಲದೆ ಆರ್ಥಿಕತೆಯಲ್ಲಿ ಕೃಷಿ ವಲಯವು ಪ್ರಮುಖವಾದ ಪಾತ್ರ ವಹಿಸುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸುವ ಮೂಲಕ 'ಗೇಣಿ' ಸಿದ್ಧಾಂತವನ್ನು ಅಭಿವೃದ್ಧಿಪಡಿಸಿದ್ದಾರೆ.

ರಿಕಾರ್ಡೋ ಅವರು "ಭೂಮಿಯ ಉತ್ಪನ್ನವನ್ನು ಭೂಮಾಲೀಕರು, ಬಂಡವಾಳದಾರರು ಮತ್ತು ಶ್ರಮಿಕರು ಹಂಚಿಕೊಳ್ಳುತ್ತಾರೆ. ಹೀಗಾಗಿ ಒಟ್ಟು ರಾಷ್ಟ್ರೀಯ ಉತ್ಪನ್ನವು ಈ ಮೂರು ವರ್ಗದ ಜನರಲ್ಲಿ ಗೇಣಿ, ಲಾಭ ಮತ್ತು ಕೂಲಿಗಳ ರೂಪದಲ್ಲಿ ಹಂಚಿಕೆಯಾಗುತ್ತದೆ" ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. 'ಲಾಭವು ಹೆಚ್ಚು ಅಥವಾ ಕಡಿಮೆ ಕೂಲಿಯನ್ನು ಅವಲಂಬಿಸಿದೆ, ಕೂಲಿಯು ಜೀವನಾವಶ್ಯಕ ವಸ್ತುಗಳ ಬೆಲೆಯನ್ನು ಅವಲಂಬಿಸಿದೆ ಮತ್ತು ಜೀವನಾವಶ್ಯಕ ವಸ್ತುಗಳ ಬೆಲೆ ಆಹಾರ ವಸ್ತುಗಳ ಬೆಲೆಯನ್ನು ಅವಲಂಬಿಸಿದೆ' ಎಂದು ತಮ್ಮ ಸಿದ್ಧಾಂತದಲ್ಲಿ ವಿವರಿಸುತ್ತಾರೆ. ಮುಂದುವರೆದು "ಅರ್ಥವ್ಯವಸ್ಥೆಯಲ್ಲಿ ಬಂಡವಾಳದಾರರು ಮಹತ್ವದ ಪಾತ್ರವೆನಿಸುತ್ತಾರೆ. ಅವರು ತಾವು ಪಡೆದ ಲಾಭವನ್ನು ಮರು ಹೂಡಿಕೆ ಮಾಡಿ ಆರ್ಥಿಕ ಅಭಿವೃದ್ಧಿಗೆ ಕಾರಣವಾಗುತ್ತಾರೆ ಮತ್ತು ಭೂಮಾಲೀಕರು ಕೃಷಿಯೋಗ್ಯ ಭೂಮಿಯನ್ನು ನೀಡುವ ಮೂಲಕ ಆರ್ಥಿಕ ಅಭಿವೃದ್ಧಿಗೆ ಕಾರಣವಾಗುತ್ತಾರೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ."[೩]

ಆದರೆ ಬಂಡವಾಳದಾರರು ಮತ್ತು ಭೂಮಾಲೀಕರಿಗಿಂತ ಅಧಿಕ ಸಂಖ್ಯೆಯಲ್ಲಿರುವ ಶ್ರಮಿಕ ವರ್ಗದವರು ತಮ್ಮ ಬಳಿ ಜೀವನ ನಡೆಸಲು ಯಾವ ಸಾಧನೆಗಳೂ ಇಲ್ಲದಿರುವುದರಿಂದ ಅವರು ಉದ್ಯೋಗಕ್ಕಾಗಿ ಬಂಡವಾಳದಾರರನ್ನು ಅವಲಂಬಿಸಿರುತ್ತಾರೆ. ಕೂಲಿನಿಧಿಯಿಂದ ಕೂಲಿ ಪಡೆಯುವುದರಿಂದ ಅವರು ಪಡೆಯುವ ಕೂಲಿ ಅತ್ಯಂತ ಕಡಿಮೆಯಾಗಿರುತ್ತದೆ. ಇದು ನೈಸರ್ಗಿಕ ನೈಜ ದರಕ್ಕೆ ಸಮಾನವಾಗಿರುತ್ತದೆ. ಈ 'ನೈಸರ್ಗಿಕ ನೈಜ ಕೂಲಿ'ಯ ದರವು ಶ್ರಮಿಕರ ಸಂಖ್ಯೆಯನ್ನು ನಿರಂತರವಾಗಿ ಕಾಯ್ದುಕೊಂಡು ಬರುವ ಒಂದು ದರವಾಗಿದ್ದು, ಅದು ಜೀವನಾವಶ್ಯಕ ಕೂಲಿಗೆ ಸಮಾನವಾಗಿರುತ್ತದೆ. ಹೀಗೆ ಶ್ರಮಿಕರು ಜೀವನಾವಶ್ಯಕ ಕೂಲಿಯನ್ನು ಪಡೆಯುವುದರಿಂದ ಅವರು ಉಳಿತಾಯ ಮಾಡುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಇದರಿಂದಾಗಿ ಅವರು ಆರ್ಥಿಕ ಅಭಿವೃದ್ಧಿಯಲ್ಲಿ ನೆರವಾಗುವುದಿಲ್ಲ ಎಂದು ತಮ್ಮ ಸಿದ್ಧಾಂತವನ್ನು ಮಂಡಿಸುತ್ತಾರೆ.[೪] ಮುಂದುವರೆದು ಸರಕಾರಿ ನೌಕರರು ಮತ್ತು ಸೈನಿಕರು ಅನುತ್ಪಾದಕ ವರ್ಗದವರು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹೀಗೆ ರಿಕಾರ್ಡೋ ಅವರ ಆರ್ಥಿಕ ಸಿದ್ಧಾಂತವು ಬಂಡವಾಳಶಾಹಿಗಳು ಮತ್ತು ಭೂಮಾಲೀಕರಿಂದ ಮಾತ್ರ ಬಂಡವಾಳ ಸಂಚಯನವಾಗಿ ಆರ್ಥಿಕ ಅಭಿವೃದ್ಧಿಯಾಗುತ್ತದೆ ಎಂದು ಸಿದ್ಧಾಂತವನ್ನು ಮಂಡಿಸುವ ಮೂಲಕ ಅಭಿವೃದ್ಧಿಗೆ ಕಾರಣಕರ್ತರಾದ ಶ್ರಮಿಕ ವರ್ಗದ ಸ್ತ್ರೀ ಮತ್ತು ಪುರುಷರನ್ನು ಕಡೆಗಣಿಸಿರುವುದು ಕಂಡುಬರುತ್ತದೆ.

**ಥಾಮಸ್ ರಾಬರ್ಟ್ ಮಾಲ್ಥಸ್ ಅವರ ಸಿದ್ಧಾಂತ**

ಥಾಮಸ್ ರಾಬರ್ಟ್ ಮಾಲ್ಥಸ್ ಅವರು ಸಂಪ್ರದಾಯ ಪಂಥದ ಮತ್ತೊಬ್ಬ ಅರ್ಥಶಾಸ್ತ್ರಜ್ಞರಾಗಿದ್ದಾರೆ. ಜನಸಂಖ್ಯಾ ಸಿದ್ಧಾಂತದಿಂದ ಹೆಚ್ಚು ಪ್ರಖ್ಯಾತಿಯನ್ನು ಪಡೆದು ಟಿ.ಆರ್.ಮಾಲ್ಥಸ್ ಅವರು ಅಭಿವೃದ್ಧಿಯ ಬಗ್ಗೆಯೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೧೮೨೦ರಲ್ಲಿ ಅವರು ರಚಿಸಿದ "ಪ್ರಿನ್ಸಿಪಲ್ಸ್ ಆಫ್ ಎಕಾನಮಿ" ಎಂಬ ಗ್ರಂಥದಲ್ಲಿ ಅಭಿವೃದ್ಧಿಯನ್ನು ಹೇಗೆ ಅವಿಚ್ಛಿನ್ನವಾಗಿ ಮುಂದುವರಿಸಿಕೊಂಡು ಹೋಗಬೇಕು ಎಂಬುದರ ಜೊತೆಗೆ ಹಿಂದುಳಿದ ದೇಶಗಳಲ್ಲಿ ಅಭಿವೃದ್ಧಿ ಪ್ರಕ್ರಿಯೆಯನ್ನು ಪ್ರಾರಂಭಿಸುವುದು ಹೇಗೆ ಎಂಬುದನ್ನು ಪ್ರತಿಪಾದಿಸಿದ್ದಾರೆ.

ಮಾಲ್ಥಸ್ ಅವರು ಅಭಿವೃದ್ಧಿಯು ತನ್ನಷ್ಟಕ್ಕೆ ತಾನೇ ಆಗುವುದಿಲ್ಲ. ಅಭಿವೃದ್ಧಿ ಉಂಟಾಗಲು ಜನರ ಸತತ ಪ್ರಯತ್ನ ಇದ್ದೇ ಇರುತ್ತದೆ. ಹೀಗಾಗಿ ಜನರ ಸತತ ಪ್ರಯತ್ನದಿಂದ ಅಭಿವೃದ್ಧಿ ಉಂಟಾಗುತ್ತದೆ ಎಂದು ಸಿದ್ಧಾಂತ ಮಂಡಿಸುತ್ತಾರೆ. ಅಭಿವೃದ್ಧಿ ಎನ್ನುವುದು ಜನಸಂಖ್ಯೆ ವೃದ್ಧಿಯಾದಂತೆ ತಾನಾಗಿಯೇ ಮೂಡಿ ಬರುವುದಿಲ್ಲ. ಜನಸಂಖ್ಯೆ ವೃದ್ಧಿಯಾದೊಡನೆ ಮಾರುಕಟ್ಟೆ ವಿಸ್ತರಗೊಳ್ಳುವುದಿಲ್ಲ. ಅದಕ್ಕಾಗಿ ಉತ್ಪಾದಿಸಿದ ಸರಕುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆ ಬರಲು ಜನರ ಬಳಿ ಹಣ ವಿರಬೇಕು. ಅವರ ಬಳಿ ಹಣ ವಿರಲು ಅವರು ಉದ್ಯೋಗದಲ್ಲಿರಬೇಕು. ಜನರು ಉದ್ಯೋಗದಲ್ಲಿರಲು ಉದ್ಯೋಗಗಳು

ನಿರ್ಮಾಣವಾಗಬೇಕು. ಉದ್ಯೋಗಗಳು ನಿರ್ಮಾಣವಾಗಲು ಬಂಡವಾಳದಾರರು ಬಂಡವಾಳ ಹೂಡಿಕೆ ಮಾಡಬೇಕು. ಅವರು ಬಂಡವಾಳ ಹೂಡಿಕೆ ಮಾಡಲು ಅವರು ಉತ್ಪಾದಿಸಿದ ಸರಕುಗಳಿಗೆ ಬೇಡಿಕೆಯಿರಬೇಕು. ಇದರಿಂದ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂದು ತಮ್ಮ ಅಭಿವೃದ್ಧಿ ಪರಿಕಲ್ಪನೆಯನ್ನು ವಿವರಿಸುತ್ತಾರೆ. ಅದಕ್ಕಾಗಿ ಪರಿಣಾಮಕಾರಿ ಬೇಡಿಕೆ ಅವಶ್ಯ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಉತ್ಪಾದಿಸಲ್ಪಟ್ಟು ಪೂರೈಕೆಯಾದ ವಸ್ತುಗಳನ್ನು ಹೀರಿಕೊಳ್ಳುವ ಅಗತ್ಯವಾದಂತಹ ಬೇಡಿಕೆಯೇ ಪರಿಣಾಮಕಾರಿ ಬೇಡಿಕೆಯಾಗಿದೆ.[೫]

ಒಂದು ರಾಷ್ಟ್ರದ ವರಮಾನ ಶ್ರಮ, ಬಂಡವಾಳ ಸಂಚಯನ, ಭೂಮಿಯ ಪೂರೈಕೆ ಮತ್ತು ತಂತ್ರಜ್ಞಾನವನ್ನು ಅವಲಂಬಿಸಿದೆ. ಇವುಗಳಲ್ಲಿ ಬಂಡವಾಳ ಸಂಚಯನವು ರಾಷ್ಟ್ರೀಯ ಆದಾಯಗ ಬೆಳವಣಿಗೆ ಮೇಲೆ ಪ್ರಭಾವ ಬೀರುವ ಪ್ರಮುಖ ಅಂಶವಾಗಿದೆ. ಬಂಡವಾಳ ಸಂಚಯನದಿಂದ ತಂತ್ರಜ್ಞಾನದ ಪ್ರಗತಿಯಾಗಿ ಉತ್ಪಾದನೆಯ ಹೊಸ ವಿಧಾನಗಳು ಮತ್ತು ಹೊಸ ಸರಕುಗಳನ್ನು ಮಾರುಕಟ್ಟೆಗೆ ಪೂರೈಸಲು ಸಾಧ್ಯವಾಗುತ್ತದೆ. ಇದರಿಂದ ಬಂಡವಾಳದಾರರು ಹೆಚ್ಚು ಲಾಭವನ್ನು ಪಡೆಯುತ್ತಾರೆ ಮತ್ತು ಮರು ಹೂಡಿಕೆ ಮಾಡುತ್ತಾರೆ. ಇದರಿಂದಾಗಿ ಉತ್ಪಾದನೆ ಮತ್ತು ಉದ್ಯೋಗಗಳು ಹೆಚ್ಚಾಗಿ ಆರ್ಥಿಕ ಅಭಿವೃದ್ಧಿಯು ಹೆಚ್ಚಾಗುತ್ತದೆ ಎಂದು ಮಾಲ್ಥಸ್ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಹಿಂದುಳಿದ ರಾಷ್ಟ್ರಗಳಲ್ಲಿ ಉತ್ತೇಜಕಗಳ ಅಭಾವ ಮತ್ತು ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಯಾವುದಾದರೂ ಹಿಂದುಳಿದಿರುವುದು ಜನರು ಕಡಿಮೆ ದುಡಿಯಲು ಕಾರಣ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[೬] ಹೀಗೆ ಮಾಲ್ಥಸ್ ಅವರು ಅಭಿವೃದ್ಧಿ ಎನ್ನುವುದು ರಾಷ್ಟ್ರದ ಜನರ ಸತತ ಪ್ರಯತ್ನದ ಫಲ ಎಂಬ ಅಭಿಪ್ರಾಯ ವ್ಯಕ್ತಪಡಿಸುವ ಮೂಲಕ ಶ್ರಮಿಕರ ಕೊಡುಗೆಯನ್ನು ತಿಳಿಸುತ್ತಾರೆ.

**ಜೆ.ಎಸ್.ಮಿಲ್ ಅವರ ಅಭಿವೃದ್ಧಿ ಸಿದ್ಧಾಂತ**

ಜೆ.ಎಸ್.ಮಿಲ್ ಅವರು ಸಂಪ್ರದಾಯ ಪಂಥದ ಕೊನೆಯ ಅರ್ಥಶಾಸ್ತ್ರಜ್ಞರಾಗಿದ್ದಾರೆ. ಇವರು ೧೮೪೮ರಲ್ಲಿ ರಚಿಸಿದ ಪ್ರಿನ್ಸಿಪಲ್ಸ್ ಆಫ್ ಪೊಲಿಟಿಕಲ್ ಎಕಾನಮಿ ಎಂಬ ಕೃತಿಯಲ್ಲಿ ತಮ್ಮ ಅಭಿವೃದ್ಧಿ ಸಿದ್ಧಾಂತವನ್ನು ವಿವರಿಸಿದ್ದಾರೆ. ತಮ್ಮ ಆರ್ಥಿಕ ಅಭಿವೃದ್ಧಿ ಸಿದ್ಧಾಂತದಲ್ಲಿ "ಆರ್ಥಿಕ ಅಭಿವೃದ್ಧಿಯು ಭೂಮಿ, ಶ್ರಮ ಮತ್ತು ಬಂಡವಾಳಗಾರರ ಕಾರ್ಯವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಭೂಮಿ ಮತ್ತು ಶ್ರಮ ಮೂಲಭೂತ ಉತ್ಪಾದನಾಂಗಗಳು ಬಂಡವಾಳ ಶ್ರಮ ಕೂಡಿಟ್ಟ ಉತ್ಪನ್ನದ ದಾಸ್ತಾನು ಎಂದು ಕರೆದಿದ್ದಾರೆ. ಭೂಮಿ ಮತ್ತು ಬಂಡವಾಳಗಳು ಶ್ರಮಶಕ್ತಿಗಿಂತ ವೇಗವಾಗಿ ವರ್ತಿಸಿ ಉತ್ಪಾದನೆಯನ್ನು ಹೆಚ್ಚಿಸಿದರೆ ಮಾತ್ರ ಸಂಪತ್ತು ಹೆಚ್ಚಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ".[೭]

ಜನಸಂಖ್ಯೆ ಅಧಿಕವಾಗಿ ಹೆಚ್ಚುತ್ತಿರುವುದರಿಂದ ಮತ್ತು ಆಹಾರದ ಉತ್ಪಾದನೆ ಮಂದಗತಿಯಲ್ಲಿ ಸಾಗುವುದರಿಂದ ಹೆಚ್ಚುತ್ತಿರುವ ಜನಸಂಖ್ಯೆಗೆ ಅಪಾಯ ಕಾದಿದೆ "ಅದಕ್ಕಾಗಿ ಜನಸಂಖ್ಯೆ ನಿಯಂತ್ರಣ

ಅತೀ ಅವಶ್ಯಕ ಎಂಬ ಅಭಿಪ್ರಾಯ ಮಂಡಿಸುತ್ತಾರೆ. ಇಲ್ಲಿ ಅವರು ಜನಸಂಖ್ಯೆ ಎಂದರೆ 'ದುಡಿಯುವ ವರ್ಗಗಳ ಸಂಖ್ಯೆ' ಎಂಬ ಅರ್ಥದಲ್ಲಿ ಬಳಸುತ್ತಾರೆ. ಅದಕ್ಕಾಗಿ ದುಡಿಯುವ ವರ್ಗದ ಪರಿಸ್ಥಿತಿಯನ್ನು ಉತ್ತಮ ಪಡಿಸಲು ಜನಸಂಖ್ಯೆ ಬೆಳವಣಿಗೆಯ ನಿಯಂತ್ರಣ ಅವಶ್ಯಕ. ಈ ಜನಸಂಖ್ಯೆಯನ್ನು ನಿಯಂತ್ರ ಮಾಡುವುದರಿಂದ ದುಡಿಯುವ ವರ್ಗ ಸಹ ಬಂಡವಾಳ ಸಂಚಯನದ ಮತ್ತು ತಾಂತ್ರಿಕ ಅಭಿವೃದ್ಧಿಯ ಫಲಿತಗಳನ್ನು ಅನುಭವಿಸಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ'. ಅಲ್ಲದೆ ನೈತಿಕ ನಿಯಂತ್ರಣಕ್ಕೆ ಎದುರಾಗಿ ಜನನ ನಿಯಂತ್ರಣವನ್ನು ಪ್ರತಿಪಾದಿಸುತ್ತಾ, ''ಮಹಿಳೆಯನ್ನು ವಿಚಾರಿಸದೆ ಅವಳಿಗೆ ವೈವಾಹಿಕ ತಾಯ್ತನವನ್ನು ಬಲವಂತವಾಗಿ ಹೇರುವುದನ್ನು ವಿರೋಧಿಸುತ್ತಾರೆ. ಅಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯ ನೀಡಬೇಕೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.''[೮]

ಮಿಲ್ ಅವರು ಕಾರ್ಮಿಕರಿಗೆ ಕೂಲಿಯನ್ನು 'ಕೂಲಿನಿಧಿ' ಅಥವಾ ಬಂಡವಾಳದಿಂದ ನೀಡಲಾಗುತ್ತದೆ. ಹೀಗಾಗಿ ಕೂಲಿಯ ದರವು ಕೂಲಿನಿಧಿಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಕೂಲಿಯ ದರವು ಕೂಲಿನಿಧಿ ಮತ್ತು ದುಡಿಯುವ ಜನಸಂಖ್ಯೆಯನ್ನು ಅವಲಂಬಿಸಿದೆ. ಹೀಗಾಗಿ ಕೂಲಿಯ ದರವನ್ನು ಕೂಲಿನಿಧಿಯನ್ನು ಹೆಚ್ಚಿಸುವುದರಿಂದ ಅಥವಾ ದುಡಿಯುವ ಜನರ ಸಂಖ್ಯೆಯನ್ನು ನಿಯಂತ್ರಿಸುವುದರಿಂದ ಹೆಚ್ಚಿಸಬಹುದು ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಬಂಡವಾಳ ಸಂಚಯನದ ಉಳಿತಾಯ ಅತಿಮುಖ್ಯ ಉಳಿತಾಯದಿಂದ ಬಂಡವಾಳ ಸಂಚಯನವಾಗುತ್ತದೆ. ಅಲ್ಲದೆ ಲಾಭದ ಹೆಚ್ಚಳದಿಂದಲೂ ಬಂಡವಾಳ ಸಂಚಯನ ಅಧಿಕವಾಗುತ್ತದೆ. ಇದರಿಂದ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮುಂದುವರೆದು ಇತರ ಸಂಪ್ರದಾಯ ಅರ್ಥಶಾಸ್ತ್ರಜ್ಞರಂತೆ ಮುಕ್ತ ವ್ಯಾಪಾರ ಮತ್ತು ಸರಕಾರದ ತಾಟಸ್ಥ ನೀತಿಯನ್ನು ಇವರು ಪ್ರತಿಪಾದಿಸುತ್ತಾರೆ. 'ಕೂಲಿಯ ಅಭಿವೃದ್ಧಿಯ ಶತ್ರು'. ಆದ್ದರಿಂದ ಕೂಲಿಯನ್ನು ನಿಷೇಧಿಸಿ ಸಹಕಾರಿ ಉತ್ಪಾದನೆಯನ್ನು ಮಾಡಬೇಕು. ಗೇಣಿಯ ಮೇಲೆ ತೆರಿಗೆ ವಿಧಿಸಬೇಕು ಮತ್ತು ಅನುವಂಶೀಯ ಆಸ್ತಿಯ ಹಕ್ಕನ್ನು ನಿಯಂತ್ರಿಸಬೇಕು ಎಂಬ ಅಭಿಪ್ರಾಯವನ್ನು ಮಿಲ್ ಅವರು ವ್ಯಕ್ತಪಡಿಸುತ್ತಾರೆ.[೯]

ಎಲ್ಲ ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರು ಮುಕ್ತ ವ್ಯಾಪಾರ, ಸರಕಾರದ ತಟಸ್ಥತೆ, ಬಂಡವಾಳ ಸಂಚಯ ಮತ್ತು ಕೂಲಿನಿಧಿ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆರ್ಥಿಕ ಅಭಿವೃದ್ಧಿಯಲ್ಲಿ ಶ್ರಮ ಮತ್ತು ಶ್ರಮದಲ್ಲಿ ತೊಡಗಿದ ಕಾರ್ಮಿಕರು ಭಾಗವಹಿಸುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲ ಚಿಂತಕರು ಬಂಡವಾಳಶಾಹಿಗಳಿಂದ ಉಂಟಾಗುವ ಮತ್ತು ಭೂಮಾಲೀಕರಿಂದ ಉಂಟಾಗುವ ಬಂಡವಾಳ ಸಂಚಯನದಿಂದ ಮಾತ್ರ ಅಭಿವೃದ್ಧಿ ಉಂಟಾಗುತ್ತದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದರಿಂದಾಗಿ ಈ ಎಲ್ಲ ಸಿದ್ಧಾಂತಗಳು ಬಂಡವಾಳಶಾಹಿ ಮತ್ತು ಪುರುಷಶಾಹಿ ಧೋರಣೆ ಸಿದ್ಧಾಂತಗಳೆಂಬುದು ಸ್ಪಷ್ಟವಾಗುತ್ತದೆ.

## ೪.೨. ಮಾರ್ಕ್ಸ್‌ವಾದಿ ಅಭಿವೃದ್ಧಿ ಸಿದ್ಧಾಂತ

ಮಾರ್ಕ್ಸ್‌ವಾದಿ ಅಭಿವೃದ್ಧಿ ಸಿದ್ಧಾಂತವು ಕಾರ್ಲ್‌ಮಾರ್ಕ್ಸ್ ಮತ್ತು ಸಮಾಜವಾದದ ಪ್ರತಿಪಾದಕರಿಂದ ಅಭಿವೃದ್ಧಿಗೊಂಡ ಒಂದು ಸಿದ್ಧಾಂತವಾಗಿದೆ. ಸೈಂಟ್ ಸಿಮೋನ್, ರಾಬರ್ಟ್ ಓಪಿನ್ ಮತ್ತು ಕಾರ್ಲ್‌ಮಾರ್ಕ್ಸ್ ಅವರು ಸಮಾಜವಾದದ ಪ್ರತಿಪಾದಕರು. ಕಾರ್ಲ್‌ಮಾರ್ಕ್ಸ್ ಅವರು 'ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ' ಮತ್ತು 'ದಾಸ್ ಕ್ಯಾಪಿಟಲ್' ಎಂಬ ಕೃತಿಯಲ್ಲಿ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ. ಇತಿಹಾಸದ ನಿರೂಪಣೆಯನ್ನು ಮಾಡುತ್ತಾ "ಸಮಾಜದ ವಿವಿಧ ವರ್ಗಗಳ ಜನರ ನಡುವಿನ ಸತತವಾದ ಆರ್ಥಿಕ ಹೋರಾಟವೇ ಇತಿಹಾಸ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮಾರ್ಕ್ಸ್ ಅವರು ಈವರೆಗೆ ಆಗಿ ಹೋದ ಎಲ್ಲ ಸಮಾಜಗಳ ಇತಿಹಾಸವೆಂದರೆ ವರ್ಗ ಕಲಹಗಳ ಇತಿಹಾಸವಾಗಿದೆ. ಸ್ವತಂತ್ರರು-ಗುಲಾಮರು, ದೊರೆಗಳು-ಆಳುವವರು, ಒಡೆಯರು-ದಾಸರು ಅಥವಾ ಒಂದೇ ಮಾತಿನಲ್ಲಿ ಹೇಳುವುದಾದರೆ ಶೋಷಿಸುವವರು ಮತ್ತು ಶೋಷಿತ ವರ್ಗಗಳ ನಡುವೆ ಕಲಹ ನಡೆದು ಬಂದಿದೆ[೧೦] ಎಂದು ಇತಿಹಾಸವನ್ನು ವ್ಯಾಖ್ಯಾನಿಸುತ್ತಾರೆ. ಇತಿಹಾಸ ಶೋಷಿಸುವವರು ಮತ್ತು ಶೋಷಿತರ ನಡುವಿನ ಹೋರಾಟ ಎಂಬ ಅಂಶ ಇಂತಹ ಪ್ರಸ್ತುತ ಸ್ಥಿತಿಗೆ ಅನ್ವಯವಾಗುತ್ತಿದೆ ಎಂದು ಪುರುಷ ಶೋಷಣೆಯ ವಿರುದ್ಧ ಸ್ತ್ರೀಯರ ಹೋರಾಟವು ಮಾರ್ಕ್ಸ್‌ವಾದಿ ನೆಲೆಯಲ್ಲಿ ಸಾಗುತ್ತಿರುವುದು ಕಂಡುಬರುತ್ತಿದೆ.

ಮಾರ್ಕ್ಸ್ ಅವರು ಬಂಡವಾಳಶಾಹಿಗಳ ವಿರೋಧಿಗಳಾಗಿದ್ದಾರೆ. "ಬಂಡವಾಳಶಾಹಿಗಳು ಕಾರ್ಮಿಕರಿಗೆ ಕಡಿಮೆ ಕೂಲಿಯನ್ನು ನೀಡಿ ಅಧಿಕ ಲಾಭವನ್ನು ಪಡೆಯುತ್ತಾರೆ. ಆ ಲಾಭದಿಂದ ಅಧಿಕ ಸಂಪತ್ತನ್ನು ಹೊಂದುತ್ತಾರೆ. ಆ ಮೂಲಕ ಕಾರ್ಮಿಕರನ್ನು ಶೋಷಿಸುತ್ತಾರೆ ಎಂದು ತಮ್ಮ ಸಿದ್ಧಾಂತ ಮಂಡಿಸುತ್ತಾರೆ. ಬಂಡವಾಳಶಾಹಿಗಳು ಪಡೆಯುವ ಲಾಭವು 'ಅತಿರಿಕ್ತ ಮೌಲ್ಯ'ವಾಗಿದೆ ಅಥವಾ 'ಹೆಚ್ಚುವರಿ ಮೌಲ್ಯ'ವಾಗಿದೆ ಎಂದಿದ್ದಾರೆ."[೧೧] ಬಂಡವಾಳಶಾಹಿಗಳು ಕಾರ್ಮಿಕರಿಗೆ ಕಡಿಮೆ ಕೂಲಿ ನೀಡಿ ಕಾರ್ಮಿಕರು ಉತ್ಪಾದಿಸುವ ಉತ್ಪನ್ನಗಳನ್ನು ಮಾರುಕಟ್ಟೆಯಲ್ಲಿ ಕಾರ್ಮಿಕರಿಗೆ ನೀಡುವ ಎರಡು ಪಟ್ಟು ಕೂಲಿಯ ಬೆಲೆಗೆ ಮಾರಾಟ ಮಾಡುತ್ತಾರೆ. ಇದರಿಂದ ಬಂದ ಹೆಚ್ಚುವರಿ ಹಣವೇ ಅತರಿಕ್ತ ಮೌಲ್ಯವಾಗಿದೆ. ಹೀಗೆ ಬಂಡವಾಳಶಾಹಿಗಳು ಕಾರ್ಮಿಕ ವರ್ಗವನ್ನು ಕಡಿಮೆ ಕೂಲಿ ನೀಡುವ ಮೂಲಕ ಶೋಷಣೆ ಮಾಡುತ್ತಾರೆ ಎಂಬ ವಾದ ಮಂಡಿಸುತ್ತಾರೆ. ಇಂದು ಇದೇ ರೀತಿಯ ವ್ಯವಸ್ಥೆಯ ಲಿಂಗಸಂಬಂಧಿ ಆಯಾಮದ ನೆಲೆಯಲ್ಲಿ ಸಮಾಜದಲ್ಲಿ ನಡೆಯುತ್ತಿವೆ. ಇಲ್ಲಿ ಬಂಡವಾಳ ಶಾಹಿಗಳು ಮತ್ತು ಪುರುಷಶಾಹಿ ವರ್ಗ ಮಹಿಳಾ ಕಾರ್ಮಿಕರಿಗೆ ಕಡಿಮೆ ಕೂಲಿ ನೀಡುವ ಮೂಲಕ ಶೋಷಿಸುತ್ತಿರುವುದು ಅಸಂಘಟಿತ ವಲಯ ಅಥವಾ ಅನೌಪಚಾರಿಕ ವಲಯದಲ್ಲಿ ಕಂಡುಬರುತ್ತಿದೆ.

'ಬಂಡವಾಳಶಾಹಿಗಳು ಇನ್ನೂ ಹೆಚ್ಚಿನ ಲಾಭ ಪಡೆಯುವ ಉದ್ದೇಶದಿಂದ ಮತ್ತು ಉತ್ಪಾದನಾ ವೆಚ್ಚ ಕಡಿಮೆ ಮಾಡುವುದರಿಂದ ಉತ್ಪಾದನೆಯಲ್ಲಿ ಯಂತ್ರೋಪಕರಣಗಳನ್ನು ಬಳಸುತ್ತಾರೆ. ಇದರಿಂದ

ಅನೇಕ ಕಾರ್ಮಿಕರು ಉದ್ಯೋಗ ಕಳೆದುಕೊಂಡು ನಿರುದ್ಯೋಗಿಗಳಾಗುತ್ತಾರೆ. ಹೀಗೆ ಸಮಾಜದಲ್ಲಿ ನಿರುದ್ಯೋಗಿಗಳಾಗಿ ಉಳಿದ ಕಾರ್ಮಿಕರು ಮತ್ತು ಯಂತ್ರೋಪಕರಣಗಳ ಬಳಕೆಯಿಂದ ಉದ್ಯೋಗ ಕಳೆದುಕೊಂಡ ಕಾರ್ಮಿಕರು ಸೇರಿ 'ಕೈಗಾರಿಕಾ ಮೀಸಲು ಪಡೆ' ಎಂಬ ನಿರುದ್ಯೋಗಿಗಳ ವರ್ಗ ನಿರ್ಮಾಣವಾಗುತ್ತದೆ. ವರ್ಗ ಬಂಡವಾಳಗಾರರ ವಿರುದ್ಧ ಹೋರಾಟ ಮುಂದುವರಿಸುತ್ತದೆ. ಹೀಗೆ ಬಂಡವಾಳಶಾಹಿ ಮತ್ತು ಕಾರ್ಮಿಕ ವರ್ಗದ ನಡುವೆ ಹೋರಾಟ ನಡೆದು ಬಂಡವಾಳಶಾಹಿ ಅವನತಿ ಹೋದುತ್ತದೆ. ಆಗ ಕಾರ್ಮಿಕರ ಅಧಿಕಾರವಿರುವ ಸಮಾಜದ ನಿರ್ಮಾಣವಾಗುತ್ತದೆ. ಕಾಲಾಂತರದಲ್ಲಿ ಇದು ನಶಿಸಿ ಹೋಗಿ ಸಮತಾವಾದ ನಿರ್ಮಾಣವಾಗುತ್ತದೆ ಎಂದು ಕಾರ್ಲ್‌ಮಾರ್ಕ್ಸ್ ತಮ್ಮ ಸಿದ್ಧಾಂತವನ್ನು ಮಂಡಿಸುತ್ತಾರೆ.[೨]

ಇಂದು ಸಹ ಆರ್ಥಿಕ ವ್ಯವಸ್ಥೆಯಲ್ಲಿ ಬಂಡವಾಳಶಾಹಿಯ ನಾಶದ ಜೊತೆಗೆ ಪುರುಷಶಾಹಿಯ ನಾಶ ಅಗತ್ಯವಾಗಿದೆ. ಏಕೆಂದರೆ ಇಂದು ಮಹಿಳಾ ಕಾರ್ಮಿಕರು ಮತ್ತು ಮಹಿಳೆಯರು ಬಂಡವಾಳಶಾಹಿಯ ಶೋಷಣೆಯ ಜೊತೆಗೆ ಪುರುಷರ ಶೋಷಣೆಯನ್ನು ಅನುಭವಿಸುತ್ತಿದ್ದಾಳೆ. ಹೀಗಾಗಿ ಇಂದು ಪುರುಷಶಾಹಿ ನಿರ್ಮೂಲನೆಗೆ ಹೋರಾಟ ನಡೆಯಬೇಕಾದುದು ಅಗತ್ಯವಿದೆ.

### ೪.೩. ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತ

ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರು 'ಬಂಡವಾಳ ಸಂಚಯನ' ಮತ್ತು 'ಶ್ರಮಕ್ಕೆ ಪ್ರಾಮುಖ್ಯಕತೆ'ಯನ್ನು ನೀಡಿ ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಆದರೆ ಆಧುನಿಕ ಪಂಥದ ಅರ್ಥಶಾಸ್ತ್ರಜ್ಞರು ಮುಂದುವರೆದ ರಾಷ್ಟ್ರಗಳಿಗೆ ಅಭಿವೃದ್ಧಿ ಸಾಧಿಸುವ ಬಗೆ ಮತ್ತು ಅಭಿವೃದ್ಧಿಯನ್ನು ಮುಂದುವರೆಸಿಕೊಂಡು ಹೋಗುವ ಕುರಿತು ಸಿದ್ಧಾಂತ ಮಂಡಿಸಿದ್ದಾರೆ. ಹಿಂದುಳಿದ ರಾಷ್ಟ್ರಗಳಿಗೆ ಅಭಿವೃದ್ಧಿಯನ್ನು ಸಾಧಿಸಲು ಕೈಗೊಳ್ಳುವ ಕ್ರಮಗಳ ಬಗ್ಗೆ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಹೀಗಾಗಿ ಈ ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತಗಳು ರಾಷ್ಟ್ರಗಳ ಸಿದ್ಧಾಂತಗಳಾಗಿವೆ. ಇವುಗಳಲ್ಲಿ ಸಹ ಲಿಂಗಸಂಬಂಧಿ ಅಭಿವೃದ್ಧಿಯ ಚಿಂತನೆ ಕಂಡುಬರುವುದಿಲ್ಲವಾಗಿದೆ.

ಆಧುನಿಕ ಪಂಥದ ಅಭಿವೃದ್ಧಿ ಸಿದ್ಧಾಂತಗಳ ಪ್ರತಿಪಾದಕರಲ್ಲಿ ಒಬ್ಬರಾದ 'ಶುಂಪೀಟರ್' ಅವರು 'ಆವಿಷ್ಕಾರ'ವೇ ಅಭಿವೃದ್ಧಿ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಆವಿಷ್ಕಾರವೆಂದರೆ ವೆಚ್ಚಗಳನ್ನು ತಗ್ಗಿಸಲು ಮತ್ತು ಲಾಭಗಳಿಸುವ ಉದ್ದೇಶಕ್ಕಾಗಿ ಸದ್ಯ ಆಸ್ತಿತ್ವದಲ್ಲಿರುವ ಉತ್ಪಾದನೆಯ ಪದ್ಧತಿಯನ್ನು ಬದಲಿಸಿ ಹೊಸತನವನ್ನು ತರುವುದು ಎಂದು ಶುಂಪೀಟರ್ ಅವರು ಆವಿಷ್ಕಾರವನ್ನು ವ್ಯಾಖ್ಯಾನಿಸಿದ್ದಾರೆ. 'ಆವಿಷ್ಕಾರ ಎಂಬುದು ಹೊಸ ವಸ್ತುಗಳನ್ನು ಮಾರುಕಟ್ಟೆಗೆ ಬಿಡುವುದು, ಹೊಸ ಉತ್ಪಾದನಾ ವಿಧಾನ, ಹೊಸ ಮಾರುಕಟ್ಟೆಯನ್ನು ಶೋಧಿಸುವುದು, ಹೊಸ ಸಂಪನ್ಮೂಲಗಳನ್ನು ಹುಡುಕುವುದು ಮತ್ತು

ನವೀನಶೈಲಿಯ ಉದ್ಯಮದ ರಚನೆ ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ಇವುಗಳನ್ನು ಉತ್ಪಾದನಾ ವ್ಯವಸ್ಥೆಯಲ್ಲಿ ಅವಳವಡಿಸಿಕೊಂಡ ರಾಷ್ಟ್ರ ಅಭಿವೃದ್ಧಿ ಸಾಧಿಸುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ'.[೧೩] ನವ ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರಾದ ಶ್ರೀಮತಿ ಜೋನ್ ರಾಬಿನ್‌ಸನ್ ಅವರು ಬಂಡವಾಳ ಸಂಗ್ರಹಣ ಮಾದರಿ ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ. ಇದರ ಪ್ರಕಾರ 'ಲಾಭ ದೊರಕದಿದ್ದರೆ ಬಂಡವಾಳದಾರರು ಬಂಡವಾಳ ಸಂಗ್ರಹಣೆ ಮಾಡಲು ಸಾಧ್ಯವಿಲ್ಲ ಮತ್ತು ಬಂಡವಾಳ ಸಂಗ್ರಹಣೆ ಮಾಡಿದ್ದರೆ ಲಾಭದೊರೆಯುವುದಿಲ್ಲ'.[೧೪] ಅದೇ ಕೃತಿ, ಡಾ.ಪ್ರಭಾಕರ ಶಿಶಿಲ ಎಂದು ಹೇಳುವ ಮೂಲಕ ಬಂಡವಾಳದಾರರನ್ನು ಮತ್ತು ಬಂಡವಾಳ ಸಂಗ್ರಹಣೆಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ. ಬಂಡವಾಳ ಸಂಗ್ರಹಣೆ ಮತ್ತು ಲಾಭಗಳೆರಡೇ ಆರ್ಥಿಕ ಅಭಿವೃದ್ಧಿಗೆ ಮೂಲ ಕಾರಣ ಎಂದು ತಮ್ಮ ಸಿದ್ಧಾಂತವನ್ನು ಮಂಡಿಸುತ್ತಾರೆ.

ಬಡತನದ ಆ್ಯಡಂಸ್ಮಿತ್ ಎಂದು ಖ್ಯಾತಿ ಪಡೆದ ಗುನ್ನಾರ್ ಮಿರ್ಡಾಲ್ ಅವರು ಬಡತನ, ಹಸಿವು ಮತ್ತು ಅಂತಾರಾಷ್ಟ್ರಿಯ ಆರ್ಥಿಕ ಅಸಮಾನತೆಗಳ ಕುರಿತು ತಮ್ಮ ಸಿದ್ಧಾಂತವನ್ನು ಮಂಡಿಸಿದ್ದಾರೆ. ತಮ್ಮ ಮೇರು ಕೃತಿಯಾದ 'ಏಷಿಯನ್ ಡ್ರಾಮಾ'ದಲ್ಲಿ ಭಾರತ, ಪಾಕಿಸ್ತಾನ, ಶ್ರೀಲಂಕಾ, ಬರ್ಮ, ಮಲೇಶಿಯಾ ಮುಂತಾದ ಏಶಿಯಾದ ರಾಷ್ಟ್ರಗಳ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ತಮ್ಮ ಇನ್ನೊಂದು ಕೃತಿಯಾದ 'ಅಮೆರಿಕನ್ ಡೀಲಿಮ್'(American Dilemma) ಎಂಬುದರಲ್ಲಿ ಅಮೆರಿಕಾದ ನಿಗ್ರೋಗಳ ಸಮಸ್ಯೆಯ ಬಗ್ಗೆ ಚರ್ಚಿಸಿದ್ದಾರೆ. ಹೀಗೆ ಇವರು ಬಡತನ ಮತ್ತು ಶೋಷಣೆಗೆ ಪ್ರಾಮುಖ್ಯತೆ ನೀಡಿ ತಮ್ಮ ಸಿದ್ಧಾಂತ ಮಂಡಿಸಿದ್ದಾರೆ.

ಮಿರ್ಡಾಲ್ ಅವರು ತಮ್ಮ ಅಭಿವೃದ್ಧಿ ಸಿದ್ಧಾಂತದಲ್ಲಿ 'ಹಿಮ್ಮುಖ ಸಂಚಲನ ಪರಿಣಾಮ' ಮತ್ತು 'ವೃತ್ತಾಕಾರದ ಪರಿಣಾಮಗಳ' ಬಗ್ಗೆ ವಿವರಿಸಿದ್ದಾರೆ. ಆರ್ಥಿಕ ಸಮಾನತೆ ತರಲು ಸರಕಾರದ ಪಾತ್ರ ಅತೀ ಅವಶ್ಯ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬಡರಾಷ್ಟ್ರಗಳಲ್ಲಿ ಅಭಿವೃದ್ಧಿಯ ದರ ಕಡಿಮೆ ಇರುವುದರಿಂದ ಮತ್ತು ಆರ್ಥಿಕ ಅಸಮಾನತೆ ಇರುವುದರಿಂದ ಬಡರಾಷ್ಟ್ರಗಳು ಇನ್ನೂ ಬಡರಾಷ್ಟ್ರಗಳಾಗುತ್ತವೆ. ಶ್ರೀಮಂತ ಮತ್ತು ಬಡರಾಷ್ಟ್ರಗಳು ವ್ಯಾಪಾರಕ್ಕೆ ತೊಡಗಿದಾಗ ವ್ಯಾಪಾರದ ಸಂಪೂರ್ಣ ಲಾಭವನ್ನು ಶ್ರೀಮಂತ ರಾಷ್ಟ್ರಗಳು ಪಡೆದುಕೊಳ್ಳುತ್ತವೆ. ಇದರಿಂದ ಬಡರಾಷ್ಟ್ರಗಳಿಗೆ ಅನಾನುಕೂಲತೆ ಉಂಟಾಗುತ್ತದೆ. ಹಿಂದುಳಿದ ರಾಷ್ಟ್ರಗಳಲ್ಲಿ ಕೈಗಾರಿಕೆ ಹಿಂದುಳಿದಿದೆ ಹಾಗೂ ಅವುಗಳ ವ್ಯವಹಾರ ಶಕ್ತಿ ಕಡಿಮೆಯಿದೆ. ಮಾರುಕಟ್ಟೆಯ ಒತ್ತಡಗಳು ಬಡರಾಷ್ಟ್ರವನ್ನು ಇನ್ನಷ್ಟು ಒಡೆತನಕ್ಕೆ ತಳ್ಳುತ್ತದೆ. ಇದರಿಂದ ಆ ರಾಷ್ಟ್ರದ ಜನ ಜೀವನಮಟ್ಟ ಇನ್ನಷ್ಟು ಕುಸಿಯುತ್ತದೆ. ಹೀಗಾಗಿ ಬಡರಾಷ್ಟ್ರಗಳು ಇನ್ನಷ್ಟು ಬಡತನದೆಡೆಗೆ ಹೋಗುತ್ತವೆ. "ಬಡರಾಷ್ಟ್ರಗಳು ಮತ್ತೆ ಬಡತನದೆಡೆಗೆ ಹೋಗುವ ಕ್ರಿಯೆಯನ್ನು ಮಿರ್ಡಾಲ್ ಅವರು 'ಹಿಮ್ಮುಖ ಸಂಚಲನ ಪರಿಣಾಮ" ಎಂದು ಕರೆದಿದ್ದಾರೆ.[೧೫] ಹೀಗೆ ಬಡರಾಷ್ಟ್ರಗಳು

ಮತ್ತೆ ಬಡತನಕ್ಕೆ ಸಿಲುಕುತ್ತವೆ ಎಂಬುದು ಇವರ ವಾದ. ಅದಕ್ಕಾಗಿ ಬಡರಾಷ್ಟ್ರಗಳನ್ನು ಬಡತನದಿಂದ ದೂರ ಮಾಡಲು ಆ ರಾಷ್ಟ್ರಗಳಲ್ಲಿ ವೃತ್ತಾಕಾರದ ಕಾರ್ಯಕಾರಣ ಪರಿಣಾಮ ಅತೀ ಅವಶ್ಯಕ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಈ ತತ್ವದ ಪ್ರಕಾರ ಒಂದು ಪ್ರದೇಶದಲ್ಲಾದ ಪ್ರಗತಿಯು ಬೇರೆ ಪ್ರದೇಶಗಳಿಗೂ ಹರಡುತ್ತದೆ. ಆಗ ಆ ರಾಷ್ಟ್ರಗಳಲ್ಲಿ ಆರ್ಥಿಕ ಅಭಿವೃದ್ಧಿಯಾಗುತ್ತದೆ ಎಂದಿದ್ದಾರೆ. ಅದಕ್ಕಾಗಿ ಸರಕಾರ ಮಧ್ಯೆ ಪ್ರವೇಶಿಸಿ ಸಮಾನತೆ ನೀತಿ ಅನುಸರಿಸಬೇಕು ಎಂದು ಸೂಚಿಸುತ್ತಾರೆ.

ಪ್ರೊ.ಡಬ್ಲ್ಯೂ ಅರ್ಥರ್ ಲೂಯಿಸ್ ಅವರು ಅಪರಿಮಿತ ಶ್ರಮದ ಬೆಳವಣಿಗೆ ಸಿದ್ಧಾಂತವನ್ನು ಮಂಡಿಸಿದ್ದಾರೆ. ತಮ್ಮ ಕೃತಿಯಾದ "Economic Development with unlimited suppller of Labour"ದಲ್ಲಿ ಈ ಸಿದ್ಧಾಂತವನ್ನು ವಿವರಿಸಿದ್ದಾರೆ. ಅವರು ತಮ್ಮ ಸಿದ್ಧಾಂತದಲ್ಲಿ ಸಾಂಪ್ರದಾಯಿಕ ಕೃಷಿ ವಲಯದಲ್ಲಿನ ಹೆಚ್ಚುವರಿ ಜನರು ಆಧುನಿಕ ವಲಯಕ್ಕೆ ವಲಸೆ ಹೋಗುವ ಮೂಲಕ ಅಧಿಕ ಶ್ರಮದ ಸಮಸ್ಯೆಯನ್ನು ನಿವಾರಿಸಬಹುದು ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮುಂದುವರೆದು ಸಾಂಪ್ರದಾಯಿಕ ಕೃಷಿ ವಲಯದಲ್ಲಿನ ಹೆಚ್ಚುವರಿ ಶ್ರಮ ಬಲವು ಆಧುನಿಕ ವಲಯಕ್ಕೆ ವಲಸೆ ಹೋಗಿ ಲಾಭದಾಯಕ ಮತ್ತು ಉತ್ಪನ್ನಕಾರಕ ಉದ್ಯೋಗದಲ್ಲಿ ತೊಡಗುವುದರಿಂದ ಮಾತ್ರ ಕೈಗಾರಿಕಾ ಉತ್ಪಾದನೆ ಹೆಚ್ಚುತ್ತದೆ ಹಾಗೂ ರಾಷ್ಟ್ರದಲ್ಲಿ ಆಧುನೀಕರಣ ಸಂಭವಿಸುತ್ತದೆ ಮತ್ತು ಕೃಷಿ ವಲಯದ ಸಮೀಕರಣ ಹಾಗೂ ಪುನಾರಚನೆ ಸಾಧ್ಯವಾಗುತ್ತದೆ ಎಂದು ತಮ್ಮ ಸಿದ್ಧಾಂತವನ್ನು ಮಂಡಿಸುತ್ತಾನೆ.[೧೬] ಹೀಗೆ ಬಡರಾಷ್ಟ್ರಗಳು ಕೃಷಿ ವಲಯದ ಶ್ರಮಿಕರನ್ನು ಕೈಗಾರಿಕಾ ವಲಯದಲ್ಲಿ ತೊಡಗಿಸುವ ಮೂಲಕ ಆರ್ಥಿಕ ಅಭಿವೃದ್ಧಿ ಸಾಧಿಸಬಹುದು ಎಂದು ಹೇಳಿದ್ದಾನೆ.

ಮತ್ತೊಬ್ಬ ಅರ್ಥಶಾಸ್ತ್ರಜ್ಞ ಪ್ರೊ.ಪಾಲ್ ಎನ್.ರೂಸೆನ್ ಸ್ಟೈನ್ ರೂಡನ್ ಅವರು 'ಬೃಹತ್ ಪ್ರಯತ್ನ' ಸಿದ್ಧಾಂತವನ್ನು ಮಂಡಿಸುತ್ತಾರೆ. ಈ ಸಿದ್ಧಾಂತದ ಪ್ರಕಾರ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಭಿವೃದ್ಧಿಯ ಪ್ರಯತ್ನಗಳು ಮೆಲ್ಲಗೆ ನಿಧಾನವಾಗಿ ಸ್ವಲ್ಪ ಸ್ವಲ್ಪವಾಗಿ ನಡೆದರೆ ಸಾಲದು. ಈ ಪ್ರಯತ್ನ ಜೋರಾಗಿರಬೇಕು, ಬಿರುಸಾಗಿರಬೇಕು ಮತ್ತು ದೊಡ್ಡದಾಗಿರಬೇಕು. ಆಗ ಮಾತ್ರ ಆ ರಾಷ್ಟ್ರಗಳ ಅಭಿವೃದ್ಧಿ ಸಾಧ್ಯ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೧೭] ಮತ್ತೊಬ್ಬ ಹಿಂದುಳಿದ ರಾಷ್ಟ್ರಗಳ ಅರ್ಥಶಾಸ್ತ್ರಜ್ಞ ಲೈಬೆನ್ ಸ್ಟೈನ್ ಅವರು ತಮ್ಮ "Economic Backwardness and Economic Growth"ಎಂಬ ಕೃತಿಯಲ್ಲಿ 'ಸಂದಿಗ್ಧ ಕನಿಷ್ಟ ಪ್ರಯತ್ನ ಸಿದ್ಧಾಂತ' ಮಂಡಿಸಿದ್ದಾರೆ. ಈ ಸಿದ್ಧಾಂತದ ಪ್ರಕಾರ 'ಬಡರಾಷ್ಟ್ರಗಳು ವಿಷ ವರ್ತುಲದಿಂದ ಸುತ್ತುವರಿದಿವೆ. ಕಡಿಮೆ ತಲಾದಾಯದ ಅಸಮಾಂತರ ಈ ದೇಶಗಳ ಬಹುಮುಖ್ಯ ಸಮಸ್ಯೆ. ಈ ವಿಷವರ್ತುಲವನ್ನು ಭೇದಿಸಿ ಜನಸಂಖ್ಯೆ ಏರಿಕೆಗಿಂತ ಹೆಚ್ಚಿನ ದರದಲ್ಲಿ ತಲಾದಾಯ ಹೆಚ್ಚಳಕ್ಕೆ ನೆಲೆಯನ್ನು ನಿರ್ಮಿಸಬೇಕಾದರೆ ಅಭಿವೃದ್ಧಿಯ ಪ್ರಯತ್ನವು ಒಂದು

ನಿರ್ದಿಷ್ಟವಾದ ಕನಿಷ್ಟ ಮಟ್ಟದ್ದಾದರೂ ಆಗಿರಬೇಕು. ಈ ರೀತಿಯ ಪ್ರಯತ್ನ ದೇಶವನ್ನು ಸಂದಿಗ್ಧದಿಂದ ಪಾರು ಮಾಡಿ ಪ್ರಗತಿಯ ಲಕ್ಷಣವನ್ನು ಮೂಡಿಸಲು ನೆರವಾಗುತ್ತದೆ ಎಂದಿದ್ದಾರೆ.[೧೮]

ರ್‍ಯಾಗ್ನರ್ ನರ್ಕ್ಸ್ ಎಂಬ ಅರ್ಥಶಾಸ್ತ್ರಜ್ಞನು ಹಿಂದುಳಿದ ರಾಷ್ಟ್ರಗಳಾಗಿ 'ಸಮತೋಲನ ಬೆಳವಣಿಗೆ ಸಿದ್ಧಾಂತವನ್ನು ಮಂಡಿಸಿದ್ದಾನೆ'. 'ಅಭಿವೃದ್ಧಿಶೀಲ ದೇಶಗಳ ಬಡತನಕ್ಕೆ ಕಾರಣ ಅವುಗಳ ಬಡತನವೆ' ಎಂದು ಹೇಳಿದ ನರ್ಕ್ಸ್ 'ಈ ಬಡತನದ ವಿಷ ವರ್ತುಲವನ್ನು ಭೇದಿಸಿದಾಗ ಆ ರಾಷ್ಟ್ರದ ಅಭಿವೃದ್ಧಿ ಸಾಧ್ಯವಾಗುತ್ತದೆ' ಎಂದಿದ್ದಾರೆ.[೧೯] ಅದಕ್ಕಾಗಿ 'ಬಡರಾಷ್ಟ್ರಗಳಲ್ಲಿ ಬಡತನ ಹೋಗಲಾಡಿಸಲು ಹಲವು ಕೈಗಾರಿಕೆಗಳಲ್ಲಿ ಏಕಕಾಲದಲ್ಲಿ ಹೂಡಿಕೆಯನ್ನು ಮಾಡಿದರೆ ಉತ್ಪಾದನೆ ಮತ್ತು ಉದ್ಯೋಗವಕಾಶಗಳು ವಿಸ್ತಾರಗೊಂಡು ಆದಾಯಗಳು ಹೆಚ್ಚುತ್ತವೆ. ಇದರಿಂದ ಕೊಂಡುಕೊಳ್ಳುವ ಶಕ್ತಿ ಹೆಚ್ಚಾಗಿ ಮಾರುಕಟ್ಟೆ ವಿಸ್ತರಣೆಯೊಡನೆ ಅಭಿವೃದ್ಧಿ ಸುಗುಮವಾಗಿ ಮುನ್ನಡೆಯುತ್ತದೆ ಎಂದು ತಮ್ಮ ಸಿದ್ಧಾಂತ ಮಂಡಿಸುತ್ತಾರೆ.'[೨೦] ಹೀಗೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಅಭಿವೃದ್ಧಿ ಹೊಂದದ ಎಲ್ಲ ರಾಷ್ಟ್ರಗಳಲ್ಲಿ ಏಕಕಾಲದಲ್ಲಿ ಸಮನಾಗಿ ಬಂಡವಾಳ ತೊಡಗಿಸಿ ಚಟುವಟಿಕೆ ಕೈಗೊಂಡರೆ ಅಭಿವೃದ್ಧಿ ಸಾಧ್ಯ ಎಂದಿದ್ದಾರೆ.

ಮತ್ತೊಬ್ಬ ಆಧುನಿಕ ಪಂಥದ ಅರ್ಥಶಾಸ್ತ್ರಜ್ಞ ಎ.ಓ.ಹರ್ಷಮನ್ ಅವರು 'ಅಸಮತೋಲನ ಬೆಳವಣಿಗೆ ಸಿದ್ಧಾಂತ'ವನ್ನು ಮಂಡಿಸಿದ್ದಾರೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಂಡವಾಳದ ಕೊರತೆ ಇರುವುದನ್ನು ಆಧಾರಿಸಿ ಈ ಸಿದ್ಧಾಂತವನ್ನು ಮಂಡಿಸಿದ್ದಾರೆ. ಈ ಸಿದ್ಧಾಂತದ ಪ್ರಕಾರ 'ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಎಲ್ಲ ಕ್ಷೇತ್ರಗಳ ಮೇಲೆ ಏಕಕಾಲಕ್ಕೆ ಹೂಡಿಕೆ ಮಾಡಲು ಬಂಡವಾಳ ಮತ್ತಿತರ ಸಂಪತ್ ಸಾಧನಗಳ ಕೊರತೆ ಇರುತ್ತದೆ. ಅದಕ್ಕಾಗಿ ಅತಿ ಮುಖ್ಯವಾದ ಚಟುವಟಿಕೆಗಳ ಮೇಲೆ ಮಾತ್ರ ಮೊದಲು ಅಧಿಕ ಮೊತ್ತದ ಹೂಡಿಕೆಯನ್ನು ಮಾಡಿ ಅದರಿಂದ ದೊರಕುವ ಪ್ರಯೋಜನಗಳಿಂದ ಇತರೆ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಬಹುದು. ಇದರಿಂದ ರಾಷ್ಟ್ರಗಳ ಅಭಿವೃದ್ಧಿ ಸಾಧ್ಯವಾಗುತ್ತದೆ' ಎಂದು ಹೇಳಿದ್ದಾರೆ.[೨೧] ಹೀಗೆ ಹಿಂದುಳಿದ ರಾಷ್ಟ್ರಗಳಿಗೆ ಸಾಧ್ಯವೆನಿಸುವ ಮೂಲ ಕೈಗಾರಿಕೆಯಲ್ಲಿ ಬಂಡವಾಳ ತೊಡಗಿಸಿ ಅಭಿವೃದ್ಧಿ ಸಾಧಿಸಬಹುದು ಎಂದು ಈ ಸಿದ್ಧಾಂತ ತಿಳಿಸುತ್ತವೆ.

ಮೇಲಿನ ಎಲ್ಲ ಸಿದ್ಧಾಂತಗಳನ್ನು ಗಮನಿಸಿದರೆ ಬಹುತೇಕ ಸಿದ್ಧಾಂತಗಳು ಬಡತನ ನಿವಾರಣೆ, ಬಡರಾಷ್ಟ್ರಗಳ ಅಭಿವೃದ್ಧಿ ಮತ್ತು ಬಡರಾಷ್ಟ್ರಗಳ ಬಡತನ ನಿವಾರಣೆಗೆ ಹೆಚ್ಚು ಮಹತ್ವ ನೀಡಿರುವುದು ಕಂಡುಬರುತ್ತಿದ್ದು, ಲಿಂಗಸಂಬಂಧಿ ಅಂಶಗಳು, ಲಿಂಗಸಂಬಧಿ ಅಭಿವೃದ್ಧಿ ಕುರಿತ ಚಿಂತನೆಗಳು ಬೆಳೆಯದಿರುವುದು ಕಂಡುಬರುತ್ತದೆ. ಹಾಗಾಗಿ ಮೇಲಿನ ಎಲ್ಲ ಸಿದ್ಧಾಂತಗಳು ಅಭಿವೃದ್ಧಿ ಎಂದರೆ ರಾಷ್ಟ್ರದ ಅಭಿವೃದ್ಧಿ ಪುರುಷರ ಅಭಿವೃದ್ಧಿ ಎಂಬ ಆಧಾರದಲ್ಲಿ ಸಿದ್ಧಾಂತಗಳನ್ನು ಮಂಡಿಸಿರುವುದು ಸ್ಪಷ್ಟವಾಗುತ್ತಿದೆ.

## ೪.೪. ಶ್ರಮ ಮಾರುಕಟ್ಟೆ ಸಿದ್ಧಾಂತಗಳು ಅಥವಾ ಕೂಲಿ ಸಿದ್ಧಾಂತಗಳು

ಶ್ರಮವು ಒಂದು ಉತ್ಪಾದನಾಂಗವಾಗಿದ್ದು, ಉತ್ಪಾದನಾ ಪ್ರಕ್ರಿಯೆಯ ಪ್ರತಿಯೊಂದು ಹಂತವು ಶ್ರಮವನ್ನು ಅವಲಂಬಿಸಿರಬೇಕಾಗಿದ್ದರಿಂದ ಉತ್ಪಾದನೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಹೀಗೆ ಉತ್ಪಾದನಾ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದಕ್ಕೆ ಪ್ರತಿಫಲವಾಗಿ 'ಕೂಲಿ'ಯನ್ನು ಪಡೆಯುತ್ತದೆ. ಈ 'ಕೂಲಿ'ಯನ್ನು ಹಣದ ಮಾಧ್ಯಮದ ಮೂಲಕ ನೀಡಲಾಗುತ್ತದೆ. ಕೆಲಸದ ಸ್ವರೂಪವನ್ನು ಆಧರಿಸಿ 'ಸಂಬಳ'ವು 'ಮಜೂರಿ', 'ಕೂಲಿ', 'ಶುಲ್ಕ', 'ದಲಾಲಿ'' ಮತ್ತು 'ಭತ್ತೆ'' ಎಂದು ಬೇರೆ ಬೇರೆ ಹೆಸರುಗಳಿಂದಲೂ ಕರೆಯಲಾಗುತ್ತದೆ. ಹೀಗಾಗಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಮಾಡುವ ಶ್ರಮಕ್ಕೆ ನೀಡುವ ಪ್ರತಿಫಲವನ್ನು 'ಕೂಲಿ' ಎಂದು ಅಥವಾ ಮೇಲೆ ಸೂಚಿಸಿದ ಹೆಸರುಗಳಿಂದಲೂ (ಗುರುತಿಸಲಾಗುತ್ತದೆ) ಕರೆಯಲಾಗುತ್ತದೆ. ಹೀಗಾಗಿ ಈ ಕೂಲಿಯ ನಿರ್ಧಾರ ಅರ್ಥ ವ್ಯವಸ್ಥೆಯಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತದೆ. ಅರ್ಥಶಾಸ್ತ್ರದಲ್ಲಿ ಕೂಲಿಯನ್ನು ಎಷ್ಟು ನೀಡಬೇಕು? ಏಕೆ ನೀಡಬೇಕು ಮತ್ತು ಕೂಲಿ ಹೇಗೆ ನಿರ್ಧಾರವಾಗುತ್ತದೆ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಆದರೆ ಕೂಲಿಯ ನಿರ್ಧಾರದ ಪ್ರಕ್ರಿಯೆಯು 'ಏಕ ಲಿಂಗಿ'ಯಾಗಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ.

ಇಲ್ಲಿ 'ಕೂಲಿ' ಎಂಬ ಪರಿಭಾವನೆಯನ್ನು ದೈಹಿಕ ಶ್ರಮಕ್ಕೆ ನೀಡುವ ಪ್ರತಿಫಲದ ಹಿನ್ನೆಲೆಯಲ್ಲಿ ಬಳಸಲಾಗಿದೆ. ಈ 'ಕೂಲಿ' ಬಗ್ಗೆ ಹಾಗೂ 'ಕೂಲಿ' ನೀಡುವ ಕುರಿತು ಸಿದ್ಧಾಂತಗಳನ್ನು ಆ್ಯಡಂಸ್ಮಿತ್, ಡೆವಿಡ್ ರಿಕಾರ್ಡೋ, ಮಾಲ್ಥಸ್, ಜೆ.ಎಸ್.ಮಿಲ್ ಮತ್ತು ವಾಕರ್ ಮುಂತಾದ ಅರ್ಥಶಾಸ್ತ್ರಜ್ಞರು ಮಂಡಿಸಿದ್ದಾರೆ.[೨೨]

ಶ್ರಮಕ್ಕೆ ಪ್ರತಿಫಲವಾಗಿ ನೀಡುವ ಕೂಲಿಯ 'ಜೀವನಾಧಾರ ಕೂಲಿ'ಯಾಗಿರಬೇಕೆಂದು 'ಫಿಜಿಯೋಕ್ರಾಟ್' ಪಂಥದ ಅರ್ಥಶಾಸ್ತ್ರಜ್ಞರು ಮತ್ತು ಸಂಪ್ರದಾಯ ಪಂಥದ ಅರ್ಥಶಾಸ್ತ್ರಜ್ಞರಾದ ಆ್ಯಡಂಸ್ಮಿತ್, ಡೆವಿಡ್ ರಿಕಾರ್ಡೋ ಮತ್ತು ಮಾಲ್ಥಸ್ ಅವರು ಅಭಿಪ್ರಾಯ ಪಡುತ್ತಾರೆ. 'ಜೀವನಾಧಾರ ಕೂಲಿ ಎಂದರೆ ಕಾರ್ಮಿಕರಿಗೆ ತನ್ನ ಕುಟುಂಬದ ಉಪಜೀವನವನ್ನು ಸಾಗಿಸಲು ಅಗತ್ಯವಾಗಿ ಬೇಕಾಗುವ ಆಹಾರ, ಬಟ್ಟೆ ಮತ್ತು ವಸತಿಗಳಿಗೆ ಸಾಕಾಗುವಷ್ಟು ಕೂಲಿಯನ್ನು ನೀಡುವುದೇ ಜೀವನಾಧಾರ ಕೂಲಿಯಾಗಿದೆ'.[೨೩] ಈ ಅರ್ಥಶಾಸ್ತ್ರಜ್ಞರು ಸೂಚಿಸಿದ ಜೀವನಾಧಾರ ಕೂಲಿಯು ಕಾರ್ಮಿಕರನ್ನು ಬಡತನ ದಲ್ಲಿ ನೆಲೆಸುವಂತೆ ಮಾಡುವ ಮತ್ತು ಉದ್ಯಮದಾರ ಅಥವಾ ಬಂಡವಾಳದಾರರನ್ನು ಶ್ರೀಮಂತರನ್ನಾಗಿ ಮಾಡುವ ಕೂಲಿಯ ಸಿದ್ಧಾಂತವಾಗಿದೆ.

ಸಂಪ್ರದಾಯ ಪಂಥಕ್ಕೆ ಸೇರಿದ ಅರ್ಥಶಾಸ್ತ್ರಜ್ಞರಾದ ಜೆ.ಎಸ್.ಮಿಲ್ ಅವರು 'ಕೂಲಿ ನಿಧಿ' ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ. 'ಪ್ರತಿಯೊಂದು ರಾಷ್ಟ್ರದಲ್ಲಿ ಕಾರ್ಮಿಕರಿಗೆ ಕೂಲಿಯನ್ನು ನೀಡಲು

ಒಂದು ನಿಧಿಯನ್ನು ಮೀಸಲಿಡಲಾಗಿದ್ದು, ಇದು ರಾಷ್ಟ್ರೀಯ ಆದಾಯದ ಒಂದು ಅಂಶವಾಗಿರುತ್ತದೆ ಅಥವಾ ಭಾಗವಾಗಿರುತ್ತದೆ. ಇಂತಹ ನಿಧಿಯೇ 'ಕೂಲಿನಿಧಿ'. ಇದು ಯಾವಾಗಲೂ 'ಸ್ಥಿರ'ವಾಗಿರುತ್ತದೆ. ಇದನ್ನು ಹೆಚ್ಚಿಸಲು ಮತ್ತು ಕಡಿಮೆ ಮಾಡಲು ಸಾಧ್ಯವಿಲ್ಲ. ಹೀಗಾಗಿ ಇಲ್ಲಿ ಎಷ್ಟು ಕೂಲಿ ಬೇಕೆಂದು ನಿರ್ಧರಿಸುವವರು ಕಾರ್ಮಿಕರಾಗಿರುತ್ತಾರೆ. ಅಧಿಕ ಕೂಲಿಗಾಗಿ ಕಾರ್ಮಿಕರೇ ತಮ್ಮ ಸಂಖ್ಯೆಯನ್ನು ಕಡಿಮೆ ಮಾಡಬೇಕೆಂದು ಹೇಳುತ್ತಾರೆ.[೨೪] ಸಿದ್ಧಾಂತವು ಬಂಡವಾಳಶಾಹಿಯ ಪರವಾದ ಸಿದ್ಧಾಂತವಾಗಿದೆ. ಆದರೆ ಅಮೆರಿಕದ ಅರ್ಥಶಾಸ್ತ್ರಜ್ಞ 'ಫ್ರಾನ್ಸಿಸ್ ವಾಕರ್' ಮಂಡಿಸಿದ ''ಶೇಷ ಹಕ್ಕಿನ ಕೂಲಿ ಸಿದ್ಧಾಂತ'' ಕಾರ್ಮಿಕರ ಪರ ಸಿದ್ಧಾಂತವಾಗಿದೆ. ಈ ಸಿದ್ಧಾಂತದ ಪ್ರಕಾರ ಕಾರ್ಮಿಕರು ಉತ್ಪಾದನೆಯ ಆದಾಯದಲ್ಲಿನ ಶೇಷಕ್ಕೆ ಹಕ್ಕುದಾರರು. ಅಂದರೆ ಉತ್ಪಾದನೆಯ ಆದಾಯದೊಳಗಿಂದ ಗೇಣಿ, ಬಡ್ಡಿ ಮತ್ತು ಲಾಭ ಇವುಗಳನ್ನು ಹಂಚಿದ ನಂತರ ಉಳಿಯುವ ಶೇಷವನ್ನು ಕಾರ್ಮಿಕರಲ್ಲಿ ಹಂಚಬೇಕೆಂದು ಈ ಸಿದ್ಧಾಂತ ತಿಳಿಸುತ್ತದೆ.[೨೫] ಈ ಸಿದ್ಧಾಂತದ ಪ್ರಕಾರ ಉಳಿಯುವ ಶೇಷ ಅಧಿಕವಾಗಿದ್ದರೆ ಕೂಲಿಯ ದರವು ಅಧಿಕವಾಗಿರುತ್ತದೆ ಮತ್ತು ಶೇಷ ಕಡಿಮೆ ಇದ್ದರೆ ಕಾರ್ಮಿಕರ ಕೂಲಿಯ ದರವು ಕಡಿಮೆಯಾಗುತ್ತದೆ. ಹೀಗಾಗಿ ಈ ಸಿದ್ಧಾಂತ ಕಾರ್ಮಿಕರನ್ನು ಉತ್ಪಾದನೆಯಲ್ಲಿ ಹೆಚ್ಚು ತೊಡಗಿಸಿಕೊಳ್ಳುವ ಮೂಲಕ ಅಧಿಕ ಉತ್ಪಾದನೆ ಆಗುತ್ತದೆ ಎಂದು ಭಾವಿಸುತ್ತದೆ.

೧೯ನೇ ಶತಮಾನದಲ್ಲಿ ಹೆಚ್ಚು ಪ್ರಚಲಿತವಾಗಿದ್ದ ಹಾಗೂ ಜೆ.ಬಿ.ಕ್ಲಾರ್ಕ್, ಡಬ್ಲ್ಯೂ.ಎಸ್. ಜೆವನ್ಸ್, ವಿಕ್ ಸ್ಟೀಡ್, ಮಾರ್ಷಲ್ ಮತ್ತು ವಾಲ್ರಾ ಇತ್ಯಾದಿ ಅರ್ಥಶಾಸ್ತ್ರಜ್ಞರಿಂದ ಪ್ರಸಿದ್ಧವಾಗಿದ್ದ 'ಸೀಮಾಂತ ಉತ್ಪಾದಕತೆಯ ಕೂಲಿ ಸಿದ್ಧಾಂತ'ವು ಕಾರ್ಮಿಕರ ಕೂಲಿಯು ಸೀಮಾಂತ ಉತ್ಪನ್ನದ ಮೌಲ್ಯಕ್ಕೆ ಸಮನಾಗಿರಬೇಕೆಂದು ತಿಳಿಸುತ್ತದೆ. ಸೀಮಾಂತ ಉತ್ಪಾದಕತೆಯ ಕೂಲಿ ಸಿದ್ಧಾಂತದ ಪ್ರಕಾರ 'ಕೂಲಿಯ ದರವು ಕಾರ್ಮಿಕರ ಸೀಮಾಂತ ಉತ್ಪಾದಕತೆಯಿಂದ ನಿರ್ಧಾರವಾಗುತ್ತದೆ. ಹಾಗೂ ಅದು ಸೀಮಾಂತ ಉತ್ಪನ್ನದ ಮೌಲ್ಯಕ್ಕೆ ಸಮವಾಗಿರುತ್ತದೆ.[೨೬] ಸೀಮಾಂತ ಉತ್ಪನ್ನ ಎಂದರೆ ಉತ್ಪಾದನೆಯಲ್ಲಿ ಕಾರ್ಮಿಕನೊಬ್ಬನನ್ನು ಹೆಚ್ಚಾಗಿ ನೇಮಿಸಿಕೊಂಡಾಗ ಒಟ್ಟು ಉತ್ಪನ್ನದಲ್ಲಿನ ಹೆಚ್ಚಳವಾಗಿದೆ. ಹೀಗಾಗಿ ಸೀಮಾಂತ ಉತ್ಪನ್ನ ಅಧಿಕವಾಗಿದ್ದರೆ ಅಧಿಕ ಕೂಲಿಯನ್ನು ಮತ್ತು ಸೀಮಾಂತ ಉತ್ಪನ್ನ ಕಡಿಮೆಯಾಗಿದ್ದರೆ ಕಡಿಮೆ ಕೂಲಿಯನ್ನು ಕಾರ್ಮಿಕರು ಪಡೆಯುತ್ತಾರೆ. ಆದ್ದರಿಂದ ಇಲ್ಲಿ ಕಾರ್ಮಿಕರ ಕೂಲಿ ಸೀಮಾಂತ ಉತ್ಪನ್ನವನ್ನು ಆಧರಿಸಿದೆ ಎಂದು ಈ ಸಿದ್ಧಾಂತ ತಿಳಿಸುತ್ತದೆ.

ಮೇಲೆ ಸೂಚಿಸಿದ ಬಹುತೇಕ ಸಿದ್ಧಾಂತಗಳು ಕಾರ್ಮಿಕರ ಪೂರೈಕೆಯನ್ನು ಗಮನಿಸಿ ಸಿದ್ಧಾಂತವನ್ನು ರಚಿಸಿದವಾಗಿದ್ದು, ಕಾರ್ಮಿಕರ ಶೋಷಣೆ ಮತ್ತು ಬಂಡವಾಳಶಾಹಿಗಳ ಪ್ರಾಬಲ್ಯಕ್ಕೆ ಪ್ರಾಶಸ್ತ್ಯ ನೀಡುತ್ತಿವೆ. ಅಲ್ಲದೆ ಕಾರ್ಮಿಕರ ಬೇಡಿಕೆಯ ಅಂಶವನ್ನು ಕಡೆಗಣಿಸಿ ಕೂಲಿಸಿದ್ಧಾಂತಗಳನ್ನು ರಚಿಸಿವೆ. ಆದ್ದರಿಂದ ಸಿದ್ಧಾಂತಗಳು ಕಾರ್ಮಿಕರ ಪೂರೈಕೆ ಪರ ಸಿದ್ಧಾಂತಗಳಾಗಿವೆ. ಆದರೆ ಇಂದು ಕೂಲಿದರವು ಬೆಲೆ ದರದಂತೆ

ಬೇಡಿಕೆ-ಪೂರೈಕೆ ಅಂಶಗಳಿಂದ ನಿರ್ಧರಿತವಾಗುವುದರಿಂದ ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆಯನ್ನು ಪರಿಗಣಿಸಿ ಕೂಲಿ ದರ ನಿರ್ಧರಿಸುವ 'ಆಧುನಿಕ ಕೂಲಿ ಸಿದ್ಧಾಂತ' ಬೆಳೆದು ಬಂದಿದೆ.

'ಆಧುನಿಕ ಕೂಲಿ' ಸಿದ್ಧಾಂತವು ಬೇಡಿಕೆ ಮತ್ತು ಪೂರೈಕೆ ಸಿದ್ಧಾಂತವಾಗಿದೆ. ಈ ಸಿದ್ಧಾಂತದ ಪ್ರಕಾರ ಕೂಲಿಯ ದರವು ವಸ್ತುವಿನ ಬೆಲೆಯು ಬೇಡಿಕೆ ಮತ್ತು ಪೂರೈಕೆಯ ಅಂಶಗಳಿಂದ ನಿರ್ಧಾರವಾಗುವಂತೆ ಶ್ರಮದ ಬೆಲೆಯೂ (ಕೂಲಿ) ಶ್ರಮದ ಬೇಡಿಕೆ ಮತ್ತು ಪೂರೈಕೆ ಅಂಶಗಳಿಂದ ನಿರ್ಧಾರವಾಗುತ್ತದೆ. ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆಯು ಹಲವಾರು ಅಂಶಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಕಾರ್ಮಿಕರ ಬೇಡಿಕೆಯು ಉತ್ಪಾದಿಸಿದ ವಸ್ತುಗಳ ಬೇಡಿಕೆ, ಉತ್ಪಾದನಾಂಗಗಳ ಬೆಲೆ, ತಂತ್ರಜ್ಞಾನ ಮತ್ತು ಕಾರ್ಮಿಕರ ಉತ್ಪಾದನಾ ಸಾಮರ್ಥ್ಯವನ್ನು ಅವಲಂಬಿಸಿದೆ. ಹಾಗೂ ಕಾರ್ಮಿಕರ ಪೂರೈಕೆಯು ಕೂಲಿದರ, ಕಾರ್ಖಾನೆಯ ಕೆಲಸದ ಸ್ಥಿತಿಗತಿ, ಜನಸಂಖ್ಯಾ ಗಾತ್ರ, ಶಿಕ್ಷಣ ಮತ್ತು ತರಬೇತಿ ಮತ್ತು ಕೆಲಸದ ವಿಶ್ರಾಂತಿಯ ಅನುಪಾತ ಇತ್ಯಾದಿ ಅಂಶಗಳಿಂದ ಪ್ರಭಾವಿತವಾಗಿರುತ್ತದೆ.

**ಕೂಲಿದರದ ನಿರ್ಧಾರ**




**ಶ್ರಮ ಮಾರುಕಟ್ಟೆಯಲ್ಲಿ ಕೂಲಿದರ ನಿರ್ಧಾರ**

**ಮೂಲ :** ಅಹುಜಾ ಎಚ್.ಎಲ್., ೨೦೦೭ ಅಡ್ವಾನ್ಸ್‌ಡ್ ಎಕಾನಮಿಕ್ ಥೇರಿ, ಮೈಕ್ರೋ ಎಕಾನಮಿಕ್ ಅನಾಲಿಸಿಸ್, ಎಸ್.ಚಾಂದ್ ಆ್ಯಂಡ್ ಕಂಪನಿ ಲಿಮಿಟೆಡ್, ದೆಹಲಿ, ೧೫ನೇ ಆವೃತ್ತಿ, ಪು.೭೭೮

DL = ಕಾರ್ಮಿಕರ ಬೇಡಿಕೆ

SL = ಕಾರ್ಮಿಕರ ಪೂರೈಕೆ

E = ಸಮತೋಲನ ಬಿಂದು (ಬೇಡಿಕೆ ಮತ್ತು ಪೂರೈಕೆ)

F = ಸಮತೋಲನ ಬಿಂದು (ಸೀಮಾಂತ ಉತ್ಪಾದನಾಂಗ ವೆಚ್ಚ ಮತ್ತು ಕೂಲಿ)

L = ಶ್ರಮ P = ಬೆಲೆ

W = ಕೂಲಿ

MRP = ಸೀಮಾಂತ ಉತ್ಪನ್ನ ಆದಾಯ(Margnal Revenu Product)

VMP = ಸೀಮಾಂತ ಉತ್ಪನ್ನ ಮೌಲ್ಯ(Value of Margnal Product)

MFC = ಸೀಮಾಂತ ಉತ್ಪನ್ನ ವೆಚ್ಚ(Margnal Labour Cost)

ಶ್ರಮ ಮಾರುಕಟ್ಟೆಯಲ್ಲಿ ಶ್ರಮದ ಬೆಲೆ ನಿರ್ಧಾರವು ಶ್ರಮದ ಬೇಡಿಕೆ ಮತ್ತು ಪೂರೈಕೆ ಅಂಶಗಳಿಂದ ನಿರ್ಧಾರವಾಗುತ್ತದೆ. ಮೇಲಿನ ರೇಖಾಚಿತ್ರದಲ್ಲಿ ತೋರಿಸಿದಂತೆ ಶ್ರಮದ ಬೇಡಿಕೆ ರೇಖೆ (DL) ಮತ್ತು ಶ್ರಮದ ಪೂರೈಕೆ ರೇಖೆ(SL) E ಬಿಂದುವಿನಲ್ಲಿ ಸಮತೋಲನ ಸಾಧಿಸುವ ಮೂಲಕ OW ಅಥವಾ EL ಕೂಲಿ ದರ ನಿರ್ಧಾರವಾಗುತ್ತದೆ. ಶ್ರಮ ಮಾರುಕಟ್ಟೆಯಲ್ಲಿ OL ಶ್ರಮಕ್ಕೆ OW ಕೂಲಿ ನಿಗದಿಯಾಗುತ್ತದೆ. ಉದ್ಯಮದಲ್ಲಿ ಸೀಮಾಂತ ಆದಾಯ ಉತ್ಪನ್ನವು(MRP) ಸೀಮಾಂತ ಉತ್ಪನ್ನ ಮೌಲ್ಯಕ್ಕಿಂತ ಕಡಿಮೆ ಇದ್ದು ಸೀಮಾಂತ ಆದಾಯ ಉತ್ಪನ್ನವು ಸೀಮಂತ ಘಟಕ (ಉತ್ಪನ್ನ) ವೆಚ್ಚಕ್ಕೆ ಸಮವಾಗಿದ್ದಾಗ 'ಕೂಲಿ ದರ' ನಿರ್ಧಾರವಾಗುತ್ತದೆ. ಆ ಕೂಲಿಯ ದರವು ಸೀಮಾಂತ ಘಟಕವೆಚ್ಚಕ್ಕೆ ಸಮವಾಗಿರುತ್ತದೆ. ಆಗ ಶ್ರಮದ ಬೆಲೆ OPಯಾಗಿರುತ್ತದೆ. ಈ ಹಂತದ ಕೂಲಿಗಿಂತ ಕಡಿಮೆ ಕೂಲಿಗೆ ಕಾರ್ಮಿಕರು ದುಡಿಯುವಲ್ಲಿ ಮತ್ತು ಈ ಕೂಲಿಗಿಂತ ಅಧಿಕ ಕೂಲಿಯನ್ನು ನೀಡಲು ಉದ್ಯಮದಾರರು ಸಿದ್ಧರಿರುವುದಿಲ್ಲ. ಹೀಗೆ ಪರಿಪೂರ್ಣ ಪೈಪೋಟಿ ಮಾರುಕಟ್ಟೆಯಲ್ಲಿ ಕೂಲಿದರ ಬೇಡಿಕೆ ಮತ್ತು ಪೂರೈಕೆ ಅಂಶಗಳಿಂದ ನಿರ್ಧಾರವಾಗುತ್ತದೆ.

ಸಾಮೂಹಿಕ ಚೌಕಾಶಿಯಲ್ಲಿ ಕೂಲಿ ನಿರ್ಧಾರ : ಫೀಲ್‌ನೆಕ್ಸ್ ಅವರ ದ್ವಿವಿಧ ಏಕಸ್ವಾಮ್ಯ ಮಾರುಕಟ್ಟೆ ಮಾದರಿ(Wage Determintation under collective Bargeining fellner Bilatral monopoly Model)

ನಿಜ ಪ್ರಪಂಚದಲ್ಲಿ ಪರಿಪೂರ್ಣ ಪೈಪೋಟಿ ಮಾರುಕಟ್ಟೆ ಎಂಬುದು ಕಂಡುಬರುವುದಿಲ್ಲ. ಆದರೆ ಅಪರಿಪೂರ್ಣ ಪೈಪೋಟಿ ಮಾರುಕಟ್ಟೆ ಕಂಡುಬರುತ್ತದೆ. ಇಂತಹ ಮಾರುಕಟ್ಟೆ ವ್ಯವಸ್ಥೆಯಲ್ಲಿ ಉದ್ಯಮ ಸಂಸ್ಥೆಗಳ ಸಂಖ್ಯೆ ಕಡಿಮೆ ಇರುವುದರಿಂದ ಅವು ತಮ್ಮದೇ ಆದ ಸಂಘಗಳನ್ನು ರಚಿಸಿಕೊಂಡು ಕಾರ್ಮಿಕರ ಕೂಲಿಯ ದರವನ್ನು ನಿರ್ಧರಿಸುವ ಸ್ವಾಮ್ಯವನ್ನು ಪಡೆದಿರುತ್ತವೆ. ಮತ್ತು ಕಾರ್ಮಿಕರ ಬೇಡಿಕೆಯನ್ನು ನಿಯಂತ್ರಿಸುವ ಸಾಮರ್ಥ್ಯವನ್ನು ಪಡೆದಿರುತ್ತದೆ. ಅದೇ ರೀತಿ ಕಾರ್ಮಿಕರು ಸಹ ತಮ್ಮ ತಮ್ಮ ಸಂಘಗಳನ್ನು ರಚಿಸಿಕೊಂಡು, ತಮ್ಮ ಪೂರೈಕೆಯನ್ನು ನಿಯಂತ್ರಿಸಿ ತಮ್ಮ ಕೂಲಿಯ ದರವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತವೆ. ಇಂತಹ ಸನ್ನಿವೇಶದಲ್ಲಿ ಉದ್ಯಮ ಸಂಸ್ಥೆಗಳ ಸಂಘಗಳು ಮತ್ತು

ಕಾರ್ಮಿಕರ ಸಂಘಗಳ ಬಲಾಬಲಗಳಿಂದ ಕೂಲಿಯ ದರವು ನಿರ್ಧಾರವಾಗುತ್ತದೆ. ಉದ್ಯಮ ಸಂಸ್ಥೆಗಳು ಕಡಿಮೆ ಮಟ್ಟದ ಕೂಲಿಯನ್ನು ಕೊಡಲು ಪ್ರಯತ್ನಿಸಿದರೆ, ಕಾರ್ಮಿಕ ಸಂಘಗಳು ಹೆಚ್ಚು ಕೂಲಿಯನ್ನು ಪಡೆಯಲು ಪ್ರಯತ್ನಿಸುತ್ತವೆ. ಇವೆರಡೂ ಶಕ್ತಿಗಳ ಬಲಾಬಲಗಳ ಮೂಲಕ ಕೂಲಿಯ ದರವು ನಿರ್ಧಾರವಾಗುತ್ತದೆ.

ಈ ವ್ಯವಸ್ಥೆಯಲ್ಲಿ ಕಾರ್ಮಿಕ ಸಂಘಗಳು ಬಲಾಢ್ಯವಾಗಿದ್ದರೆ ಅವುಗಳಿಗೆ ಕೂಲಿಯ ದರವನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಒಂದು ವೇಳೆ ಕಾರ್ಮಿಕರ ಸಂಘಗಳು ಅಶಕ್ತವಾಗಿದ್ದರೆ, ಕಾರ್ಮಿಕರಲ್ಲಿ ಇಲ್ಲವೆ ಅವರ ಧುರೀಣರಲ್ಲಿ ಒಗ್ಗಟ್ಟು ಇಲ್ಲದಿದ್ದರೆ ಆಗ ಕೂಲಿಯ ದರವು ಕಡಿಮೆ ಮಟ್ಟದಲ್ಲಿ ನಿರ್ಧಾರವಾಗುತ್ತದೆ. ಉದ್ಯಮ ಸಂಘಗಳು ಮತ್ತು ಕಾರ್ಮಿಕ ಸಂಘಗಳ ನಡುವಿನ ಪರಸ್ಪರ ಚೌಕಾಶಿ ಯಿಂದ ಕೂಲಿದರ ಈ ಕೆಳಗಿನಂತೆ ನಿರ್ಧಾರವಾಗುತ್ತದೆ.

**ಚಿತ್ರ.೪.೨. ಸಾಮೂಹಿಕ ಚೌಕಾಶಿಯಲ್ಲಿ ಕೂಲಿ ನಿರ್ಧಾರ**

W= ಕೂಲಿ
N= ಉದ್ಯೋಗ
IC= ಉಪೇಕ್ಷಿತ ರೇಖೆಗಳು
MRP= ಸೀಮಾಂತ ನಿವ್ವಳ ಆದಾಯ
ARP= ಸರಾಸರಿ ನಿವ್ವಳ ಆದಾಯ ಉತ್ಪಾದಕತೆ
T= ಸಮತೋಲನ ಬಿಂದು




**ಮೂಲ : ಹೆಚ್ .ಎಚ್ .ಎಲ್ . ಮೈಕ್ರೋ ಎಕಾನಾಮಿಕ್ಸ ಅನಾಲೇಸಸ್ಸ್ , ಪು.ಸಂ.೧೦೦೩-೧೦೦೪**

ಮೇಲಿನ ರೇಖಾಚಿತ್ರದಲ್ಲಿ ಕೂಲಿ ಅಥವಾ ಉತ್ಪಾದಕತೆ ಮತ್ತು ತೃಪ್ತಿಯನ್ನು OY ಅಕ್ಷದಲ್ಲಿ ಹಾಗೂ ಉದ್ಯೋಗದ ಪ್ರಮಾಣವನ್ನು OX ಅಕ್ಷದಲ್ಲಿ ಅಳೆಯಲಾಗಿದೆ. ARP ಸರಾಸರಿ ನಿವ್ವಳ ಆದಾಯ ಉತ್ಪಾದಕತೆ ರೇಖೆ ಹಾಗೂ MRP ಸೀಮಾಂತ ನಿವ್ವಳ ಆದಾಯ ಉತ್ಪಾದಕತೆ ರೇಖೆಗಳಾಗಿದ್ದು, IC1, IC2 IC3 ಮತ್ತು IC4 IC5ಗಳು ಉಪೇಕ್ಷಿತ ರೇಖೆಗಳಾಗಿವೆ. ಇವು ವಿವಿಧ ಮಟ್ಟದ ಕೂಲಿ

ಮತ್ತು ಆ ಮಟ್ಟದಲ್ಲಿ ಕಾರ್ಮಿಕ ಸಂಘಗಳ ತೃಪ್ತಿಯನ್ನು ಪ್ರತಿನಿಧಿಸುತ್ತವೆ. ಕೂಲಿ ದರ ಹೆಚ್ಚಾದಂತೆ ಉಪೇಕ್ಷಿತ ರೇಖೆಗಳ ನಡುವಿನ ಅಂತರ ಸಹ ಹೆಚ್ಚುತ್ತದೆ.

ಸಾಮೂಹಿಕ ಚೌಕಾಶಿ ಸಂದರ್ಭದಲ್ಲಿ ಉದ್ಯಮ ಸಂಘಗಳು ಮತ್ತು ಕಾರ್ಮಿಕ ಸಂಘಗಳ ನಡುವೆ ಒಂದು ಒಪ್ಪಂದವಾಗಿ ಒಂದು ಹಂತದ ಕೂಲಿ ದರ ನಿರ್ಧಾರವಾಗುತ್ತದೆ. ಕಾರ್ಮಿಕ ಸಂಘಗಳು ಉಪೇಕ್ಷಿತ ರೇಖೆ IC4ರಲ್ಲಿ ಗರಿಷ್ಠ ಮಟ್ಟದ ಕೂಲಿಯನ್ನು W4ನ್ನು ಪಡೆಯುತ್ತವೆ. ಆ ಒಂದು ಹಂತದಲ್ಲಿ ಸರಾಸರಿ ನಿವ್ವಳ ಉತ್ಪಾದಕತೆ ರೇಖೆಯನ್ನು ಸೀಮಾಂತ ನಿವ್ವಳ ಆದಾಯ ಉತ್ಪಾದಕತೆ ರೇಖೆಯನ್ನು ಮೇಲಿನಿಂದ (ಅಥವಾ ಕೆಳಗಿನಿಂದ) ಭೇದಿಸಿದೆ ಹಾಗೂ ಸರಾಸರಿ ನಿವ್ವಳ ಆದಾಯ ಉತ್ಪಾದಕತೆ ರೇಖೆ ಉಪೇಕ್ಷಿತ ರೇಖೆ IC4ನ್ನು 'T' ಬಿಂದುವಿನಲ್ಲಿ ಸ್ಪರ್ಶಿಸುವುದರಿಂದ ON ಉದ್ಯೋಗದ ಮಟ್ಟದಲ್ಲಿ OW4 ಅಥವಾ 'TN' ಮಟಟದ ಕೂಲಿಯ ದರ ನಿರ್ಧಾರವಾಗುತ್ತದೆ. ಅದು ಸಮತೋಲನ ಬಿಂದು ಸಹ ಆಗಿದೆ. W4ಕ್ಕಿಂತ ಅಧಿಕ ಕೂಲಿ W4 ಕೂಲಿಯನ್ನು ನೀಡಲು ಉದ್ಯಮ ಸಂಘಗಳು ಒಪ್ಪುವುದಿಲ್ಲ ಮತ್ತು W4ಕ್ಕಿಂತ ಕಡಿಮೆ ಕೂಲಿ W3 ಅಥವಾ W2 ಕೂಲಿಯನ್ನು ಪಡೆಯಲು ಕಾರ್ಮಿಕ ಸಂಘಗಳು ಒಪ್ಪುವುದಿಲ್ಲ. ಹೀಗೆ ಕಾರ್ಮಿಕ ಸಂಘಗಳು ಮತ್ತು ಉದ್ಯಮ ಸಂಘಗಳು ಒಪ್ಪಿದ ದರದಲ್ಲಿ ಕೂಲಿ ನಿರ್ಧಾರವಾಗುತ್ತದೆ.

ಈ ರೀತಿಯ ಕೂಲಿಯ ನಿರ್ಧಾರವು ಸಂಘಟಿತ ವಲಯದ ಕಾರ್ಮಿಕ ಮಾರುಕಟ್ಟೆಯಲ್ಲಿ ಕಂಡುಬರುತ್ತದೆ.

### ಮಹಿಳಾ ಶ್ರಮ ಮಾರುಕಟ್ಟೆ ಸಿದ್ಧಾಂತಗಳು

ಮಹಿಳಾ ಕಾರ್ಮಿಕರು ಅನಕ್ಷರಸ್ಥರು, ಅಕುಶಲಿಗಳು, ಶಿಕ್ಷಣ ಮತ್ತು ತರಬೇತಿ ಪಡೆಯದವರು ಮತ್ತು ಜೈವಿಕ ಕ್ರಿಯೆಗೆ ಒಳಪಟ್ಟು ಬದುಕು ಸಾಗಿಸುವವರು ಆಗಿರುತ್ತಾರೆ. ಹೀಗಾಗಿ ಅವರು ಕೌಶಲ್ಯ ರಹಿತ, ಪ್ಲೆಗ್ಸಿಸಿಬಲ್ ಸ್ವರೂಪದ ಕೆಲಸ ದೊರೆಯುವ ಅಸಂಘಟಿತ ವಲಯದಲ್ಲಿ ದುಡಿಯುವವರಾಗಿರುತ್ತಾರೆ. ಆದ್ದರಿಂದಾಗಿ ಶ್ರಮ ಮಾರುಕಟ್ಟೆಯಲ್ಲಿ ಅವರ ಸಂಖ್ಯೆ ಅಧಿಕವಿರುವುದರಿಂದ ಕಡಿಮೆ ಕೂಲಿ ಅಥವಾ ಕಡಿಮೆ ಕೂಲಿ ದರ ಒಪ್ಪಿಕೊಂಡು ದುಡಿಯವವರಾಗಿರುತ್ತಾರೆ. ಇಂತಹ ಕಾರ್ಮಿಕರ ಬಗ್ಗೆ ಕೆಲ ಅರ್ಥಶಾಸ್ತ್ರಜ್ಞರು ಶ್ರಮ ಮಾರುಕಟ್ಟೆ ಸಿದ್ಧಾಂತವನ್ನು ಮಂಡಿಸಿದ್ದಾರೆ. ಅವುಗಳಲ್ಲಿ ಗೇರಿ ಡೆಕ್ಕರ್ ಅವರ ತಾರತಮ್ಯ ಸಿದ್ಧಾಂತ, ಬರ್ಮನ್ ಲೇಡಿ ಅವರ ಶ್ರಮ ವಿಭಜನೆ ಸಿದ್ಧಾಂತ ಮತ್ತು ಡೋರಿಂಗರ್ ಮತ್ತು ಪೈರೇ ಅವರ ದ್ವಿವಿಧ ಮಾರುಕಟ್ಟೆ ಸಿದ್ಧಾಂತಗಳು ಪ್ರಮುಖವಾಗಿವೆ.

ಗೇರಿ ಡೆಕ್ಕರ್ ಅವರು ಅಮೇರಿಕಾದಲ್ಲಿದ್ದ ಕಪ್ಪುಜನರ ವರ್ಣತಾರತಮ್ಯ ಮತ್ತು ಲಿಂಗತಾರತಮ್ಯವನ್ನು ವಿವರಿಸಲು ಈ ಸಿದ್ಧಾಂತ ಮಂಡಿಸುತ್ತಾರೆ. ಇವರು ತಮ್ಮ ಸಿದ್ಧಾಂತದಲ್ಲಿ ಶ್ರಮದ

ಮಾರುಕಟ್ಟೆಯಲ್ಲಿ ಉದ್ಯೋಗದ ವಿತರಣೆಯು ಮಾಲೀಕರ ಅಭಿರುಚಿ ಮತ್ತು ಆಸಕ್ತಿಯನ್ನು ಅವಲಂಬಿಸಿದರು. ಇದರಿಂದಾಗಿ ಕಪ್ಪು ವರ್ಣದ ಮಹಿಳೆಗೆ ಉನ್ನತ ಉದ್ಯೋಗಗಳನ್ನು ಹೊಂದಲು ಅವಕಾಶ ಇರುವುದಿಲ್ಲ. ಹೀಗಾಗಿ ಮಹಿಳೆಯರು ಕೆಳಮಟ್ಟದ ಉದ್ಯೋಗಗಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ. ಕಪ್ಪು ಮಹಿಳೆಯರು ಕೆಳಮಟ್ಟದ ಉದ್ಯೋಗದಲ್ಲಿ ತೊಡಗಿಕೊಂಡು ಉತ್ಪಾದನೆಯಲ್ಲಿ ತೊಡಗಿದರೂ ಅವರು ಉತ್ಪಾದಿಸಿದ ಸರಕಿಗೆ ಮಾರುಕಟ್ಟೆಯಲ್ಲಿ ಬೇಡಿಕೆ ಇರುವುದಿಲ್ಲ. ಆದರೆ ಉನ್ನತ ಉದ್ಯೋಗದಲ್ಲಿ ತೊಡಗಿದ ಬಿಳಿಯ ಪುರುಷ ತಯಾರಿಸಿದ ಸರಕುಗಳಿಗೆ ಬೇಡಿಕೆ ಅಧಿಕವಿರುತ್ತದೆ. ಹೀಗಾಗಿ ಈ ಮಾರುಕಟ್ಟೆಯಲ್ಲಿ ಸಾಮಾಜಿಕ ವ್ಯವಸ್ಥೆ, ಪೂರ್ವಗ್ರಹಗಳು ಮತ್ತು ಆಸಕ್ತಿ-ಅಭಿರುಚಿಗಳು ತಾರತಮ್ಯದ ನೆಲೆಗಳಾಗಿ ಕಾರ್ಯನಿರ್ವಹಿಸುತ್ತವೆ ಎಂದು ಗೇರಿ ಚಕ್ಕರ್ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಬರ್ಮನ್ ಲೇಡಿಯವರು ಚಿಕ್ಕೆರವರ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾರೆ. ಶ್ರಮದ ಮಾರುಕಟ್ಟೆಯಲ್ಲಿ ಉದ್ಯೋಗದ ವಿಭಜನೆಯಾಗುತ್ತದೆ. ಮಹಿಳೆಗೆ ಅನೇಕ ಸಾಮಾಜಿಕ ಕಾರಣಗಳನ್ನು ಹೇರಿ ಅವಳನ್ನು ಉದ್ಯೋಗದ ಮಾರುಕಟ್ಟೆಯಿಂದ ದೂರ ಮಾಡಲಾಗುತ್ತದೆ. ಸಾಮಾಜಿಕ ಮೌಲ್ಯ ಮತ್ತು ಪಿತೃಪ್ರಧಾನತೆ ಕಾರಣದಿಂದಾಗಿ-ಶ್ರಮ ಮಾರುಕಟ್ಟೆಯನ್ನು ಸಾಮಾನ್ಯ ಮಾರುಕಟ್ಟೆ ಮತ್ತು ಉನ್ನತ ಮಟ್ಟದ ಮಾರುಕಟ್ಟೆ ಎಂದು ಎರಡು ವಿಧದಲ್ಲಿ ವಿಂಗಡಿಸಲಾಗುತ್ತದೆ. ಸಾಮಾನ್ಯ ಮಾರುಕಟ್ಟೆಯಲ್ಲಿ ಮಹಿಳೆಯರು ದುಡಿಯುತ್ತಿದ್ದರೆ ಉನ್ನತ ಮಟ್ಟದ ಮಾರುಕಟ್ಟೆಯಲ್ಲಿ ಪುರುಷರು ದುಡಿಯುತ್ತಿರುತ್ತಾರೆ. ಹೀಗಾಗಿ ಶ್ರಮದ ಮಾರುಕಟ್ಟೆ ಎರಡು ವಿಧದಲ್ಲಿ ವಿಭಜನೆಯಾಗುತ್ತದೆ ಎಂಬ ಅಭಿಪ್ರಾಯ ಬರ್ಮನ್ ಅವರದಾಗಿದೆ.

ಮತ್ತೊಬ್ಬ ಅರ್ಥಶಾಸ್ತ್ರಜ್ಞ ಡೋರಿಂಗ್ ಮತ್ತು ಪೈರೇ ಅವರು ಪ್ರಾಥಮಿಕ ಮತ್ತು ಪೂರಕ ಮಾರುಕಟ್ಟೆ ಎಂಬ ಎರಡು ವಿಧದ ಮಾರುಕಟ್ಟೆಯ ಸಿದ್ಧಾಂತವನ್ನು ಮಂಡಿಸುತ್ತಾರೆ. ಪ್ರಾಥಮಿಕ ಮಾರುಕಟ್ಟೆಯು ಸಂಘಟಿತ ಕಾರ್ಮಿಕರು ಮತ್ತು ಪುರುಷ ಕಾರ್ಮಿಕರು ಅಧಿಕವಿರುವ ಮಾರುಕಟ್ಟೆಯಾಗಿದ್ದರೆ ಪೂರಕ ಮಾರುಕಟ್ಟೆಯು ಅಸಂಘಟಿತ ಕಾರ್ಮಿಕರು ಮತ್ತು ಮಹಿಳಾ ಕಾರ್ಮಿಕರು ಅಧಿಕವಿರುವ ಮಾರುಕಟ್ಟೆಯಾಗಿರುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪ್ರಾಥಮಿಕ ಮಾರುಕಟ್ಟೆಯಲ್ಲಿ ಉನ್ನತ ಮಟ್ಟದ ಉದ್ಯೋಗ, ಉದ್ಯೋಗದ ಭರವಸೆ, ನಿಯಮಿತ ಆದಾಯ, ಶ್ರೇಷ್ಠಮಟ್ಟದ ಮಾರುಕಟ್ಟೆ, ಆಡಳಿತದಲ್ಲಿ ಕಾರ್ಮಿಕರ ಭಾಗವಹಿಸುವಿಕೆ, ಉದ್ಯೋಗದ ಶ್ರೇಣಿ, ಮಾರುಕಟ್ಟೆಯ ಪ್ರವೇಶ ನಿರ್ಬಂಧಿತ ಮತ್ತು ಅರ್ಹತೆಯನ್ನು ಅವಲಂಬಿಸಿರುತ್ತದೆ. ಮತ್ತು ಕಾರ್ಮಿಕರ ಹಕ್ಕುಗಳಿಗೆ ಮಾನ್ಯತೆ ಇರುತ್ತದೆ. ಆದರೆ ಪೂರಕ ಮಾರುಕಟ್ಟೆಯಲ್ಲಿ ಫ್ಲೆಕ್ಸಿಬಲ್ ಗುಣ. ಉದ್ಯೋಗದ ಅಭದ್ರತೆ, ಕಾರ್ಮಿಕರ ಹಕ್ಕುಗಳಿಗೆ ಮಾನ್ಯತೆಗಳಿರುವುದಿಲ್ಲ. ಈ ಮಾರುಕಟ್ಟೆ

ಯಾವುದೇ ಕಾಯ್ದೆ ಕಾನೂನು ಅನ್ವಯಿಸುವುದಿಲ್ಲ. ಕೆಲಸದ ಅವಧಿ ನಿರ್ದಿಷ್ಟವಾಗಿರುವುದಿಲ್ಲ. ಮಾರುಕಟ್ಟೆಸೆ ಪ್ರವೇಶ ಮುಕ್ತವಾಗಿರುತ್ತದೆ. ಬಡವರು ಮತ್ತು ಮಹಿಳೆಯರು ಈ ಮಾರುಕಟ್ಟೆಯಲ್ಲಿ ಅಧಿಕ ಸಂಖ್ಯೆಯಲ್ಲಿರುತ್ತಾರೆ. ಅಸಂಘಟಿತರು, ಅಕುಶಲಿಗಳು ಅಧಿಕವಿದ್ದು ಸುಲಭವಾಗಿ ಶೋಷಣೆಗೆ ಒಳಗಾಗುವವರಾಗಿರುತ್ತಾರೆ. ಇಂತಹ ಲಕ್ಷಣ ಹೊಂದಿದ ಕಾರ್ಮಿಕರು ಪೂರಕ ಮಾರುಕಟ್ಟೆಯಲ್ಲಿ ದುಡಿಯುವವರಾಗಿರುತ್ತಾರೆ.

ಮಹಿಳಾ ಕಾರ್ಮಿಕರಿಗೆ ಮಾನವ ಬಂಡವಾಳದ ಕೊರತೆ ಮತ್ತು ಸಾಮಾಜಿಕ ನಿರ್ಬಂಧಗಳು ಅಧಿಕ ಇರುವುದರಿಂದ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ಪೂರಕ ಮಾರುಕಟ್ಟೆಯಲ್ಲಿ ಉಳಿದು ಬಿಡುತ್ತಾನೆ. ಹೀಗಾಗಿ ಪೂರಕ ಮಾರುಕಟ್ಟೆ ಮಹಿಳಾ ಕೇಂದ್ರಿಕೃತವಾಗುತ್ತದೆ. ಪ್ರಾಥಮಿಕ ಮಾರುಕಟ್ಟೆಯು ಪುರುಷಕೇಂದ್ರಿತವಾಗುತ್ತದೆ.

**ಪೂರಕ ಮಾರುಕಟ್ಟೆಯಲ್ಲಿ ಕೂಲಿ ನಿರ್ಧಾರ**

ಪೂರಕ ಮಾರುಕಟ್ಟೆಯಲ್ಲಿ ಕೂಲಿಯ ನಿರ್ಧಾರ ಬೇಡಿಕೆ ಮತ್ತು ಪೂರೈಕೆ ಅಂಶಗಳಿಂದ ನಿರ್ಧಾರವಾಗುತ್ತದೆ. ಆದರೆ ಈ ಮಾರುಕಟ್ಟೆಯಲ್ಲಿ ಕಾರ್ಮಿಕರ ಬೇಡಿಕೆಗಿಂತ ಪೂರೈಕೆ ಅಧಿಕವಾಗಿರುವುದರಿಂದ ಕಾರ್ಮಿಕರು ಪಡೆಯುವ ಕೂಲಿಯು ಕಡಿಮೆ ಇರುತ್ತದೆ. ಅದನ್ನು ಈ ಕೆಳಗಿನ ರೇಖಾಚಿತ್ರದಲ್ಲಿ ಕಾಣಬಹುದು.




DD = ಬೇಡಿಕೆ

S1S2 = ಪೂರೈಕೆ

N1 N2 = ಶ್ರಮ

W1 W2 = ಕೂಲಿ

A B = ಸಮತೋಲನ ಬಿಂದುಗಳು

ರೇಖಾಚಿತ್ರದಲ್ಲಿ ತೋರಿಸಿದಂತೆ ಕಾರ್ಮಿಕರ ಬೇಡಿಕೆಯು ಸ್ಥಿರವಾಗಿದ್ದು ಪೂರೈಕೆಯು ಅಧಿಕವಾಗಿರುವುದರಿಂದ ಕಾರ್ಮಿಕರು ಪಡೆಯುವ ಕೂಲಿ ಸಹ ಕಡಿಮೆಯಾಗುತ್ತದೆ. ಶ್ರಮದ ಪೂರೈಕೆ N1 ದಿಂದ N2ಗೆ ಅಥವಾ S1 ರಿಂದ S2 ಅಧಿಕವಾದಾಗ ಕೂಲಿದರ ಸಹ W1 ರಿಂದ W2ಗೆ ಕಡಿಮೆಯಾಗುತ್ತದೆ. ಹೀಗೆ ಅಸಂಘಟಿತ ಅಥವಾ ಪೂರಕ ಮಾರುಕಟ್ಟೆಯಲ್ಲಿ ದುಡಿಯುವ ಕಾರ್ಮಿಕರ ಪೂರೈಕೆ, ಬೇಡಿಕೆಗಿಂತ ಅಧಿಕವಿರುವುದರಿಂದ ಅವರು ಕಡಿಮೆ ಕೂಲಿ ಪಡೆಯುತ್ತಾರೆ.

ಪ್ರಾಥಮಿಕ ಮತ್ತು ಪೂರಕ ಮಾರುಕಟ್ಟೆಯಲ್ಲಿ ಕೂಲಿ ನಿರ್ಧಾರ




DD = ಶ್ರಮದ ಬೇಡಿಕೆ

SS = ಶ್ರಮದ ಪೂರೈಕೆ

N1 = ಪ್ರಾಥಮಿಕ ಮಾರುಕಟ್ಟೆ ಶ್ರಮ

N2 = ಪೂರಕ ಮಾರುಕಟ್ಟೆಯ ಶ್ರಮ

W1 = ಪ್ರಾಥಮಿಕ ಮಾರುಕಟ್ಟೆ ಕೂಲಿ

W2 = ಪೂರಕ ಮಾರುಕಟ್ಟೆ ಕೂಲಿ

ಪ್ರಾಥಮಿಕ ಮತ್ತು ಪೂರಕ ಮಾರುಕಟ್ಟೆ

**ಪ್ರಾಥಮಿಕ ಮತ್ತು ಪೂರಕ ಮಾರುಕಟ್ಟೆ**

ಪ್ರಾಥಮಿಕ ಮಾರುಕಟ್ಟೆಯು ಉನ್ನತ ಮಾರುಕಟ್ಟೆಯಾಗಿದ್ದು, ಇಲ್ಲಿನ ಕಾರ್ಮಿಕರು ಅಧಿಕ ಕೂಲಿಯನ್ನು ಪಡೆಯುತ್ತಿದ್ದರೆ, ಪೂರಕ ಮಾರುಕಟ್ಟೆಯು ಅಮುಖ್ಯವಾಗಿದ್ದು ಇಲ್ಲಿ ದುಡಿಯುವ ಕಾರ್ಮಿಕರು ಕಡಿಮೆ ಕೂಲಿಯನ್ನು ಪಡೆಯುತ್ತಿರುವುದು ಮೇಲಿನ ರೇಖಾಚಿತ್ರದಿಂದ ತಿಳಿದುಬರುತ್ತದೆ.

ಶ್ರಮ ಮಾರುಕಟ್ಟೆ ಸಿದ್ಧಾಂತಗಳನ್ನು ಗಮನಿಸಿದರೆ ಕಾರ್ಮಿಕರಿಗೆ ಜೀವನಾಧಾರ ಕೂಲಿ ನೀಡಬೇಕು ಎಂಬ ಅಂಶ ಬೆಳಕಿಗೆ ಬರುತ್ತಿದೆ. ಪೂರಕ ಮಾರುಕಟ್ಟೆಯಲ್ಲಿ ದುಡಿಯುವ ಕಾರ್ಮಿಕರು ಕಡಿಮೆ ಕೂಲಿ ಪಡೆಯುತ್ತಿರುವುದು ಸ್ಪಷ್ಟವಾಗುತ್ತಿದೆ. ಇಂದು ಕಾರ್ಮಿಕರು ಸಂಘಟಿತರಾಗಿ ಹೋರಾಟ ಮಾಡುವ ಸಾಮರ್ಥ್ಯ ಪಡೆದಿದ್ದರೂ ಅವರ ಮೇಲಿನ ದೌರ್ಜನ್ಯ ಮತ್ತು ಶೋಷಣೆ ನಿಲ್ಲದಂತೆ ನಿರಂತರವಾಗಿ ನಡೆಯುತ್ತಿದೆ. ಇವರಲ್ಲಿ ಕಾರ್ಮಿಕ ಸಂಘಗಳಿಲ್ಲದ ಅಸಂಘಟಿತ ಕಾರ್ಮಿಕರು ಮತ್ತು ಮಹಿಳೆಯರು ತೊಂದರೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ.

**೪.೫. ಕಲ್ಯಾಣಪರ ಅಭಿವೃದ್ಧಿ ಸಿದ್ಧಾಂತ**

ಇತ್ತೀಚೆಗೆ ಕಲ್ಯಾಣಪರ ಅರ್ಥಶಾಸ್ತ್ರ ಪ್ರಾಮುಖ್ಯತೆಯನ್ನು ಪಡೆಯುತ್ತಿದ್ದು, ರಾಷ್ಟ್ರದಲ್ಲಿ ಅಸಮಾನತೆ, ಬಡತನ ಮತ್ತು ಲಿಂಗ ಅಸಮಾನತೆ ನಿವಾರಿಸುವಲ್ಲಿ ಪ್ರಯತ್ನವನ್ನು ಮಾಡುತ್ತಿದೆ. ಎ.ಸಿ.ಪೀಗೊ ಪ್ಯಾರೋಟೊ, ವಿ.ನೋರ್ಧಾಸ್, ಪ್ರೊ.ಗ್ರಾಫ್, ಬೆರ್ಗಿಸನ್, ಸ್ಯಾಮ್ಯುವೆಲ್ ಸನ್ ಮತ್ತು ಮೊರಿಸ್ ಡಿ. ಮತ್ತು ಜೆ.ಟಾಬಿನ್ ಮತ್ತು ಮೋರಿಸ್ ಅ ಅವರು ಪ್ರಮುಖ ಕಲ್ಯಾಣ ಅರ್ಥಶಾಸ್ತ್ರಜ್ಞರಾಗಿದ್ದು, ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಕಲ್ಯಾಣದ ಬಗ್ಗೆ ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ.[೨೫]

ಇವು ತಮ್ಮ ಸಿದ್ಧಾಂತಗಳಲ್ಲಿ ವ್ಯಕ್ತಿಯ ವೈಯಕ್ತಿಕ ಕಲ್ಯಾಣದ ಜೊತೆ ಸಾಮಾಜಿಕ ಕಲ್ಯಾಣಕ್ಕೆ ಪ್ರಾಶಸ್ತ್ಯ ನೀಡಿದ್ದಾರೆ. ಪ್ರತಿಯೊಬ್ಬರ ಕಲ್ಯಾಣವನ್ನು ಸಾಧಿಸುವುದು ರಾಷ್ಟ್ರಗಳ ಕರ್ತವ್ಯ. ಅದಕ್ಕಾಗಿ ಯೋಚಿಸಿ ಮತ್ತು ಕಾರ್ಯಕ್ರಮಗಳನ್ನು ರೂಪಿಸಬೇಕು. ಸಮಾಜದಲ್ಲಿ ಅನಿವಾರ್ಯ ಅಸಮಾನತೆ, ವರ್ಗ ಅಸಮಾನತೆ, ಬಡತನ ಮತ್ತು ಅನಕ್ಷರತೆ ಇತ್ಯಾದಿಗಳನ್ನು ತೊಡೆದು ಹಾಕುವ ಮೂಲಕ ಸಾಮಾಜಿಕ ಕಲ್ಯಾಣವನ್ನು ಸಾಧಿಸಬೇಕೆಂದು ಒಂದು ಸಿದ್ಧಾಂತವನ್ನು ಮಂಡಿಸಿದ್ದಾರೆ. ಆರ್ಥಿಕ ಅಭಿವೃದ್ಧಿ ಒಂದೇ ಅಭಿವೃದ್ಧಿಯ ಮಾನದಂಡವಲ್ಲ ಅದರ ಜೊತೆಗೆ ಜನರ ಕಲ್ಯಾಣ ಅಥವಾ ಯೋಗಕ್ಷೇಮ ವೃದ್ಧಿಯಾದರೆ ಮಾತ್ರ ಅಭಿವೃದ್ಧಿ ಸಾಧ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಅದಕ್ಕಾಗಿ ಅಭಿವೃದ್ಧಿಯ ಪರಿಕಲ್ಪನೆಯನ್ನೇ ಬದಲಿಸಿ PQLI, HDI ಮತ್ತು GDI ಎಂಬ ಹೊಸ ಅಭಿವೃದ್ಧಿ ಪರಿಕಲ್ಪನೆಯನ್ನು ಹುಟ್ಟು ಹಾಕಿದ್ದಾರೆ.

### ಭೌತಿಕ ಗುಣಮಟ್ಟದ ಅನುಸೂಚಿ(Physical Quality of Life Index)

ಮೋರಿಸ್ ಡಿ.ಮಾರಿಸ್ ಅವರು ಭೌತಿಕ ಗುಣಮಟ್ಟದ ಅನುಸೂಚಿ ಕಲ್ಪನೆಯ ಪ್ರತಿಪಾದಕರು. ಇವರ ಪ್ರಕಾರ 'ಜೀವನದ ಭೌತಿಕ ಗುಣಮಟ್ಟ ಎಂಬುದು ಜನರ ಜೀವನಕ್ಕೆ ಅಗತ್ಯವಿರುವ ಮೂಲ ಸೌಕರ್ಯಗಳನ್ನು ಪ್ರತಿಬಿಂಬಿಸುತ್ತದೆ. ಅದಕ್ಕಾಗಿ ಈ ಮೂಲ ಸೌಕರ್ಯಗಳ ಸಹಾಯದಿಂದ ಜನರ ಜೀವನದ ಭೌತಿಕ ಗುಣಮಟ್ಟವನ್ನು ಸುಧಾರಿಸಿದಾಗ ಆರ್ಥಿಕ ಕ್ಷೇಮಾಭ್ಯುದಯದ ಸುಧಾರಣೆ ಸಾಧ್ಯವಾಗುತ್ತದೆ. ಇದರಿಂದ ಜನರ ಕಲ್ಯಾಣ ಸಾಧ್ಯವಾಗುತ್ತದೆ'[೩೦] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಭೌತಿಕ ಗುಣಮಟ್ಟದ ಅನುಸೂಚಿಯನ್ನು ಶಿಶುಮರಣ, ಜೀವನ ನಿರೀಕ್ಷೆ ಮತ್ತು ಸಾಕ್ಷರತೆ ಆಧಾರದ ಮೇಲೆ ಆಳೆಯಲಾಗುತ್ತದೆ.

### ಮಾನವ ಅಭಿವೃದ್ಧಿ ಅನುಸೂಚಿ(Human Development Index)

ಇಂದು ಅಭಿವೃದ್ಧಿಯನ್ನು ಮಾನವ ಅಭಿವೃದ್ಧಿ ಅನುಸೂಚಿ ಮೂಲಕ ಅಳೆಯಲಾಗುತ್ತದೆ. ಎಚ್.ಐ.ಡಿ.ಯನ್ನು ವಿಶ್ವಸಂಸ್ಥೆಯ ಅಂಗಸಂಸ್ಥೆ UNDP(ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ) ಎಂಬ ಅಂಗಸಂಸ್ಥೆಯು ೧೯೯೦ರಲ್ಲಿ ಈ ಪರಿಕಲ್ಪನೆಯನ್ನು ಅಭಿವೃದ್ಧಿಪಡಿಸಿದೆ. ಇದರ ಪ್ರಕಾರ ಜೀವನ ನಿರೀಕ್ಷೆ, ವಯಸ್ಕ ಶಿಕ್ಷಣ ಮತ್ತು ಜೀವನ ಮಟ್ಟವನ್ನು ಆಧಾರವಾಗಿ ಇಟ್ಟುಕೊಂಡು ಅಭಿವೃದ್ಧಿಯನ್ನು ಮಾಪನ ಮಾಡಲಾಗುತ್ತದೆ. ಈ ಕಲ್ಪನೆ ಅಭಿವೃದ್ಧಿಯಲ್ಲಿ ಅಮರ್ತ್ಯಸೇನ್ ಮತ್ತು ಮಹಬೂಬ್ ಉಲ್ ಹಕ್ ಅವರ ಪಾತ್ರ ಮಹತ್ವದ್ದಾಗಿದೆ. ಇಂದು ಇದನ್ನು ಅಭಿವೃದ್ಧಿಯ ಸೂಚಕವಾಗಿ ಬಳಸಲಾಗುತ್ತಿದ್ದು, ಮಾನವ ಅಭಿವೃದ್ಧಿ ಸೂಚಿಯಲ್ಲಿ ಭಾರತ ೨೦೧೮ರಲ್ಲಿ ೧೩೪ನೇ ಸ್ಥಾನದಲ್ಲಿರುವುದು ಕಂಡುಬರುತ್ತಿದೆ.

## ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕ(Gender-releted Development Index)

ಯುಎನ್‌ಡಿಪಿಯು ಅಮರ್ತ್ಯಸೇನ್ ಮತ್ತು ಇತರರ ಸಹಾಯದಿಂದ ಜಿಡಿಐ ಎಂಬ ಕಲ್ಪನೆಯನ್ನು ಅಬಿವೃದ್ಧಿಪಡಿಸಿದೆ. 'ಲಿಂಗಸಂಬಂಧಿ ಅಭಿವೃದ್ಧಿ ಸೂಚ್ಯಂಕದಲ್ಲಿ ಒಂದು ರಾಷ್ಟ್ರದಲ್ಲಿನ ಸ್ತ್ರೀ ಮತ್ತು ಪುರುಷರ ನಡುವಿನ ಸಮಾನತೆಯನ್ನು ಗುರುತಿಸಲಾಗುತ್ತದೆ. ಮಾನವ ಅಭಿವೃದ್ಧಿ ಸೂಚಿಯಲ್ಲಿ ಪರಿಗಣಿಸಿದ ಎಲ್ಲ ಅಂಶಗಳನ್ನು ಅಥವಾ ಮಾನದಂಡಗಳನ್ನು ಲಿಂಗಸಂಬಂಧಿ ನೆಲೆಯಿಂದ ಮಾಪನ ಮಾಡುವ ಮೂಲಕ ಸ್ತ್ರೀ ಮತ್ತು ಪುರುಷರ ಸಮಾನತೆಯನ್ನು ಆಧರಿಸಿ' ಲಿಂಗಸಂಬಂಧಿ ಅಬಿವೃದ್ಧಿ ಸೂಚ್ಯಂಕವನ್ನು ಗುರುತಿಸಲಾಗುತ್ತದೆ.[೫]

ಈ ಕಲ್ಪನೆಯಿಂದಾಗಿ ಇಂದು ಲಿಂಗ ಅಸಮಾನತೆ ಮತ್ತು ಲಿಂಗಸಂಬಂಧಿ ಅಧ್ಯಯನಗಳು ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಅಭಿವೃದ್ಧಿಗೆ ಮಹಿಳೆ ಬೇಕಿಲ್ಲ ಎಂಬುದರ ಬದಲಾಗಿ ಅಭಿವೃದ್ಧಿಗೆ ಮಹಿಳೆ ಬೇಕು. ಅಭಿವೃದ್ಧಿಯಲ್ಲಿ ಮಹಿಳೆ ಎಂಬ ಚಿಂತನೆ ಬೆಳೆದಿದೆ. ಹೀಗೆ ಆರ್ಥಿಕ ಸಿದ್ಧಾಂತಗಳು ಅಭಿವೃದ್ಧಿಯ ಕಲ್ಪನೆಯನ್ನು ಬೇರೆ ಬೇರೆ ದೃಷ್ಟಿಕೋನದಲ್ಲಿ ನೋಡಿರುವುದು ಸ್ಪಷ್ಟವಾಗುತ್ತದೆ.

ಹೀಗೆ ಅಭಿವೃದ್ಧಿ ಎಂಬ ಕಲ್ಪನೆಯ ರಾಷ್ಟ್ರೀಯ ಆದಾಯದ ಹೆಚ್ಚಳ, ತಲಾ ಆದಾಯದಲ್ಲಿ ಹೆಚ್ಚಳ, ಸಾಮಾಜಿಕ ಕಲ್ಯಾಣ ಮತ್ತು ಸಾಮಾಜಿಕ ನ್ಯಾಯ ಎಂಬ ಅಂಶಗಳಿಗೆ ಒತ್ತುಕೊಟ್ಟು ಅಭಿವೃದ್ಧಿಯನ್ನು ಮಾಪನ ಮಾಡಲಾಗುತ್ತ ಬಂದಿದೆ. ಇಂದು ಅಭಿವೃದ್ಧಿಯಲ್ಲಿ ಮಹಿಳೆ ಭಾಗವಹಿಸುವಿಕೆ ಅತೀ ಮುಖ್ಯ ಎಂಬ ಅಂಶಕ್ಕೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಹೀಗಾಗಿ ಇಂದು ಅಭಿವೃದ್ಧಿಯಲ್ಲಿ ಮಹಿಳೆ(Women in Develpment), ಮಹಿಳೆ ಮತ್ತು ಅಭಿವೃದ್ಧಿ(Women and Development) ಮತ್ತು ಲಿಂಗಸಂಬಂಧಿ ಅಭಿವೃದ್ಧಿ(Gender Development Index) ಎಂಬ ಸೂಚ್ಯಂಕಗಳು ಬೆಳೆಯುತ್ತಿರುವುದು ಅಭಿವೃದ್ಧಿಯ ದಿಕ್ಕನ್ನೇ ಬದಲಾಯಿಸಿದೆ ಎಂದರೆ ತಪ್ಪಗಲಾರದು.

**ಅಡಿಟಿಪ್ಪಣಿಗಳು**

೧. ಅಗರವಾಲ ಮತ್ತು ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧೦.೧-೧೦.೮

೨. ಅದೇ, ಪು.೧೦.೧-೧೦.೩ ಮತ್ತು ಆ್ಯಂಡ್‌ಸ್ಮಿತ್, ೧೯೭೬, ಆ್ಯನ್ ಎನ್‌ಕ್ವಾರಿ ಇನ್ ಟು ದ ನೇಚರ್ ಆ್ಯಂಡ್ ಕಾಸಸ್ಸ್ ಆಫ್ ದ ವೆಲ್ತ್ ಆಫ್ ನೇಷನ್

೩. ಅದೇ, ಪು.೧೧.೧-೧೧.೬

೪. ಮಾರ್ಕ್‌ಬ್ಲಾಗೊ, ೧೯೮೨, ಎಕಾನಮಿಕ್ ಥೇರಿ ಇನ್ ರೀಟ್ರಾಸ್‌ಪೆಕ್ಟ್, ಪು.೨೫

೫. ಅಗರವಾಲ ಮತ್ತು ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧೨.೧-೧೨.೪

೬. ಬೆಂಜಮನ್ ಹೈನನ್, ೧೯೬೬, ಎಕಾನಮಿಕ್ ಡೆವಲಪ್‌ಮೆಂಟ್ ಸೆಂಟ್ರಲ್ ರೀಪೋರ್ಟ್, ಪು.೩೦

೭. ಜಿಂಗನ್ ಎಂ.ಎಲ್., ೨೦೦೯, ದ ಎಕಾನಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೮೭

೮. ಅದೇ, ಪು.೮೮

೯. ಅದೇ, ಪು.೮೯

೧೦. ಅದೇ, ಪು.೯೫-೯೬

೧೧. ಅದೇ, ಪು.೯೬ ಮತ್ತು ಅಗರವಾಲ ಮತ್ತು ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧೩.೨

೧೨. ಅದೇ, ಪು.೧೨.೩-೧೩.೭

೧೩. ಅದೇ, ಪು.೧೫.೧-೧೫.೨

೧೪. ಜಿಂಗನ್ ಎಂ.ಎಲ್., ೨೦೦೯, ದ ಎಕಾನಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೨೪೩

೧೫. ಅದೇ, ಪು.೨೧೩

೧೬. ಅದೇ, ಪು.೧೪೬-೧೪೭

೧೭. ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧೮.೧-೧೮.೩

೧೮. ಜಿಂಗನ್ ಎಂ.ಎಲ್., ೨೦೦೯, ದ ಎಕಾನಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧೬೩

೧೯. ಅದೇ, ಪು.೧೮೧

೨೦. ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೨೦.೧-೨೦.೨

೨೧. ಅದೇ, ಪು.೨೧.೧-೨೧.೩

೨೨. ಸುಂದರಂ ಕೆ.ಪಿ.ಎಲ್. ಮತ್ತು ವೈಶ್ಯ ಎಂ.ಸಿ., ೧೯೫೫, ಪ್ರಿನ್ಸಿಪಲ್ಸ್ ಆಫ್ ಎಕಾನಮಿಕ್ಸ್, ಪು.೫೦೨

೨೩. ಅದೇ, ಪು.೫೦೩

೨೪. ಅದೇ, ಪು.೫೦೪-೫೦೫

೨೫. ಅದೇ, ಪು.೫೦೬ ೫೦೭

೨೬. ಅದೇ, ಪು.೫೦೮

೨೭. ಅಹುಜಾ ಎಚ್.ಎಲ್., ೨೦೦೭, ಅಡ್ವಾನ್ಸಡ್ ಎಕಾನಮಿಕ್ ಥೇರಿ ಮೈಕ್ರೋ ಎಕಾನಮಿಕ್ ಅನಾಲಿಸಿಸ್, ಪು.೯೭೮

೨೮. ಅದೇ, ಪು.೧೦೦೩ ೧೦೦೪

೨೯. ಅದೇ, ಪು.೧೧೩ ೧೧೫

೩೦. ಕುಂದನ್ ಲಾಲ್, ೧೯೯೩, ಎಕಾನಮಿಕ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್, ಪು.೧.೫-೧.೯

೩೧. ಯು.ಎನ್.ಡಿ.ಪಿ.ಮಾನವ ಅಭಿವೃದ್ಧಿ ವರದಿ, ೧೯೯೫, ಪು.೭೩, ಪೆಟ್ಟಿಗೆ ಸಂಖ್ಯೆ ೩೧

# ಅಧ್ಯಾಯ ಐದು

## ಸಂಘಟಿತ-ಅಸಂಘಟಿತ ವಲಯಗಳು-ಮಹಿಳೆಯ ದುಡಿಮೆ

೫.೧. ಸಂಘಟಿತ ವಲಯದ ಅರ್ಥ ಮತ್ತು ಸ್ವರೂಪ

೫.೨. ಅಸಂಘಟಿತ ವಲಯದ ಹುಟ್ಟು, ಅರ್ಥ ಮತ್ತು ವ್ಯಾಖ್ಯಾನಗಳು

೫.೩. ಅಸಂಘಟಿತ ವಲಯದ ಸ್ವರೂಪ ಅಥವಾ ಲಕ್ಷಣಗಳು

೫.೪. ಅಸಂಘಟಿತ ವಲಯದ ದುಡಿಮೆಯಲ್ಲಿ ಮಹಿಳೆಯರು ತೊಡಗಲು ಕಾರಣಗಳು

೫.೫. ಅಸಂಘಟಿತ ವಲಯದ ವಿವಿಧ ವೃತ್ತಿಗಳು

೫.೬. ಅಸಂಘಟಿತ ವಲಯದ ವ್ಯಾಪ್ತಿ ಅಂಕಿ ಅಂಶಗಳನ್ನು ಆಧರಿಸಿ

೫.೭. ಅಸಂಘಟಿತ ವಲಯದಲ್ಲಿ ಕೃಷಿ ಮತ್ತು ಕಟ್ಟಡ ನಿರ್ಮಾಣ ಮಹಿಳಾ ಕಾರ್ಮಿಕರು

೫.೮. ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರ ಸ್ಥಿತಿಗತಿ ಹಾಗೂ ಸಮಸ್ಯೆಗಳು

೫.೯. ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಕ್ರಮಗಳು

೫.೧೦. ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರ ರಕ್ಷಣೆಗೆ ಸಂವಿಧಾನಾತ್ಮಕ ಮತ್ತು ಶಾಸನಾತ್ಮಕ ರಕ್ಷಣೆಗಳು.

ಐದು

## ಸಂಘಟಿತ-ಅಸಂಘಟಿತ ವಲಯಗಳು-ಮಹಿಳೆಯ ದುಡಿಮೆ

ಆರ್ಥಿಕತೆಯಲ್ಲಿ ದುಡಿಮೆಯ ಕ್ಷೇತ್ರವನ್ನು ಪ್ರಥಮ ವಲಯ, ದ್ವಿತೀಯ ವಲಯ ಮತ್ತು ತೃತೀಯ ವಲಯವೆಂದು ವಿಂಗಡಿಸಲಾಗುತ್ತದೆ. ಪ್ರಥಮ ವಲಯ ಕೃಷಿ ಹಾಗೂ ಕೃಷಿಸಂಬಂಧಿ ವೃತ್ತಿಗಳನ್ನೊಳಗೊಂಡರೆ, ದ್ವಿತಿಯ ವಲಯ ಕೈಗಾರಿಕೆ ಮತ್ತು ಸಣ್ಣ ಕೈಗಾರಿಕೆಗಳನ್ನು ಮತ್ತು ತೃತೀಯ ವಲಯವು ಸೇವಾವಲಯದಲ್ಲಿ ಬರುವ ವೃತ್ತಿಗಳನ್ನು ಒಳಗೊಂಡಿದೆ. ಈ ಮೂರು ವಲಯಗಳನ್ನು ಒಳಗೊಂಡಂತೆ ಆರ್ಥಿಕ ಕ್ಷೇತ್ರವನ್ನು ಅಥವಾ ದುಡಿಮೆಯ ಕ್ಷೇತ್ರವನ್ನು ಮತ್ತೆ ಎರಡು ವಿಧದಲ್ಲಿ ವಿಂಗಡಿಸಲಾಗುತ್ತದೆ. ಆ ಎರಡು ವಿಧದ ದುಡಿಮೆಯ ಕ್ಷೇತ್ರಗಳೆಂದರೆ ಸಂಘಟಿತ ವಲಯ ಮತ್ತು ಅಸಂಘಟಿತ ವಲಯ ಈ ದುಡಿಮೆಯ ಕ್ಷೇತ್ರಗಳನ್ನು ಸಂಘಟನೆಯ ಆಧಾರದ ಮೇಲೆ ವಿಂಗಡಿಸಿರುವುದರಿಂದ ಈ ವಲಯಗಳನ್ನು 'ಸಂಘಟಿತ' ಮತ್ತು 'ಅಸಂಘಟಿತ ವಲಯ'ಗಳೆಂದು ಕರೆಯಲಾಗುತ್ತದೆ. ಯಾವ ಕಾರ್ಮಿಕರು ಸಂವಿಧಾನ ಮತ್ತು ಸರಕಾರದ ಕಾಯ್ದೆಯ ಚೌಕಟ್ಟಿನೊಳಗೆ ಕಾರ್ಯ ನಿರ್ವಹಿಸುತ್ತಿರುವ, ನಿಯಮಾನುಸರ ವೇತನ ಪಡೆಯುವ, ಕೆಲಸದ ಭದ್ರತೆ ಮತ್ತು ಸಾಮಾಜಿಕ ಭದ್ರತೆಗಳನ್ನು ಹೊಂದಿರುವ, ತಮ್ಮ ಹಕ್ಕು ರಕ್ಷಣೆಗಾಗಿ ಸಂಘಟಿತ ಹೋರಾಟ ಮಾಡುವುದಕ್ಕಾಗಿ ಸಂಘ ಸಂಸ್ಥೆಗಳನ್ನು (ಕಾರ್ಮಿಕ ಸಂಘಟನೆಗಳನ್ನು) ಕಟ್ಟಿಕೊಂಡಿರುವ ಕಾರ್ಮಿಕರನ್ನು ಮತ್ತು ಆ ದುಡಿಮೆಯ ವಲಯವನ್ನು 'ಸಂಘಟಿತ ವಲಯ' ಎಂದು ಕರೆಯಲಾಗುತ್ತದೆ. ಸರಕಾರಿ ನೌಕರರು, ಕಾರ್ಮಿಕ ಸಂಘಟನೆ ಕಟ್ಟಿಕೊಂಡ ಕೈಗಾರಿಕೆ ಕಾರ್ಮಿಕರು ಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಆದರೆ ಈ ವಲಯಕ್ಕೆ ವಿರುದ್ಧವಾಗಿರುವಂಥ ದುಡಿಮೆಯ ಕ್ಷೇತ್ರವನ್ನು 'ಅಸಂಘಟಿತ ವಲಯ'ವೆಂದು ಕರೆಯಲಾಗುತ್ತದೆ. ಅಸಂಘಟಿತ ವಲಯದ ಕಾರ್ಮಿಕರು ಕಡಿಮೆ ವೇತನಕ್ಕೆ ಕೆಲಸದ ಬಗ್ಗೆ ನಿಯಮ-ನಿರ್ಬಂಧಗಳನ್ನು ವಿಧಿಸದೆ ಹೆಚ್ಚಿನ ಸಮಯದವರೆಗೆ ದುಡಿಯುತ್ತಿದ್ದು, ತಮ್ಮ ಹಕ್ಕುಗಳ ರಕ್ಷಣೆಗಾಗಿ ಯಾವುದೇ ಕಾರ್ಮಿಕ ಸಂಘಟನೆಗೆ ಸೇರದೆ ಅಸಂಘಟಿತರಾಗಿದ್ದು, ಕೆಲಸದ ಅಭದ್ರತೆ ಮತ್ತು ಸಾಮಾಜಿಕ ಭದ್ರತೆಗಳಿಂದ ವಂಚಿತರಾದ ಕಾರ್ಮಿಕರು ಅಸಂಘಟಿತರೆಂದೂ ಅವರು ದುಡಿಯುವ ವಲಯವನ್ನು ''ಅಸಂಘಟಿತ ವಲಯ''ವೆಂದೂ ಕರೆಯಲಾಗುತ್ತದೆ. ಈ ವಲಯದಲ್ಲಿ ಕೃಷಿ ಕಾರ್ಮಿಕರು, ಚಿಕ್ಕ, ಅತಿಚಿಕ್ಕ ರೈತರು, ಅರಣ್ಯಕಾರ್ಮಿಕರು, ಬೀಡಿ

ಕಾರ್ಮಿಕರು, ಅಗರಬತ್ತಿ ಕಾರ್ಮಿಕರು, ಗಾರ್ಮೆಂಟ್ ಕೆಲಸಗಾರರು, ಕಟ್ಟಡ ನಿರ್ಮಾಣ, ಮೀನುಗಾರರು ಮತ್ತು ಚಿಂದಿ ಆಯುವವರು ಇತ್ಯಾದಿ ಕಾರ್ಮಿಕರು ಅಸಂಘಟಿತ ವಲಯದ ವೃತ್ತಿಯಲ್ಲಿ ದುಡಿಯುತ್ತಿದ್ದಾರೆ.[೧]

ಸಂಘಟಿತ ವಲಯ ಎಂಬುದು ತುಂಬಾ ವಿಶಾಲವಾಗಿದ್ದು ಶೇಕಡ ೯೪ರಷ್ಟು ಜನರನ್ನು ತನ್ನ ಒಡಲಲ್ಲಿ ಇಟ್ಟುಕೊಂಡು ಸಲುಹುತ್ತಿದೆ. ೧೯೯೯-೨೦೦೦ರಲ್ಲಿ Notinal Sampal Survey Organisation(NSSO) ನಡೆಸಿದ ಸರ್ವೆ ಪ್ರಕಾರ ದೇಶದಲ್ಲಿ ಒಟ್ಟು ೩೯.೭ ಕೋಟಿ ಕಾರ್ಮಿಕರು ಸಂಘಟಿತ ಮತ್ತು 'ಅಸಂಘಟಿತ' ವಲಯದಲ್ಲಿ ದುಡಿಯುತ್ತಿದ್ದಾರೆ. ಆ ೩೯.೭ ಕೋಟಿ ದುಡಿಮೆಗಾರರಲ್ಲಿ ಕೇವಲ ೨.೮ ಕೋಟಿ ಕಾರ್ಮಿಕರು ಸಂಘಟಿತ ವಲಯದಲ್ಲಿ ಮತ್ತು ೩೬.೯ ಕೋಟಿ ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ ಎಂದು ತಿಳಿಸುತ್ತದೆ. ಒಟ್ಟು ೩೬.೯ ಕೋಟಿ ಅಸಂಘಟಿತ ವಲಯದ ಕಾರ್ಮಿಕರಲ್ಲಿ ೨೩.೭ ಕೋಟಿ ಕಾರ್ಮಿಕರು ಕೃಷಿ ಕ್ಷೇತ್ರದಲ್ಲಿ, ೧.೭ ಕೋಟಿ ಕಾರ್ಮಿಕರು ನಿರ್ಮಾಣ ಕಾರ್ಯದಲ್ಲಿ ೪.೧ ಕೋಟಿ ಕಾರ್ಮಿಕರು ಮ್ಯಾನುಫ್ಯಾಕ್ಚರಿಂಗ್ ಕಾರ್ಯದಲ್ಲಿ ಮತ್ತು ೩.೭ ಕೋಟಿ ಕಾರ್ಮಿಕರು ವ್ಯಾಪಾರ, ಸಾರಿಗೆ, ಸಂಪರ್ಕ ಸೇವೆ ಮತ್ತು ಇತರ ಸೇವೆಗಳಲ್ಲಿ ದುಡಿಯುತ್ತಿದ್ದಾರೆ ಎಂದು NSSO ಸರ್ವೆ ವರದಿ ತಿಳಿಸುತ್ತದೆ.[೨] ಅಲ್ಲದೆ 'ಅಸಂಘಟಿತ ವಲಯದಲ್ಲಿ' ದುಡಿಯುವ ಈ ದುಡಿಮೆಗಾರರಲ್ಲಿ ಶೇಕಡ ೯೨ರಷ್ಟು ಮಹಿಳಾ ಕಾರ್ಮಿಕರು, ಕೃಷಿ ಕಾರ್ಮಿಕರಾಗಿ, ಕಟ್ಟಡ ನಿರ್ಮಾಣ ಕಾರ್ಮಿಕರಾಗಿ, ಮೀನುಗಾರರಾಗಿ, ಮಡಿಕೆ, ಕುಡಿಕೆ, ಕುಂಬಾರಿಕೆ, ಪುಟ್ಟಿ ಎಣೆಯುವುದು, ನೇಯುವುದು, ಇತ್ಯಾದಿ ಗೃಹ ಸಂಬಂಧಿ ಉದ್ಯೋಗಗಳಲ್ಲಿ ಮತ್ತು ಖಾದಿ ತಯಾರಿಕೆ, ಅಗರಬತ್ತಿ ತಯಾರಿಕೆ ಮತ್ತು ಬಿದಿರಿನ ಬುಟ್ಟಿ ತಯಾರಿಕೆ ಇತ್ಯಾದಿ ವೃತ್ತಿಗಳಲ್ಲಿ ದುಡಿಯುತ್ತಿದ್ದಾರೆ. ಇವರು ಕಡಿಮೆ ಕೂಲಿ, ಕೆಲಸದ ಅಭದ್ರತೆ, ಕೆಲಸ ಮತ್ತು ವೇತನ ತಾರತಮ್ಯ, ಪುರುಷ ಕಾರ್ಮಿಕರಿಂದ ಶೋಷಣೆ, ಸಮಾಜದಲ್ಲಿ ಕಡಿಮೆ ಸ್ಥಾನ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚನೆ ಇತ್ಯಾದಿ ಸಮಸ್ಯೆಗಳಿಂದ ನರಳುತ್ತಿದ್ದಾರೆ. ಬಡತನದ ಭಾರ ಹೊತ್ತು ಬಡತನದ ನೆರಳಲ್ಲಿ ಬದುಕುತ್ತಿರುವ ಈ ದುಡಿಮೆಗಾರರ ಸಮಸ್ಯೆಗಳನ್ನು ಅಧ್ಯಯನ ಮಾಡುವುದು ಅವಶ್ಯವಿದೆ. ಅಸಂಘಟಿತ ವಲಯದ ಸ್ವರೂಪದ ಹಿನ್ನೆಲೆಯಲ್ಲಿ ಅದನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಸಂಘಟಿತ ವಲಯ ಎಂದರೆ ಏನು? ಅದರ ಸ್ವರೂಪ ಎಂತಹದು? ಸಂಘಟಿತ ವಲಯ ಎಂದರೇನು? ಅದರ ಲಕ್ಷಣಗಳಾವುವು? ಪ್ರಪಂಚದ ಯಾವ ರಾಷ್ಟ್ರಗಳಲ್ಲಿ ಅನೌಪಚಾರಿಕ ವಲಯ ಕಂಡುಬರುತ್ತದೆ? ಭಾರತದಲ್ಲಿ ಅಸಂಘಟಿತ ವಲಯದ ಗಾತ್ರ ಎಷ್ಟು? ಮಹಿಳೆಯರೇ ಯಾಕೆ? ಈ ವಲಯದಲ್ಲಿ ದುಡಿಯುತ್ತಿದ್ದಾರೆ? ಮಹಿಳಾ ಕಾರ್ಮಿಕರ ರಕ್ಷಣೆಗೆ ಮತ್ತು ಅಸಂಘಟಿತ ವಲಯದ ಕಾರ್ಮಿಕರ ರಕ್ಷಣೆ ಸರಕಾರ ಕೈಗೊಂಡ ಕ್ರಮಗಳಾವುವು? ಇತ್ಯಾದಿ ಅಂಶಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಅದನ್ನು ಈ ಮುಂದಿನಂತೆ ನೋಡಬಹುದು.

## ೫.೧. ಸಂಘಟಿತ ವಲಯದ ಅರ್ಥ ಮತ್ತು ಸ್ವರೂಪ

ಸಂಘಟಿತ ವಲಯ ಎಂಬುದು ದುಡಿಮೆಗಾರರು ತಮ್ಮ ಹಕ್ಕು ಮತ್ತು ರಕ್ಷಣೆಗಾಗಿ ಸಂಘಟಿತರಾಗಿರುವುದನ್ನು ತಿಳಿಸುತ್ತದೆ. "ಸಂವಿಧಾನ ಮತ್ತು ಸರಕಾರದ ಕಾಯಿದೆಯ ಚೌಕಟ್ಟಿನೊಳಗೆ ಕಾರ್ಯ ನಿರ್ವಹಿಸುವ, ಉದ್ಯೋಗ ಭದ್ರತೆ ನೀಡುವ, ನಿಯಮ ಅನುಸಾರ ಕೂಲಿ ನೀಡುವ, ಸಂಘಟಿತಗೊಂಡ ಕಾರ್ಮಿಕರಿರುವ ಹಾಗೂ ಉತ್ಪಾದನೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡಿರುವ ವಲಯವೇ ಸಂಘಟಿತ ವಲಯ." ಸಂಘಟಿತ ವಲಯದ ಕಾರ್ಮಿಕರು ಉದ್ಯೋಗ ಭದ್ರತೆಯನ್ನು ಉಳ್ಳವರಾಗಿದ್ದು, ನಿಯಮಿತವಾಗಿ ವೇತನ ಪಡೆಯುವವರಾಗಿರುತ್ತಾರೆ. ಕೆಲಸದ ನೀತಿ-ನಿಯಮಗಳಿಗೆ ಒಳಪಟ್ಟು, ತಮ್ಮ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಸಂಘಟಿತ ಹೋರಾಟ ಮಾಡುವವರಾಗಿದ್ದು, ಕಾಯ್ದೆಯ ಚೌಕಟ್ಟಿನಲ್ಲಿ ಕೆಲಸ ಮಾಡುವವರಾಗಿರುತ್ತಾರೆ.

ನ್ಯಾಷನಲ್ ಅಕೌಂಟ್ಸ್ ಸ್ಟೆಟಿಸ್ಟಿಕ್ಸ್(NAS- Natinal Accounts, statistics) ಪ್ರಕಾರ ಯಾವ ಉದ್ಯಮದಲ್ಲಿ ವರದಿ ರೂಪದಲ್ಲಿ, ನಿಯಮ ಅನುಸಾರ ಹೊರಡಿಸುವ ಮುಂಗಡ ಪತ್ರದ ಕಡತದಲ್ಲಿ ಅಂಕೆ ಸಂಖ್ಯೆಗಳು ಲಭ್ಯವಾಗುವ, ಸಾರ್ವಜನಿಕ ವಲಯದಲ್ಲಿ ವಾರ್ಷಿಕ ವರದಿ ತಯಾರಿಸುವ ಮತ್ತು ವಾರ್ಷಿಕ ಸರ್ವೆ ನಡೆಸುವಂತಹ ನೋಂದಾಯಿತ ಸಿದ್ಧ ವಸ್ತುಗಳ ತಯಾರಿಕಾ ಕೈಗಾರಿಕೆಗಳು ಸಂಘಟಿತ ವಲಯದಲ್ಲಿ ಬರುತ್ತವೆ. ಅಂದರೆ ಯಾವ ಉದ್ಯಮಗಳು ಅಂಕಿ ಸಂಖ್ಯೆಗಳನ್ನು ನಿರ್ದಿಷ್ಟವಾಗಿ ಪ್ರಕಟಿಸುವ, ವಾರ್ಷಿಕ ವರದಿ ಮತ್ತು ಸರ್ವೆ ನಡೆಸುವ ಸಾರ್ವಜನಿಕ ವಲಯದ ಮತ್ತು ಖಾಸಗಿ ಉದ್ಯಮಗಳು ಅಥವಾ ಕೈಗಾರಿಕೆಗಳು 'ಸಂಘಟಿತ ವಲಯದಲ್ಲಿ ಬರುವ ಕೈಗಾರಿಕೆಗಳಾಗಿವೆ. ಅಂತಹ ಉದ್ಯಮಗಳನ್ನು ಒಳಗೊಂಡ ಆರ್ಥಿಕ ವಲಯವನ್ನು ಸಂಘಟಿತ ವಲಯವೆಂದು ಕರೆಯಲಾಗುತ್ತದೆ.[೩]

ಸಂಘಟಿತ ವಲಯಕ್ಕೆ ಉತ್ತಮ ಉದಾಹರಣೆ ಎಂದರೆ ಸರಕಾರಿ ಸ್ವಾಮ್ಯದ ಉದ್ಯಮಗಳು. ಪೆಟ್ರೋಲಿಯಂ ತೈಲ ಉದ್ಯಮ, ರೈಲ್ವೆ ಇಲಾಖೆ, ದೂರವಾಣಿ ಇಲಾಖೆ, ಸರ್ಕಾರಿ ಶಿಕ್ಷಣ ಸಂಸ್ಥೆಗಳು, ಆಸ್ಪತ್ರೆಗಳು, ಅಂಚೆ ಇಲಾಖೆ, ವೈಮಾನಿಕ ಕ್ಷೇತ್ರ, ರಕ್ಷಣಾವಲಯ, ಬ್ಯಾಂಕ್ ಕ್ಷೇತ್ರ ಇತ್ಯಾದಿ. ಖಾಸಗಿಯಾಗಿದ್ದರೂ ಸರಕಾರದ ನಿಯಂತ್ರಣದಲ್ಲಿರುವ ಸಂಸ್ಥೆಗಳು, ಎಲ್.ಐ.ಸಿ., ಔಷಧ ಕಾರ್ಖಾನೆ, ಸಹಕಾರಿ ಸಂಘಗಳು, ಖಾಸಗಿ ಶಿಕ್ಷಣ ಸಂಸ್ಥೆಗಳು, ಆಧುನಿಕ ಯಂತ್ರೋಪಕರಣಗಳನ್ನು ಉತ್ಪಾದಿಸುವ ಕಂಪನಿಗಳು ವಾಹನ ತಯಾರಿಕಾ ಕಂಪನಿಗಳು ಇತ್ಯಾದಿ. ಈ ಎಲ್ಲ ಉದ್ಯಮಗಳು ಸಂಘಟಿತ ವಲಯದಲ್ಲಿ ಬರುತ್ತಿದ್ದು ಇವುಗಳಲ್ಲಿ ದುಡಿಯುವ ನೌಕರರು ಕಾರ್ಮಿಕರು ಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ.

ದೇಶದಲ್ಲಿ ಸಂಘಟಿತ ವಲಯದ ಗಾತ್ರವನ್ನು ಗಮನಿಸಿದರೆ ಅಸಂಘಟಿತ ವಲಯಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ. NSSO ಸರ್ವೆ ತಿಳಿಸುವಂತೆ ಕೇವಲ ೨.೮ ಕೋಟಿ ಕಾರ್ಮಿಕರು ಸಂಘಟಿತ

ವಲಯದಲ್ಲಿ ಮತ್ತು ೩೬.೯ ಕೋಟಿ ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಸಂಘಟಿತ ವಲಯದಲ್ಲಿ ದುಡಿಯುವ ೨.೮ ಕೋಟಿ ಕಾರ್ಮಿಕರಲ್ಲಿ ಶೇಕಡ ೧೭.೬ರಷ್ಟು ಕಾರ್ಮಿಕರು ಮಹಿಳೆಯರಾಗಿದ್ದಾರೆ. ಕೋಷ್ಟಕವನ್ನು ಗಮನಿಸಿದರೆ ಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರ ಪ್ರಮಾಣ ತಿಳಿದುಬರುತ್ತದೆ. ಕೋಷ್ಟಕ ೫.೧ರಲ್ಲಿ ತೋರಿಸಿರುವಂತೆ ೧೯೯೨ರಲ್ಲಿ ಸಂಘಟಿತ ವಲಯದಲ್ಲಿ ಮಹಿಳೆಯರ ಪ್ರಮಾಣ ಶೇಕಡ ೧೪.೪ರಷ್ಟು, ೧೯೯೩ರಲ್ಲಿ ಶೇಕಡ ೧೪.೮ರಷ್ಟು, ೧೯೯೪ರಲ್ಲಿ ಶೇಕಡ ೧೫.೨ರಷ್ಟು, ೧೯೯೫ರಲ್ಲಿ ಶೇಕಡ ೧೫.೪ರಷ್ಟು, ೧೯೯೬ರಲ್ಲಿ ಶೇಕಡ ೧೫.೮ರಷ್ಟು, ೧೯೯೭ರಲ್ಲಿ ಶೇಕಡ ೧೬.೪ರಷ್ಟು, ೧೯೯೮ರಲ್ಲಿ ಶೇಕಡ ೧೭.೦ರಷ್ಟು, ೧೯೯೯ರಲ್ಲಿ ಶೇಕಡ ೧೭.೨ರಷ್ಟು ಮತ್ತು ೨೦೦೦ರಲ್ಲಿ ಶೇಕಡ ೧೭.೦ರಷ್ಟು ಇರುವುದು ಕಂಡುಬರುತ್ತದೆ.

ಕೋಷ್ಟಕ ೫.೧ನ್ನು ಗಮನಿಸಿದರೆ ಸಂಘಟಿತ ವಲಯದಲ್ಲಿ ಮಹಿಳೆಯ ದುಡಿಮೆಯ ಸಹಭಾಗಿತ್ವ ವರ್ಷದಿಂದ ವರ್ಷಕ್ಕೆ ಕಡಿಮೆ ಪ್ರಮಾಣದಲ್ಲಿ ಅಧಿಕವಾಗುತ್ತಿರುವುದು ಕಂಡುಬರುತ್ತದೆ. ಈ ಒಂದು ಅಂಕಿ ಸಂಖ್ಯೆ ಸಂಘಟಿತ ವಲಯ ಎಂಬುದು ಪುರುಷ ಪ್ರಧಾನವಾದುದು ಎಂಬುದನ್ನು ಸ್ಪಷ್ಟಪಡಿಸುತ್ತದೆ.

**ಕೋಷ್ಟಕ ೫.೧**

**ಭಾರತದಲ್ಲಿ ಸಂಘಟಿತ ವಲಯದಲ್ಲಿ ಮಹಿಳಾ ಉದ್ಯೋಗದ ಪ್ರಮಾಣ (ಸಂಖ್ಯೆ ಸಾವಿರಗಳಲ್ಲಿ)**

| ವರ್ಷ | ಸಾರ್ವಜನಿಕ ವಲಯ | | | ಖಾಸಗಿ ವಲಯ | | | ಒಟ್ಟು | | |
|---|---|---|---|---|---|---|---|---|---|
| | ಮಹಿಳೆ | ಒಟ್ಟು | ಶೇಕಡವಾರು ಮಹಿಳೆ | ಮಹಿಳೆ | ಒಟ್ಟು | ಶೇಕಡವಾರು ಮಹಿಳೆ | ಮಹಿಳೆ | ಒಟ್ಟು | ಶೇಕಡವಾರು ಮಹಿಳೆ |
| ೧೯೯೨ | ೨೪೬೭.೦ | ೧೯೨೦೯.೬ | ೧೨.೮ | ೧೫೨೨.೭ | ೭೮೪೬.೧ | ೧೯.೪ | ೩೮೮೯.೮ | ೨೭೦೫೫.೭ | ೧೪.೪ |
| ೧೯೯೩ | ೨೪೭೬.೭ | ೧೯೩೨೬.೧ | ೧೨.೮ | ೧೫೪೯.೭ | ೭೮೫೦.೫ | ೧೯.೭ | ೪೦೨೬.೩ | ೨೭೧೭೬.೬ | ೧೪.೮ |
| ೧೯೯೪ | ೨೫೬೪.೬ | ೧೯೪೪೪.೯ | ೧೩.೨ | ೧೫೮೯.೩ | ೭೯೨೯.೯ | ೨೦.೦ | ೪೧೫೩.೯ | ೨೭೩೭೪.೮ | ೧೫.೨ |
| ೧೯೯೫ | ೨೬೦೦.೪ | ೧೯೪೬೬.೩ | ೧೩.೪ | ೧೬೨೨.೫ | ೮೦೫೮.೫ | ೨೦.೨ | ೪೨೨೭.೯ | ೨೭೫೨೪.೭ | ೧೫.೪ |
| ೧೯೯೬ | ೨೬೩೪.೫ | ೧೯೪೨೯.೩ | ೧೩.೬ | ೧೭೯೧.೯ | ೮೫೧೧.೬ | ೨೧.೧ | ೪೪೨೬.೪ | ೨೭೯೪೦.೯ | ೧೫.೮ |
| ೧೯೯೭ | ೨೭೨೭.೬ | ೧೯೯೫೫೯.೧ | ೧೪.೦ | ೧೯೦೯.೪ | ೮೬೮೫.೫ | ೨೨.೦ | ೪೬೩೭.೦ | ೨೮೨೪೪.೫ | ೧೬.೪ |
| ೧೯೯೮ | ೨೭೬೨.೭ | ೧೯೪೧೭.೮ | ೧೪.೨ | ೨೦೧೦.೯ | ೮೭೪೬.೯ | ೨೩.೦ | ೪೭೭೩.೬ | ೨೮೧೬೫.೮ | ೧೭.೦ |
| ೧೯೯೯ | ೨೮೧೦.೭ | ೧೯೪೧೪.೮ | ೧೪.೫ | ೨೦೧೮.೪ | ೮೬೯೮.೨ | ೨೩.೨ | ೪೮೨೯.೨ | ೨೮೧೧೩.೧ | ೧೭.೨ |
| ೨೦೦೦ | ೨೮೫೭.೦ | ೧೯೩೧೩.೭ | ೧೪.೮ | ೨೦೬೫.೮ | ೮೬೪೬.೦ | ೨೩.೯ | ೪೯೨೨.೮ | ೨೭೯೫೯.೭ | ೧೭.೬ |

ಮೂಲ : ಕ್ವಾಟರ್ಲಿ ಎಂಪ್ಲಾಯ್‌ಮೆಂಟ್ ರಿವ್ಯೂ, ಡೈರೆಕ್ಟರೇಟ್ ಜನರಲ್ ಆಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಟ್ರೇನಿಂಗ್ ಆಫ್ ಲೇಬರರ್ : ವುಮೆನ್ ಆ್ಯಂಡ್ ಮೆನ್ ಇನ್ ಇಂಡಿಯಾ ೨೦೦೦, ಪು.೪೩, ಟೆಬಲ್ ೩.೪

ಕೋಷ್ಟಕ ೫.೧.ನ್ನು ಗಮನಿಸಿದರೆ ಸಂಘಟಿತ ವಲಯದಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ೨೦೦೦ದಲ್ಲಿ ಸಾರ್ವಜನಿಕ ವಲಯದಲ್ಲಿ ಶೇಕಡ ೧೪.೮ರಷ್ಟು ಖಾಸಗಿ ಕ್ಷೇತ್ರದಲ್ಲಿ ಶೇಕಡ ೨೩.೮ರಷ್ಟು ಇದ್ದು ಒಟ್ಟು ಸಂಘಟಿತ ವಲಯದಲ್ಲಿ ಶೇಕಡ ೧೭.೮ರಷ್ಟು ಮಹಿಳೆಯು ದುಡಿಯುತ್ತಿರುವುದು ಕಂಡುಬರುತ್ತದೆ. ಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರು ಅಕ್ಷರಸ್ಥರು. ಪದವೀಧರರು, ಕೌಶಲ್ಯ ಮತ್ತು ತರಬೇತಿ ಹೊಂದಿದವರು ಮತ್ತು ತಂತ್ರಜ್ಞಾನ ಹಾಗೂ ಕೆಲಸದ ಅನುಭವ ಹೊಂದಿದವರಾಗಿರುತ್ತಾರೆ. ಹಾಗಾಗಿ ಇವರ ಪ್ರಮಾಣ ಶೇಕಡ ೧೭.೮ರಷ್ಟು ಮಾತ್ರ ಇದೆ. ಆದರೆ ಅನಕ್ಷರಸ್ಥ, ಅಕೌಶಲ್ಯ ಹೊಂದಿದ ಅಧಿಕ ಸಂಖ್ಯೆಯ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ.

### ೫.೨. ಅಸಂಘಟಿತ ವಲಯದ ಹುಟ್ಟು, ಅರ್ಥ ಮತ್ತು ವ್ಯಾಖ್ಯಾನ

ಅಸಂಘಟಿತ ವಲಯ ಎಂದರೆ ಏನು ಎಂಬುದಕ್ಕೆ ನಿರ್ದಿಷ್ಟ ಅರ್ಥ ಮತ್ತು ವ್ಯಾಖ್ಯಾನಗಳನ್ನು ನೀಡುವುದು ತುಂಬಾ ಕಷ್ಟದ ಕೆಲಸವಾಗಿದೆ. ಏಕೆಂದರೆ 'ಅಸಂಘಟಿತ ವಲಯ' ಎಂಬುದು ದುಡಿಯುವ ವ್ಯಕ್ತಿಗಳ ವೈಯಕ್ತಿಕ ನೆಲೆಯಿಂದ ಹುಟ್ಟುವುದರಿಂದ ಅದರ ವ್ಯಾಖ್ಯಾನವನ್ನು ನಿರ್ದಿಷ್ಟವಾಗಿ ವ್ಯಾಖ್ಯಾನಿಸಲು ಸಾಧ್ಯವಾಗುವುದಿಲ್ಲ. 'ಶ್ರಮಿಕ ತನ್ನ ದುಡಿಮೆ ಅಥವಾ ಶ್ರಮವನ್ನು ನಿಯಮ ಮತ್ತು ನಿರ್ಬಂಧಗಳನ್ನು ವಿಧಿಸದೆ ಅತ್ಯಂತ ಕಡಿಮೆ ಕೂಲಿಗೆ ಮಾರಿಕೊಳ್ಳುವ ಹಂತದಲ್ಲಿಯೇ ಈ ಅಸಂಘಟಿತ ಅಥವಾ ಅನೌಪಚಾರಿಕ ವಲಯ ಎಂಬುದು ಹುಟ್ಟಿಕೊಳ್ಳುತ್ತದೆ. ಹೀಗೆ ಶ್ರಮಿಕರು ವೈಯಕ್ತಿಕ ನೆಲೆಯಲ್ಲಿ ತಮ್ಮ ದೈಹಿಕ ಶ್ರಮವನ್ನು ಕಡಿಮೆ ಬೆಲೆಗೆ ಕೆಲಸದ ನಿಯಮ ಮತ್ತು ನಿರ್ಬಂಧಗಳನ್ನು ವಿಧಿಸದೆ ಮಾರಿಕೊಳ್ಳುವ ಸಂದರ್ಭದಲ್ಲಿ ಈ 'ಅಸಂಘಟಿತ ವಲಯ' ಎಂಬುದು ಜನ್ಮ ತಾಳುತ್ತದೆ. ಇದರಿಂದಾಗಿ ಈ ವಲಯದ ದುಡಿಮೆಗಾರರಿಗೆ ಉದ್ಯೋಗದ ಬಗ್ಗೆ ಭದ್ರತೆ ಇಲ್ಲದೆ, ದಿನಗೂಲಿ ಕೆಲಸಗಾರರಾಗಿ, ಸಾಂದರ್ಭಿಕ ಕೆಲಸಗಾರರಾಗಿ ಮತ್ತು ಗುತ್ತಿಗೆ ಅಧಾರದ ಮೇಲೆ ಕೆಲಸಗಾರರಾಗಿ ದುಡಿಯುತ್ತಿದ್ದಾರೆ. ಇವರು ದುಡಿಯುತ್ತಿರುವ ಉದ್ಯಮದಲ್ಲಿ ಅಥವಾ ಕೈಗಾರಿಕೆಗಳಲ್ಲಿ ಅಥವಾ ಕೆಲಸಗಳಲ್ಲಿ ದುಡಿಮೆಯ ಬಗ್ಗೆ, ದುಡಿಮೆಗಾರರ ಬಗ್ಗೆ, ಉದ್ಯಮದ ಉತ್ಪಾದನೆ ಬಗ್ಗೆ ಅಂಕಿ ಸಂಖ್ಯೆಗಳನ್ನು ನಿಯಮಬದ್ಧವಾಗಿ ಮತ್ತು ನಿರ್ದಿಷ್ಟವಾಗಿ ಇಟ್ಟಿರುವುದಿಲ್ಲ. ಹೀಗಾಗಿ ಇವರು ದುಡಿಯುವ ಇಂತಹ ಆರ್ಥಿಕ ವಲಯವನ್ನು 'ಅನೌಪಚಾರಿಕ' ವಲಯ ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಅನೌಪಚಾರಿಕ ವಲಯ' ಎಂಬ ಪದವನ್ನು ಅಂಕಿ ಸಂಖ್ಯಾ ಕಛೇರಿಯಲ್ಲಿ ಅಥವಾ ನ್ಯಾಷನಲ್ ಅಕೌಂಟ್ ಸ್ಟಟಿಸ್ಟಿಕ್(NAS)

ಕಛೇರಿಯಲ್ಲಿ ಬಳಸಲಾಗುತ್ತಿಲ್ಲ. ಬದಲಿಗೆ ಈ ಕಛೇರಿಯಲ್ಲಿ 'organised' 'ಸಂಘಟಿತ' ಮತ್ತು ಅಸಂಘಟಿತ (unorganised) ವಲಯಗಳೆಂಬ ಪದವನ್ನು ಒಳಸಲಾಗುತ್ತದೆ. 'ಸಂಘಟಿತ ವಲಯದ' ಉದ್ಯಮದಲ್ಲಿ ಉದ್ಯಮದ ಬಗ್ಗೆ ಅಂಖ್ಯೆ ಸಂಖ್ಯೆಗಳ ಮಾಹಿತಿ ನಿಯಮಿತವಾಗಿ ಮುಂಗಡ ಪತ್ರದ ಕಡತ ಅಥವಾ ವರದಿಗಳಿಂದ, ಸಾರ್ವಜನಿಕ ವಲಯದಲ್ಲಿ ವಾರ್ಷಿಕ ವರದಿಯಿಂದ ಮತ್ತು ನೋಂದಾಯಿತ ಸಿದ್ಧವಸ್ತು ತಯಾರಿಕಾ ಕೈಗಾರಿಕೆಗಳಲ್ಲಿ ವಾರ್ಷಿಕ ಸರ್ವೇಗಳಿಂದ ಅಂಕಿಸಂಖ್ಯೆಗಳ ಮಾಹಿತಿ ದೊರೆಯುತ್ತದೆ. ಆದರೆ 'ಅಸಂಘಟಿತ ವಲಯ'ದಲ್ಲಿ ಅಲ್ಲಿನ ಉದ್ಯಮಗಳ ಬಗ್ಗೆ, ದುಡಿಮೆಗಾರರ ಬಗ್ಗೆ ಮತ್ತು ಉತ್ಪನ್ನದ ಬಗ್ಗೆ ನಿಯಮಿತವಾದ ಅಂಕಿಸಂಖ್ಯೆಗಳು ಹಾಗೂ ಮಾಹಿತಿ ಲಭ್ಯವಾಗುವುದಿಲ್ಲ. ಒಂದು ಲಕ್ಷಣವನ್ನು ಆಧರಿಸಿ ವಲಯವನ್ನು 'ಅಸಂಘಟಿತ ವಲಯ' ಎಂದು ಗುರುತಿಸಲಾಗಿದೆ.[೫]

ಪ್ರಥಮ ಬಾರಿಗೆ ೧೯೭೦ ದಶಕದ ಪ್ರಾರಂಭದಲ್ಲಿ ILO (International Labour organisation) ಅನೌಪಚಾರಿಕ ಅಥವಾ ಅಸಂಘಟಿತ ವಲಯ ಎಂಬ ಪದವನ್ನು ಆಫ್ರಿಕಾದಲ್ಲಿ ನಡೆಸಿದ "ವರ್ಡ್ ಎಪ್ಲಾಯ್‌ಮೆಂಟ್ ಪ್ರೋಗ್ರಾಂ ಮಿಶನ್ ಇನ್ "ಆಫ್ರಿಕಾ" ಕಾರ್ಯಕ್ರಮದಲ್ಲಿ ಬಳಸಿತು ಹಾಗೂ ಅನೌಪಚಾರಿಕ ವಲಯದ ಸ್ವರೂಪದ ಬಗ್ಗೆ ಅಧ್ಯಯನವನ್ನು ಕೈಗೊಂಡಿತು.[೬] ನಂತರ ೧೯೭೪ರಲ್ಲಿ ಟು ವರ್ಡ್ ಈಕ್ವಾಲಿಟಿ ವರದಿ ಸಂಘಟಿತ - ಅಸಂಘಟಿತ ವಲಯಗಳ ವ್ಯಾಖ್ಯಾನ ಮತ್ತು ಸ್ವರೂಪವನ್ನು ತಿಳಿಸಿತು ಅಲ್ಲದೆ ಅಸಂಘಟಿತ ವಲಯದ ಕಾರ್ಮಿಕರ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿತು. ೧೯೮೮ರಲ್ಲಿ 'ಶ್ರಮಶಕ್ತಿ' ವರದಿಯು ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರ ಸಮಸ್ಯೆಗಳ ಬಗ್ಗೆ ಮಾಹಿತಿಯನ್ನು ನೀಡಿತು. ಇತ್ತೀಚೆಗೆ NAS (National Accounts Statistics) ಸಂಸ್ಥೆಯು ಭಾರತದಲ್ಲಿ "ಸಂಘಟಿತ" ಮತ್ತು 'ಅಸಂಘಟಿತ' ವಲಯ ಎಂಬ ಪದವನ್ನು ಬಳಸುವ ಮೂಲಕ ಅ ವಲಯಗಳ ಅಂಕಿ ಸಂಖ್ಯೆ ಮತ್ತು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿತು. ಪರಿಣಾಮವಾಗಿ ಕೇಂದ್ರ ಸರಕಾರ ಅಸಂಘಟಿತ ವಲಯದ ಕಾರ್ಮಿಕರ ಬಗ್ಗೆ ಗಮನ ಹರಿಸಿತು.

**ಅಸಂಘಟಿತ ವಲಯ ಎಂದರೇನು?**

ಅಸಂಘಟಿತ ವಲಯವು ತುಂಬಾ ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುವುದರಿಂದ ಅದಕ್ಕೆ ನಿರ್ದಿಷ್ಟ ವ್ಯಾಖ್ಯಾನವನ್ನು ನೀಡುವುದು ಕಷ್ಟವಾಗಿದೆ. ಕೆಲವು ವರದಿಗಳು, ಅಂತಾರಾಷ್ಟ್ರೀಯ ಸಂಘಟನೆಗಳು ಮತ್ತು ರಾಷ್ಟ್ರೀಯ ಸಂಸ್ಥೆಗಳು ನಿರ್ದಿಷ್ಟ ವ್ಯಾಖ್ಯಾನ ನೀಡುವಲ್ಲಿ ಯಶಸ್ವಿಯಾಗಿವೆ. ಸಾಮಾನ್ಯವಾಗಿ ಹೇಳುವುದಾದರೆ ಅಸಂಘಟಿತ ವಲಯ ಎಂದರೆ- "ಅಧಿಕ ಕಾರ್ಮಿಕರನ್ನು ಕಡಿಮೆ ಕೂಲಿಗೆ ನೇಮಿಸಿ ಕೊಳ್ಳುವ, ಲಿಂಗ, ಜಾತಿ ವರ್ಗದ ಮೇಲೆ ವೇತನ ತಾರತಮ್ಯ ಮಾಡುವ, ಔದ್ಯೋಗಿಕ ಸೇವಾ ಸೌಲಭ್ಯಗಳು ಇಲ್ಲದ, ಕಾನೂನಿನ ಚೌಕಟ್ಟಿಗೆ ಒಳಪಡದ, ಕೆಳಮಟ್ಟದ ತಂತ್ರಜ್ಞಾನ ಇರುವ ಹಾಗೂ ಕಾರ್ಮಿಕ ಸಂಘಟನೆಗಳು ಇಲ್ಲದ ಉತ್ಪಾದನಾ ಘಟಕ ಅಥವಾ ಉದ್ಯಮವನ್ನು 'ಅಸಂಘಟಿತ ವಲಯ'

ಎಂದು ಕರೆಯಲಾಗುತ್ತದೆ. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ದುಡಿಮೆಗಾರರ ಮೇಲೆ ಬೆಳಕು ಚೆಲ್ಲಿದ ಟುವರ್ಡ್ಸ್ ಈಕ್ವಾಲಿಟಿ-೧೯೭೪ರ ವರದಿಯು "ಉದ್ಯೋಗ ಭದ್ರತೆಯನ್ನು ಒದಗಿಸಿದ ಸೇವಾ ನಿಯಮಗಳನ್ನು ಪಾಲಿಸದ, ಸರಕಾರ ರೂಪಿಸಿದ ಸೇವಾ ಕಾನೂನು ಮತ್ತು ಶಾಸನಗಳ ಚೌಕಟ್ಟಿನಿಂದ ಹೊರಗಿರುವ, ಕಾರ್ಮಿಕ ಸಂಘಟನೆಗಳು ಇಲ್ಲದ ಉತ್ಪಾದನಾ ಘಟಕಗಳನ್ನು 'ಅಸಂಘಟಿತ-ಅನೌಪಚಾರಿಕ' ಘಟಕವೆಂದು ಮತ್ತು ಅಲ್ಲಿ ದುಡಿಯುವ ದುಡಿಮೆಗಾರರನ್ನು ಅಸಂಘಟಿತ ದುಡಿಮೆಗಾರರೆಂದು" ವ್ಯಾಖ್ಯಾನಿಸಿದೆ.[೭] ಯುನೈಟೆಡ್ ನೇಷನ್ಸ್, ಸಿಸ್ಟಮ್ ಆಫ್ ನ್ಯಾಷನಲ್ ಅಕೌಂಟ್ (UNCNA)-ಕುಟುಂಬಸಂಬಂಧಿ ಉದ್ಯಮದಾರರಿಂದ, ಸಂಯುಕ್ತ ಕಾರ್ಪೋರೇಟ್ ಉದ್ಯಮದಾರರಿಂದ, ಸ್ವಂತವಾಗಿ ಮತ್ತು ಪ್ರತ್ಯೇಕವಾಗಿ ಕುಟುಂಬದ ಸದಸ್ಯರಿಂದ ತೆರೆದ ಅಥವಾ ಇಬ್ಬರು ಅಥವಾ ಇಬ್ಬರಿಗಿಂತ ಅಧಿಕ ಸದಸ್ಯರನ್ನು ಹೊಂದಿದ ಕುಟುಂಬಸಂಬಂಧಿ ಉದ್ಯಮ ಮತ್ತು ಜಂಟಿ ಸಹಭಾಗಿತ್ವದ ಉದ್ಯಮವನ್ನು ಅಸಂಘಟಿತ ವಲಯ ಬಂದು ವ್ಯಾಖ್ಯಾನಿಸಿದೆ.[೮]

೫೦ನೇ ಅಂತಾರಾಷ್ಟ್ರೀಯ ಕಾರ್ಮಿಕ ಅಂಕಿ ಸಂಖ್ಯಾ ಸಮಾವೇಶ (ICL-International Conference of Labour statistics) ಮತ್ತು ರಾಷ್ಟ್ರೀಯ ಲೆಕ್ಕಪತ್ರ ವ್ಯವಸ್ಥೆ (SN-System of National Accounts) ೧೯೯೩ರಲ್ಲಿ_ಅಸಂಘಟಿತ ವಲಯದ ಬಗ್ಗೆ ವ್ಯಾಖ್ಯಾಗಳನ್ನು ನೀಡಿವೆ. ICLS ಮತ್ತು SNAಗಳ ಪ್ರಕಾರ ಅಸಂಘಟಿತ ವಲಯವೆಂದರೆ-

೧. ಸ್ವಯಂ ಉದ್ಯೋಗದಲ್ಲಿ ನಿರತರಾದ ಎಲ್ಲ ಕಾರ್ಮಿಕರು, ಸ್ವಂತ ಒಡೆತನ ಮತ್ತು ಸಹಭಾಗಿತ್ವದ ಒಡೆತನದಲ್ಲಿ ಉದ್ಯೋಗ ಮಾಡುವ ಕಾರ್ಮಿಕರು ಅಸಂಘಟಿತ ವಲಯದಲ್ಲಿ ಸೇರುತ್ತಾರೆ.

೨. ಯಾವುದೇ ಆರ್ಥಿಕ ಘಟಕದಲ್ಲಿ ದುಡಿಯುವ ಎಲ್ಲ ಸಾಂದರ್ಭಿಕ ಕೆಲಸಗಾರರು ಅಸಂಘಟಿತ ವಲಯದ ದುಡಿಮೆಯ ಸಹಭಾಗಿತ್ವಕ್ಕೆ ಒಳಪಡುತ್ತಾರೆ.

೩. ನಿಯಮಿತವಾಗಿ ವೇತನ ಪಡೆಯುವ ಎಲ್ಲ ವಿಧದ ಉದ್ಯೋಗಿಗಳು ಅಂದರೆ ಸಾರ್ವಜನಿಕ ವಲಯದಲ್ಲಿ ದುಡಿಯುವ, ಅರೆ ಸಾರ್ವಜನಿಕ ವಲಯದಲ್ಲಿ ದುಡಿಯುವ, ಸಹಕಾರಿ ಸಂಘಗಳಲ್ಲಿ ದುಡಿಯುವ, ಸಾರ್ವಜನಿಕ ಲಿಮಿಟೆಡ್ ಕಂಪನಿಗಳಲ್ಲಿ, ಖಾಸಗಿ ಲಿಮಿಟೆಡ್ ಕಂಪನಿಗಳಲ್ಲಿ ಮತ್ತು ಆ್ಯನುವೆಲ್ ಸರ್ವೆ ಆಫ್ ಇಂಡಸ್ಟ್ರೀಸ್(ASI-Annual Survey of Industries)ಗೆ ಒಳಪಡುವ ಕೈಗಾರಿಕೆಗಳಲ್ಲಿ ದುಡಿಯುವ ದುಡಿಮೆಗಾರರು 'ಸಂಘಟಿತ ವಲಯ'ದ ವ್ಯಾಪ್ತಿಗೆ ಬರುತ್ತಾರೆ.[೧೦]

ಜಸ್ಟಿಸ್ ಗಜೇಂದ್ರಗಡ್ಕರ್ ಅವರ ಅಧ್ಯಕ್ಷತೆಯಲ್ಲಿ ನೇಮಕವಾದ 'ರಾಷ್ಟ್ರೀಯ ಕಾರ್ಮಿಕ ಕಮೀಷನ್' ಪ್ರಕಾರ 'ಅಸಂಘಟಿತ ವಲಯವೆಂಬುದು ಶ್ರಮಿಕ ಒತ್ತಡದಿಂದ ಕೂಡಿದ್ದು, ಸಂಘಟಿತವಾಗದ ಒಂದು ಸ್ಥಿತಿಯಲ್ಲಿರುವ ಆರ್ಥಿಕ ವ್ಯವಸ್ಥೆಯಾಗಿದೆ. ಅದು ೧. ಸಾಂದರ್ಭಿಕ ಉದ್ಯೋಗದ ಸ್ವರೂಪ,

೨. ಅಜ್ಞಾನ ಮತ್ತು ಅನಕ್ಷರತೆ, ೩. ವ್ಯಕ್ತಿಗತ ಉದ್ಯೋಗವು ಸಣ್ಣ ಗಾತ್ರದಲ್ಲಿ ಕಡಿಮೆ ಬಂಡವಾಳದಲ್ಲಿ ಪ್ರಾರಂಭವಾಗಿರುತ್ತದೆ. ೪. ಪ್ರಾರಂಭದಲ್ಲಿ ವಲಯ ಸ್ವರೂಪವನ್ನು ಹೊಂದಿರುತ್ತದೆ. ೫. ಏಕವ್ಯಕ್ತಿ ಅಥವಾ ಜೊತೆಗೂಡಿ ನಡೆಸುವ ಶ್ರೇಷ್ಠ ಶಕ್ತಿಯ ಉದ್ಯಮವಾಗಿದೆ ಎಂದು ತಿಳಿಸುತ್ತಾ ಅಸಂಘಟಿತ ವಲಯವು ಈ ಕೆಳಗಿನ ಲಕ್ಷಣಗಳನ್ನು ಹೊಂದಿರುತ್ತದೆ ಎಂದು ತಿಳಿಸುತ್ತದೆ. ಅ. ಕಟ್ಟಡ ಕಾರ್ಮಿಕರನ್ನು ಒಳಗೊಂಡಂತೆ ಗುತ್ತಿಗೆ ಕಾರ್ಮಿಕರು. ಆ. ಸಾದಂರ್ಭಿಕ ಕಾರ್ಮಿಕರು ಇ. ಸಣ್ಣ ಕೈಗಾರಿಕೆಯಲ್ಲಿ ದುಡಿಯುವ ಕಾರ್ಮಿಕರು, ಈ. ಹ್ಯಾಂಡ್‌ಲೂಮ್/ಪವರ್ ಲೂಮ್ ವರ್ಕರ್, ಉ. ಬೀಡಿ ಮತ್ತು ಸಿಗರೇಟ್ ವರ್ಕರ್, ಊ. ಶಾಪ್ ಮತ್ತು ವಾಣಿಜ್ಯ ವ್ಯವಹಾರದಲ್ಲಿ ತೊಡಗಿದವರು, ಋ. ಗುಡಿಸುವವರು ಮತ್ತು ಬೀದಿ ಗುಡಿಸುವವರು. ಎ. ಚರ್ಮಕಾರರು ಏ. ಬುಡಕಟ್ಟು ಕಾರ್ಮಿಕರು ಮತ್ತು ಐ. ಇತರ ಅರಕ್ಷಿತ ಕಾರ್ಮಿಕರು ಅಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ ಎಂದು ಪ್ರಥಮ ರಾಷ್ಟ್ರೀಯ ಕಾರ್ಮಿಕ ಕಮೀಷನ್‌ನ ಅಭಿಪ್ರಾಯವಾಗಿದೆ.[೧೧]

೧೯೮೭ರಲ್ಲಿ ಶ್ರೀಮತಿ ಇಳಾ ಮತ್ತು ಆರ್.ಭಟ್ಟ ಅವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾದ "ನ್ಯಾಷನಲ್ ಕಮೀಷನ್ ಆನ್ ಸೆಲ್ಫ್-ಎಪ್ಲಾಯ್ಡ್ ವುಮೆನ್"(NCASEW) ವರದಿಯು ಅಸಂಘಟಿತ ವಲಯದಲ್ಲಿ ಮಹಿಳಾ ದುಡಿಮೆಗಾರರು ಎಂಬ ಪದವನ್ನು ಬಳಸಿತು ಮತ್ತು ಮಹಿಳೆಯರು ಮಾಡುವ ಕೆಲಸದ ಸ್ವರೂಪವನ್ನು ತಿಳಿಸಿತು.[೧೨] ಮಹಿಳೆಯರು ಕೂಲಿ ಗಳಿಸುವವರಾಗಿ, ಪೀಸ್ ರೇಟ್ ಕೆಲಸಗಾರರಾಗಿ, ಸಾಂದರ್ಭಿಕ ವೇತನ ಪಡೆವ ಮತ್ತು ವೇತನ ಪಡೆಯದ ಕುಟುಂಬ ಕಾರ್ಮಿಕರಾಗಿ ದುಡಿಯುತ್ತಾರೆ ಎಂಬುದನ್ನು ಸ್ಪಷ್ಟಪಡಿಸಿತು.

ಅಸಂಘಟಿತ ವಲಯದಲ್ಲಿ ಬರುವಂತಹ ವೃತ್ತಿಗಳಲ್ಲಿ ದುಡಿಯುವ ದುಡಿಮೆಗಾರರಲ್ಲಿ ಶೇಕಡ ೯೦ಕ್ಕಿಂತ ಅಧಿಕ ಜನರು ಮಹಿಳೆಯರೇ ಆಗಿದ್ದಾರೆ. ಇಂತಹ ವಲಯದಲ್ಲಿ ದುಡಿಯುವ ದುಡಿಮೆಗಾರ ಮಹಿಳೆಯರ ಕೆಲಸದ ಸ್ವರೂಪ, ಸ್ಥಿತಿಗತಿ ಮತ್ತು ಸಮಸ್ಯೆಗಳನ್ನು ಕುರಿತು ಮಾಹಿತಿಯನ್ನು ೧೯೭೪ರ 'ನ್ಯಾಷನಲ್ ಕಮಿಟಿ ಆನ್ ಸ್ಟೇಟಸ್ ಆಫ್ ವುಮೆನ್‌ನ ವರದಿ-ಟುವರ್ಡ್ಸ್ ಈಕ್ವಾಲಿಟಿ ನೀಡಿ. ಸರಕಾರದ ನೀತಿ ನಿರೂಪಕರ ಮತ್ತು ಅರ್ಥಶಾಸ್ತ್ರಜ್ಞರ ಗಮನ ಸೆಳೆಯಿತು. ಅಲ್ಲದೆ ೧೯೮೮ರಲ್ಲಿ ದಿ ನ್ಯಾಷನಲ್ ಕಮಿಟಿ ಆನ್ ವುಮೆನ್ ಇನ್ ಸೆಲ್ಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಇನ್‌ಫಾರ್ಮಲ್ ಸೆಕ್ಟರ್‌ನ 'ಶ್ರಮಶಕ್ತಿ' ವರದಿಯ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರ ಬಗ್ಗೆ ಮತ್ತಷ್ಟು ಅಂಕಿ ಅಂಶಗಳನ್ನು ಬೆಳಕಿಗೆ ತಂದು ಸರಕಾರ ನಿರ್ದಿಷ್ಟ ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿತು. ಅದರ ಫಲವಾಗಿ ೧೯೯೧ರ ಜನಗಣತಿಯಲ್ಲಿ ಮೊದಲ ಬಾರಿಗೆ ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರನ್ನು ಸೇರಿಸಲಾಯಿತು. ಹಾಗೂ ಸರಕಾರ ಅಸಂಘಟಿತ ವಲಯದ ಕಾರ್ಮಿಕರ ರಕ್ಷಣೆಗೆ ಸಾಮಾಜಿಕ ಭದ್ರತಾ ಕಾರ್ಯಕ್ರಮವನ್ನು ಕೈಗೊಳ್ಳಲು ಮುಂದಾಗುವಂತೆ ಪ್ರೇರೇಪಿಸಿತು. ಇದರ

ಪರಿಣಾಮವಾಗಿ ಸಂಪತ್ತಿನಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳ ಮಸೂದೆ ಮಂಡನೆಯಾಗುತ್ತಿವೆ.

## ೫.೩. ಅಸಂಘಟಿತ ವಲಯದ ಸ್ವರೂಪ ಅಥವಾ ಲಕ್ಷಣಗಳು

'ಅಸಂಘಟಿತ ವಲಯ' ಅಥವಾ 'ಅನೌಪಚಾರಿಕ ವಲಯ'ದ ವ್ಯಾಖ್ಯಾನದಲ್ಲಿಯೇ ಅಸಂಘಟಿತ ವಲಯದ ಸ್ವರೂಪ ಹಾಗೂ ಲಕ್ಷಣಗಳನ್ನು ಗುರುತಿಸಲಾಗಿದೆ. ಆದರೂ ಅಸಂಘಟಿತ ವಲಯದ ನಿರ್ದಿಷ್ಟ ಲಕ್ಷಣಗಳನ್ನು ತಿಳಿಯುವುದು. ಪ್ರಸ್ತುತ ಅಗತ್ಯವಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. 'ಕಡಿಮೆ ಸಂಘಟನೆಯ ಪ್ರಮಾಣ.

೨. ಕಾರ್ಮಿಕರ ಸಂಬಂಧಗಳು ಸಾಂದರ್ಭಿಕ ಆಧಾರದ ಅಥವಾ ಬಂಧುತ್ವ ಆಧಾರದವು ಅಥವಾ ವೈಯಕ್ತಿಕ ಸಂಬಂಧ ಹೊಂದಿದವುಗಳಾಗಿರುತ್ತವೆ.

೩. ಸೂಕ್ಷ್ಮ ರೀತಿಯ ಉದ್ಯಮ ಅಥವಾ ಸ್ವಕುಟುಂಬ ಉದ್ಯಮ ಅಥವಾ ಸಣ್ಣ ಖಾತೆ ಉದ್ಯಮವಾಗಿರುತ್ತದೆ.

೪. ಅಸಂಘಟಿತ ವಲಯದ ಉದ್ಯಮದಲ್ಲಿ ಉದ್ಯಮದ ಒಡೆತನ ನಿರ್ದಿಷ್ಟವಾದುದು ಮತ್ತು ಸ್ವಂತವಾಗಿರುತ್ತದೆ.

೫. ಅಸಂಘಟಿತ ವಲಯದಲ್ಲಿ ಹಣಕಾಸಿನ ಬಂಡವಾಳ ಸ್ವಂತದ್ದು ಹಾಗೂ ಕಷ್ಟಕರವಾದದ್ದು ಆಗಿರುತ್ತದೆ.

೬. ಅಸಂಘಟಿತ ವಲಯದಲ್ಲಿ ಕುಟುಂಬದ ಸಹ ಸದಸ್ಯರು ಭಾಗವಹಿಸುತ್ತಾರೆ.

೭. ಅಸಂಘಟಿತ ವಲಯದಲ್ಲಿ ಉತ್ಪಾದನಾ ವೆಚ್ಚವು ಕುಟುಂಬ ವೆಚ್ಚಕ್ಕಿಂತ ಬೇರೆಯಾಗಿದ್ದು, ಬಂಡವಾಳ ಸರಕುಗಳನ್ನು ಬಳಸುವುದಾಗಿರುತ್ತದೆ.

೮. ಅಸಂಘಟಿತ ವಲಯದಲ್ಲಿ ಉದ್ಯಮದಾರರಿಗೆ ಅಥವಾ ಕಾರ್ಮಿಕರಿಗೆ ಸರಳ ಪ್ರವೇಶ ಮತ್ತು ನಿರ್ಬಂಧವಿರುತ್ತದೆ.

೯. ಅಸಂಘಟಿತ ವಲಯದಲ್ಲಿ ಸುಲಭವಾದ ಚಲನೆ ಇರುತ್ತದೆ ಸರಳವಾಗಿ ಒಂದು ವೃತ್ತಿಯಿಂದ ಮತ್ತೊಂದು ವೃತ್ತಿಗೆ ಚಲಿಸಬಹುದು.

೧೦. ಅಸಂಘಟಿತ ವಲಯದಲ್ಲಿ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿ ಮತ್ತು ಸ್ಥಳೀಯ ತಂತ್ರಜ್ಞಾನವನ್ನು ಬಳಸಿಕೊಂಡು ಸರಕು ಸೇವೆಗಳನ್ನು ಉತ್ಪಾದಿಸಲಾಗುತ್ತದೆ.

೧೧. ಅಸಂಘಟಿತ ವಲಯದಲ್ಲಿ ಕೆಲಸಗಳು ಅನಿಯಮಿತ ಮತ್ತು ಅಭದ್ರತೆಯ ಸ್ವರೂಪದ್ದಾಗಿರುತ್ತದೆ.

೧೨. ಅಸಂಘಟಿತ ವಲಯದಲ್ಲಿ ನಿರ್ದಿಷ್ಟ ಕೆಲಸದ ಅವಧಿ ಎಂಬುದು ಇರುವುದಿಲ್ಲ.

೧೩. ಅಸಂಘಟಿತ ವಲಯದಲ್ಲಿ ಉದ್ಯೋಗದ ಬಗ್ಗೆ ಭದ್ರತೆಯ ಕೊರತೆ ಮತ್ತು ಸಾಮಾಜಿಕ ಭದ್ರತೆಯ ಕೊರತೆ ಕಂಡುಬರುತ್ತದೆ.

೧೪. ಅಸಂಘಟಿತ ವಲಯದಲ್ಲಿ ಅಧಿಕವಾಗಿ ಶ್ರಮಸಾಂದ್ರ ತಂತ್ರಜ್ಞಾನವನ್ನು ಅಳವಡಿಸಲಾಗಿರುತ್ತದೆ.

೧೫. ಅಸಂಘಟಿತ ವಲಯಕ್ಕೆ ಸರಕಾರದ ಸಹಕಾರ ಅಥವಾ ಸಹಾಯ ಇರುವುದಿಲ್ಲ.

೧೬. ಅಸಂಘಟಿತ ವಲಯದ ಕಾರ್ಮಿಕರು ಕೊಳೆಗೇರಿ ಮತ್ತು ಅನಾರೋಗ್ಯಕರ ಪ್ರದೇಶದಲ್ಲಿ ವಾಸಿಸುತ್ತಿರುತ್ತಾರೆ.

೧೭. ಅಸಂಘಟಿತ ವಲಯದ ಕಾರ್ಮಿಕರು ವಸತಿ ಸಮಸ್ಯೆಯನ್ನು ಎದುರಿಸುತ್ತಿದ್ದು ನಗರ ಪ್ರದೇಶದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

೧೮. ಅಸಂಘಟಿತ ವಲಯದ ಕಾರ್ಮಿಕರಲ್ಲಿ ವಲಸೆ ಬಂದ ಕಾರ್ಮಿಕರ ಪ್ರಮಾಣ ಅಧಿಕವಾಗಿರುತ್ತದೆ'.[೧೩]

'ರಿಪೋರ್ಟ್ ಆಫ್ ದಿ ನ್ಯಾಷನಲ್ ಕಮೀಷನ್ ಆನ್ ಲೇಬರ್ ಮೇಲಿನ ಲಕ್ಷಣಗಳನ್ನು ಗುರುತಿಸುವುದರ ಜೊತೆಗೆ ಅಸಂಘಟಿತ ವಲಯದ ಸಾಮಾನ್ಯ ಲಕ್ಷಣಗಳನ್ನು ಗುರುತಿಸಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. 'ಅಸಂಘಟಿತ ವಲಯ ಎಂಬುದು ಸಾಮಾನ್ಯವಾಗಿ ಕಡಿಮೆ ಕೂಲಿ ಮತ್ತು ಕಡಿಮೆ ಗಳಿಕೆಯ ವಲಯವಾಗಿದೆ.

೨. ಅಸಂಘಟಿತ ವಲಯದ ಮಹತ್ವದ ಕೆಲಸಗಳಲ್ಲಿ ಮಹಿಳೆಯರು ಕೇಂದ್ರೀಕೃತವಾಗಿದಾರೆ.

೩. ಅಸಂಘಟಿತ ವಲಯದ ಕೆಲಸ ಕುಟುಂಬಸಂಬಂಧಿ ಕೆಲಸವಾಗಿದ್ದು ಆ ವೃತ್ತಿಗಳಲ್ಲಿ ಕುಟುಂಬದ ಕಾರ್ಮಿಕರು ತೊಡಗಿರುತ್ತಾರೆ.

೪. ಅಸಂಘಟಿತ ವಲಯದ ಕೆಲವು ಆರ್ಥಿಕ ಚಟುವಟಿಕೆಗಳು ಬಾಲಕಾರ್ಮಿಕರಿಂದ ನಡೆಯುತ್ತಿವೆ.

೫. ಅಸಂಘಟಿತ ವಲಯದಲ್ಲಿ ತುಂಡುದರ ವೇತನ(Piece rate paymat) ಗೃಹ ಆಧಾರಿತ ಕೆಲಸಗಾರರು ಮತ್ತು ಗುತ್ತಿಗೆ ಆಧಾರದಲ್ಲಿ ಕೆಲಸ ಮಾಡುವ ಕಾರ್ಮಿಕರು ದುಡಿಯುತ್ತಿದ್ದಾರೆ.

೬. ಅಸಂಘಟಿತ ವಲಯದ ಕೆಲವು ವೃತ್ತಿಗಳು ವೃತುಮಾನ ಸಂಬಂಧಿ ಸ್ವರೂಪದವು, ಬಿಟ್ಟು ಬಿಟ್ಟು ಬರುವ ಕೆಲಸಗಳಾಗಿದ್ದು, ಇದು ಕಾರ್ಮಿಕರಿಗೆ ಒಂದು ಸಮಸ್ಯೆಯಾಗಿದೆ.

೭. ಅಸಂಘಟಿತ ವಲಯದ ಬಹುತೇಕ ವೃತ್ತಿಗಳು ದಿನಗೂಲಿ ಕೆಲಸ ಮತ್ತು ಸಾಂದರ್ಭಿಕ ಕೆಲಸಗಳಾಗಿವೆ.

೮. ಉದ್ಯೋಗಸ್ಥರು ಮತ್ತು ಸ್ವಯಂ ಉದ್ಯೋಗ ಮಾಡುವವರು ಅಸಂಘಟಿತ ವಲಯದ ಅನೇಕ ವೃತ್ತಿಗಳಲ್ಲಿ ತೊಡಗಿದ್ದಾರೆ.

೯. ಅಸಂಘಟಿತ ವಲಯದ ಕಾರ್ಮಿಕರು ಕಾರ್ಮಿಕ ಸಂಘಟನೆಗಳ ಮೂಲಕ ಸಂಘಟಿತರಾಗಿರುವುದಿಲ್ಲ. ಕೆಲವು ಸ್ವಯಂ ಉದ್ಯೋಗಿಗಳು ಸಂಘಟಿತರಾಗಿದ್ದರೂ ಅವರ ಚೌಕಾಶಿ ಶಕ್ತಿ ಅಧಿಕವಾಗಿರುವುದಿಲ್ಲ.

೧೦. ಅಸಂಘಟಿತ ವಲಯದಲ್ಲಿ ಸ್ವಯಂ ಉದ್ಯೋಗ ಮಾಡುವ ಕಾರ್ಮಿಕರ ಸಹಕಾರ ಅಧಿಕವಿರುತ್ತದೆ.

೧೧. ಅಸಂಘಟಿತ ವಲಯ ಇತರ ವಲಯದ ಉದ್ಯಮಗಳಿಗೆ ಕಚ್ಚಾ ಸರಕನ್ನು ಉತ್ಪಾದಿಸಿ ಒದಗಿಸುತ್ತದೆ.

೧೨. ಅಸಂಘಟಿತ ವಲಯದ ಸ್ವಯಂ ಉದ್ಯೋಗಿಗಳು ಕಡಿಮೆ ಬಂಡವಾಳ ಸಮಸ್ಯೆಯನ್ನು ಎದುರಿಸುತ್ತಿದ್ದು, ಅವರು ಹಣಕಾಸಿನ ಸೌಲಭ್ಯವನ್ನು ಬ್ಯಾಂಕೇತರ ಮೂಲಗಳಿಂದ ಪಡೆಯುವವರಾಗಿರುತ್ತಾರೆ.

೧೩. ಅಸಂಘಟಿತ ವಲಯದ ಅನೇಕ ವೃತ್ತಿಗಳು ಕಾರ್ಮಿಕರ ಆರೋಗ್ಯಕ್ಕೆ ಹಾನಿ ಅಥವಾ ಅಪಾಯ ತರುವಂತ ಕೆಲಸಗಳಾಗಿವೆ'.[೪]

ಮೇಲಿನ ಸೂಚಿಸಿದ ಎಲ್ಲ ಲಕ್ಷಣಗಳು ಅಸಂಘಟಿತ ವಲಯದ ಲಕ್ಷಣಗಳಾಗಿದ್ದು, ಅವು ಅಸಂಘಟಿತ ವಲಯದ ವೃತ್ತಿ ಸ್ವರೂಪವನ್ನು ತಿಳಿಸುವಂತವಾಗಿರುತ್ತವೆ.

**೫.೪. ಅಸಂಘಟಿತ ವಲಯದಲ್ಲಿ ಮಹಿಳಾ ದುಡಿಮೆಗಾರರು**

ಅಸಂಘಟಿತ ವಲಯದ ಕೆಲವು ಲಕ್ಷಣಗಳನ್ನು ಗಮನಿಸಿದರೆ ಆ ವಲಯದಲ್ಲಿ ಬರುವ ವೃತ್ತಿಗಳು 'ಫ್ಲೆಕ್ಸಿಬಲ್' ಸ್ವರೂಪದವಾಗಿದೆ. ಇವನ್ನು ಮಹಿಳೆಯರು ಮನೆಯಲ್ಲಿಯೇ ಕುಳಿತು ಮಾಡಬಹುದಾದ ಹಾಗೂ ಕಡಿಮೆ ಬಂಡವಾಳದಲ್ಲಿ ಕುಟುಂಬದ ಸದಸ್ಯರೊಂದಿಗೆ ಮಾಡಬಹುದಾದ ವೃತ್ತಿಗಳಾಗಿವೆ. ಅಕೌಶಲ್ಯ ಹೊಂದಿದ ಇವರಿಗೆ ಸ್ಥಳೀಯವಾಗಿ ಕೆಲಸಗಳು ದೊರೆಯುವುದರಿಂದ ಮಹಿಳೆಯರು ಅನಿವಾರ್ಯವಾಗಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ೧೯೮೮ರಲ್ಲಿ ಸ್ವಯಂ ಉದ್ಯೋಗಿ ಮಹಿಳಾ ದುಡಿಮೆಗಾರರನ್ನು ಕುರಿತಂತೆ ಅಧ್ಯಯನ ಮಾಡಲು ಕೇಂದ್ರ ಸರಕಾರವು ನೇಮಿಸಿದ್ದ ರಾಷ್ಟ್ರೀಯ ಆಯೋಗವು ಸಿದ್ಧಪಡಿಸಿದ ವರದಿ "ಶ್ರಮಶಕ್ತಿ"ಯಲ್ಲಿ ಉಲ್ಲೇಖಿಸಿರುವಂತೆ ಮಹಿಳಾ ದುಡಿಮೆಗಾರರಲ್ಲಿ ಶೇಕಡ ೯೪ರಷ್ಟು ದುಡಿಮೆಗಾರರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಿದೆ. ಅನೇಕ ಅಧ್ಯಯನಗಳು ಗುರುತಿಸಿರುವಂತೆ ಮಹಿಳಾ ದುಡಿಮೆಗಾರರ 'ಫ್ಲೆಕ್ಸಿಬಿಲಿಟಿ' ಗುಣ ಮತ್ತು 'ಪುರುಷಶಾಹಿ ಸಮಾಜ' ಮಹಿಳೆಯರಿಗೆ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆಯನ್ನು ನೀಡಲು ಸಿದ್ಧವಿಲ್ಲದಿರುವುದೇ ಮಹಿಳಾ ದುಡಿಮೆಗಾರರು ಅಸಂಘಟಿತ ವಲಯದಲ್ಲಿ ದುಡಿಯಲು ಕಾರಣ ಎಂಬ

ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಆದ್ದರಿಂದ ಅಧಿಕ ಸಂಖ್ಯೆಯ ಮಹಿಳಾ ದುಡಿಮೆಗಾರರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ೨೦೦೦ರ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಶೇಕಡ ೯೦.೯೦ರಷ್ಟು ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ.

**ಮಹಿಳೆಯರು ಅಸಂಘಟಿತ ಕ್ಷೇತ್ರದಲ್ಲಿ ಕೇಂದ್ರೀಕೃತವಾಗಿರಲು ಕಾರಣಗಳು**

ಮಹಿಳೆಯರು ಅಸಂಘಟಿತ ವಲಯದಲ್ಲಿ ಕೇಂದ್ರೀಕೃತವಾಗಿರುವುದಕ್ಕೆ ಅನೇಕ ಕಾರಣಗಳಿವೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. 'ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ಅವರು ವಾಸಿಸುವ ವಾಸಸ್ಥಳದಿಂದ ಬೇರೆ ಸ್ಥಳಕ್ಕೆ ಕೆಲಸ ಮಾಡಲು ಕಳುಹಿಸುವುದಿಲ್ಲ. ಇದರಿಂದಾಗಿ ಅದರ ಚಲನೆಯ ಮೇಲೆ ನಿರ್ಬಂಧ ವಿಧಿಸಿದಂತಾಗುತ್ತದೆ. ಪರಿಣಾಮವಾಗಿ ತಾವು ವಾಸಿಸುವ ಸ್ಥಳದಲ್ಲೇ ಸಿಗುವಂತ ಕಡಿಮೆ ಕೂಲಿ, ಕಡಿಮೆ ಕೌಶಲ್ಯದ, ಋತು ಮಾನಕ್ಕೆ ಅನುಗುಣವಾಗಿ ನಿರಂತರ ದುಡಿಮೆ ನಿರೀಕ್ಷಿಸದ ಕೆಲಸಗಳಲ್ಲಿ ತೊಡಗುತ್ತಾರೆ.

೨. ಸಾಮಾನ್ಯವಾಗಿ ಗಮನಿಸಿದರೆ ೧೫-೪೦ ವರ್ಷ ವಯಸ್ಸಿನ ಮಹಿಳೆಯರು ದುಡಿಮೆಯಲ್ಲಿ ತೊಡಗಿರು ವುದು ಕಂಡುಬರುತ್ತದೆ. ಈ ವಯಸ್ಸು ಅವರ ಸಂತಾನೋತ್ಪತ್ತಿಯ ಅವಧಿಯೂ ಆಗಿರುತ್ತದೆ. ಸಂತಾನೋತ್ಪತ್ತಿ ಹಾಗೂ ಕುಟುಂಬದ ಜವಾಬ್ದಾರಿ ಅವರನ್ನು ಹೊರಗಡೆ ನಿರಂತರ ನಿಯಮಿತ ಕೆಲಸಗಳಲ್ಲಿ ತೊಡಗಲು ಬಿಡುವುದಿಲ್ಲ. ಹೀಗಾಗಿ ಅವರು ತಮ್ಮ ಅನುಕೂಲತೆಗೆ ತಕ್ಕಂತೆ 'ಫ್ಲೆಕ್ಸಿಬಲ್' ಗುಣವುಳ್ಳ ಅಸಂಘಟಿತ ವಲಯದ ವೃತ್ತಿಗಳಲ್ಲಿ ತೊಡಗುತ್ತಾರೆ.

೩. ಅನಕ್ಷರತೆ, ಶಿಕ್ಷಣ, ತರಬೇತಿ ಹಾಗೂ ಕೌಶಲ್ಯದ ಕೊರತೆಯಿಂದ ಮಹಿಳೆಯರು ಸಂಘಟಿತ ಕ್ಷೇತ್ರ ದಲ್ಲಿರುವ ಸ್ಪರ್ಧಾತ್ಮಕ ಕೆಲಸಗಳನ್ನು ಪಡೆಯುವುದು ಕಷ್ಟವಾಗುತ್ತದೆ ಹಾಗೂ ಅಲ್ಲಿಯ ಅವಕಾಶಗಳು ಕಡಿಮೆ ಇರುತ್ತವೆ. ಹೀಗಾಗಿ ಅವರು ಸುಲಭವಾಗಿ ಕೆಲಸ ಸಿಗುವ ಅಸಂಘಟಿತ ಕ್ಷೇತ್ರದ ವೃತ್ತಿಗಳಲ್ಲಿ ತೊಡಗುತ್ತಾರೆ. ಸಂಘಟಿತ ವಲಯದ ಕಡ್ಡಾಯ ಮತ್ತು ಅಪೇಕ್ಷಣೀಯ ಪೂರೈಕೆಗಳನ್ನು, ಸಾಕ್ಷರತೆ, ಕನಿಷ್ಟ ವಿದ್ಯಾರ್ಹತೆ, ಅನುಭವ, ಕಾರ್ಯಕ್ಷಮತೆಯ ಕೌಶಲ್ಯ ತರಬೇತಿಗಳನ್ನು ಪೂರೈಸಲಾಗದೆ ಅಸಂಘಟಿತ ವಲಯವನ್ನು ಸೇರುತ್ತಾರೆ.

೪. ಮಹಿಳಾ ಶ್ರಮದ ಬೇಡಿಕೆ ಮತ್ತು ಪೂರೈಕೆಯನ್ನು ತೆಗೆದುಕೊಂಡರೆ ಮಹಿಳಾ ಕಾರ್ಮಿಕರ ಪೂರೈಕೆ ಅಧಿಕವಾಗಿರುತ್ತದೆ ಮತ್ತು ಬೇಡಿಕೆ ಕಡಿಮೆಯಾಗುತ್ತದೆ. ಮಹಿಳಾ ಶ್ರಮದ ಬೇಡಿಕೆ ಕಡಿಮೆ ಆದಾಗ ಅವರ 'ಚೌಕಾಶಿ ಶಕ್ತಿ'ಯು ಕಡಿಮೆಯಾಗುತ್ತದೆ. ಇದರಿಂದಾಗಿ ಅವರ ಕೌಶಲ್ಯರಹಿತ ಕೆಲಸಗಳಲ್ಲಿ ಕಡಿಮೆ ಕೂಲಿಗೆ ದುಡಿಯಬೇಕಾಗುತ್ತದೆ.

೫. ಸರಕಾರದ ಕೃಷಿ ನೀತಿ, ಭೂಕಾಯಿದೆ, ಪರಿಸರ ನಾಶ, ಆರ್ಥಿಕ ಹಾಗೂ ಅಭಿವೃದ್ಧಿ ಕಾರ್ಯನೀತಿ, ಯೋಚನೆ ಹಾಗೂ ಚಟುವಟಿಕೆಗಳು ಜನರನ್ನು ಭೂರಹಿತರನ್ನಾಗಿ ಮಾಡುತ್ತಿದೆ. ಜಮೀನಿನಿಂದ ಅವರನ್ನು ಸ್ಥಳಾಂತರಗೊಳಿಸಿ ನಿರುದ್ಯೋಗಿಗಳನ್ನಾಗಿಸಿ ಒಡೆತನಕ್ಕೆ ತಳ್ಳುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಕಷ್ಟಕ್ಕೆ ಒಳಗಾಗುವವರು ಮಹಿಳೆಯರೇ ಆಗಿದ್ದಾರೆ. ಹೀಗಾಗಿ ಅವರು ಅನಿವಾರ್ಯವಾಗಿ ದುಡಿಯುವುದಕ್ಕಾಗಿ ಅಸಂಘಟಿತ ವಲಯದ ವೃತ್ತಿಗಳನ್ನೇ ಅವಲಂಬಿಸುತ್ತಾರೆ.

೬. ಇತ್ತೀಚಿನ ತಂತ್ರಜ್ಞಾನ ಬೆಳವಣಿಗೆ, ಆಧುನೀಕರಣ, ಹೊಸ ಆರ್ಥಿಕ ನೀತಿ, ಜಾಗತೀಕರಣ ಇತ್ಯಾದಿ ಆರ್ಥಿಕ ಬದಲಾವಣೆಗಳು ಮಹಿಳೆಯರನ್ನು ಅಸಂಘಟಿತ ಕ್ಷೇತ್ರಕ್ಕೆ ತಳ್ಳುತ್ತಿವೆ. ಉದಾಹರಣೆಗೆ ಯಾವುದೇ ಉದ್ಯಮದಲ್ಲಿ ತಂತ್ರಜ್ಞಾನ ಅಥವಾ ಯಂತ್ರೋಪಕರಣಗಳನ್ನು ಅಳವಡಿಸಿಕೊಂಡರೆ ಮೊದಲು ನಿರುದ್ಯೋಗಿಗಳಾಗುವವರು ಮಹಿಳೆಯರೆ. ಹೀಗಾಗಿ ಅವರು ಉದ್ಯೋಗ ಅರಸಿ 'ಶ್ರಮಸಾಂದ್ರ ತಂತ್ರಜ್ಞಾನ' ಅಳವಡಿಸಿಕೊಂಡಿರುವ ಅಸಂಘಟಿತ ವಲಯಕ್ಕೆ ಬರುತ್ತಾರೆ'.[೧೫]

ಅಸಂಘಟಿತ ವಲಯದಲ್ಲಿ ಮಹಿಳೆಯರೇ ತೊಡಗಬಹುದಾದ ವೃತ್ತಿಗಳಾದ ಕೃಷಿ, ಹೈನುಗಾರಿಕೆ, ಪಶುಪಾಲನೆ, ಮೀನುಗಾರಿಕೆ, ಕರಕುಶಲ ಕಲೆ, ಕೈಮಗ್ಗ, ಕಟ್ಟಡ ನಿರ್ಮಾಣ, ಬೆಂಕಿ ಪೊಟ್ಟಣ ತಯಾರಿಕೆ, ಬಿದಿರು ಬುಟ್ಟಿ, ಈಚಲ ಬುಟ್ಟಿ ಮಾಡುವುದು, ಕಸಬರಿಗೆ ಮಾಡುವುದು, ಬಟ್ಟೆ ಹೊಲಿಯುವುದು, ಕೌದಿ ತಯಾರಿಕೆ, ಸಿದ್ಧ ಉಡುಪುಗಳ ತಯಾರಿಕೆ, ಮನೆ ಕೆಲಸದಲ್ಲಿ ಹಂಗಾಮಿ ದಿನಗೂಲಿ ದುಡಿಮೆಗಾರರಾಗಿ, ನೇಕಾರಿಕೆ, ಚಿಲ್ಲರೆ ವ್ಯಾಪಾರ, ತಲೆ ಮೇಲೆ ಹೊತ್ತು ಮಾರುವ ವ್ಯಾಪಾರ ಮತ್ತು ಆಹಾರ ಸಂಸ್ಕರಣೆ ಹಾಗೂ ಕರಿದ ತಿಂಡಿಗಳ ತಯಾರಿಕೆ ಮತ್ತು ಮಾರಾಟ ಇತ್ಯಾದಿ ವೃತ್ತಿಗಳಲ್ಲಿ ಮಹಿಳೆಯರು ತೊಡಗುತ್ತಾರೆ.

**ಅಸಂಘಟಿತ ಕ್ಷೇತ್ರದ ಮಹಿಳೆಯರ ದುಡಿಮೆಯ ಲಕ್ಷಣಗಳು**

ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ದುಡಿಮೆಗಾರರು ತಾವು ತೊಡಗಿರುವ ಕೆಲಸವನ್ನು ಆಧರಿಸಿ ಅನೇಕ ಲಕ್ಷಣಗಳನ್ನು ಹೊಂದಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ನೋಡಬಹುದು.

**೧. ಅಸಂಘಟಿತ ಕ್ಷೇತ್ರದ ಕೆಲಸಗಳು ಸ್ಥಳೀಯವಾಗಿರುತ್ತದೆ.**

ಅಸಂಘಟಿತ ಕ್ಷೇತ್ರದ ವೃತ್ತಿಗಳು ಸ್ಥಳೀಯವಾಗಿರುವುದರಿಂದ ಸ್ಥಳೀಯವಾಗಿ ದೊರೆಯುವ ತಂತ್ರಜ್ಞಾನ, ಕಚ್ಚಾಸಾಮಗ್ರಿ ಹಾಗೂ ಮಾರುಕಟ್ಟೆಯನ್ನು ಬಳಸಿಕೊಂಡು ನಡೆಯುತ್ತಿರುತ್ತವೆ. ಇಂತಹ ವೃತ್ತಿಗಳಲ್ಲಿ ಸಹಜವಾಗಿ ಮಹಿಳೆಯರು ಅಧಿಕವಾಗಿ ದುಡಿಯುತ್ತಿದ್ದಾರೆ.

**೨. ಭಾರತದಲ್ಲಿ ಶೇಕಡ ೯೦ಕ್ಕಿಂತ ಅಧಿಕ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ.**

೨೦೦೦-೦೧ರ ಅಂಕಿ ಸಂಖ್ಯೆಯ ಪ್ರಕಾರ ಭಾರತದಲ್ಲಿ ಶೇಕಡ ೯೦.೯೦ರಷ್ಟು ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ೧೯೯೧ರಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯಿಂದಾಗಿ ಖಾಸಗೀಕರಣ, ಜಾಗತೀಕರಣ ಮತ್ತು ಯಂತ್ರೀಕರಣ ಎಲ್ಲ ಆರ್ಥಿಕ ವಲಯಗಳನ್ನು ಪ್ರವೇಶಿಸಿ ಉದ್ಯೋಗಸ್ಥರನ್ನು ನಿರುದ್ಯೋಗಿಗಳನ್ನಾಗಿ ಮಾಡುತ್ತಿದೆ. ಇದರಿಂದಾಗಿ ಉದ್ಯೋಗ ಕಳೆದುಕೊಂಡ ಅಧಿಕ ಸಂಖ್ಯೆಯ ಮಹಿಳೆಯರು ಅಸಂಘಟಿತ ವಲಯದ ವೃತ್ತಿಗಳಲ್ಲಿ ತೊಡಗಿದ್ದಾರೆ.

**೩. ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರಿಗೆ ಕಾನೂನಿನ ರಕ್ಷಣೆ, ಉದ್ಯೋಗದ ಭದ್ರತೆ ಹಾಗೂ ಇತರ ಸೌಲಭ್ಯಗಳು ಇರುವುದಿಲ್ಲ.**

ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ದುಡಿಮೆಗಾರರಿಗೆ ಕಾನೂನಿನ ರಕ್ಷಣೆ, ಉದ್ಯೋಗದ ಭದ್ರತೆ ಹಾಗೂ ಇತರ ಸೌಲಭ್ಯಗಳಾದ ವಿಮೆ, ವೈದ್ಯಕೀಯ ಸೌಲಭ್ಯ, ಪಿಂಚಣಿ, ಅಪಘಾತ ಪರಿಹಾರ ಇತ್ಯಾದಿ ಸೌಲಭ್ಯಗಳು ದೊರೆಯುವುದಿಲ್ಲ. ಹೆರಿಗೆ ರಜೆ ಮತ್ತು ಹೆರಿಗೆ ಭತ್ಯೆ ನೀಡಬೇಕೆಂದು ಸಂವಿಧಾನದಲ್ಲಿ ಹೇಳಿದ್ದರೂ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಿಗೆ ದೊರೆಯುತ್ತಿಲ್ಲ.

**೪. ಕೆಲಸದ ಅಭದ್ರತೆ ಅನುಭವಿಸುತ್ತಿದ್ದಾರೆ.**

ಅಸಂಘಟಿತ ವಲಯದಲ್ಲಿ ಮಹಿಳೆಯರನ್ನು ಕೆಲಸಕ್ಕೆ ನೇಮಿಸಿಕೊಳ್ಳುವುದು. ತೆಗೆದುಹಾಕುವುದು, ವೇತನ ನಿಗದಿಪಡಿಸುವುದು, ಸೌಲಭ್ಯಗಳನ್ನು ಒದಗಿಸುವುದು ಮುಂತಾದವು ಮಾಲೀಕರ ಇಚ್ಛಾನುಸಾರ ನಡೆಯುತ್ತವೆ. ಹೀಗಾಗಿ ಮಹಿಳೆಯರು ಕೆಲಸದ ಅಭದ್ರತೆಯನ್ನು ಅನುಭವಿಸುತ್ತಿದ್ದಾರೆ.

**೫. ವೇತನ ತಾರತಮ್ಯವನ್ನು ಅನುಭವಿಸುತ್ತಿರುತ್ತಾರೆ.**

ಅಸಂಘಟಿತ ವಲಯದಲ್ಲಿ 'ಸಮಾನ ವೇತನ ಕಾಯ್ದೆಗಳು' ಮತ್ತು ಕನಿಷ್ಠ ವೇತನ ಕಾಯ್ದೆಗಳು ಜಾರಿಗೊಳ್ಳದೇ ಇರುವುದರಿಂದ ಮಹಿಳಾ ದುಡಿಮೆಗಾರರು ಕಡಿಮೆ ವೇತನ ಮತ್ತು ವೇತನ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ.

**೬. ಅಧಿಕ ಗಂಟೆಗಳ ಕಾಲ ದುಡಿಮೆ**

ಅಸಂಘಟಿತ ವಲಯದಲ್ಲಿ ಮಹಿಳಾ ಕಾರ್ಮಿಕರು ೮ ಗಂಟೆಯ ಕೆಲಸದ ಅವಧಿಗಿಂತಲೂ ಹೆಚ್ಚಿನ ಅವಧಿಯವರೆಗೆ ದುಡಿಯುತ್ತಿದ್ದಾರೆ. ಅಲ್ಲದೆ ಈ ಹೆಚ್ಚಿನ ಅವಧಿಗೆ ಅವರು ಯಾವುದೇ ರೀತಿಯ ಹೆಚ್ಚುವರಿ ವೇತನವನ್ನು ಪಡೆಯುತ್ತಿಲ್ಲ. ಕೃಷಿ ಮತ್ತು ನಿರ್ಮಾಣ ಕಾರ್ಯದಂತೆ ಕೆಲಸಗಳಲ್ಲಿ ಬೆಳಗ್ಗೆ ೮.೩೦ ಗಂಟೆಗಳಿಂದ ರಾತ್ರಿ ೭ ಗಂಟೆಗಳವರೆಗೆ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

**೭. ಅನಾರೋಗ್ಯಕರ ಕೆಲಸದ ಸ್ಥಿತಿಯಲ್ಲಿ ದುಡಿಯುತ್ತಿದ್ದಾರೆ.**

ಸಂವಿಧಾನ ಕೆಲಸದ ಸ್ಥಳಗಳಲ್ಲಿ ಆರೋಗ್ಯಕರ ಹಾಗೂ ಮಾನವೀಯ ವಾತಾವರಣವನ್ನು ಕಲ್ಪಿಸಿಕೊಡಬೇಕೆಂದು ಹೇಳುತ್ತದೆ. ಆದರೆ ಮಹಿಳೆಯರು ದುಡಿಯುವ ಪರಿಸರವು ಅನಾರೋಗ್ಯಕರವಾಗಿದ್ದು, ಶಬ್ದ, ಧೂಳು, ಮಾಲಿನ್ಯ, ಕೆಲವು ರಾಸಾಯನಿಕ ವಸ್ತುಗಳ ವಿಷ, ಉಸಿರಾಟದ ತೊಂದರೆ ಇರುವಂತಹ ಪರಿಸರದಲ್ಲಿ ಅವರು ದುಡಿಯಬೇಕಾಗುತ್ತದೆ. ಕಂಪ್ಯೂಟರ್ ಚಿಪ್ಪು ಮತ್ತು ಇತರೆ ಬಿಡಿಭಾಗಗಳ ಕಾರ್ಖಾನೆ, ಬೀಡಿ ಮತ್ತು ಸಿಗರೇಟ್ ಉದ್ಯಮದಲ್ಲಿ ದುಡಿಯುತ್ತಿರುವ ಮಹಿಳೆಯರು ಅನೇಕ ವಿಧದ ರೋಗಗಳಿಗೆ ತುತ್ತಾಗುತ್ತಿರುವುದು ಅಸಂಘಟಿತ ವಲಯದಲ್ಲಿ ಸಾಮಾನ್ಯವಾಗಿದೆ.

**೮. ಅಸಂಘಟಿತ ವಲಯದಲ್ಲಿ ಮಹಿಳೆಯರು ಹೆಚ್ಚಿನ ದೈಹಿಕ ಶ್ರಮ ಮತ್ತು ಏಕತಾನತೆಯ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ.**

ಅಸಂಘಟಿತ ವಲಯದಲ್ಲಿ ಮಹಿಳೆಯರು ಕಡಿಮೆ ಮಟ್ಟದ ತಂತ್ರಜ್ಞಾನ ಬಳಸಿ ದೈಹಿಕ ಶ್ರಮ ಅಧಿಕವಿರುವ, ಕೈಬೆರಳುಗಳನ್ನು ಬಳಸಿ ಮಾಡುವ ಏಕತಾನತೆಯ ಕೆಲಸಗಳಲ್ಲಿ ಹೆಚ್ಚಾಗಿ ದುಡಿಯುತ್ತಿದ್ದಾರೆ. ಇಂತಹ ಕೆಲಸಗಳಲ್ಲಿ ಪುರುಷರ ಸಹಭಾಗಿತ್ವ ಕಡಿಮೆ ಇದ್ದು ಮಹಿಳೆಯರ ಸಹಭಾಗಿತ್ವ ಅಧಿಕವಾಗಿರುತ್ತದೆ.

**೯. ಎರಡು ವಿಧದ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ.**

ಕುಟುಂಬಕ್ಕೆ ಆದಾಯ ತರುವ ಕೆಲಸಗಳ ಜೊತೆಗೆ ಸಾಂಪ್ರದಾಯಿಕ ಪಾತ್ರಗಳಾದ ಮನೆಗೆಲಸ, ಗಂಡ, ಮಕ್ಕಳು, ವೃದ್ಧರ ನೋಡಿಕೊಳ್ಳುವ ಕೆಲಸಗಳು ಮತ್ತು ಗೃಹವಾರ್ತೆ ಕೆಲಸಗಳನ್ನು ಮಾಡುತ್ತಿದ್ದಾರೆ. ಹೀಗೆ ಅಸಂಘಟಿತ ವಲಯದ ಮಹಿಳೆಯರು ಎರಡು ವಿವಿಧ ದುಡಿಮೆಯಲ್ಲಿ ತೊಡಗುತ್ತಿದ್ದಾರೆ.

**೧೦. 'ಫ್ಲೆಕ್ಸಿಬಲ್' ಆಗಿರುವ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ.**

ಅಸಂಘಟಿತ ವಲಯದ ಮಹಿಳೆಯರು ಎರಡು ವಿಧದ ದುಡಿಮೆ ಮಾಡುತ್ತಿರುವುದರಿಂದ ತಮಗೆ ಅನುಕೂಲವಾಗುವ 'ಫ್ಲೆಕ್ಸಿಬಲ್' ಸ್ವರೂಪದ ಕೆಲಸಗಳಲ್ಲಿ ತೊಡಗುತ್ತಾರೆ. ಫ್ಲೆಕ್ಸಿಬಲ್ ಸ್ವರೂಪದ ಕೆಲಸಗಳಾದ ಮನೆಗೆಲಸ, ಋತುಮಾನಕ್ಕೆ ಸಂಬಂಧಿಸಿದ ಕೃಷಿ ಕೆಲಸ, ಕಟ್ಟಡ ನಿರ್ಮಾಣ ಕೆಲಸ ಮತ್ತು ಗುತ್ತಿಗೆ ಆಧರಿತ ಕೆಲಸಗಳಲ್ಲಿ ದುಡಿಯುತ್ತಾರೆ. ಇದರಿಂದಾಗಿ ಅವರು ಕಡಿಮೆ ವೇತನ ಹಾಗೂ ಅಧಿಕ ಸಮಯದವರೆಗೆ ದುಡಿಯುತ್ತಾರೆ.

**೧೧. ಅಸಂಘಟಿತರಾಗಿದ್ದಾರೆ**

ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರು ಕಾರ್ಮಿಕ ಸಂಘಟನೆಗಳ ಮೂಲಕ ಸಂಘಟಿತವಾಗಿರುವುದಿಲ್ಲ. ಯಾಕೆಂದರೆ ಅವರು ಸಣ್ಣ ಪ್ರಮಾಣದಲ್ಲಿ, ವೈಯಕ್ತಿಕ ನೆಲೆಯಲ್ಲಿ,

ಗೃಹಸಂಬಂಧಿ ವೃತ್ತಿಗಳಲ್ಲಿ ಬೇರೆ ಬೇರೆ ಕೆಲಸಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ದುಡಿಯುತ್ತಿರುವುದರಿಂದ ಅವರನ್ನು ಸಂಘಟಿಸುವುದು ಕಷ್ಟವಾಗುತ್ತದೆ. ಕೆಲವೊಂದು ಕಾರ್ಮಿಕ ಸಂಘಟನೆಗಳು ಮಹಿಳೆಯರನ್ನು ಕಾರ್ಮಿಕ ಸಂಘಟನೆಗೆ ಸೇರಿಸಿಕೊಳ್ಳುವುದಿಲ್ಲ. ಹೀಗಾಗಿ ಅಸಂಘಟಿತ ವಲಯದ ಮಹಿಳೆಯರು ಅಸಂಘಟಿತರಾಗಿ ಉಳಿದಿದ್ದಾರೆ. ಅದರೂ ಮುಂಬಯಿ, ಬೆಂಗಳೂರಿನಂತಹ ಮಹಾನಗರಗಳಲ್ಲಿ 'ಮನೆ ಗೆಲಸದ' ಮಹಿಳೆಯರು ಮತ್ತು ಗುಜರಾತಿನಲ್ಲಿ ಅಸಂಘಟಿತ ವಲಯದ ಮಹಿಳೆಯರು 'SEWA' ಸಂಸ್ಥೆಯಡಿ ಸಂಘಟಿತರಾಗಿರುವುದು ಕಂಡುಬರುತ್ತದೆ.

೧೨. ಅಸಂಘಟಿತ ವಲಯದಲ್ಲಿ ದುಡಿಯುವವರಲ್ಲಿ ಅಧಿಕ ಜನ ಮಹಿಳೆಯರು ಶೋಷಿತ ವರ್ಗಕ್ಕೆ ಸೇರಿದವರು

ಭಾರತದಲ್ಲಿ ಬಡ ಕುಟುಂಬದ, ಕೆಳವರ್ಗದ, ಹಿಂದುಳಿದ ಜಾತಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಮಹಿಳೆಯರು ಅಸಂಘಟಿತ ವಲಯದ ವೃತ್ತಿಗಳಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ. ಈ ಮಹಿಳೆಯರು ಪುರುಷರಿಂದ, ಮೇಲುಜಾತಿಯವರಿಂದ, ಮೇಸ್ತ್ರಿಗಳಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ೧೯೭೪ರ ಟುವರ್ಡ್ಸ್ ಈಕ್ವಾಲಿಟಿ ವರದಿ, ೧೯೮೮ರ ಶ್ರಮಶಕ್ತಿ ವರದಿ SEWA ಅವರು ನಡೆಸಿದ ಅಧ್ಯಯನ ಮತ್ತು NSSದ ೨೦೦೨ರ ವರದಿ ಪಾಂಡಿಚೇರಿಯ ಕಾರ್ಮಿಕ ಇಲಾಖೆಯ ವರದಿಗಳು ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಜಾತಿಗೆ ಸೇರಿದ ಮಹಿಳೆಯರು ಅಧಿಕ ಸಂಖ್ಯೆಯಲ್ಲಿದ್ದಾರೆ ಎಂಬುದನ್ನು ಸ್ಪಷ್ಟ ಪಡಿಸುತ್ತವೆ.[೧೯]

ಮೇಲೆ ತಿಳಿಸಿದ ಎಲ್ಲ ಲಕ್ಷಣಗಳು ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆ ಗಾರರ ಲಕ್ಷಣಗಳಾಗಿದ್ದು, ಮಹಿಳೆಯರ ಚಲನಶೀಲತೆಯ ಮೇಲಿನ ನಿರ್ಬಂಧ ಪುರುಷಶಾಹಿ ಸಾಮಾಜಿಕ ವ್ಯವಸ್ಥೆ, ಕೆಲಸದ ಸ್ವರೂಪದಲ್ಲಿನ ಫ್ಲೆಕ್ಸಿಬಲಿಟಿಯ ಗುಣ ಇತ್ಯಾದಿ ಅಂಶಗಳು ಅವರನ್ನು ಅಸಂಘಟಿತ ವಲಯದಲ್ಲಿ ನೆಲೆಸುವಂತೆ ಮಾಡಿವೆ. ಇದರಿಂದಾಗಿ ಅವರು ಕುಟುಂಬ ಮತ್ತು ಕೆಲಸದ ಸ್ಥಳ ಎರಡರಲ್ಲೂ ಶೋಷಣೆಗೆ ಒಳಗಾಗುತ್ತಿದ್ದಾರೆ.

## ೫.೫. ಅಸಂಘಟಿತ ವಲಯದ ವಿವಿಧ ವೃತ್ತಿಗಳು

ಸಂಘಟಿತ ವಲಯ ಎಂಬುದು ಸೀಮಿತ ವ್ಯಾಪ್ತಿ ಹೊಂದಿದ್ದು, ನಿರ್ದಿಷ್ಟ ಉದ್ಯೋಗಗಳನ್ನು ಮಾತ್ರ ಒಳಗೊಂಡಿದೆ. ಆದರೆ ಅಸಂಘಟಿತ ವಲಯ ಎಂಬುದು ತುಂಬಾ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದ್ದು ಅನೇಕ ವಿಧದ ವೃತ್ತಿಗಳನ್ನು ಒಳಗೊಂಡಿದೆ. ಅಸಂಘಟಿತ ವಲಯದಲ್ಲಿ ಗೃಹಸಂಬಂಧಿ ಉದ್ಯೋಗಗಳು, ಸ್ವಯಂ ಉದ್ಯೋಗಗಳು, ಅಕುಶಲ ಕೆಲಸಗಳು ಮತ್ತು ಕುಟುಂಬದ ಸದಸ್ಯರಿಂದ

ಮಾಡುವ ಉದ್ಯೋಗಗಳನ್ನು ಒಳಗೊಂಡಿದೆ. ಹೀಗಾಗಿ ಈ ವಲಯದಲ್ಲಿ ಅಧಿಕ ಸಂಖ್ಯೆಯ ವೃತ್ತಿಗಳು ಕಂಡುಬರುತ್ತವೆ. ಆದರೆ 'ಕೇಂದ್ರ ಸರಕಾರದ ಕಾರ್ಮಿಕ ಸಚಿವಾಲಯ ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆಯ ಅಡಿಯಲ್ಲಿ ಅಸಂಘಟಿತ ವಲಯದಲ್ಲಿ ಬರುವ ೬೫ ವಿವಿಧ ವೃತ್ತಿಗಳನ್ನು ಗುರುತಿಸಿದೆ.[೧೭] CITU ಕಾರ್ಮಿಕ ಸಂಘಟನೆ ಕೇಂದ್ರ ಸರಕಾರದ ತೀರ್ಮಾನವನ್ನು ವಿರೋಧಿಸಿತು. ಅಲ್ಲದೆ ಇಂಥವೇ ನಿರ್ದಿಷ್ಟ ವೃತ್ತಿಗಳೆಂದು ನಮೂದಿಸಿರುವುದು ಸರಿಯಲ್ಲ. ಅಸಂಘಟಿತ ವಲಯದಲ್ಲಿ ೬೫ ವೃತ್ತಿಗಳಲ್ಲದೆ ಇತರ ಅನೇಕ ವೃತ್ತಿಗಳು ಬರುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂದರ್ಶಿದ ಕಾರ್ಮಿಕ ಮುಖಂಡರಲ್ಲಿಯೇ ಅಸಂಘಟಿತ ವಲಯದಲ್ಲಿ ಬರುವ ವಿವಿಧ ವೃತ್ತಿಗಳ ಬಗ್ಗೆ ಒಮ್ಮತ ಅಭಿಪ್ರಾಯವಿಲ್ಲ. ರಾಯಚೂರಿನ ಭಾರತ ಶ್ರಮಿಕ ಸಭಾಸಂಘದ ಪ್ರಧಾನ ಕಾರ್ಯದರ್ಶಿ ಡಾ.ವ್ಹಿ.ಎಚ್.ಮಾಸ್ತರ್ ಅವರು ನೇಕಾರಿಕೆ ಮಾಡುವವರು, ಪ್ರೆಸ್ ಕಾರ್ಮಿಕರು, ಕಲ್ಲು ಒಡೆಯುವವರು, ಹತ್ತಿಗಿರಣಿ ಕಾರ್ಮಿಕರು, ಕೃಷಿ ಕಾರ್ಮಿಕರು ಮತ್ತು ತೋಟಗಾರಿಕಾ ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಗಂಗಾವತಿಯ ಅಸಂಘಟಿತ ವಲಯದ ಕಾರ್ಮಿಕ ಮುಖಂಡ ಜೆ.ಭಾರದ್ವಾಜ್ ಅವರು ಕೃಷಿ ಕಾರ್ಮಿಕರು, ಕಟ್ಟಡ ನಿರ್ಮಾಣ ಕಾರ್ಮಿಕರು, ಮೆಕ್ಯಾನಿಕ್ಸ್, ಸಣ್ಣಪುಟ್ಟ ವ್ಯಾಪಾರಸ್ಥರು, ಹೋಟೆಲ್ ಕಾರ್ಮಿಕರು, ಬಟ್ಟೆ ಅಂಗಡಿ ಕಾರ್ಮಿಕರು ಮತ್ತು ಮನೆಕೆಲಸದ ಕಾರ್ಮಿಕರು ಅಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮತ್ತು ಅಸಂಘಟಿತ ವಲಯದಲ್ಲಿ ೧೨೪ ವೃತ್ತಿಗಳು ಬರುತ್ತವೆ ಎಂಬ ಮಾಹಿತಿಯನ್ನು ನೀಡುತ್ತಾರೆ.

೧೯೭೪ರಲ್ಲಿ ಪ್ರಕಟವಾದ ಟುವರ್ಡ್ಸ್ ಈಕ್ವಾಲಿಟಿ ವರದಿಯು ದೇಶದಲ್ಲಿ ಪ್ರಥಮ ಬಾರಿಗೆ ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಈ ವರದಿಯ ಪ್ರಕಾರ, ಕೃಷಿಕಾರ್ಮಿಕರು, ಕಟ್ಟಡ ನಿರ್ಮಾಣ ಕಾರ್ಮಿಕರು, ಬೀಡಿಕಟ್ಟುವ ಕಾರ್ಮಿಕರು, ಬೆಂಕಿಕಡ್ಡಿ ಉದ್ಯಮದ ಕಾರ್ಮಿಕರು, ಟೈಲರಿಂಗ್ ಮತ್ತು ರೆಡಿಮೇಡ್ ಫ್ಯಾಕ್ಟರಿ ಕಾರ್ಮಿಕರು, ಕಸಗುಡಿಸುವವರು ಮತ್ತು ಬೀದಿ ಗುಡಿಸುವವರು, ಮನೆಗೆಲಸದವರು, ಚಿಲ್ಲರೆ ವ್ಯಾಪಾರಸ್ಥರು, ದಿನಗೂಲಿ ಕಾರ್ಮಿಕರು, ಸಾಂದರ್ಭಿಕ ಕಾರ್ಮಿಕರು, ಸ್ವಯಂ ಉದ್ಯೋಗಿಗಳು, ನೇಯುವವರು, ನೂಲುವವರು ಮತ್ತು ಆಹಾರ ಪದಾರ್ಥಗಳ ಸಂಸ್ಕರಣೆ ಮಾಡುವವರು ಅಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ ಎಂದು ತಿಳಿಸುತ್ತದೆ.[೧೮]

ನ್ಯಾಯವಾದಿ 'ಗಜೆಂದ್ರಗಡ್ಕರ್'ಅವರ ಅಧ್ಯಕ್ಷತೆಯಲ್ಲಿ ನೇಮಕವಾದ 'ಪ್ರಥಮ' ರಾಷ್ಟ್ರೀಯ ಕಾರ್ಮಿಕ ಕಮಿಷನ್'' ೧೦ ವಿಧದ ವೃತ್ತಿಯಲ್ಲಿ ತೊಡಗಿದ ಅಸಂಘಟಿತ ವಲಯದ ಕಾರ್ಮಿಕರನ್ನು ಗುರುತಿಸಿದೆ. ಈ ಆಯೋಗದ ಪ್ರಕಾರ ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಒಳಗೊಂಡಂತೆ ಗುತ್ತಿಗೆ ಆಧಾರದ ಕಾರ್ಮಿಕರು, ಸಾಂದರ್ಭಿಕ ಕಾರ್ಮಿಕರು, ಸಣ್ಣಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು, ಸಣ್ಣ

ಹ್ಯಾಂಡ್ ಲೋಮ್/ಪವರ್ ಲೋಮ್ ಕಾರ್ಮಿಕರು, ಬೀಡಿ ಮತ್ತು ಸಿಗರೇಟ್ ಕಾರ್ಮಿಕರು ವಾಣಿಜ್ಯ ಉದ್ಯಮದವರು ಮತ್ತು ಅಂಗಡಿ ಉದ್ಯೋಗಿಗಳು, ಕಸಗುಡಿಸುವವರು ಮತ್ತು ಬೀದಿಗುಡಿಸುವವರು, ಬುಡಕಟ್ಟು ಕಾರ್ಮಿಕರು ಮತ್ತು ಇತರ ಅರಕ್ಷಿತ ಕಾರ್ಮಿಕರು ಅಸಂಘಟಿತ ವಲಯದಲ್ಲಿ ಬರುವ ಕಾರ್ಮಿಕರಾಗಿದ್ದಾರೆ.[೧೯]

೧೯೯೩ರಲ್ಲಿ ಸಿಸ್ಟಮ್ ಆಫ್ ನ್ಯಾಷನಲ್ ಅಕೌಂಟ್ ಮತ್ತು ಇಂಟರ್ ನ್ಯಾಷನಲ್ ಕಾನ್ ಫರೆನ್ಸ್ ಆಫ್ ಲೇಬರ್ ಸ್ಟೇಟಿಸ್ಟಿಸಿಯನ್ಸ್(SNA ಮತ್ತು ICLS) 'ಸ್ವಂತ ಖಾತೆ ಉದ್ಯಮ' ಮತ್ತು 'ಗೃಹಸಂಬಂಧಿ ಉದ್ಯಮ'ಗಳು ಹಾಗೂ ಋತುಮಾನ ಸಂಬಂಧಿ ಮತ್ತು ಸಂದಾರ್ಭಿಕ ಕೆಲಸಗಳು ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳಾಗಿವೆ ಎಂದು ತಿಳಿಸುತ್ತದೆ.[೨೦] ಇಂದು ಜಾಗತೀಕರಣದ ಪ್ರಭಾವದಿಂದಾಗಿ ಸೃಷ್ಟಿಯಾದ ಕಾಲ್‌ಸೆಂಟರ್ ಉದ್ಯೋಗಿಗಳು, ಗುತ್ತಿಗೆ ಆಧಾರದಲ್ಲಿ ದುಡಿಯುವವರು ಮತ್ತು ಕಂಪ್ಯೂಟರ್ ಅಪರೇಟರ್‌ಗಳು ಸಹ ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರ ರಾಗಿದ್ದಾರೆ.[೨೧]

ಮೇಲೆ ಸೂಚಿಸಿದ ವೃತ್ತಿಗಳಲ್ಲದೆ ಮಹಿಳೆಯರು ಕುಟುಂಬದ ಸದಸ್ಯರು ವಂಶ ಪರಂಪರವಾಗಿ ಮಾಡುತ್ತ ಬಂದಿರುವ ವೃತ್ತಿಗಳಾದ ಖಾದಿ ತಯಾರಿಕೆ, ಈಚಲ ಬುಟ್ಟಿ ತಯಾರಿಕೆ, ಬಿದರಿನ ಉತ್ಪನ್ನಗಳ ತಯಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ಚಮ್ಮಾರಿಕೆ ವೃತ್ತಿಗಳು ಹಾಗೂ ಮನೆಯಲ್ಲಿಯೇ ಕುಳಿತು ಮಾಡುವ ಅಗರಬತ್ತಿ ತಯಾರಿಕೆ, ಮೇಣದ ಬತ್ತಿ ತಯಾರಿಕೆ, ಹಪ್ಪಳ, ಸಂಡಿಗೆ, ಪಾಪಡ್ ತಯಾರಿಕೆ ಮತ್ತು ಬೇಕರಿ ಉತ್ಪನ್ನಗಳ ತಯಾರಿಕೆಗಳು ಅಸಂಘಟಿತ ವಲಯದ ವೃತ್ತಿಗಳಲ್ಲಿ ಬರುತ್ತಿವೆ.

ಪಾಂಡಿಚೇರಿ ಅಸಂಘಟಿತ ಕಾರ್ಮಿಕರ ಕಲ್ಯಾಣ ಸೊಸೈಟಿಯು ಸ್ವಯಂ ಉದ್ಯೋಗದಲ್ಲಿ ನಿರತವಾದ ಮತ್ತು ಗೃಹ ಆಧಾರಿತ ವೃತ್ತಿಗಳಲ್ಲಿ ಹಾಗೂ ಸಾಂಪ್ರದಾಯಿಕ ವೃತ್ತಿಗಳಲ್ಲಿ ತೊಡಗಿದವರನ್ನು ಅಸಂಘಟಿತ ವಲಯದ ಕಾರ್ಮಿಕರೆಂದು ಪರಿಗಣಿಸಿದೆ.[೨೨]

**ಪಾಂಡಿಚೇರಿಯ ಅಸಂಘಟಿತ ಕಾರ್ಮಿಕರ ಕಲ್ಯಾಣ ಸೊಸೈಟಿ ಅಸಂಘಟಿತ ವಲಯದ ವೃತ್ತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿದೆ.**

೧. ಟ್ಯಾಕ್ಸಿ ಮತ್ತು ಆಟೋ ಚಾಲಕರು, ೨. ಬಡಗಿ ಕೆಲಸದವರು, ೩. ಊಟ, ಮನರಂಜನೆ ನೀಡುವವರು ಮತ್ತು ಶಾಪ್‌ಗಳಲ್ಲಿ ಕೆಲಸ ಮಾಡುವವರು, ೪. ನಾದಸ್ವರ ವಿದ್ವಾಂಸರ, ೫. ಹೇರ್ ಡ್ರೆಸ್, ೬. ಟೈಲರ್, ೭. ಸೈಕಲ್ ರಿಕ್ಷಾ ತುಳಿಯುವವರು, ೮. ಮೋಚಿ ಚಮ್ಮಾರರು, ೯. ತೊಳೆಯುವವರು, ೧೦. ಅಕ್ಕಸಾಲಿಗರು, ೧೧. ಕಮ್ಮಾರರು, ೧೨. ಹಿತ್ತಾಳೆ ಪಾತ್ರೆ ತಯಾರಕರು, ೧೩. ಶಿಲ್ಪಿಗಳು, ೧೪. ಲೋಡ್ ಮತ್ತು ಅನ್‌ಲೋಡ್ ಮಾಡುವವರು, ೧೫. ಗಿಡ ಹತ್ತುವವರು ಅಥವಾ

ಮರ ಏರುವವರು, ೧೬. ಕುಂಬಾರರು/ಮಣ್ಣಿನ ಪಾತ್ರೆ ಮಾಡುವವರು, ೧೭. ಹೆಂಡ ಮತ್ತು ನೀರಾ ಇಳಿಸುವವರು, ೧೮. ಎತ್ತಿನ ಬಂಡಿ ನಡೆಸುವವರು, ೧೯. ಹುಲ್ಲು ಮಾರುವವರು, ೨೦. ಅಡುಗೆ ಮಾಡುವವರು, ೨೧. ದಿನಪತ್ರಿಕೆ ಮಾರುವವರು, ೨೨. ಇಟ್ಟಿಗೆ ಹಾಕುವವರು ಮತ್ತು ತಯಾರಿಸುವವರು, ೨೩. ಪೆಟ್ರೋಲಿಯಂ ಗ್ಯಾಸ್ ಸಿಲೆಂಡರ್‌ಗಳನ್ನು ಹಂಚುವ ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ.

ಕೆಲಸದ ವರ್ಗಗಳು

ಕೇಂದ್ರದ ಕಾರ್ಮಿಕ ಇಲಾಖೆಯ 'ವಾರ್ಷಿಕ ವರದಿ-೨೦೦೦' ಅಸಂಘಟಿತ ವಲಯದ ವೃತ್ತಿಗಳನ್ನು ಅವುಗಳ ಸ್ವರೂಪದ ಆಧಾರದ ಮೇಲೆ ಈ ಕೆಳಗಿನಂತೆ ವರ್ಗೀಕರಿಸಿದೆ.

೧. ಉದ್ಯೋಗ ಅಥವಾ ವೃತ್ತಿಗಳು

೨. ಉದ್ಯೋಗದ ಸ್ವರೂಪ

೩. ವಿಶೇಷವಾದ ತೊಂದರೆದಾಯಕ ವೃತ್ತಿವರ್ಗಗಳು ಮತ್ತು

೪. ಸೇವಾವರ್ಗ

**೧. ಉದ್ಯೋಗ ಅಥವಾ ವೃತ್ತಿ**

ಈ ವರ್ಗದಲ್ಲಿ ಚಿಕ್ಕ ಮತ್ತು ಅತಿ ಚಿಕ್ಕ ರೈತರು, ಭೂರಹಿತ ಕೃಷಿ ಕಾರ್ಮಿಕರು, ನೇಗಿಲು ಮಾಡುವವರು, ಮೀನುಗಾರರು, ಪಶು ಸಂಗೋಪನೆಯಲ್ಲಿ ತೊಡಗಿದವರು, ಬೀಡಿ ಕಟ್ಟುವವರು, ಲೇಬಲಿಂಗ್ ಮತ್ತು ಪ್ಯಾಕಿಂಗ್, ಕಟ್ಟಡ ನಿರ್ಮಾಣ, ಕಚ್ಚಾಚರ್ಮ ಮತ್ತು ತೊಗಲು ಸಂಗ್ರಹಿಸುವವರು, ಗ್ರಾಮೀಣ ಭಾಗದಲ್ಲಿ ಕೈಯಿಂದ ನೂಲು ನೇಯುವವರು, ಇಟ್ಟಿಗೆ ಭಟ್ಟಿ ಮತ್ತು ಕಲ್ಲಿನ ಕ್ವಾರಿಗಳು, ಸಾಮಿಲ್, ಎಣ್ಣೆ ಮಿಲ್ಲು ಇತ್ಯಾದಿ ಉದ್ಯಮಗಳು ಅಸಂಘಟಿತ ವಲಯದ ಉದ್ಯೋಗ ಮತ್ತು ವೃತ್ತಿ ವರ್ಗಗಳಲ್ಲಿ ಬರುತ್ತದೆ.

**೨. ಉದ್ಯೋಗದ ಸ್ವರೂಪ**

ಹೊಂದಿಕೊಂಡ ಕೃಷಿಕಾರ್ಮಿಕರು, ಜೀತದಾಳುಗಳು, ವಲಸೆ ಬಂದ ಕಾರ್ಮಿಕರು, ಗುತ್ತಿಗೆ ಆಧಾರಿತ ಕಾರ್ಮಿಕರು ಮತ್ತು ಸಾಂದರ್ಭಿಕ ಕಾರ್ಮಿಕರು ಇತ್ಯಾದಿ. ಇವರು ಅಸಂಘಟಿತ ವಲಯದ ವೃತ್ತಿಗಳಲ್ಲಿ ದುಡಿಯುವವರಾಗಿದ್ದು, ಇವರ ಕೆಲಸದ ಸ್ವರೂಪ ಮಾತ್ರ ಇತರೆ ಕಾರ್ಮಿಕರಿಗಿಂತ ಭಿನ್ನವಾಗಿರುತ್ತದೆ. ಇವರು ಮಾಲೀಕರ ಅಡಿಯಲ್ಲಿ ಅವರು ಹಾಕಿದ ನಿರ್ಬಂಧಗಳಿಗೆ ಅನುಗುಣವಾಗಿ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಕೆಲಸ ಮಾಡುವವರಾಗಿದ್ದಾರೆ.

೩. ವಿಶೇಷವಾಗಿ ತೊಂದರೆದಾಯಕ ವೃತ್ತಿವರ್ಗಗಳು

ಹೆಂಡ ಅಥವಾ ನೀರಾ ಇಳಿಸುವವರು, ಬೀದಿ ಗುಡಿಸುವವರು, ತಲೆಯ ಮೇಲೆ ಭಾರ ಹೊತ್ತು ಸಾಗಿಸುವವರು, ಪಶುಗಳ ಮೂಲಕ ನಡೆಯುವ ವಾಹನ ನಡೆಸುವವರು (ಬಂಡಿ, ಚಕ್ಕಡಿ, ಜಟಕಾ) ಭಾರ ಹೊರುವ ಮತ್ತು ಇಳಿಸುವವರು ಅಥವಾ ಹಮಾಲಿ ಮಾಡುವ ಕಾರ್ಮಿಕರು ಇತ್ಯಾದಿ ಕೆಲಸ ಮಾಡುವವರು ಅಸಂಘಟಿತ ವಲಯದಲ್ಲಿ ಬರುವ 'ವಿಶೇಷ ತೊಂದರೆದಾಯಕವರ್ಗ'ದ ಕೆಲಸಗಾರರಾಗಿದ್ದಾರೆ.

೪. ಸೇವಾವರ್ಗಗಳು

ಸೂಲಗಿತ್ತಿ ಅಥವಾ ದಾಯಿ, ಮನೆಕೆಲಸದವರು, ಕೂದಲು ಕತ್ತರಿಸುವವರು, ಹಣ್ಣು ಮತ್ತು ತರಕಾರಿ ಮಾರುವವರು ಮತ್ತು ದಿನಪತ್ರಿಕೆ ಮಾರುವವರು ಇತ್ಯಾದಿ ವೃತ್ತಿಗಳು ಅಸಂಘಟಿತ ವಲಯದಲ್ಲಿ ಬರುವ ಸೇವಾ ವಲಯದ ವರ್ಗಗಳಲ್ಲಿ ಬರುತ್ತವೆ.[೨೩]

ಈ ನಾಲ್ಕು ವರ್ಗಗಳಲ್ಲಿ ಬರುವ ವೃತ್ತಿಗಳು ಅಸಂಘಟಿತ ವಲಯದ ವ್ಯಾಪ್ತಿಗೆ ಒಳಪಡುತ್ತವೆ. ಮೇಲೆ ತಿಳಿಸಿದ ನಾಲ್ಕು ವರ್ಗಗಳಲ್ಲಿ ಬರುವ ವೃತ್ತಿಗಳಲ್ಲದೆ ಅನೇಕ ವೃತ್ತಿಗಳು ಅಸಂಘಟಿತ ವಲಯದ ವ್ಯಾಪ್ತಿಗೆ ಒಳಪಡುತ್ತವೆ. ರಿಪೋರ್ಟ್ ಆಫ್ ನ್ಯಾಷನಲ್ ಕಮಿಷನ್ ಆನ್ ಲೇಬರ್-೨೦೦೨ ಅಸಂಘಟಿತ ವಲಯದಲ್ಲಿ ಬರುವ ವಿವಿಧ ವೃತ್ತಿಗಳ ವಿವರವನ್ನು ತಿಳಿಸುತ್ತದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. ಗೃಹ ಕೆಲಸಗಾರರು/ಗೃಹ ಆಧಾರಿತ ಕೆಲಸಗಾರರು : ಮನೆಯಲ್ಲಿಯೇ ಕುಳಿತು ಕೆಲಸ ಮಾಡಿ ವೇತನ ಪಡೆಯುವ ಕಾರ್ಮಿಕರನ್ನು ಗೃಹ ಕೆಲಸದ ಕಾರ್ಮಿಕರು ಅಥವಾ ಗೃಹ ಆಧಾರಿತ ಕೆಲಸಗಾರರು ಎಂದು ಕರೆಯಲಾಗುತ್ತದೆ. ಈ ಕೆಲಸಗಾರರು ಸ್ವಂತ ಇಲ್ಲವೇ ಕುಟುಂಬದ ಸದಸ್ಯರೊಂದಿಗೆ ಕೂಡಿಕೊಂಡು ಕೆಲಸ ಮಾಡುವವರಾಗಿರುತ್ತಾರೆ. ಗೃಹ ಆಧಾರಿತ ಕೆಲಸಗಾರರಲ್ಲಿ ಎರಡು ವಿಧಗಳಿವೆ. ಒಂದು ಉದ್ಯೋಗ ನಿರತ ಕೆಲಸಗಾರರು. ಮತ್ತೊಂದು ಸ್ವಯಂ ಉದ್ಯೋಗ ಮಾಡುವ ಕೆಲಸಗಾರರು. ಗೃಹ ಆಧಾರಿತ ಕೆಲಸಗಾರರನ್ನು ಸ್ವಂತ ಖಾತೆಯಲ್ಲಿ ಉದ್ಯೋಗ ಮಾಡುವರು ಮತ್ತು ಇತರರ ಖಾತೆಗಳೊಂದಿಗೆ ಕೂಡಿಕೊಂಡು ಉದ್ಯೋಗ ಮಾಡುವವರು ಎಂದು ಎರಡು ವಿಧದಲ್ಲಿ ವಿಂಗಡಿಸಲಾಗುತ್ತದೆ. ಗುಜರಾತಿನ SEWA ಸಂಸ್ಥೆಯು ದೇಶದ ವಿವಿಧ ರಾಜ್ಯಗಳಲ್ಲಿ ಸಮೀಕ್ಷೆ ನಡೆಸಿ ಅನೇಕ ಗೃಹ ಆಧಾರಿತ ಕೆಲಸಗಾರರನ್ನು ಗುರುತಿಸಿದೆ.

ಸೇವಾ ಸಂಸ್ಥೆಯ ಸಮೀಕ್ಷೆಯ ಪ್ರಕಾರ ಬೀಡಿ ಕಟ್ಟುವವರು, ಅಗರಬತ್ತಿ ಮಾಡುವವರು, ರೆಡಿಮೇಡ್ ಗಾರ್ಮೆಟ್ಸ್, ನೂಲುವವರು, ನೇಯುವವರು, ಆಹಾರ ಸಂಸ್ಕರಣೆ ಮತ್ತು ಪೊಟ್ಟಣ ತಯಾರಿಕರು, ಸಂಪ್ರದಾಯ ಕಲೆಗಾರರು ಮತ್ತು ಕರಕುಶಲ ಕಲೆಗಾರರು, ಚಿತ್ರಕಾರರು, ಝರಿ

ಕೆಲಸಗಾರರು, ಎನ್‌ವಲಪ್‌ಕಾರ್ಡ್ ತಯಾರಿಸುವವರು, ಎಂಬ್ರಾಯಿಡರಿ ಕೆಲಸಗಾರರು, ಪಾಪಡ್ ತಯಾರಿಕರು, ಸೆಣಬಿನ ಕೆಲಸಗಾರರು, ಚರ್ಮದ ಕೆಲಸ ಮಾಡುವವರು, ಚಿಕನ್ ಕೆಲಸಗಾರರು, ರೂಪ ಮಾಡುವವರು ಮತ್ತು ಬಡಗಿ ಕೆಲಸ ಮಾಡುವವರು ಇತ್ಯಾದಿ ಕೆಲಸಗಾರರು ಗೃಹ ಆಧಾರಿತ ಕೆಲಸಗಳಲ್ಲಿ ದುಡಿಯುವವರಾಗಿರುತ್ತಾರೆ.[೨೨]

೨. ಮನೆಕೆಲಸದ ಕಾರ್ಮಿಕರು ಅಥವಾ ಮನೆಕೆಲಸದ ಕೆಲಸಗಾರರು : ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳಲ್ಲಿ 'ಮನೆಕೆಲಸ' ಮಾಡುವ ಕಾರ್ಮಿಕರು ಸೇರುತ್ತಾರೆ. ದೇಶದಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮನೆಕೆಲಸದಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದ್ದು ಇದರಲ್ಲಿ ಪುರುಷ ಕಾರ್ಮಿಕರಿಗಿಂತ ಮಹಿಳೆಯರು ಮತ್ತು ಮಕ್ಕಳು ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿರುವುದನ್ನು ಅನೇಕ ಅಧ್ಯಯನಗಳು ತಿಳಿಸುತ್ತವೆ. ಮುಂಬೈ 'ಕಾಲೇಜ್ ಆಫ್ ಸೋಶಿಯಲ್ ವರ್ಕ್'ನವರು ನಡೆಸಿದ ಒಂದು ಅಧ್ಯಯನದ ಪ್ರಕಾರ 'ಮನೆಕೆಲಸದ ದುಡಿಮೆಯಲ್ಲಿ ತೊಡಗಿರುವ ಕಾರ್ಮಿಕರಲ್ಲಿ ಶೇಕಡ ೮೦ರಷ್ಟು ಜನ ಕಾರ್ಮಿಕರು ಮಹಿಳೆಯರೇ ಎಂಬುದು ಸ್ಪಷ್ಟವಾಗಿದೆ.[೨೩]

ಬಡವರು, ಅನಕ್ಷರಸ್ಥರು ಮತ್ತು ದುರ್ಬಲ ವರ್ಗಕ್ಕೆ ಸೇರಿದ ಕಾರ್ಮಿಕರು ಬೇರೆಯವರ ಮನೆಗಳಲ್ಲಿ ಕಡಿಮೆ ಸಂಬಳಕ್ಕೆ ಕೆಲಸದ ನಿಯಮ ನಿರ್ಬಂಧಗಳನ್ನು ವಿಧಿಸದೆ ಕಸ ಗುಡಿಸುವ, ಮುಸುರೆ ತಿಕ್ಕುವ, ಅಡುಗೆ ಮಾಡುವ, ಬಟ್ಟೆ ತೊಳೆಯುವ ಮತ್ತು ಮನೆ ಸ್ವಚ್ಛಗೊಳಿಸುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಇವರು ಯಾವುದೇ ಸಾಮಾಜಿಕ ಭದ್ರತಾ ಸೌಲಭ್ಯ ಹಾಗೂ ಉದ್ಯೋಗದ ಭದ್ರತೆ ಗಳಿಲ್ಲದೆ ೮ ಗಂಟೆಗಳಿಗಿಂತಲೂ ಅಧಿಕ ಸಮಯದವರೆಗೆ ದುಡಿಯುವವರಾಗಿದ್ದಾರೆ. 'ಸರಕಾರೇತರ ಸಂಸ್ಥೆಯೊಂದು ಅಥವಾ 'ಮನೆ ಕೆಲಸ ಮಾಡುವ ಕಾರ್ಮಿಕರ ಸಂಘ'ಗಳ ಮಸೂದೆಯನ್ನು ಮಂಡಿಸಿ ಮನೆಕೆಲಸದ ಕಾರ್ಮಿಕರ ರಕ್ಷಣೆಗೆ ಮುಂದಾಗಿದೆ. ಈ ಕಾರ್ಮಿಕರಿಗೆ ಪ್ರಾವಿಡೆಂಟ್ ಫಂಡ್, ಗ್ರ್ಯಾಚ್ಯುಟಿ, ಆರೋಗ್ಯ ಸೌಲಭ್ಯ, ನಿಗದಿತ ಕೆಲಸದ ಅವಧಿ, ಕನಿಷ್ಠ ವೇತನ ಮತ್ತು ಸಾಮಾಜಿಕ ಭದ್ರತೆಗಳನ್ನು ನೀಡಬೇಕೆಂಬುದು ಈ ಸಂಘಟನೆಗಳ ಬೇಡಿಕೆಯಾಗಿದೆ.[೨೪] ಈ ರೀತಿಯ ಮನೆಕೆಲಸ ಮಾಡುವ ಕಾರ್ಮಿಕ ಸಂಘಗಳು ಬೆಂಗಳೂರು, ಬಾಂಬೆ ಮತ್ತು ಚನ್ನೈನಂತಹ ಮಹಾನಗರಗಳಲ್ಲಿ ಮಾತ್ರ ಕಂಡುಬರುತ್ತದೆ. ಆದರೆ ಪಟ್ಟಣ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುವ ಈ ಕಾರ್ಮಿಕರು ಮನೆ ಯಜಮಾನರಿಂದ ಲೈಂಗಿಕ ಕಿರುಕುಳ, ದಬ್ಬಾಳಿಕೆ ಮತ್ತು ಶೋಷಣೆಗೆ ಒಳಗಾಗುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ

೩. ಸೆಕ್ಸ್ ವರ್ಕರ್ ಅಥವಾ ಲೈಂಗಿಕ ಕಾರ್ಯಕರ್ತೆಯರು : ಲೈಂಗಿಕ ಕಾರ್ಯಕರ್ತೆಯರು ಅಸಂಘಟಿತ ವಲಯದ ಕಾರ್ಮಿಕರಾಗಿದ್ದಾರೆ. ಹಣಕ್ಕಾಗಿ ಪುರುಷರ ಲೈಂಗಿಕ ಬಯಕೆಯನ್ನು ಹಿಡಿದಿರುವ ಮಹಿಳೆಯರನ್ನು ಲೈಂಗಿಕ ಕಾರ್ಯಕರ್ತೆಯರು ಎಂದು ಕರೆಯಲಾಗು ತ್ತದೆ. ದೇಶದ ವಿವಿಧ ರಾಜ್ಯಗಳಲ್ಲಿ ಕಂಡುಬರುವ ಇವರನ್ನು, ವೇಶ್ಯೆ, ಬಸವಿ, ದೇವದಾಸಿ ಇತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತದೆ. ವೇಶ್ಯೆಯ ವರ್ಗಕ್ಕೆ

ಸೇರಿದ ಮಹಿಳೆಯರೇ ನಗರ ಪ್ರದೇಶ ಮತ್ತು ಮಹಾನಗರಗಳಲ್ಲಿ ಸಾರ್ವಜನಿಕವಾಗಿ ವೇಶ್ಯ ವೃತ್ತಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಬಡತನದಿಂದ, ಪರಿಸ್ಥಿತಿಯ ಒತ್ತಡದಿಂದ ಈ ವೃತ್ತಿಗಿಳಿದ ಮಹಿಳೆಯರು ಅನೇಕ ವಿಧಧ ರೋಗಗಳಿಂದ ನರಳುತ್ತಿದ್ದಾರೆ. ಅಲ್ಲದೆ 'ಏಡ್ಸ್'(AIDS)ನಂತಹ ಭಯಾನಕ ರೋಗವನ್ನು ಮತ್ತು ಲೈಂಗಿಕ ರೋಗಗಳನ್ನು ಪ್ರಸರಿಸುವ ಮಾಧ್ಯಮವಾಗಿದ್ದಾರೆ. 'ನಗರ ಪ್ರದೇಶಗಳಲ್ಲಿ ಸಂಘಟಿತವಾಗಿರುವ ಈ ಮಹಿಳೆಯರು ಸರಕಾರ ತಮ್ಮನ್ನು ಸ್ವಯಂ ಉದ್ಯೋಗ ಕಾರ್ಮಿಕರೆಂದು ಪರಿಗಣಿಸಬೇಕು ಹಾಗೂ ಆರೋಗ್ಯ ಯೋಜನೆ, ಆರೋಗ್ಯ ವಿಮೆ ಮತ್ತು ಜೀವವಿಮೆಯನ್ನು ನೀಡಬೇಕೆಂದು ಬೇಡಿಕೆ ಸಲ್ಲಿಸಿದ್ದಾರೆ.[೨೭] ಸರಕಾರ ಲೈಂಗಿಕ ಕಾರ್ಯಕರ್ತೆಯರಿಗೆ ಆರ್ಥಿಕ ಸಹಾಯ ಹಾಗೂ ಉದ್ಯೋಗ ಕೌಶಲ್ಯ ತರಬೇತಿಯನ್ನು ನೀಡಿ ವೇಶ್ಯಾ ವೃತ್ತಿಯನ್ನು ಬಿಡಿಸಿ ಸ್ವಯಂ ಉದ್ಯೋಗ ಮಾಡಲು ಪ್ರೋತ್ಸಾಹಿಸಬೇಕು.

**೪. ಪ್ಲಾಂಟೇಷನ್ ಕಾರ್ಮಿಕರು :** ಪ್ಲಾಂಟೇಷನ್ ಕಾರ್ಮಿಕರು ಅಸಂಘಟಿತ ವಲಯದ ವೃತ್ತಿಗಳಲ್ಲಿ ಬರುವವರಾಗಿದ್ದಾರೆ. ೧೯೫೧ರ ಪ್ಲಾಂಟೇಷನ್ ಕಾಯ್ದೆಯ ಪ್ರಕಾರ, ೧೫ ಜನ ಕಾರ್ಮಿಕರು ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯ ಕಾರ್ಮಿಕರು ೫ ಹೆಕ್ಟೇರ್ ಅದಕ್ಕಿಂತ ಹೆಚ್ಚಿನ ಹೆಕ್ಟೇರ್ ಭೂಮಿ ಅಥವಾ ತೋಟಗಳಲ್ಲಿ ಪ್ರತಿದಿನ ೧೨ ತಿಂಗಳುಗಳವರೆಗೆ ದುಡಿಯುವ ಕಾರ್ಮಿಕರನ್ನು ಪ್ಲಾಂಟೇಷನ್ ಕಾರ್ಮಿಕರೆಂದು ಗುರುತಿಸಿದೆ.[೨೮] ಈ ಕಾರ್ಮಿಕರು 'ಪ್ಲಾಂಟೇಷನ್' ಕೆಲಸದಲ್ಲಿ ಕಡಿಮೆ ಕೂಲಿ ಪಡೆಯುತ್ತಿದ್ದು ೮ ಗಂಟೆಗಳಿಗಿಂತಲೂ ಅಧಿಕ ಸಮಯದವರೆಗೆ ಕೆಲಸ ಮಾಡುತ್ತಿರುತ್ತಾರೆ. ಈ ಕೆಲಸದಲ್ಲಿ ನಿರತರಾಗಿರುವ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ದಲಿತ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದು ಭೂ ಒಡೆಯರಿಂದ ನಿತ್ಯ ಶೋಷಣೆ, ದಬ್ಬಾಳಿಕೆಗೆ ಒಳಗಾಗುತ್ತಿದ್ದಾರೆ.

**೫. ಮೈನಿಂಗ್ ಮತ್ತು ಕ್ವಾರಿಂಗ್ ಕಾರ್ಮಿಕರು :** ಮೈನಿಂಗ್ ಮತ್ತು ಕ್ವಾರಿಂಗ್ ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ. ಭೂಗರ್ಭದಲ್ಲಿನ ಖನಿಜಗಳನ್ನು ತೆಗೆಯುವ ಗಣಿ ಉದ್ಯಮದಲ್ಲಿ ಕೆಲಸ ಮಾಡುವ ಕಾರ್ಮಿಕರನ್ನು ಗಣಿ ಕಾರ್ಮಿಕರೆಂದು ಕರೆಯಲಾಗುತ್ತದೆ ಮತ್ತು ಕಲ್ಲು ಬಂಡೆಗಳನ್ನು ಒಡೆಯುವ ಹಾಗೂ ಕೊರೆಯುವ ಕಾರ್ಮಿಕರನ್ನು ಕ್ವಾರಿಂಗ್ ಕಾರ್ಮಿಕರೆಂದು ಕರೆಯಲಾಗುತ್ತದೆ. ಕಲ್ಲಿದ್ದಲು ಗಣಿ ತಾಮ್ರದ ಗಣಿ, ಕಬ್ಬಿಣದ ಗಣಿ, ಬಂಗಾರದ ಗಣಿ ಮತ್ತು ಬೆಳ್ಳಿಗಣಿ ಹಾಗೂ ಇತರ ಖನಿಜಗಳ ಗಣಿಗಳಲ್ಲಿ ದುಡಿಯುವವರು ಗಣಿ ಕಾರ್ಮಿಕರಾಗಿದ್ದು, ಕಂಕರ್, ಮರುಮು, ಲ್ಯಾಟರೇಟ್, ಬೋಲ್ಡರ್, ಗ್ರಾನೈಟ್, ಬಿಲ್ಡಿಂಗ್ ಸ್ಟೋನ್, ರೋಡ್ ಮೆಟಲ್ ಇತ್ಯಾದಿ ಕೆಲಸಗಳಲ್ಲಿ ನಿರತರಾದ ಕಾರ್ಮಿಕರು ಕ್ವಾರಿಂಗ್ ಕಾರ್ಮಿಕರಾಗಿದ್ದಾರೆ.

೧೯೯೯-೨೦೦೦ರ ಡೈರೆಕ್ಟರ್ ಜನರಲ್ ಮೈನ್ಸ್ ಸೇಫ್ಟಿ ವರದಿ ಪ್ರಕಾರ ಭಾರತದಲ್ಲಿ ೫,೫೦,೦೦೦ ಕಾರ್ಮಿಕರು ಕಲ್ಲಿದ್ದಲು ಗಣಿಯಲ್ಲಿ ಮತ್ತು ೧,೯೫,೦೦೦ ಕಾರ್ಮಿಕರು ಕಲ್ಲಿದ್ದಲು ಹೇತರ

ಗಣಿಗಳಲ್ಲಿ ದುಡಿಯುತ್ತಿದ್ದಾರೆ.[೫೯] ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳಾ ಕಾರ್ಮಿಕರಿದ್ದು, ಅನೇಕ ತ್ರಾಸದಾಯಕ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ. ಕಾರ್ಮಿಕರು ಕಡಿಮೆ ವೇತನಕ್ಕೆ ಅಧಿಕ ಗಂಟೆಗಳವರೆಗೆ ದುಡಿಯುತ್ತಿದ್ದು, ಯಾವುದೇ ಸಂಘಟನೆಗೆ ಸೇರದೇ ಅಸಂಘಟಿತರಾಗಿದ್ದಾರೆ. ಅಲ್ಲದೆ ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಆದರೆ ಸಾರ್ವಜನಿಕ ವಲಯದ ಗಣಿ ಉದ್ಯಮಗಳಾದ ಕೋಲ್ ಇಂಡಿಯಾ ಲಿಮಿಟೆಡ್(CIL), ಸ್ಟೀಲ್ ಅಥಾರಟಿ ಆಫ್ ಇಂಡಿಯಾ ಲಿಮಿಟೆಡ್(SAIL), ಹಿಂದೂಸ್ತಾನ ಜೀನ್ಸ್ ಲಿಮಿಟೆಡ್(IZL), ನ್ಯಾಷನಲ್ ಅಲ್ಯೂಮಿನಿಯಂ ಕಂಪನಿ (NALCO), ಸಿಮೆಂಟ್ ಕಾರ್ಪೋರೇಷನ್ ಆಫ್ ಇಂಡಿಯಾ ಲಿಮುಟೆಡ್(ಕುದುರೆಮುಖ ಐರನ್ ಓರ್ ಕಂಪನಿ ಲಿಮಿಟೆಡ್), ಮೈನ್ಸ್ ಆಫ್ ನ್ಯಾಷನಲ್ ಮಿನರಲ್ ಡೆವಲಪ್‌ಮೆಂಟ್, ಕಾರ್ಪೋರೇಷನ್ (NMDC) ಮತ್ತು ಆಯಿಲ್ ಅ್ಯಂಡ್ ನ್ಯಾಚ್ಯುರಲ್ ಗ್ಯಾಸ್ ಕಮೀಷನ್(ONGC) ಇತ್ಯಾದಿಗಳಲ್ಲಿ ಕಾರ್ಮಿಕರು ದುಡಿಯುತ್ತಿದ್ದು, ಉದ್ಯೋಗ ಭದ್ರತೆ, ಅಧಿಕ ವೇತನ ಮತ್ತು ಸಾಮಾಜಿಕ ಸೌಲಭ್ಯಗಳನ್ನು ಪಡೆಯುವವರಾಗಿದ್ದಾರೆ.[೫೯]

**೭. ಬೀದಿ ಗುಡಿಸುವವರು :** ಬೀದಿ ಗೂಡಿಸುವ ಕಾರ್ಮಿಕರು ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳಲ್ಲಿ ದುಡಿಯುವವರಾಗಿರುತ್ತಾರೆ. ಈ ಕೆಲಸದಲ್ಲಿ ತೊಡಗಿರುವವರಲ್ಲಿ ಅಧಿಕ ಸಂಖ್ಯೆಯವರು ದಲಿತ ಜನಾಂಗದ ಮಹಿಳೆ ಮತ್ತು ಪುರುಷರು ಎಂಬುದನ್ನು ಅನೇಕ ವರದಿಗಳು ದೃಢಪಡಿಸಿವೆ. ಇವರು ಬೀದಿ ಗುಡಿಸುವವರು, ಚರಂಡಿ ಸ್ವಚ್ಛತೆ, ಶೌಚಾಲಯ ಸ್ವಚ್ಛತೆ, ಸತ್ತ ಪ್ರಾಣಿಗಳ ವಿಲೇವಾರಿ ಮತ್ತು ಮಲಮೂತ್ರ ವಿಲೇವಾರಿಯಂತಹ ಅನಾರೋಗ್ಯಕರ ಕೆಲಸಗಳಲ್ಲಿ ತೊಡಗಿರುತ್ತಾರೆ. ಹಿಂದೆ ಜಾತಿ ವ್ಯವಸ್ಥೆಯಲ್ಲಿ ದಲಿತರು 'ಮಲ ಹೊರುವ' ಪದ್ಧತಿ ಇದ್ದಿದ್ದು ಇಂದು ಸ್ಥಳೀಯ ಸಂಸ್ಥೆಗಳ ಮೂಲಕ ಮೇಲೆ ತಿಳಿಸಿದ ರೂಪದಲ್ಲಿ ಆಚರಣೆಯಲ್ಲಿದೆ.

'ಕಸಗುಡಿಸುವ ಕೆಲಸಕ್ಕೆ ನಗರಪಾಲಿಕೆಗಳು ಒಂದು ದಿನಕ್ಕೆ ೩೦ರಿಂದ ೪೦ ರೂಪಾಯಿಗಳನ್ನು ನೀಡುತ್ತಿದ್ದರೆ, ಖಾಸಗಿಯಾಗಿ ಪ್ರತಿ ಒಂದು ಮನೆಗೆ ತಿಂಗಳಿಗೆ ೫ ರೂಪಾಯಿಯನ್ನು ಪಡೆಯುತ್ತಾರೆ. ಹೀಗೆ ಕಡಿಮೆ ಕೂಲಿಗೆ, ಅನಾರೋಗ್ಯಕರ ಕೆಲಸದಲ್ಲಿ ದುಡಿಯುತ್ತಿದ್ದಾರೆ.[೬೦] ಅನಕ್ಷರಸ್ಥರಾದ ಈ ಕಾರ್ಮಿಕರು ಕೆಲಸದ ಅಭದ್ರತೆ, ಕಡಿಮ ವೇತನ, ಆರೋಗ್ಯ ಸೌಲಭ್ಯ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸರಕಾರವು ಇದರ ಕಲ್ಯಾಣಕ್ಕಾಗಿ ಯಾವುದೇ ಯೋಜನೆಗಳನ್ನು ಜಾರಿಗೊಳಿಸುತ್ತಿಲ್ಲದಿರುವುದು ಕಂಡುಬರುತ್ತದೆ.

**೮. ಹಡಗು ಮುರಿಯುವ ಕೈಗಾರಿಕಾ ಕಾರ್ಮಿಕರು :** ಹಡಗು ಮುರಿಯುವ ಕೈಗಾರಿಕೆಯಲ್ಲಿ ದುಡಿಯುವ ಕಾರ್ಮಿಕರು ಸಹ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಾಗಿದ್ದಾರೆ. 'ಕಾಂಬೆಕೊಲ್ಲಿಯಲ್ಲಿ ಸಮೀಪದಲ್ಲಿ ನೆಲೆಸಿರುವ ೬೦ ಕಿ.ಮೀ.ವ್ಯಾಪ್ತಿಯ ಭವನಗರ ಯಾರ್ಡ್ ಮತ್ತು ೨೬೦ ಕಿ.ಮೀ.

ವ್ಯಾಪ್ತಿಯ ಅಹಮದಾಬಾದ್ ಯಾರ್ಡ್‌ಗಳು ಏಶಿಯಾದ ಅತೀ ದೊಡ್ಡ ಹಡಗು ಮುರಿದ ಕೈಗಾರಿಕೆಗಳಾಗಿದ್ದು, ಒಟ್ಟು ೧೭,೦೦೦ ಕಾರ್ಮಿಕರನ್ನು ಇಲ್ಲಿ ದುಡಿಯುತ್ತಿದ್ದಾರೆ.[೬೧] ಇವರು ಭಾರವಾದ, ಕಠಿಣವಾದ, ಕಣ್ಣಿಗೆ ಹೆಚ್ಚು ತೊಂದರೆ ಉಂಟಾಗುವ ಮತ್ತು ವಿಷಪೂರಿತ ಅನಿಲಗಳೊಂದಿಗೆ ಕೆಲಸ ಮಾಡುವವರಾಗಿರುತ್ತಾರೆ. ಸರಕಾರ ಇವರ ರಕ್ಷಣೆಗೆ, ಹೆಲ್ಮೆಟ್, ಹ್ಯಾಂಡ್ ಗ್ಲೌವ್ಸ್, ಗೋಗಲ್ ಗ್ಲಾಸ್‌ಗಳನ್ನು ನೀಡುತ್ತಿದೆ. ಅವರು ಕೆಲಸದ ಸಂದರ್ಭದಲ್ಲಿ ಅಪಘಾತಗಳು ಸಂಭವಿಸಿದಾಗ ಸಾವೀಗಿಡಾಗಿರುವುದು ಕಂಡುಬರುತ್ತಿದೆ. ಇಂತಹ ಅನಾರೋಗ್ಯಕರ ಪರಿಸ್ಥಿತಿಗಳಲ್ಲಿ ಈ ಕಾರ್ಮಿಕರು ಕೆಲಸ ಮಾಡುತ್ತಿರುತ್ತಾರೆ.

**೯. ಚಿಂದಿ ಆಯುವವರು :** ಚಿಂದಿ ಆಯುವುದು. ಸಹ ಅಸಂಘಟಿತ ವಲಯದಲ್ಲಿ ಬರುವ ಒಂದು ರೀತಿಯ ಉದ್ಯೋಗವಾಗಿದೆ. ಉದ್ಯೋಗವು ಕೈಗಾರಿಕಾ ನಗರ ಮತ್ತು ಮೇಟ್ರೋಪಾಲಿಟನ್ ಸಿಟಿಗಳಲ್ಲಿ ಕಂಡುಬರುತ್ತದೆ. ಅನುಪಯುಕ್ತ ವಸ್ತುಗಳನ್ನು ಪುನರ್ ಉಪಯೋಗ ವಸ್ತುಗಳನ್ನಾಗಿ ಮಾಡುವ ಉತ್ಪಾದನಾ ಉದ್ಯಮವನ್ನು ಅವಲಂಬಿಸಿದೆ. ಒಂದು ಸಮೀಕ್ಷೆಯ ಪ್ರಕಾರ ೫೦ ಲಕ್ಷ ಜನರು ಚಿಂದಿ ಆಯುವ ಉದ್ಯೋಗದಲ್ಲಿ ತೊಡಗಿರುವುದು ತಿಳಿದುಬರುತ್ತಿದೆ. ಈ ಕೆಲಸದಲ್ಲಿ ನಿರತರಾದವರಲ್ಲಿ ಅಧಿಕರು ಮಕ್ಕಳು ಮತ್ತು ಮಹಿಳೆಯರು ಆಗಿದ್ದು ಅನಾರೋಗ್ಯಕರ ಪರಿಸ್ಥಿತಿಗಳಲ್ಲಿ ದುಡಿಯುತ್ತಿದ್ದಾರೆ

ಚಿಂದಿ ಆಯುವವರು ಅನಕ್ಷರಸ್ಥರು, ಅಕೌಶಲ್ಯರು, ಕಾನೂನುಬದ್ಧರಲ್ಲದ ಮತ್ತು ಬಡವರಲ್ಲಿ ಬಡವರಾಗಿದ್ದು, ಇತರೇ ಉದ್ಯೋಗವನ್ನು ಹುಡುಕಲು ಅಸಮರ್ಥರಾದವರು ಆಗಿರುತ್ತಾರೆ. ಕಬ್ಬಿಣದ ತುಂಡು ಆಯುವವರು ಗುತ್ತಿಗೆದಾರರಿಂದ ಸಂಘಟಿತರಾಗಿದ್ದರೆ, ಅನುಪಯುಕ್ತ ವಸ್ತುಗಳನ್ನು ಆಯುವವರು ಸ್ವಯಂ ಉದ್ಯೋಗಿಗಳಾಗಿ ಕೆಲಸ ಮಾಡುವವರಾಗಿದ್ದಾರೆ. ಇಂತಹ ಉದ್ಯೋಗದಲ್ಲಿ ನಿರತರಾದ ಇವರು ಯಾವುದೇ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯದೇ ನಿರಾಶ್ರಿತರಾಗಿ ಜೀವಿಸುತ್ತಿದ್ದಾರೆ.[೬೨]

**೧೦. ಮೀನುಗಾರಿಕೆ :** ಅಸಂಘಟಿತ ವಲಯದಲ್ಲಿ ಬರುವ ವೃತ್ತಿಗಳಲ್ಲಿ ಮೀನುಗಾರಿಕೆಯು ಒಂದು ಉದ್ಯೋಗವಾಗಿದೆ. ಸಮುದ್ರಗಳು ಭಾರತವನ್ನು ಮೂರು ದಿಕ್ಕುಗಳಿಂದ ಆವರಿಸಿರುವುದರಿಂದ ಇಲ್ಲಿ ಮೀನುಗಾರಿಕೆ ಹೆಚ್ಚು ಅಭಿವೃದ್ಧಿ ಹೊಂದಿದೆ. ಸಮುದ್ರ ಮೀನುಗಾರಿಕೆ ಅಲ್ಲದೆ ನದಿ, ಕೆರೆ, ಜಲಾಶಯಗಳಲ್ಲಿ ಮೀನುಗಾರಿಕೆ ನಡೆಯುತ್ತಿದೆ. ಹೀಗಾಗಿ ದೇಶದಲ್ಲಿ ಒಟ್ಟು ೫.೪. ಮಿಲಿಯನ್ ಟನ್ ಮೀನು ಉತ್ಪಾದನೆಯಾಗುತ್ತಿದೆ. ಭಾರತ ಪ್ರಪಂಚದಲ್ಲಿಯೇ ಮೀನಿನ ಆಹಾರವನ್ನು ರಫ್ತು ಮಾಡುವ ಪ್ರಥಮ ರಾಷ್ಟ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಂತಹ ಉದ್ಯಮದಲ್ಲಿ ದುಡಿಯುವವರು ವಲಸೆ ಬಂದ ಮಹಿಳೆಯವರಾಗಿದ್ದಾರೆ.

ಭಾರತದಲ್ಲಿ ೧ ಲಕ್ಷಕ್ಕಿಂತ ಅಧಿಕ ವಲಸೆ ಬಂದ ಮಹಿಳೆಯರು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಮುದ್ರ ಆಹಾರ ಸಂಸ್ಕರಣ ಉದ್ಯಮದಲ್ಲಿ ದುಡಿಯುತ್ತಿದ್ದಾರೆ. ಇದರಲ್ಲಿ ೧೬-೨೫

ವರ್ಷ ವಯಸ್ಸಿನ ಮಹಿಳೆಯರು ಅಧಿಕವಾಗಿದ್ದು, ಇವರು ಕೇರಳ, ಕರ್ನಾಟಕ ಮತ್ತು ತಮಿಳುನಾಡುಗಳಿಂದ ಬಂದವರಾಗಿದ್ದಾರೆ. ಮಹಿಳೆಯರು ಗುತ್ತಿಗೆ ಆಧಾರದ ಮೇಲೆ ಮತ್ತು ವೇಸ್ ಕಾಟ್ ಆಧಾರದ ಮೇಲೆ ದುಡಿಯುತ್ತಿದ್ದು, ಅದು ಋತುಮಾನ ಸಂಬಂಧಿ ಉದ್ಯೋಗವಾಗಿರುತ್ತದೆ.[೩೩]

ಹೀಗೆ ಋತುಮಾನ ಸಂಬಂಧಿ ಗುತ್ತಿಗೆ ಆಧಾರದಲ್ಲಿ ದುಡಿಯುವ ಈ ಕಾರ್ಮಿಕರು ಅನೇಕ ವಿಧದ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಕಡಿಮೆ ಕೂಲಿ, ನಿರುದ್ಯೋಗ ಸಮಸ್ಯೆ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.

೧೧. **ಫಿರೋಜಾಬಾದ್‌ನ ಬಳೆ ಕೈಗಾರಿಕೆ :** ಬಳೆ ಕೈಗಾರಿಕೆಯು ಅಸಂಘಟಿತ ವಲಯದಲ್ಲಿ ಬರುವ ಒಂದು ಉದ್ಯಮವಾಗಿದೆ. ಈ ಉದ್ಯಮದಲ್ಲಿ ದುಡಿಯುವ ಕಾರ್ಮಿಕರು ಮಕ್ಕಳಾಗಿದ್ದು, ಅನಾರೋಗ್ಯಕರ ಪರಿಸರದಲ್ಲಿ ದುಡಿಯುತ್ತಿದ್ದಾರೆ. ದೇಶದಲ್ಲಿ ೧೪೦ ನೋಂದಾಯಿತ ಗಾಜಿನ ಬಳೆ ಕೈಗಾರಿಕೆಗಳು ಮತ್ತು ೩೫ ಬಳೆ ಕತ್ತರಿಸುವ ಯುನಿಟ್‌ಗಳಿವೆ. ಈ ಕೈಗಾರಿಕೆಗಳಲ್ಲಿ ೧,೩೦,೦೦೦ ಕಾರ್ಮಿಕರು ದುಡಿಯುತ್ತಿದ್ದು ವಾರ್ಷಿಕವಾಗಿ ೪೫೦ ಮಿಲಿಯನ್ ರೂಪಾಯಿಗಳ ವಹಿವಾಟು ನಡೆಯುತ್ತಿದೆ. ಇಂತಹ ಒಂದು ಬೃಹತ್ ಉದ್ಯಮದಲ್ಲಿ ಅಧಿಕ ಸಂಖ್ಯೆಯ ಬಾಲಕಾರ್ಮಿಕರು ದುಡಿಯುತ್ತಿದ್ದಾರೆ. '೧೯೭೨ರಲ್ಲಿ ಯೋಜನಾ ಆಯೋಗದ ಸಮೀಕ್ಷೆಯ ಪ್ರಕಾರ ೫೦೦೦ರಿಂದ ೧,೦೦,೦೦೦ ಮಕ್ಕಳು ಈ ಉದ್ಯಮದಲ್ಲಿ ದುಡಿಯುತ್ತಿದ್ದಾರೆ.[೩೪] ಇವರು ದಿನಕೂಲಿ ಕೆಲಸಗಾರರಾಗಿ, ಸಾಂದರ್ಭಿಕ ಕೆಲಸಗಾರರಾಗಿ ಮತ್ತು ಗುತ್ತಿಗೆ ಆಧಾರದ ಕೆಲಸಗಾರರಾಗಿ ದುಡಿಯುತ್ತಿದ್ದಾರೆ. ಆದರೆ ಇವರು ಪಡೆಯುವ ವೇತನ ಮಾತ್ರ ಅತ್ಯಂತ ಕಡಿಮೆ ಇರುತ್ತದೆ. ಬಳೆ ಕೈಗಾರಿಕೆಯಲ್ಲಿ ಕೆಲಸ ಮಾಡುವ ಕಾರ್ಮಿಕರು ಆರೋಗ್ಯದ ತೊಂದರೆಗೆ ಒಳಗಾಗುತ್ತಿದ್ದಾರೆ. ಈ ಕೈಗಾರಿಕೆಗಳಲ್ಲಿ ಉಷ್ಣತೆ ಅಧಿಕವಾಗಿರುತ್ತದೆ. ಇದರಿಂದ ಚರ್ಮ ಸುಡುತ್ತದೆ. ಅಲ್ಲದೆ ಈ ಕೈಗಾರಿಕೆಯಲ್ಲಿ ಕಲ್ಲಿದ್ದಲನ್ನು ಬಳಸುವುದರಿಂದ ಕೈಗಾರಿಕೆ ಪರಿಸರ ಮಾಲಿನ್ಯದಿಂದ ಕೂಡಿದ್ದು ಅಧಿಕ ಉಷ್ಣತೆಯನ್ನು ಹೊಂದಿರುತ್ತದೆ. ಇಂತಹ ಅನಾರೋಗ್ಯಕರ ಸ್ಥಿತಿಗಳಲ್ಲಿ ಕಾರ್ಮಿಕರು ಕಡಿಮೆ ಕೂಲಿಗೆ ದುಡಿಯುತ್ತಿರುವುದು ಒಡೆತನದ ಅನಿವಾರ್ಯತೆ ಎಂಬುದನ್ನು ತೋರಿಸುತ್ತದೆ.

೧೧. **ಹಿತ್ತಾಳೆ ಕೈಗಾರಿಕೆ :** ಅಸಂಘಟಿತ ವಲಯದಲ್ಲಿ ಬರುವ ಉದ್ಯಮದಲ್ಲಿ ಹಿತ್ತಾಳೆ ಕೈಗಾರಿಕೆಯು ಒಂದಾಗಿದೆ. ಉತ್ತರ ಪ್ರದೇಶ ರಾಜ್ಯದ ಮುರದಾಬಾದ್‌ನಲ್ಲಿ ಹಿತ್ತಾಳೆ ಕೈಗಾರಿಕೆಯು ಕೇಂದ್ರೀಕೃತವಾಗಿದೆ. ಒಟ್ಟು ೧,೫೦,೦೦೦ ಕಾರ್ಮಿಕರು ಪ್ರತ್ಯಕ್ಷವಾಗಿ ಮತ್ತು ಅಧಿಕ ಸಂಖ್ಯೆಯ ಕಾರ್ಮಿಕರು ಪರೋಕ್ಷವಾಗಿ ಈ ಕೈಗಾರಿಕೆಯನ್ನು ಅವಲಂಬಿಸಿದ್ದಾರೆ. ಒಟ್ಟು ದುಡಿಮೆಗಾರರಲ್ಲಿ ಶೇಕಡ ೪೫ರಷ್ಟು ೮ ರಿಂದ ೧೨ ವರ್ಷ ವಯಸ್ಸಿನ ಬಾಲ ಕಾರ್ಮಿಕರು ಮತ್ತು ಶೇಕಡ ೫೦ರಷ್ಟು ಮಹಿಳಾ ಕಾರ್ಮಿಕರು ಹಿತ್ತಾಳೆ ಕೈಗಾರಿಕೆಯಲ್ಲಿ ದುಡಿಯುತ್ತಿದ್ದಾರೆ. ಈ ಕೈಗಾರಿಕೆಯಲ್ಲಿ ಆರೋಗ್ಯಕ್ಕೆ ಅಪಾಯ ತರುವ ಎರಕದ ಅಚ್ಚು

ಮತ್ತು ಹೊಳಪು ಮಾಡುವ ವಿಧಾನಗಳಿವೆ. ಹಾಗೂ ವೆಲ್ಡಿಂಗ್ ಕೆಲಸ ಸಹ ಅಷ್ಟೇ ಅಪಾಯಕಾರಿಯಾಗಿದೆ. ಇದರಿಂದ ಘೋರ ಅಪಾಯ ಮತ್ತು ದೇಹದ ಅಂಗಾಂಗಗಳನ್ನು ಕಳೆದುಕೊಳ್ಳುವ ಸಾಧ್ಯತೆ ಇರುತ್ತದೆ. ಅಲ್ಲದೆ ಈ ಕೈಗಾರಿಕೆಯಲ್ಲಿ ಉಷ್ಣತೆ ೧೧೦೦ ಸೆಂಟಿಗ್ರೇಡ್‌ಗಿಂತ ಅಧಿಕ ಇರುವುದರಿಂದ ಮತ್ತು ವಿಷಾನಿಲಗಳನ್ನು ಬಳಸುತ್ತಿರುವುದರಿಂದ ಇಲ್ಲಿನ ಕಾರ್ಮಿಕರು ಕ್ಷಯರೋಗ ಮತ್ತು ಶ್ವಾಸಕೋಶದ ಸಂಬಂಧಿ ಕಾಯಿಲೆಗೆ ತುತ್ತಾಗುವ ಸಾಧ್ಯತೆ ಅಧಿಕವಿರುತ್ತದೆ. ಮಕ್ಕಳು ಕಣ್ಣುಗಳನ್ನು ಕಳೆದುಕೊಳ್ಳುವ ಸಾಧ್ಯತೆ ಹೆಚ್ಚಿರುತ್ತದೆ.

ಇಂತಹ ಅನಾರೋಗ್ಯಕರ ಪರಿಸರದಲ್ಲಿ ದುಡಿಯುವ ಈ ಕಾರ್ಮಿಕರು ಪೌಷ್ಟಿಕ ಆಹಾರ ಪಡೆಯಲಾರದಷ್ಟು ಕಡಿಮೆ ಕೂಲಿಯನ್ನು ಪಡೆಯುತ್ತಿದ್ದಾರೆ. ನೀರಾಬಾರ ಅವರು ನಡೆಸಿದ ಒಂದು ಸಮೀಕ್ಷೆಯ ಪ್ರಕಾರ ಈ ಕಾರ್ಮಿಕರು ತಿಂಗಳಿಗೆ ೪೦೦-೫೦೦ ರೂಪಾಯಿಗಳ ಆದಾಯ ಪಡೆಯುತ್ತಿರುವುದು ಕಂಡುಬರುತ್ತದೆ.[೩೫] ಈ ಅಂಶವನ್ನು ಗಮನಿಸಿದರೆ ಈ ಕಾರ್ಮಿಕರು ಅತ್ಯಂತ ಕನಿಷ್ಟ ಮಟ್ಟದ ಕೂಲಿಯನ್ನು ಪಡೆಯುತ್ತಿರುವುದು ಸ್ಪಷ್ಟವಾಗುತ್ತದೆ.

**೧೨. ರತ್ನಗಂಬಳಿ ಅಥವಾ ಜಮಖಾನೆ ಕೆಲಸಗಾರರು :** ರತ್ನಗಂಬಳಿ ಅಥವಾ ಜಮಖಾನೆ ಉದ್ಯೋಗವು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಇಂದು ಕೂಡ ಮುಂದುವರೆಯುತ್ತಿರುವ ಒಂದು ಉದ್ಯಮವಾಗಿದೆ. ಭಾರತದಲ್ಲಿ ಉತ್ತರ ಪ್ರದೇಶದ ಮಿರ್ಜಾಪುರ ಬೋರೋಹಿ ರತ್ನಗಂಬಳಿ ಉದ್ಯಮಕ್ಕೆ ಪ್ರಸಿದ್ಧವಾಗಿದ್ದು ರತ್ನಕಂಬಳಿ ಪಟ್ಟಿ(ಬೆಲ್ಟ್)ಗಳೆಂದು ಹೆಸರು ಪಡೆದಿದೆ. ಈ ಉದ್ಯಮದಲ್ಲಿ ೩ ಲಕ್ಷ ಕಾರ್ಮಿಕರು ನೂಲುವ ಉದ್ಯೋಗದಲ್ಲಿ ೫೦ ಲಕ್ಷ ಕಾರ್ಮಿಕರು ನೂಲು ನೇಯುವ ಕಾರ್ಯದಲ್ಲಿ ತೊಡಗಿದ್ದಾರೆ. ಈ ಉದ್ಯೋಗದಲ್ಲಿ ಮಹಿಳೆಯರು ಮತ್ತು ಮಕ್ಕಳು ಅಧಿಕ ಸಂಖ್ಯೆಯಲ್ಲಿ ತೊಡಗಿದ್ದು, ಪೂರ್ಣಕಾಲಿಕ ಕೆಲಸ ಮತ್ತು ಅರೆಕಾಲಿಕ ಕೆಲಸವನ್ನು ಮಾಡುತ್ತಿದ್ದಾರೆ.[೩೬]

**೧೩. ಬೀದಿವ್ಯಾಪಾರಿ ಅಥವಾ ಬೀದಿಯಲ್ಲಿ ಮಾರುವವರು :** ಬೀದಿ ವ್ಯಾಪಾರಿಗಳು ಅನೌಪಚಾರಿಕ ವಲಯದಲ್ಲಿ ಬರುವ ವೃತ್ತಿಗಳಲ್ಲಿ ದುಡಿಯುವವರಾಗಿದ್ದಾರೆ. ಇವರು ಸ್ವಯಂ ಉದ್ಯೋಗದ ಸ್ವರೂಪದಲ್ಲಿ ಮತ್ತು ಕಡಿಮೆ ಬಂಡವಾಳದಲ್ಲಿ ವ್ಯಾಪಾರವನ್ನು ಮಾಡುವವರಾಗಿರುತ್ತಾರೆ. ಇವರು ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲೂ ಕಂಡುಬರುತ್ತಿದ್ದು, ಗ್ರಾಹಕರ ಮನೆ ಬಾಗಿಲಿಗೆ ಸರಕುಗಳನ್ನು ತಲುಪಿಸುತ್ತಾರೆ. ಮುಖ್ಯವಾಗಿ ಹಣ್ಣು, ತರಕಾರಿ, ರೆಡಿಮೇಡ್ ಗಾರ್ಮೆಂಟ್ಸ್, ಸ್ಟೇಷನರಿ, ದಿನಪತ್ರಿಕೆ, ವಾರಪತ್ರಿಕೆ ಮತ್ತು ಮಾಸ ಪತ್ರಿಕೆಗಳನ್ನು ಮಾರುವವರಾಗಿರುತ್ತಾರೆ. ಸ್ವಯಂ ಉದ್ಯೋಗದಲ್ಲಿ ವ್ಯಾಪಾರ ಮಾಡುವ ಕಾರ್ಮಿಕರು ಬಂಡವಾಳ ಸಮಸ್ಯೆ, ದೊಡ್ಡ ಕೈಗಾರಿಕೆಗಳ ಪೈಪೋಟಿ, ಸಂಚಾರ ಸಮಸ್ಯೆ ಇತ್ಯಾದಿಗಳನ್ನು ಎದುರಿಸುತ್ತಿದ್ದಾರೆ.[೩೭]

**೧೪. ರಿಕ್ಷಾ ತುಳಿಯುವವರು :** ಅಸಂಘಟಿತ ವಲಯದ ದುಡಿಮೆಗಾರರಲ್ಲಿ ರಿಕ್ಷ ತುಳಿಯುವವರು ಸೇರುತ್ತಾರೆ. ಅನಕ್ಷರಸ್ಥರು, ಬಡವರು ಆದ ಇವರು ಸ್ವಯಂ ಉದ್ಯೋಗದಂತೆ ರಿಕ್ಷ ತುಳಿಯುವ ಉದ್ಯೋಗದಲ್ಲಿ ತೊಡಗುತ್ತಾರೆ. ರಿಕ್ಷ ತುಳಿಯುವವರು ಉತ್ತರ ಭಾರತದಲ್ಲಿ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದು, ಇವರು ವಲಸೆ ಬಂದವರಾಗಿರುತ್ತಾರೆ. ದೇಶದ ಬಿಹಾರ, ಒರಿಸ್ಸಾ, ಮಧ್ಯಪ್ರದೇಶ, ಉತ್ತರ ಪ್ರದೇಶ ಮತ್ತು ರಾಜಸ್ಥಾನ ರಾಜ್ಯಗಳಲ್ಲಿ ಮತ್ತೆ ದೊಡ್ಡ ಪಟ್ಟಣ ಹಾಗೂ ಮಹಾನಗರಗಳಲ್ಲಿ ಕಂಡುಬರುತ್ತಿದ್ದಾರೆ. ಇವರು ಉಳಿಗಮಾನ್ಯ ಪದ್ಧತಿಯಿಂದಾಗಿ, ಭೂಮಾಫಿಯಾಗಳಿಂದ ಮತ್ತು ನೈಸರ್ಗಿಕ ಪ್ರಕೋಪಗಳಾದ ಬರಗಾಲದಿಂದ ಭೂರಹಿತರಾಗಿ ಪಟ್ಟಣಕ್ಕೆ ವಲಸೆ ಬಂದವರಾಗಿರುತ್ತಾರೆ. ಇಂತಹ ಜನರು ಬಾಡಿಗೆಗೆ ರಿಕ್ಷಾವನ್ನು ಪಡೆದು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕು ಮತ್ತು ಪ್ರಯಾಣಿಕರನ್ನು ಸಾಗಿಸುತ್ತಾರೆ. ರಿಕ್ಷಾ ಮಾಲೀಕರಿಗೆ ಅಧಿಕ ಬಾಡಿಗೆಯನ್ನು ನೀಡಿ ಕಡಿಮೆ ಆದಾಯ ಪಡೆಯುತ್ತಾರೆ. ಆಶ್ರಯ ಇಲ್ಲದ ಇವರು ಬೀದಿ ಪಕ್ಕದಲ್ಲಿ ಮಲಗುತ್ತಾರೆ ಮತ್ತು ವಾಸ ಮಾಡುತ್ತಾರೆ. ಇಂತ ಹೀನಾಯ ಬದುಕು ಸಾಗಿಸುತ್ತಿರುವ ಈ ರಿಕ್ಷಾ ತುಳಿಯುವವರು ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.[೩೮]

ಮೇಲೆ ವಿವರಿಸಿದ ವೃತ್ತಿಗಳಲ್ಲದೆ ಇನ್ನೂ ಅನೇಕ ವೃತ್ತಿಗಳು ಅಸಂಘಟಿತ ವಲಯದಲ್ಲಿ ಬರುತ್ತವೆ. ಇವೆಲ್ಲವುಗಳನ್ನು ಅಧ್ಯಯನಕ್ಕೆ ಆಯ್ದುಕೊಂಡರೆ ವಿಷಯ ವ್ಯಾಪ್ತಿ ತುಂಬಾ ದೊಡ್ಡದಾಗುತ್ತದೆ. ಅದಕ್ಕಾಗಿ ಅಸಂಘಟಿತ ವಲಯದಲ್ಲಿ ಬರುವ ಕೃಷಿ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಪರಿಗಣಿಸಿ ಅಸಂಘಟಿತ ವಲಯದ ಕಾರ್ಮಿಕರ ಸ್ವರೂಪ ಮತ್ತು ಸಮಸ್ಯೆಗಳನ್ನು ತಿಳಿಯುವ ಪ್ರಯತ್ನವನ್ನು ಮುಂದಿನ ಅಧ್ಯಯನ ಕ್ಷೇತ್ರಕಾರ್ಯ ಸಮೀಕ್ಷೆಯಲ್ಲಿ ಮಾಡಲಾಗಿದೆ.

## ೫.೬. ಅಸಂಘಟಿತ ವಲಯದ ವ್ಯಾಪ್ತಿ ಅಂಕಿ ಅಂಶಗಳನ್ನು ಆಧರಿಸಿ

ಅಸಂಘಟಿ ವಲಯ ಎಂಬುದು ತುಂಬಾ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದ್ದು ಪ್ರಪಂಚದಾದ್ಯಂತ ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ರೂಪದಲ್ಲಿ ಕಂಡುಬರುತ್ತಿದೆ. ಮುಂದುವರೆದ ರಾಷ್ಟ್ರಗಳಲ್ಲಿ ಅಸಂಘಟಿತ ವಲಯ ಎಂಬುದು ದಾಖಲಾತಿ ಇಲ್ಲದ ಕಾರ್ಮಿಕರ ರೂಪದಲ್ಲಿ, ಗುತ್ತಿಗೆ ಕೆಲಸಗಾರರ ರೂಪದಲ್ಲಿ, ತುಂಡು ಕೆಲಸಗಾರರ ರೂಪದಲ್ಲಿ, ಸಾಫ್ಟ್‌ವೇರ್ ಕೆಲಸಗಾರರ ರೂಪದಲ್ಲಿ ಮತ್ತು ಕಂಪ್ಯೂಟರ್ ಅಪರೇಟರ್‌ಗಳ ರೂಪದಲ್ಲಿ ಕಂಡುಬರುತ್ತಿದ್ದಾರೆ. ಮುಸ್ಲಿಂ ರಾಷ್ಟ್ರಗಳಾದ ಕೊಲ್ಲಿ ರಾಷ್ಟ್ರಗಳಲ್ಲಿ ಮನೆಗೆಲಸದ ಕಾರ್ಮಿಕರ ರೂಪದಲ್ಲಿ ಕಂಡುಬರುತ್ತಿದೆ. ಈ ಕಾರ್ಮಿಕರು ಕೆಲಸದ ಅಭದ್ರತೆ, ಬಂಡವಾಳದಾರರಿಂದ ಶೋಷಣೆ, ಸರಕಾರದ ಅಸಹಕಾರ ಮತ್ತು ಕಡಿಮೆ ವೇತನಕ್ಕಾಗಿ ದುಡಿಯುತ್ತಿದ್ದಾರೆ.

ಆದರೆ ಈ ಅಸಂಘಟಿತ ಅಥವಾ ಅನೌಪಚಾರಿಕ ವಲಯದಲ್ಲಿ ದುಡಿಯುವ ಕಾರ್ಮಿಕರ ಪ್ರಮಾಣ ಮುಂದುವರೆದ ರಾಷ್ಟ್ರಕ್ಕಿಂತ ಹಿಂದುಳಿದ ರಾಷ್ಟ್ರಗಳಲ್ಲಿ ಅಥವಾ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಧಿಕ ಪ್ರಮಾಣದಲ್ಲಿರುತ್ತದೆ ಎಂದು ILOದ ವರದಿ ತಿಳಿಸುತ್ತದೆ.[೩೯] ಭಾರತದಲ್ಲಿ ಅಸಂಘಟಿತ ವಲಯದ ಗಾತ್ರ ದೊಡ್ಡ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ೧೯೯೯-೨೦೦೦ದಲ್ಲಿ ನಡೆಸಿದ NSS ಸರ್ವೆ(National sampal survey organisation) ಪ್ರಕಾರ ದೇಶದಲ್ಲಿ ೩೭೦ ಮಿಲಿಯನ್ ಕಾರ್ಮಿಕರು ಅಂದರೆ ಶೇಕಡ ೯೨ರಷ್ಟು ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ.[೪೦] ೧೯೯೯-೨೦೦೦ರಲ್ಲಿ ನಡೆಸಿದ ೫೫ನೇ ಸುತ್ತಿನ 'ನ್ಯಾಷನಲ್ ಸ್ಯಾಂಪಲ್ ಸರ್ವೆ' ಪ್ರಕಾರ ಭಾರತದಲ್ಲಿ ೩೯.೭ ಕೋಟಿ ಉದ್ಯೋಗಿಗಳು ಅಥವಾ ದುಡಿಮೆಗಾರರು 'ಸಂಘಟಿತ' ಮತ್ತು 'ಅಸಂಘಟಿತ' ವಲಯದ ವೃತ್ತಿಗಳಲ್ಲಿ ತೊಡಗಿದ್ದಾರೆ. ದೇಶದ ಒಟ್ಟು ೩೯.೭ ಕೋಟಿ ಕಾರ್ಮಿಕರಲ್ಲಿ ೨.೮ ಕೋಟಿ ಕಾರ್ಮಿಕರು 'ಸಂಘಟಿತ ವಲಯದಲ್ಲಿ ಮತ್ತು ೩೬.೯ ಕೋಟಿ ಕಾರ್ಮಿಕರು 'ಅಸಂಘಟಿತ ವಲಯ'ದಲ್ಲಿ ದುಡಿಯುತ್ತಿದ್ದಾರೆ. ಅಸಂಘಟಿತ ವಲಯದ ೩೬.೯ ಕೋಟಿ ಕಾರ್ಮಿಕರಲ್ಲಿ ೨೩.೭ ಕೋಟಿ ಕಾರ್ಮಿಕರು ಕೃಷಿ ಕ್ಷೇತ್ರದಲ್ಲಿ, ೧.೭ ಕೋಟಿ ಕಾರ್ಮಿಕರು ನಿರ್ಮಾಣ ಕ್ಷೇತ್ರದಲ್ಲಿ, ೪.೧ ಕೋಟಿ ಕಾರ್ಮಿಕರು ಸಿದ್ಧವಸ್ತುಗಳ ತಯಾರಿಕೆಯಲ್ಲಿ ಮತ್ತು ೩.೭ ಕೋಟಿ ಕಾರ್ಮಿಕರು ಸೇವೆ ಮತ್ತು ಸಂವಹನ, ವ್ಯಾಪಾರ ಮತ್ತು ಸಾರಿಗೆ ಕ್ಷೇತ್ರಗಳಲ್ಲಿ ಕಾರ್ಮಿಕವಾಗಿ ದುಡಿಯುತ್ತಿದ್ದಾರೆ.[೪೧] ಅಸಂಘಟಿತ ವಲಯದ ಶೇಕಡ ೯೨ರಷ್ಟು ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳಾ ಕಾರ್ಮಿಕರಾಗಿದ್ದಾರೆ. ೧೯೯೯-೨೦೦೦ರಲ್ಲಿ NSSನವರು ನಡೆಸಿದ ಸಮೀಕ್ಷೆಯ ಪ್ರಕಾರ 'ಸಂಘಟಿತ' ವಲಯದಲ್ಲಿ ಶೇಕಡ ೫.೨೮ರಷ್ಟು ಮಹಿಳಾ ಕಾರ್ಮಿಕರು ಮತ್ತು 'ಅಸಂಘಟಿತ' ವಲಯದಲ್ಲಿ ಶೇಕಡ ೯೪.೬೭ರಷ್ಟು ಮಹಿಳಾ ಕಾರ್ಮಿಕರು ದುಡಿಯುತ್ತಿರುವುದು ಕಂಡುಬರುತ್ತಿದೆ. ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರಲ್ಲಿ ಶೋಷಿತ ಸಮುದಾಯಕ್ಕೆ ಸೇರಿದ ಕಾರ್ಮಿಕರು ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಇವರಲ್ಲಿ ಶೇಕಡ ೯೪.೧೬ರಷ್ಟು ಕಾರ್ಮಿಕರು ಪರಿಶಿಷ್ಟ ಪಂಗಡದವರು ಮತ್ತು ಶೇಕಡ ೯೩.೫೪ರಷ್ಟು ಕಾರ್ಮಿಕರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ.[೪೨] ಈ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಶೋಷಿತ ವರ್ಗದ ಕಾರ್ಮಿಕರು ಅಸಂಘಟಿತ ವಲಯವನ್ನು ತಮ್ಮ ಜೀವನಕ್ಕೆ ಅಧಾರವಾಗಿ ನಂಬಿರುವುದು ಸ್ಪಷ್ಟವಾಗುತ್ತದೆ.

ಶೋಷಿತರನ್ನೊಳಗೊಂಡಂತೆ ದೊಡ್ಡ ಪ್ರಮಾಣದ ಕಾರ್ಮಿಕ ಪಡೆಯನ್ನು ಹೊಂದಿದ ಅಸಂಘಟಿತ ವಲಯ ರಾಷ್ಟ್ರೀಯ ಉತ್ಪನ್ನಕ್ಕೆ ಅಧಿಕ ಕಾಣಿಕೆಯನ್ನು ನೀಡುತ್ತಿದೆ. ೧೯೯೯-೨೦೦೦ರಲ್ಲಿ 'ನ್ಯಾಷನಲ್ ಸ್ಯಾಂಪಲ್ ಸರ್ವೆ'(NSS) ನಡೆಸಿದ ಸರ್ವೆ ಪ್ರಕಾರ ಪ್ರಚಲಿತ ಬೆಲೆಗಳಲ್ಲಿ ಅಸಂಘಟಿತ ವಲಯ

ಉತ್ಪನ್ನದ ಶೇಕಡ ೭೦ರಷ್ಟು ಭಾಗವನ್ನು ರಾಷ್ಟ್ರದ 'ನಿವ್ವಳ ಕೌಟುಂಬಿಕ ಉತ್ಪನ್ನ'(NDP-Net Domestic Production)ಕ್ಕೆ ಮತ್ತು ಉತ್ಪನ್ನದ ೩/೪ ಭಾಗವನ್ನು ರಾಷ್ಟ್ರದ "ಒಟ್ಟು ಸಮಗ್ರ ಕೌಟುಂಬಿಕ ಉಳಿತಾಯ"(TGD-Total Gross Domestic Savet)ಕ್ಕೆ ಕಾಣಿಕೆಯಾಗಿ ನೀಡುತ್ತಿದೆ.[೪೩] ಆದ್ದರಿಂದ ಅಸಂಘಟಿತ ವಲಯ ಕೇವಲ ಉದ್ಯೋಗಾವಕಾಶವನ್ನು ನೀಡುವ ಆರ್ಥಿಕ ವಲಯವಾಗಿರದೆ ರಾಷ್ಟ್ರೀಯ ಕೌಟುಂಬಿಕ ಉತ್ಪನ್ನ ಮತ್ತು ಕೌಟುಂಬಿಕ ಉಳಿತಾಯಕ್ಕೆ ಕಾಣಿಕೆ ಸಲ್ಲಿಸುವ ಆರ್ಥಿಕ ಕ್ಷೇತ್ರವಾಗಿದೆ. ಹೀಗಾಗಿ 'ಅಸಂಘಟಿತ ವಲಯ'ದ ಗಾತ್ರ ವಿಶಾಲವಾಗಿದೆ. ಅದನ್ನು ಈ ಕೆಳಗೆ ನೋಡಬಹುದು.

**೧. ಅಸಂಘಟಿತ ವಲಯ ಹಿಂದುಳಿದ ಅಥವಾ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ವಿಶಾಲವಾಗಿ ಹರಡಿದೆ.**

'ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ' (IL-Inter National Labour organistion) ತನ್ನ ವರದಿಯಲ್ಲಿ 'ಅಸಂಘಟಿತ ವಲಯ' ಅಥವಾ ಅನೌಪಚಾರಿಕ ವಲಯ ಹಿಂದುಳಿದ' ಅಥವಾ 'ತೃತೀಯ ಜಗತ್ತಿನ' ರಾಷ್ಟ್ರಗಳಲ್ಲಿ ವಿಶಾಲವಾಗಿ ಹರಡಿದೆ ಎಂದು ತಿಳಿಸುತ್ತದೆ. ILO ತಯಾರಿಸಿದ ಹಿಂದುಳಿದ ರಾಷ್ಟ್ರಗಳ ವರದಿಯನ್ನು ನೋಡಿದರೆ ದೇಶದ ಒಟ್ಟು ಕಾರ್ಮಿಕರಲ್ಲಿ ಶೇಕಡ ೫೦ಕ್ಕಿಂತ ಅಧಿಕ ಕಾರ್ಮಿಕರು 'ಮಾಲಿ' ಪೆರು, ಭಾರತ, ನೇಪಾಳ್ ಮತ್ತು ಇಥೀಯೋಪಿಯಾ ರಾಷ್ಟ್ರಗಳಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಮತ್ತು ರಾಷ್ಟ್ರದ ಒಟ್ಟು ದುಡಿಮೆಗಾರರಲ್ಲಿ ಶೇ.೫೦ರಷ್ಟು ಮಹಿಳಾ ದುಡಿಮೆಗಾರರು. ಮೆಕ್ಸಿಕೋ, ಬ್ರೆಜಿಲ್ ಕೀನ್ಯಾ ರಾಷ್ಟ್ರಗಳಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಅಲ್ಲದೆ ಜಾಗತೀಕರಣದ ಪ್ರಭಾವದಿಂದಾಗಿ ಅಸಂಘಟಿತ ವಲಯದಲ್ಲಿ ತೊಡಗುವ ಕಾರ್ಮಿಕರ ಸಂಖ್ಯೆ ಅಧಿಕವಾಗುತ್ತದೆ ಹಾಗೂ ಜಾಗತೀಕರಣದ ಪ್ರಕ್ರಿಯೆ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಕಾರ್ಮಿಕರನ್ನು ಅಸಂಘಟಿತ ಅಥವಾ ಅನೌಪಚಾರಿಕ ವಲಯಕ್ಕೆ ತಳ್ಳುತ್ತಿದೆ. ಈ ವಲಯದ ಒಟ್ಟು ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯ ದುಡಿಮೆಗಾರರು ಮಹಿಳೆಯರೇ ಆಗಿದ್ದಾರೆ ಎಂದು ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ ವರದಿ ತಿಳಿಸುತ್ತದೆ.[೪೪]

ಕೋಷ್ಟಕ-೫.೨.ನ್ನು ಗಮನಿಸಿದರೆ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಸಂಘಟಿತ ವಲಯದಲ್ಲಿ ದುಡಿಯವು ದುಡಿಮೆಗಾರರ ಪ್ರಮಾಣ ತಿಳಿದುಬರುತ್ತದೆ. ಆ ದುಡಿಮೆಗಾರರಲ್ಲಿ ಮಹಿಳೆಯರ ಸಂಖ್ಯೆ ಅಧಿಕವಿರುವುದು ಕಂಡುಬರುತ್ತದೆ.

## ಕೋಷ್ಟಕ ೫.೨.

### ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಸಂಘಟಿತ ಅಥವಾ ಅನೌಪಚಾರಿಕ ವಲಯದಲ್ಲಿ ದುಡಿಯುವ ಕಾರ್ಮಿಕರ ಪ್ರಮಾಣ (ಶೇಕಡವಾರು)

| ವರ್ಷ | ರಾಷ್ಟ್ರಗಳು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧೯೯೯ | ಮೆಕ್ಸಿಕೋ | ೨೭.೭ | ೩೦.೭ | ೩೧.೯ |
| ೧೯೯೯ | ಪೆರು | ೪೮.೯ | ೬೦.೬ | ೫೩.೮ |
| ೧೯೯೭ | ಬ್ರೆಜಿಲ್ | ೨೮.೩ | ೪೩.೪ | ೩೪.೬ |
| ೧೯೯೬ | ಮಾಲೀ | | | ೭೧.೦ |
| ೧೯೯೯ | ದಕ್ಷಿಣ ಆಫ್ರಿಕಾ | ೧೯.೩ | ೩೫.೫ | ೨೬.೧ |
| ೧೯೯೯ | ಇಥಿಯೋಪಿಯ | ೩೮.೯ | ೬೪.೮ | ೫೦.೬ |
| ೧೯೯೯ | ಕೀನ್ಯಾ | ೪೩.೯ | ೨೯.೫ | ೩೬.೪ |
| ೨೦೦೦ | ಭಾರತ | ೫೫.೪ | ೫೭.೦ | ೫೫.೭ |
| ೧೯೯೯ | ನೇಪಾಳ | ೬೭.೪ | ೮೬.೫ | ೭೩.೩ |
| ೧೯೯೫ | ಫಿಲಿಫೈನ್ಸ್ | ೧೫.೮ | ೧೯.೪ | ೧೭.೩ |
| ೨೦೦೦ | ತುರ್ಕಿ | ೧೦.೬ | ೬.೨ | ೯.೯ |
| ೧೯೯೯ | ಸ್ಲೋವಾಕಿಯಾ | ೩೦.೫ | ೧೨.೯ | ೨೩.೦ |
| ೧೯೯೮ | ಪೋಲ್ಯಾಂಡ್ | ೯.೫ | ೫.೦ | ೭.೫ |
| ೧೯೯೭ | ಬಕ್ರೇನ್ | ೪.೫ | ೫.೩ | ೪.೯ |

**ಮೂಲ** : ILO ಬ್ಯೂರೋ ಆಫ್ ಸ್ಟೇಟಿಸ್ಟಿಕ್ಸ್, ಲೀ ಸಂಗ್ ಹಕ್ ೨೦೦೩ದ ಇಂಪ್ಯಾಕ್ಟ್ ಆಫ್ ನಿಯೋ ಲಿಬರಲ್ ಗ್ಲೋಬಲೈಸೇಷನ್, ಇರೆಗ್ಯಾಲರ್, ಜಾಬ್ಸ್ ಇನ್‌ಫಾರ್ಮಲ್ ಸೆಕ್ಟರ್ ವರ್ಕರ್ ಆ್ಯಂಡ್ ಪಾವರ್ಟಿ ಇನ್ ಏಷಿಯಾನ್ ವರ್ಕರ್ಸ್, ಪು.೧-೨[೪೫]

ಕೋಷ್ಟಕ ೫.೨ನ್ನು ನೋಡಿದರೆ ILO ವರದಿಯ ಪ್ರಕಾರ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅನೌಪಚಾರಿಕ ವಲಯದಲ್ಲಿ ದುಡಿಯವ ದುಡಿಮೆಗಾರರಲ್ಲಿ ಪುರುಷರಿಗಿಂತ ಮಹಿಳೆಯರು ಅಧಿಕವಿರುವುದು

ಕಂಡುಬರುತ್ತದೆ. ನೇಪಾಳದಲ್ಲಿ ಅಧಿಕ ಸಂಖ್ಯೆಯಲ್ಲಿ ಶೇಕಡ ೮೬.೫ ಮಹಿಳಾ ಉದ್ಯೋಗಿಗಳು ಮತ್ತು ಶೇಕಡ ೬೭.೪ರಷ್ಟು ಪುರುಷ ಉದ್ಯೋಗಿಗಳು ಅಸಂಘಟಿತ ಅಥವಾ ಅನೌಪಚಾರಿಕ ವಲಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ. ಭಾರತದಲ್ಲಿ ಶೇಕಡ ೫೭.೦ರಷ್ಟು ಮಹಿಳಾ ಉದ್ಯೋಗಿಗಳು ಮತ್ತು ಶೇಕಡ ೫೫.೪ರಷ್ಟು ಪುರುಷ ಉದ್ಯೋಗಿಗಳು ಅನೌಪಚಾರಿಕ ವಲಯದಲ್ಲಿ ದುಡಿಯುತ್ತಿದ್ದಾರೆ. ಅಲ್ಲದೆ ಉಕ್ರೇನ್‌ನಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಕಾರ್ಮಿಕರು ಅನೌಪಚಾರಿಕ ವಲಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ. ಇಲ್ಲಿ ಶೇಕಡ ೫.೩.ರಷ್ಟು ಮಹಿಳಾ ಉದ್ಯೋಗಿಗಳು ಮತ್ತು ಶೇಕಡ ೪.೫ರಷ್ಟು ಪುರುಷ ಉದ್ಯೋಗಿಗಳು ಅನೌಪಚಾರಿಕ ವಲಯದಲ್ಲಿ ದುಡಿಯುತ್ತಿದ್ದಾರೆ. ಇದರಿಂದಾಗಿ ಅನಭಿವೃದ್ಧಿ ಹೊಂದಿದ ಹಿಂದುಳಿದ ಮತ್ತು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಅನೌಪಚಾರಿಕ ವಲಯ ಅಥವಾ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವುದು ಸ್ಪಷ್ಟವಾಗುತ್ತಿದೆ.

### ೨. ಭಾರತದಲ್ಲಿ ಅಸಂಘಟಿತ ವಲಯದ ಗಾತ್ರ

ಭಾರತದಲ್ಲಿ ಅಸಂಘಟಿತ ವಲಯದ ಗಾತ್ರ ತುಂಬಾ ವಿಶಾಲವಾಗಿದ್ದು ಶೇಕಡ ೯೨ರಷ್ಟು ಜನರು ಜೀವನೋಪಾಯಕ್ಕಾಗಿ ಆ ವಲಯವನ್ನು ಅವಲಂಬಿಸಿದರೆ, ದಶಕದಿಂದ ದಶಕಕ್ಕೆ ಅದರ ಪ್ರಮಾಣ ಅಧಿಕವಾಗುತ್ತಿದ್ದು, ವಿವಿಧ ಉದ್ಯಮ ವಿವಿಧ ರಾಜ್ಯಗಳಲ್ಲಿ ಹಾಗೂ ಸಾಮಾಜಿಕ ವರ್ಗದ ನೆಲೆಯಲ್ಲಿ ಅದರ ಪ್ರಮಾಣ ಅಧಿಕವಿರುವುದು ಕಂಡುಬರುತ್ತದೆ.

೧೯೭೪ರಲ್ಲಿ "ಟುವರ್ಡ್ಸ್ ಈಕ್ವಾಲಿಟಿ ವರದಿ' ಅಸಂಘಟಿತ ವಲಯದ ಕಾರ್ಮಿಕ ಸಮಸ್ಯೆಗಳ ಬಗ್ಗೆ ಪ್ರಸ್ತಾಪಿಸುತ್ತದೆ. ಆದರೆ ಸಂಘಟಿತ ಮತ್ತು ಅಸಂಘಟಿತ ವಲಯದ ಕಾರ್ಮಿಕರ ಬಗ್ಗೆ ನಿರ್ದಿಷ್ಟ ಅಂಕಿ ಸಂಖ್ಯೆಗಳನ್ನು ನೀಡಿರುವುದಿಲ್ಲ. ಈ ವರದಿ ನೀಡಿರುವ ಅಂಕಿ ಸಂಖ್ಯೆಗಳು ಎಲ್ಲ ಉದ್ಯೋಗಗಳನ್ನು ಒಳಗೊಂಡ ಅಂಕಿಸಂಖ್ಯೆಗಳಾಗಿರುವುದು ಸಂಘಟಿತ ಮತ್ತು ಅಸಂಘಟಿತ ವಲಯದ ವೃತ್ತಿಗಳ ವಿಂಗಡನೆ ಕಂಡುಬರುವುದಿಲ್ಲ. ಹೀಗಾಗಿ ೧೯೭೪ರವರೆಗಿನ ಅಂಕಿ ಅಂಶಗಳು ನಮಗೆ ಲಭ್ಯವಾಗುವುದಿಲ್ಲ. ಆದರೆ ಮೂರು ಆರ್ಥಿಕ ವಲಯಗಳಲ್ಲಿ ದುಡಿಯುವ ಮಹಿಳಾ ದುಡಿಮೆಗಾರರ ಪ್ರಮಾಣ ಮಾತ್ರ ಕಂಡುಬರುತ್ತಿದೆ. ಆದರೆ ಇತ್ತೀಚೆಗೆ ಅಸಂಘಟಿತ ವಲಯದ ಕಾರ್ಮಿಕರ ಅಂಕಿ ಸಂಖ್ಯೆಗಳು ಸ್ಪಷ್ಟವಾಗಿ ತಿಳಿದುಬರುತ್ತಿವೆ. ಅದನ್ನು ಈ ಕೆಳಗಿನಂತೆ ನೋಡಬಹುದು.

೧. ೧೯೭೪ ಕ್ಕಿಂತ ಪೂರ್ವದಲ್ಲಿ ವಿವಿಧ ಆರ್ಥಿಕ ವಲಯದಲ್ಲಿ ಮಹಿಳಾ ದುಡಿಮೆಗಾರರ

ಕೋಷ್ಟಕ ೫.೩

೧೯೧೧ರಿಂದ ೧೯೭೧ರವರೆಗೆ ಮಹಿಳಾ ದುಡಿಮೆಗಾರರ ಪ್ರಮಾಣ

| ಕ್ರ.ಸಂ. | ವರ್ಷ | ಪ್ರಥಮ ವಲಯ ಕೃಷಿ | ದ್ವಿತೀಯ ವಲಯ ಕೈಗಾರಿಕೆ | ತೃತೀಯ ವಲಯ ಸೇವೆ |
|---|---|---|---|---|
| ೧ | ೧೯೧೧ | ೭೩.೯ | ೧೪.೭ | ೧೧.೪ |
| ೨. | ೧೯೨೧ | ೭೫.೫ | ೧೩.೫ | ೧೧.೦ |
| ೩. | ೧೯೩೧ | ೭೨.೩ | ೧೩.೭ | ೧೪.೦ |
| ೪. | ೧೯೫೧ | ೭೬.೮ | ೧೧.೨ | ೧೨.೧ |
| ೫. | ೧೯೬೧ | ೭೯.೬ | ೧೧.೬ | ೮.೮ |
| ೬. | ೧೯೭೧ | ೮೦.೧ | ೧೦.೫ | ೯.೪ |

ಮೂಲ : ಟುವರ್ಡ್ಸ್ ಈಕ್ವಾಲಿಟಿ ವರದಿ, ೧೯೭೪, ಪು.ಸಂ.೧೫೩[೪೬]

ಟುವರ್ಡ್ಸ್ ಈಕ್ವಾಲಿಟಿ ವರದಿ ತಿಳಿಸುವಂತೆ ಪ್ರಥಮ ವಲಯ ಕೃಷಿಯಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ೧೯೧೧ರಿಂದ ೧೯೭೧ರ ಅವಧಿಯವರೆಗೆ ೧೯೩೧ನ್ನು ಹೊರತುಪಡಿಸಿ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಆದರೆ ಉಳಿದ ಆರ್ಥಿಕ ವಲಯಗಳಲ್ಲಿ ಇಷ್ಟೊಂದು ಬದಲಾವಣೆ ಕಂಡುಬರುವುದಿಲ್ಲ. ಕೋಷ್ಟಕ ೩ರಲ್ಲಿ ತೋರಿಸಿದಂತೆ ೧೯೧೧ರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇಕಡ ೭೩.೯ರಷ್ಟು ೧೯೨೧ರಲ್ಲಿ ಶೇಕಡ ೭೫.೫ ರಷ್ಟು, ೧೯೩೧ರಲ್ಲಿ ಶೇಕಡ ೭೨.೩ರಷ್ಟು, ೧೯೫೧ರಲ್ಲಿ ಶೇಕಡ ೭೬.೮ರಷ್ಟು, ೧೯೬೧ರಲ್ಲಿ ಶೇಕಡ ೭೯.೬ರಷ್ಟು ಮತ್ತು ೧೯೭೧ರಲ್ಲಿ ಶೇಕಡ ೮೦.೧ ರಷ್ಟು ಇರುವುದು ಕಂಡುಬರುತ್ತದೆ. ಇದರಿಂದಾಗಿ ಕೃಷಿ ಭಾರತದ ಬೆನ್ನೆಲುಬಾದರೆ ಮಹಿಳೆ ಕೃಷಿಯ ಬೆನ್ನೆಲುಬಾಗಿದ್ದಾಳೆ ಎಂಬುದು ಸ್ಪಷ್ಟವಾಗುತ್ತದೆ.

## ೨. ಸಂಘಟಿತ ಅಸಂಘಟಿತ ವಲಯದ ಗಾತ್ರ

ಕೋಷ್ಟಕ ೫.೪.

ಸಂಘಟಿತ ಮತ್ತು ಅಸಂಘಟಿತ ವಲಯದ ಗಾತ್ರ(ಮಿಲಿಯನ್‌ಗಳಲ್ಲಿ)

| ವರ್ಷ | ಸಂಘಟಿತ | ಅಸಂಘಟಿತ | ಒಟ್ಟು | ಸಂಘಟಿತ (ಶೇಕಡವಾರು) | ಅಸಂಘಟಿತ (ಶೇಕಡವಾರು) |
|---|---|---|---|---|---|
| ೧೯೮೩ | ೨೪.೦ | ೨೭೫.೬ | ೨೯೯.೬ | ೮.೦ | ೯೨.೦ |
| ೧೯೮೭-೮೮ | ೨೫.೪ | ೩೦೧.೯ | ೩೨೭.೩ | ೭.೮ | ೯೨.೨ |
| ೧೯೯೩-೯೪ | ೨೭.೪ | ೩೪೮.೮ | ೩೭೬.೨ | ೭.೩ | ೯೨.೭ |
| ೧೯೯೯-೨೦೦೦ | ೨೭.೮ | ೩೭೧.೨ | ೩೯೯.೦ | ೭.೦ | ೯೩.೦ |

ಮೂಲ : ಆರ್ಗನೈಸ್ಡ್ ಎಂಪ್ಲಾಯ್‌ಮೆಂಟ್ ಫೀಗರ್ಸ್ ಆ್ಯನುವೆಲ್ ರಿಪೋರ್ಟ್ (೧೯೮೩ ಮತ್ತು ೧೯೮೮) ಮತ್ತು ಕ್ವಾಟರ್ಲಿ ಎಂಪ್ಲಾಯ್‌ಮೆಂಟ್ ರಿವ್ಯೂ(೧೯೯೩-೨೦೦೦), DGE ಮತ್ತು T, ಅನ್ ಆರ್ಗನೈಸ್ಡ್ ಎಂಪ್ಲಾಯ್‌ಮೆಂಟ್ಸ್ ಫೀಗರ್ಸ್, ಇಪಿಡಬ್ಲ್ಯೂ ಮೇ ೨೦೦೬, ಪು.೨೧೧೦.[೪೭]

ಕೋಷ್ಟಕ ೫.೪ನ್ನು ಗಮನಿಸಿದರೆ ದೇಶದಲ್ಲಿನ ಸಂಘಟಿತ ಅಸಂಘಟಿತ ವಲಯದ ಪ್ರಮಾಣ ತಿಳಿದುಬರುತ್ತದೆ. ದಶಕದಿಂದ ದಶಕಕ್ಕೆ ಸಂಘಟಿತ ವಲಯದಲ್ಲಿ ಕಾರ್ಮಿಕರ ಪ್ರಮಾಣ ಕಡಿಮೆಯಾಗುತ್ತಿದ್ದರೆ ಅಸಂಘಟಿತ ವಲಯದಲ್ಲಿ ಕಾರ್ಮಿಕರ ಪ್ರಮಾಣ ಅಧಿಕವಾಗುತ್ತಿರುವುದು ಕಂಡುಬರುತ್ತಿದೆ. ೧೯೮೩ರಲ್ಲಿ ಶೇಕಡ ೮.೦ರಷ್ಟು ಕಾರ್ಮಿಕರು ಸಂಘಟಿತ ವಲಯದಲ್ಲಿ ಮತ್ತು ಶೇಕಡ ೯೨.೦ರಷ್ಟು ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಾರೆ. ೧೯೮೭-೮೮ರಲ್ಲಿ ಸಂಘಟಿತ ವಲಯದಲ್ಲಿ ಕಾರ್ಮಿಕ ಪ್ರಮಾಣ ಶೇಕಡ ೭.೮ರಷ್ಟು ಮತ್ತು ಅಸಂಘಟಿತ ವಲಯದಲ್ಲಿ ಶೇಕಡ ೯೨.೨ರಷ್ಟು ಕಾರ್ಮಿಕರು, ೧೯೯೩-೯೪ರಲ್ಲಿ ಸಂಘಟಿತ ವಲಯದಲ್ಲಿ ಶೇಕಡ ೭.೬ರಷ್ಟು ಕಾರ್ಮಿಕರು ಮತ್ತು ಅಸಂಘಟಿತ ವಲಯದಲ್ಲಿ ಶೇಕಡ ೯೨.೭ರಷ್ಟು ಕಾರ್ಮಿಕರು ಮತ್ತು ೧೯೯೯-೨೦೦೦ರಲ್ಲಿ ಸಂಘಟಿತ ವಲಯದಲ್ಲಿ ಶೇಕಡ ೭.೦ರಷ್ಟು ಕಾರ್ಮಿಕರು ಮತ್ತು ಅಸಂಘಟಿತ ವಲಯದಲ್ಲಿ ಶೇಕಡ ೯೩.೦ರಷ್ಟು ಕಾರ್ಮಿಕರು ದುಡಿಯುತ್ತಿರುವುದು ಕಂಡುಬರುತ್ತಿದೆ.

## ೨. ವಿವಿಧ ಉದ್ಯೋಗಗಳಲ್ಲಿ ಅಸಂಘಟಿತ ವಲಯದ ಸಹಭಾಗಿತ್ವದ ಪ್ರಮಾಣ

ವಿವಿಧ ವೃತ್ತಿ ಅಥವಾ ಉದ್ಯೋಗಗಳಲ್ಲಿ ಅಸಂಘಟಿತ ವಲಯದ ಸಹಭಾಗಿತ್ವದ ಪ್ರಮಾಣವನ್ನು ಗಮನಿಸಿದರೆ ಕೃಷಿ ಕ್ಷೇತ್ರ ಮತ್ತು ನಿರ್ಮಾಣ ಕ್ಷೇತ್ರದಲ್ಲಿ ಅಧಿಕ ಕಾರ್ಮಿಕರು ತೊಡಗಿರುವುದು

ಕಂಡುಬರುತ್ತದೆ. ಗಣಿಗಾರಿಕೆ, ಸಿದ್ಧವಸ್ತು ತಯಾರಿಕೆ, ವಿದ್ಯುತ್ ಶಕ್ತಿ, ಗ್ಯಾಸ್ ಮತ್ತು ವಿಮೆ, ವ್ಯಾಪಾರ, ಸಾರಿಗೆ, ಹಣಕಾಸು ಮತ್ತು ಸೇವಾ ಉದ್ಯಮಗಳಲ್ಲಿ ಕಾರ್ಮಿಕರ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತಿದೆ. ಕೋಷ್ಟಕ ೫.೫.ರಲ್ಲಿ ತೋರಿಸಿದಂತೆ ಅಸಂಘಟಿತ ವಲಯದ ಕೃಷಿ ಕ್ಷೇತ್ರದಲ್ಲಿ ಶೇಕಡ ೯೯.೪೧ ರಷ್ಟು ಕಾರ್ಮಿಕರು, ಗಣಿಗಾರಿಕೆ ಮತ್ತು ಕ್ವಾರಿಯಲ್ಲಿ ಶೇಕಡ ೫೫.೭೩ರಷ್ಟು ಕಾರ್ಮಿಕರು, ಸಿದ್ಧವಸ್ತು ತಯಾರಿಕೆಯಲ್ಲಿ ಶೇಕಡ ೮೪.೮೮ರಷ್ಟು ಕಾರ್ಮಿಕರು, ಉಪಯುಕ್ತತೆ ಉದ್ಯಮಗಳಲ್ಲಿ ಶೇಕಡ ೨೧.೮೯ರಷ್ಟು ಕಾರ್ಮಿಕರು, ನಿರ್ಮಾಣ ಉದ್ಯಮದಲ್ಲಿ ಶೇಕಡ ೯೩.೪೫ರಷ್ಟು ಕಾರ್ಮಿಕರು, ವ್ಯಾಪಾರೋದ್ಯಮದಲ್ಲಿ ಶೇಕಡ ೯೮.೭೯ರಷ್ಟು ಕಾರ್ಮಿಕರು, ಸಾರಿಗೆಯಲ್ಲಿ ಶೇಕಡ ೭೮.೩೪ರಷ್ಟು ಕಾರ್ಮಿಕರು, ಹಣಕಾಸಿನಲ್ಲಿ ೬೫.೧೮ರಷ್ಟು ಕಾರ್ಮಿಕರು ಮತ್ತು ಸೇವಾ ಉದ್ಯಮದಲ್ಲಿ ಶೇಕಡ ೬೫.೩೪ರಷ್ಟು ಕಾರ್ಮಿಕರು ದುಡಿಯುತ್ತಿದ್ದಾರೆ. ಒಟ್ಟಾರೆಯಾಗಿ ಅಸಂಘಟಿತ ವಲಯದಲ್ಲಿ ೯೨.೯೮ರಷ್ಟು ಕಾರ್ಮಿಕರು ದುಡಿಯುತ್ತಿರುವುದು ಕಂಡುಬರುತ್ತದೆ.

**ಕೋಷ್ಟಕ ೫.೫.**

**ಅಸಂಘಟಿತ ವಲಯದ ವಿವಿಧ ವೃತ್ತಿಗಳಲ್ಲಿ ಕಾರ್ಮಿಕರ ಪ್ರಮಾಣ ಶೇಕಡವಾರು**

| ಕ್ರ.ಸಂ. | ಅಸಂಘಟಿತ ವಲಯದ ವಿವಿಧ ವೃತ್ತಿಗಳು ಅಥವಾ ಉದ್ಯೋಗಗಳು | ಸಂಘಟಿತ | ಅಸಂಘಟಿತ |
|---|---|---|---|
| ೧ | ಕೃಷಿಕ್ಷೇತ್ರ, ಬೇಟೆಗಾರಿಕೆ, ಅರಣ್ಯ ಉದ್ಯಮ ಮತ್ತು ಮೀನುಗಾರಿಕೆ | ೦.೬ | ೯೯.೪೧ |
| ೨ | ಮೈನಿಂಗ್ ಮತ್ತು ಕ್ವಾರಿಂಗ್ | ೪೩.೨ | ೫೫.೭೩ |
| ೩ | ಸಿದ್ಧವಸ್ತು ತಯಾರಿಕೆ | ೧೪.೯ | ೮೪.೮೮ |
| ೪ | ಉಪಯುಕ್ತತಾ ವಲಯ ವಿದ್ಯುತ್, ಗ್ಯಾಸ್ ಮತ್ತು ನೀರು | ೭೯.೦ | ೨೧.೮೯ |
| ೫ | ನಿರ್ಮಾಣ ಉದ್ಯಮ | ೬.೫ | ೯೩.೪೫ |
| ೬ | ವ್ಯಾಪಾರ, ಹೋಟೆಲ್ ಮತ್ತು ರೆಸ್ಟೋರೆಂಟ್ | ೧.೨ | ೯೮.೭೯ |
| ೭ | ಸಾರಿಗೆ ಮತ್ತು ಸಂಪರ್ಕ | ೨೧.೫ | ೭೮.೩೪ |
| ೮ | ಹಣಕಾಸು | | ೬೫.೧೮ |
| ೯ | ಸೇವಾ ವಲಯ | ೩೪.೮ | ೬೫.೩೮ |
| | ಒಟ್ಟು | ೯.೧೦ | ೯೨.೯೮ |

ಮೂಲ: ಎಕನಾಮಿಕ್ ಸರ್ವೆ ೨೦೦೩-೦೪ ಮತ್ತು DGE ಮತ್ತು T ಮಿನಿಸ್ಟ್ರಿ ಆಫ್ ಲೇಬರ್ EPW ಜೂನ್ ೨೪, ೨೦೦೬, ಪು.೨೬೮೩.[೮೮]

## ೩. ಅಸಂಘಟಿತ ವಲಯದಲ್ಲಿ ಮಹಿಳಾ ಕಾರ್ಮಿಕರ ಸಂಖ್ಯೆ ಅಧಿಕ

ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಲ್ಲಿ ಮಹಿಳಾ ಕಾರ್ಮಿಕರ ಪ್ರಮಾಣ ಅಧಿಕವಿರುವುದು ಕಂಡುಬರುತ್ತದೆ. ಸಂಘಟಿತ ವಲಯದಲ್ಲಿ ಶೇಕಡ ೫.೨೮ರಷ್ಟು ಮಹಿಳಾ ಕಾರ್ಮಿಕರು ದುಡಿಯುತ್ತಿದ್ದರೆ, ಅಸಂಘಟಿತ ವಲಯದಲ್ಲಿ ಶೇಕಡ ೯೪.೦೭ರಷ್ಟು ಮಹಿಳೆಯರು ದುಡಿಯುತ್ತಿರುವುದು ಕಂಡುಬರುತ್ತಿದೆ. ಇದನ್ನು ಕೋಷ್ಟಕ ೫.೬.ರಲ್ಲಿ ನೋಡಬಹುದು.

ಕೋಷ್ಟಕ ೫.೬.

ಭಾರತದ ಸಂಘಟಿತ ಅಸಂಘಟಿತ ವಲಯದಲ್ಲಿ ಮಹಿಳಾ ದುಡಿಮೆಗಾರರ ಸಹಭಾಗಿತ್ವ

೧೯೯೯-೨೦೦೦

(ಶೇಕಡವಾರು)

| ವಲಯ | ಸಂಘಟಿತ ವಲಯ | | | ಅಸಂಘಟಿತ ವಲಯ | | |
|---|---|---|---|---|---|---|
| | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ಗ್ರಾಮೀಣ ಭಾರತ | ೬.೩೯ | ೩.೧೧ | ೫.೨೩ | ೯೩.೬೦ | ೯೬.೮೯ | ೯೪.೭೭ |
| ನಗರ ಭಾರತ | ೨೪.೨೩ | ೧೯.೫೭ | ೨೩.೩೦ | ೭೫.೭೭ | ೮೦.೪೩ | ೭೬.೭೦ |
| ಒಟ್ಟು ಭಾರತ | ೧೦.೯೧ | ೫.೨೮ | ೯.೧೩ | ೮೯.೦೭ | ೯೪.೬೭ | ೯೦.೮೭ |

ಮೂಲ : ಕಂಪ್ಯೂಟೇಟ್ವಿ ಫಾರ್ಮ್ ಯೂನಿಟ್ ಲೇವಲ್ ರೆಕಾರ್ಡ್ ಆಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಆನ್ ಎಂಪ್ಲಾಯ್‌ಮೆಂಟ್ ಸರ್ವೆ, ೫೫ ರೌಂಡ್ ಆಫ್ ಎನ್.ಎಸ್.ಎಸ್. ೧೯೯೯-೨೦೦೦ EPW ಮೇ ೨೭, ೨೦೦೬, ಪು.೨೧೧೦.[೪೯]

ಕೋಷ್ಟಕ ೫.೬ರ ಪ್ರಕಾರ ಅಸಂಘಟಿತ ವಲಯ ಗ್ರಾಮೀಣ ಭಾಗದಲ್ಲಿನ ಶೇಕಡ ೯೩.೬೦ರಷ್ಟು ಪುರುಷರು, ಶೇಕಡ ೯೬.೮೯ರಷ್ಟು ಮಹಿಳೆಯರನ್ನು ಹಾಗೂ ಒಟ್ಟು ೯೪.೭೭ರಷ್ಟು ಕಾರ್ಮಿಕರನ್ನು ಒಳಗೊಂಡಿದ್ದರೆ, ನಗರ ಭಾಗದಲ್ಲಿ ಅಸಂಘಟಿತ ವಲಯದಲ್ಲಿ ಶೇಕಡ ೭೫.೭೭ರಷ್ಟು ಪುರುಷರು, ಶೇಕಡ ೮೮.೮೩ರಷ್ಟು ಮಹಿಳೆಯರು ಒಟ್ಟು ೯೦.೮೭ರಷ್ಟು ಕಾರ್ಮಿಕರು ದುಡಿಯುತ್ತಿರುವುದು ಕಂಡುಬರುತ್ತದೆ. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಕಾರ್ಮಿಕರಲ್ಲಿ ನಗರ ಪ್ರದೇಶದ ಕಾರ್ಮಿಕರಿಗಿಂತ ಗ್ರಾಮೀಣ ಪ್ರದೇಶದ ಕಾರ್ಮಿಕರು ಅಧಿಕವಾಗಿರುವುದು ಕಂಡುಬರುತ್ತಿದೆ.

೪. ವಿವಿಧ ರಾಜ್ಯಗಳಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಪ್ರಮಾಣ

ಕೋಷ್ಟಕ ೫.೭

ಭಾರತದ ವಿವಿಧ ರಾಜ್ಯಗಳಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಸಹಭಾಗಿತ್ವದ ಪ್ರಮಾಣ
೧೯೯೯-೨೦೦೦

(ಶೇಕಡವಾರು)

| ಕ್ರ.ಸಂ. | ರಾಜ್ಯಗಳು | ಸಂಘಟಿತ ವಲಯ | ಅಸಂಘಟಿತ ವಲಯ |
|---|---|---|---|
| ೧ | ಆಂಧ್ರಪ್ರದೇಶ | ೭.೦೭ | ೯೨.೯೩ |
| ೨ | ಅರುಣಾಚಲ ಪ್ರದೇಶ | ೧೨.೯೮ | ೮೭.೦೨ |
| ೩ | ಅಸ್ಸಾಂ | ೨೨.೦೪ | ೭೭.೯೬ |
| ೪ | ಬಿಹಾರ | ೫.೦೮ | ೯೪.೯೨ |
| ೫ | ದೆಹಲಿ | ೨೬.೩೬ | ೭೩.೬೪ |
| ೬ | ಗೋವಾ | ೨೪.೬೪ | ೭೫.೩೬ |
| ೭ | ಗುಜರಾತ್ | ೮.೦೩ | ೯೧.೯೭ |
| ೮ | ಹರಿಯಾಣ | ೧೦.೪೦ | ೮೯.೬೦ |
| ೯ | ಹಿಮಾಚಲ ಪ್ರದೇಶ | ೮.೭೨ | ೯೧.೨೮ |
| ೧೦ | ಜಮ್ಮು ಮತ್ತು ಕಾಶ್ಮೀರ | ೧೧.೧೬ | ೮೮.೮೪ |
| ೧೧ | ಕರ್ನಾಟಕ | ೧೧.೦೫ | ೮೮.೯೫ |
| ೧೨ | ಕೇರಳ | ೨೭.೬೯ | ೭೨.೩೧ |
| ೧೩ | ಮಧ್ಯಪ್ರದೇಶ | ೫.೪೮ | ೯೪.೫೨ |
| ೧೪ | ಮಹಾರಾಷ್ಟ್ರ | ೧೧.೯೮ | ೮೮.೦೨ |
| ೧೫ | ಮಣಿಪುರ | ೧೧.೨೨ | ೮೮.೭೮ |
| ೧೬ | ಮೇಘಾಲಯ | ೭.೫೬ | ೯೨.೪೪ |
| ೧೭ | ಮಿಜೋರಂ | ೧೪.೪೬ | ೮೫.೫೪ |
| ೧೮ | ನಾಗಾಲ್ಯಾಂಡ್ | ೨೭.೩೨ | ೭೩.೬೮ |
| ೧೯ | ಒರಿಸ್ಸಾ | ೫.೭೧ | ೯೪.೨೯ |
| ೨೦ | ಪಂಜಾಬ್ | ೧೦.೦೯ | ೮೯.೯೧ |
| ೨೧ | ರಾಜಸ್ಥಾನ | ೫.೬೦ | ೯೪.೪೦ |

| | | | |
|---|---|---|---|
| ೨೨ | ಸಿಕ್ಕಿಂ | ೨೦.೦೪ | ೭೯.೯೬ |
| ೨೩ | ತಮಿಳುನಾಡು | ೧೦.೪೬ | ೮೯.೫೪ |
| ೨೪ | ತ್ರಿಪುರ | ೧೭.೮೭ | ೮೨.೧೩ |
| ೨೫ | ಉತ್ತರ ಪ್ರದೇಶ | ೫.೪೮ | ೯೪.೫೨ |
| ೨೬ | ಪಶ್ಚಿಮ ಬಂಗಾಳ | ೧೦.೩೬ | ೮೯.೮೭ |
| | ಒಟ್ಟು | ೯.೧೩ | ೯೦.೮೭ |

ಮೂಲ : ಕಂಪ್ಯೂಟೇಟ್ಟ್ ಫಾರ್ಮ್ ಯೂನಿಟ್ ಲೇವಲ್ ರೆಕಾರ್ಡ್ ಆಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಆನ್ ಎಂಪ್ಲಾಯ್‌ಮೆಂಟ್ ಸರ್ವೆ, ೫೫ ರೌಂಡ್ ಆಫ್ ಎನ್.ಎಸ್.ಎಸ್. ೧೯೯೯-೨೦೦೦ EPW ಮೇ ೨೭, ೨೦೦೬, ಪು.೨೧೧೦.[೫೦]

ಕೋಷ್ಟಕ ೫.೭ನ್ನು ಗಮನಿಸಿದರೆ ಸಂಘಟಿತ ವಲಯದ ಕಾರ್ಮಿಕರ ಪ್ರಮಾಣ ಕೇರಳದಲ್ಲಿ ಶೇಕಡ ೨೭.೯೬ರಷ್ಟಿದ್ದು ಸಂಘಟಿತ ಕಾರ್ಮಿಕರನ್ನು ಅಧಿಕ ಸಂಖ್ಯೆಯಲ್ಲಿ ಹೊಂದಿದ ಪ್ರಥಮ ರಾಜ್ಯವಾಗಿದೆ. ಶೇಕಡ ೨೬.೩೬ರಷ್ಟು ಸಂಘಟಿತ ಕಾರ್ಮಿಕರನ್ನು ಹೊಂದಿದ ದೆಹಲಿ ಎರಡನೇ ರಾಜ್ಯವಾದರೆ ಶೇಕಡ ೨೬.೩೨ರಷ್ಟು ಸಂಘಟಿತ ಕಾರ್ಮಿಕರನ್ನು ಹೊಂದಿದ ನಾಗಾಲ್ಯಾಂಡ್ ತೃತೀಯ ರಾಜ್ಯವಾಗಿದೆ. ದೇಶದಲ್ಲಿ ಬಿಹಾರ ಅತ್ಯಂತ ಕಡಿಮೆ ಅಂದರೆ ಶೇಕಡ ೫.೦೮ರಷ್ಟು ಸಂಘಟಿತ ಕಾರ್ಮಿಕರನ್ನು ಹೊಂದಿದೆ. ಹೀಗಾಗಿ ಬಿಹಾರದಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಅಸಂಘಟಿತ ವಲಯವನ್ನು ಅವಲಂಬಿಸಿದ್ದಾರೆ. ದೇಶದಲ್ಲಿ ಶೇಕಡ ೯.೧೩ರಷ್ಟು ಕಾರ್ಮಿಕರು ಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ದೇಶದಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಪ್ರಮಾಣ ಶೇಕಡ ೯೦.೮೭ರಷ್ಟಿದ್ದು, ಅಧಿಕ ಸಂಖ್ಯೆಯ ಕಾರ್ಮಿಕರು ಈ ವಲಯವನ್ನು ಅವಲಂಬಿಸಿದ್ದಾರೆ. ದೇಶದಲ್ಲಿ ಅಸಂಘಟಿತ ವಲಯದ ಕಾರ್ಮಿಕರನ್ನು ಶೇಕಡ ೯೪.೯೨ರಷ್ಟು ಹೊಂದಿ ಬಿಹಾರ ರಾಜ್ಯ ಪ್ರಥಮ ಸ್ಥಾನದಲ್ಲಿದ್ದರೆ ಶೇಕಡ ೯೪.೯೦ರಷ್ಟು ಕಾರ್ಮಿಕರನ್ನು ಹೊಂದಿದ ರಾಜಸ್ಥಾನ ಎರಡನೇ ಸ್ಥಾನದಲ್ಲಿ ಮತ್ತು ಶೇಕಡ ೯೪.೫೨ರಷ್ಟು ಕಾರ್ಮಿಕರನ್ನು ಹೊಂದಿದ ಮಧ್ಯಪ್ರದೇಶ ಮತ್ತು ಉತ್ತರ ಪ್ರದೇಶಗಳು ತೃತೀಯ ಸ್ಥಾನವನ್ನು ಪಡೆದಿವೆ. ಕೇರಳ ರಾಜ್ಯದಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಕಾರ್ಮಿಕರು (ಶೇಕಡ ೭೨.೩೧) ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಕರ್ನಾಟಕದಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಪ್ರಮಾಣ ಶೇಕಡ ೮೮.೯೫ರಷ್ಟಿರುವುದು ಕೋಷ್ಟಕ ೫.೭ರಿಂದ ತಿಳಿದುಬರುತ್ತಿದೆ.

**೫. ಅಸಂಘಟಿತ ವಲಯದಲ್ಲಿ ಸಾಮಾಜಿಕ ಗುಂಪುಗಳ ಪ್ರಮಾಣ**

ಅಸಂಘಟಿತ ವಲಯದಲ್ಲಿ ಸಾಮಾಜಿಕ ವರ್ಗಗಳ ಸಹಭಾಗಿತ್ವದ ಪ್ರಮಾಣವನ್ನು ನೋಡಿದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ಪ್ರಮಾಣ ಅಧಿಕವಾಗಿರುವುದು

ಕಂಡುಬರುತ್ತಿದೆ. ಈ ವರ್ಗಗಳ ಪ್ರಮಾಣ ಸಂಘಟಿತ ವಲಯದಲ್ಲಿ ಅತ್ಯಂತ ಕಡಿಮೆ ಇರುವುದು ತಿಳಿದುಬರುತ್ತದೆ. ಕೋಷ್ಟಕ ೫.೮ನ್ನು ನೋಡಿದರೆ ಪರಿಶಿಷ್ಟ ಪಂಗಡದ ಕಾರ್ಮಿಕರು ಸಂಘಟಿತ ವಲಯದಲ್ಲಿ ಶೇಕಡ ೫.೮೪ರಷ್ಟು, ಅಸಂಘಟಿತ ವಲಯದಲ್ಲಿ ಶೇಕಡ ೯೪.೧೬ರಷ್ಟು, ಪರಿಶಿಷ್ಟ ಜಾತಿಗೆ ಸೇರಿದ ಕಾರ್ಮಿಕರಲ್ಲಿ ಸಂಘಟಿತ ವಲಯದಲ್ಲಿ ಶೇಕಡ ೬.೪೬ರಷ್ಟು ಮತ್ತು ಅಸಂಘಟಿತ ವಲಯದಲ್ಲಿ ಶೇಕಡ ೯೩.೫೪ರಷ್ಟು, ಹಿಂದುಳಿದ ಅಲ್ಪಸಂಖ್ಯಾತರ ವರ್ಗದ ಕಾರ್ಮಿಕರಲ್ಲಿ ಶೇಕಡ ೭.೦೮ರಷ್ಟು ಕಾರ್ಮಿಕರು ಸಂಘಟಿತ ವಲಯದಲ್ಲಿ ಮತ್ತು ಶೇಕಡ ೯೨.೯೨ರಷ್ಟು ಕಾರ್ಮಿಕರು ಅಸಂಘಟಿತ ವಲಯದಲ್ಲಿ ಮತ್ತು ಇತರ ಜಾತಿಯ ಕಾರ್ಮಿಕರಲ್ಲಿ ಶೇಕಡ ೧೪.೨೧ರಷ್ಟು ಕಾರ್ಮಿಕರು ಸಂಘಟಿತ ವಲಯದಲ್ಲಿ ಮತ್ತು ಶೇಕಡ ೮೫.೮೩ರಷ್ಟು ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತಿದೆ.

**ಕೋಷ್ಟಕ ೫.೮**

**ಅಸಂಘಟಿತ ವಲಯದಲ್ಲಿ ಸಾಮಾಜಿಕ ವರ್ಗಗಳ ಸಹಭಾಗಿತ್ವದ ಪ್ರಮಾಣ**

**(ಶೇಕಡವಾರು)**

| ಸಾಮಾಜಿಕ ವರ್ಗಗಳು | ಸಂಘಟಿತ ವಲಯ | ಅಸಂಘಟಿತ ವಲಯ |
|---|---|---|
| ಪರಿಶಿಷ್ಟ ಪಂಗಡ (ST) | ೫.೮೪ | ೯೪.೧೬ |
| ಪರಿಶಿಷ್ಟ ಜಾತಿ (SC) | ೬.೪೬ | ೯೩.೫೪ |
| ಹಿಂದುಳಿದ ಮತ್ತು ಅಲ್ಪಸಂಖ್ಯಾತರ ವರ್ಗ | ೭.೦೮ | ೯೨.೯೨ |
| ಇತರೆ | ೧೪.೨೧ | ೮೫.೮೩ |
| ಒಟ್ಟು | ೯.೦೯ | ೯೦.೯೦ |

ಮೂಲ : ಕಂಪ್ಯೂಟೇಟ್ಟ್ವಿ ಫಾರ್ಮ್ ಯೂನಿಟ್ ಲೇವಲ್ ರೆಕಾರ್ಡ್ ಆಫ್ ಎಂಪ್ಲಾಯ್‌ಮೆಂಟ್ ಆ್ಯಂಡ್ ಆನ್ ಎಂಪ್ಲಾಯ್‌ಮೆಂಟ್ ಸರ್ವೆ, ೫೫ ರೌಂಡ್ ಆಫ್ ಎನ್.ಎಸ್.ಎಸ್. ೧೯೯೯-೨೦೦೦ EPW ಮೇ ೨೭, ೨೦೦೬, ಪು.೨೧೧೩.[೫೧]

ಅಸಂಘಟಿತ ವಲಯದ ಗಾತ್ರವನ್ನು ಗಮನಿಸಿದರೆ ಹಿಂದುಳಿದ ಅಥವಾ ಅಭಿವೃದ್ಧಿ ಹೊಂದುತ್ತಿರುವ ಅಥವಾ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಸಂಘಟಿತ ಅಥವಾ ಅನೌಪಚಾರಿಕ ವಲಯದಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಅದರಲ್ಲೂ ಮಹಿಳಾ ಕಾರ್ಮಿಕರು ಹೆಚ್ಚಿರುವುದು ಕಂಡುಬರುತ್ತದೆ. ಭಾರತದಲ್ಲಿ ಅಸಂಘಟಿತ ವಲಯದ ವ್ಯಾಪ್ತಿ ತುಂಬಾ ವಿಶಾಲವಾಗಿದ್ದು, ದಶಕದಿಂದ ದಶಕಕ್ಕೆ ಪ್ರಬಲವಾಗುತ್ತ

ನಡೆಯುತ್ತಿದೆ. ಅಲ್ಲದೆ ವಿವಿಧ ವೃತ್ತಿವಾರು, ಲಿಂಗವಾರು, ರಾಜ್ಯವಾರು ಮತ್ತು ಸಾಮಾಜಿಕ ವರ್ಗವಾರು ಕಾರ್ಮಿಕರ ಪ್ರಮಾಣ ಅಧಿಕವಾಗುತ್ತದೆ. ಲಿಂಗವಾರು ಪ್ರಮಾಣವನ್ನು ಗಮನಿಸಿದರೆ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳೆಯರೇ ಆಗಿದ್ದಾರೆ.

## ೫.೭. ಅಸಂಘಟಿತ ವಲಯದಲ್ಲಿ ಮಹಿಳಾ ಕೃಷಿ ಕಾರ್ಮಿಕರು ಮತ್ತು ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು

### ೧. ಮಹಿಳಾ ಕೃಷಿ ಕಾರ್ಮಿಕರು

ಭಾರತ ಒಂದು ಕೃಷಿ ಪ್ರಧಾನ ರಾಷ್ಟ್ರವಾಗಿದ್ದು, ಶೇಕಡ ೭೦ರಷ್ಟು ಜನರು ಕೃಷಿಯನ್ನೇ ತಮ್ಮ ಜೀವನಾಧಾರವಾಗಿ ನಂಬಿದ್ದಾರೆ. ಕೃಷಿ ಇಂದಿಗೂ ಭಾರತದ ರಾಷ್ಟ್ರೀಯ ಆದಾಯಕ್ಕೆ ಶೇಕಡ ೨೮ ಕ್ಕಿಂತಲೂ ಹೆಚ್ಚಿನ ಕೊಡುಗೆ ಸಲ್ಲಿಸುತ್ತಿದ್ದು, ದೇಶದ ಒಳಿತು ನೇರವಾಗಿ ಕೃಷಿಯ ಅಭಿವೃದ್ಧಿಯನ್ನೇ ಅವಲಂಬಿಸಿದೆ. ಆದ್ದರಿಂದ ಕೃಷಿಯು ಭಾರತದ ಆರ್ಥಿಕತೆಯ ಬೆನ್ನೆಲುಬು ಎಂದು ಪರಿಗಣಿಸಲ್ಪಟ್ಟಿದೆ. ಮಹಿಳೆಯರು ಕೃಷಿಯ ಬೆನ್ನೆಲು ಬಾಗಿದ್ದಾರೆ. ಏಕೆಂದರೆ ಕೃಷಿ ಒಂದು ಕೌಟುಂಬಿಕ ಉದ್ಯೋಗವಾಗಿದ್ದು, ಮಹಿಳೆಯರ ಭಾಗವಹಿಸುವಿಕೆ ಅಧಿಕವಾಗಿದೆ. ಕೃಷಿಯಲ್ಲಿ ಶೇಕಡ ೫೦ರಷ್ಟು ಮಹಿಳಾ ಕಾರ್ಮಿಕರು ತೊಡಗಿರುವುದು ಕಂಡುಬರುತ್ತದೆ. ಹೀಗೆ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರನ್ನು ಮತ್ತು ಪುರುಷ ಕಾರ್ಮಿಕರನ್ನು ಹೊಂದಿದ ಕೃಷಿಯು ಅಸಂಘಟಿತ ವಲಯದ ವೃತ್ತಿಯಲ್ಲಿ ಬರುವ ಒಂದು ಉದ್ಯೋಗವಾಗಿದೆ.

ಕೃಷಿಯು ಒಂದು ಋತುಮಾನ ಸಂಬಂಧಿ ಉದ್ಯೋಗವಾಗಿದ್ದು, ವರ್ಷದಲ್ಲಿ ಕೆಲವು ದಿನಗಳಲ್ಲಿ ಮಾತ್ರ ಕೃಷಿ ಚಟುವಟಿಕೆಗಳು ಕಂಡುಬರುತ್ತವೆ. ಕೃಷಿ ಚಟುವಟಿಕೆಗಳಾದ ಒಣಮೆಣಸಿನ ಕಾಯಿ ತೆಗೆಯುವುದು, ಹತ್ತಿ ಬಿಡಿಸುವುದು, ತೆನೆ ಬಡಿಯುವುದು, ಸಸಿ ನಾಟಿ ಮಾಡುವುದು, ಕಳೆ ಕೀಳುವುದು, ಬೆಳೆ ಸಂರಕ್ಷಣೆ, ಕೊಯ್ಲು ಮಾಡುವುದು ಮತ್ತು ರಾಶಿ ಮಾಡುವುದು ಇತ್ಯಾದಿ ಚಟುವಟಿಕೆಗಳಲ್ಲಿ ಕೃಷಿ ಕಾರ್ಮಿಕರು ತೊಡಗಿರುತ್ತಾರೆ.

ಬೇರೆಯವರ ಹೊಲಗದ್ದೆಗಳಲ್ಲಿ ಕೂಲಿಗಾಗಿ ಕೃಷಿ ಚಟುವಟಿಕೆಯಲ್ಲಿ ತೊಡಗಿರುವ ಕಾರ್ಮಿಕರನ್ನು ಕೃಷಿ ಕಾರ್ಮಿಕರು ಎಂದು ಕರೆಯಲಾಗುತ್ತದೆ. ಈ ಕೃಷಿ ಕಾರ್ಮಿಕರಲ್ಲಿ ಭೂರಹಿತ ಕೃಷಿ ಕಾರ್ಮಿಕರು ಮತ್ತು ಅತೀ ಸಣ್ಣ ಭೂ ಹಿಡುವಳಿ ಇರುವ ಚಿಕ್ಕ ರೈತರು ಸೇರಿರುತ್ತಾರೆ. ಭೂರಹಿತ ಕೃಷಿ ಕಾರ್ಮಿಕರು ಆದಾಯ ಮೂಲಕ್ಕಾಗಿ ಸದಾ ಕೃಷಿಯನ್ನೇ ಅವಲಂಬಿಸಿದವರಾಗಿದ್ದಾರೆ. ಅತಿ ಚಿಕ್ಕ ರೈತರು ತಮ್ಮ ಹೊಲದ ಉಳುಮೆ ಜೊತೆಗೆ ಕೃಷಿ ಕಾರ್ಮಿಕರಾಗಿ ಬೇರೆಯವರ ಹೊಲ-ಗದ್ದೆಗಳಲ್ಲಿ ದುಡಿಯುವವರಾಗಿರುತ್ತಾರೆ. ಪ್ರಥಮ ಕೃಷಿ ಕಾರ್ಮಿಕರ ವಿಚಾರಣಾ ಸಮಿತಿಯು "ಹಿಂದಿನ ವರ್ಷದಲ್ಲಿ

ಒಟ್ಟು ಕೆಲಸ ಮಾಡಿದ ದಿನಗಳ ಪೈಕಿ ಪ್ರತಿಶತ ೫೦ಕ್ಕಿಂತಲೂ ಹೆಚ್ಚು ದಿನಗಳವರೆಗೆ ಕೃಷಿ ಚಟುವಟಿಕೆಗಳಲ್ಲಿ ಕೂಲಿಯ ಆಳುಗಳಾಗಿ ಕೆಲಸ ಮಾಡಿದವರು ಕೃಷಿ ಕಾರ್ಮಿಕರಾಗಿದ್ದಾರೆ'' ಎಂದು ತಿಳಿಸುತ್ತದೆ.[೫೨] ಮತ್ತು ಭಾರತದಲ್ಲಿನ ಕೃಷಿ ಕಾರ್ಮಿಕರನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು.

೧. **ಹೊಂದಿಕೊಂಡ ಕಾರ್ಮಿಕರು :** ಯಾವ ಕಾರ್ಮಿಕರು ಮೌಖಿಕ ಅಥವಾ ಲಿಖಿತ ಒಪ್ಪಂದದ ಆಧಾರದ ಮೇಲೆ ಒಬ್ಬ ರೈತನ ಕುಟುಂಬಕ್ಕೆ ಹೊಂದಿಕೊಂಡು ದುಡಿಯುತ್ತಿರುತ್ತಾರೋ ಅಂತಹ ಕಾರ್ಮಿಕ ಹೊಂದಿಕೊಂಡ ಕಾರ್ಮಿಕರು. ಇವರು ಖಾಯಂ ಸ್ವರೂಪದ ಕಾರ್ಮಿಕರಾಗಿದ್ದು ವರ್ಷವೆಲ್ಲ ಉದ್ಯೋಗ ಪಡೆಯುತ್ತಾರೆ. ಅದರೆ ಇವರು ಬೇರೆಯವರ ಹೊಲದಲ್ಲಿ ಕೆಲಸ ಮಾಡುವಂತಿಲ್ಲ.

೨. **ಸಾಂದರ್ಭಿಕ ಕಾರ್ಮಿಕರು :** ಹೊಂದಿಕೊಂಡ ಕಾರ್ಮಿಕರನ್ನು ಬಿಟ್ಟು ಉಳಿಯುವ ಎಲ್ಲ ಕೃಷಿ ಕಾರ್ಮಿಕರು ಸಾಂದರ್ಭಿಕ ಕಾರ್ಮಿಕರಾಗಿದ್ದಾರೆ. ಈ ಕಾರ್ಮಿಕರು ತಮಗಿಷ್ಟ ಬಂದವರ ಹೊಲದಲ್ಲಿ ದುಡಿಯುತ್ತಾರೆ ಹಾಗೂ ಪ್ರತಿದಿನದ ಆಧಾರದಲ್ಲಿ ಕೂಲಿಯನ್ನು ಪಡೆಯುವವರಾಗಿರುತ್ತಾರೆ.

ಗ್ರಾಮೀಣ ಭಾಗದವರಾದ ಈ ಕೃಷಿ ಕಾರ್ಮಿಕರು ಅನಕ್ಷರಸ್ಥರು, ಅಕುಶಲಿಗಳು, ಸಂಪ್ರದಾಯ ಪ್ರಿಯರು, ಅಸಂಘಟಿತರು, ಸಮಾಜದ ದುರ್ಬಲ ವರ್ಗಕ್ಕೆ ಸೇರಿದವರು ಮತ್ತು ವರ್ಷದಲ್ಲಿ ಕೆಲವೇ ದಿನಗಳಲ್ಲಿ ಉದ್ಯೋಗ ಪಡೆಯುವವರು ಆಗಿರುತ್ತಾರೆ. ಅಲ್ಲದೆ ಕಡಿಮೆ ಕೂಲಿಗೆ ದುಡಿಯುವವರು ಆಗಿದ್ದಾರೆ. ಇಂತ ಲಕ್ಷಣ ಹೊಂದಿದ ಕೃಷಿ ಕಾರ್ಮಿಕರು ದಶಕದಿಂದ ದಶಕಕ್ಕೆ ಅಧಿಕವಾಗುತ್ತಿದ್ದಾರೆ.

## ಭಾರತದ ಕೃಷಿಯಲ್ಲಿ ಮಹಿಳೆಯರು

**ಕೋಷ್ಟಕ ೫.೯.**

**ಭಾರತದ ಕೃಷಿಯಲ್ಲಿ ಮಹಿಳೆಯರ ಸಹಭಾಗಿತ್ವ**

| ವರ್ಷ | ಒಟ್ಟು ಮಹಿಳಾ ಜನಸಂಖ್ಯೆ | ವ್ಯವಸಾಯಗಾರರು | | ಕೃಷಿ ಕಾರ್ಮಿಕರು | |
|---|---|---|---|---|---|
| | | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ೧೯೫೧ | ೧೭೩೫೪೩ | ೧೮೩೬೮ | ೪೫.೨ | ೧೨೬೯೪ | ೩೧.೪ |
| ೧೯೬೧ | ೨೧೨೪೬೭ | ೩೩೧೦೩ | ೫೫.೭ | ೧೪೧೭೧ | ೨೩.೯ |
| ೧೯೭೧ | ೨೬೩೯೦೦ | ೯೨೬೬ | ೨೯.೬ | ೧೫೭೯೪ | ೫೦.೫ |
| ೧೯೮೧ | ೩೨೧೩೫೭ | ೧೪೯೩೨ | ೩೩.೨ | ೭೦೭೬೮ | ೪೬.೨ |
| ೧೯೯೧ | ೪೦೨೮೧೩ | ೨೨೮೭೧ | ೩೪.೫ | ೨೮೮೩೩ | ೪೩.೬ |
| ೨೦೦೧ | ೪೯೫೭೩೮ | ೪೧೨೯೯ | ೪೧.೫೧ | ೫೦೦೯೩ | ೫೦.೩೫ |

ಮೂಲ : ಜನಗಣತಿ ೨೦೦೧, ಸೆನ್ಸಸ್ ಆಫ್ ಇಂಡಿಯಾ ೨೦೦೧, ಎನ್.ನಿಂಗಯ್ಯ, ಸೋಮಶೇಖರ, ಜನವರಿ ೨೦೧೦ ಪು.೩೫.[೫೩]

ಕೋಷ್ಟಕ ೫.೯ನ್ನು ನೋಡಿದರೆ ಕೃಷಿ ಕ್ಷೇತ್ರದಲ್ಲಿ ಮಹಿಳೆಯರು ಬೇಸಾಯಗಾರರಾಗಿ ಮತ್ತು ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ಪ್ರಾರಂಭದ ದಶಕದಲ್ಲಿ ಬೇಸಾಯಗಾರರಾಗಿದ್ದ ಮಹಿಳೆಯರು ನಂತರದ ದಶಕದಲ್ಲಿ ಕೃಷಿ ಕಾರ್ಮಿಕರಾಗಿ ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ.

೧೯೫೧ರಲ್ಲಿ ಶೇಕಡ ೪೫.೨ರಷ್ಟಿದ್ದ ಮಹಿಳಾ ವ್ಯವಸಾಯಗಾರರ ಪ್ರಮಾಣ ೧೯೯೧ರಲ್ಲಿ ಶೇಕಡ ೩೪.೫ರಷ್ಟು ಮತ್ತು ೨೦೦೧ರಲ್ಲಿ ೪೧.೫೧ರಷ್ಟು ಆಗಿರುವುದು ತಿಳಿದುಬರುತ್ತದೆ. ಆದರೆ ಕೃಷಿ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣವನ್ನು ನೋಡಿದರೆ ೧೯೫೧ರಲ್ಲಿ ಶೇಕಡ ೩೧.೩ರಷ್ಟಿದ್ದ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ೧೯೯೧ರಲ್ಲಿ ಶೇಕಡ ೪೩.೬ರಷ್ಟು ಮತ್ತು ೨೦೦೧ರಲ್ಲಿ ೮೦.೩೫ರಷ್ಟು ಇರುವುದು ಕಂಡುಬರುತ್ತಿದೆ. ಈ ಅಂಶವನ್ನು ಗಮನಿಸಿದರೆ ಕೃಷಿ ಕಾರ್ಮಿಕರ ಪ್ರಮಾಣ ದಶಕದಿಂದ ದಶಕಕ್ಕೆ ಅಧಿಕವಾಗುತ್ತಿರುವುದು ಕಂಡುಬರುತ್ತದೆ.

**ಭಾರತದ ವಿವಿಧ ರಾಜ್ಯಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರ ಹಂಚಿಕೆ**

ದೇಶದ ವಿವಿಧ ರಾಜ್ಯಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರ ಹಂಚಿಕೆಯು ಅಸಮಾನವಾಗಿರುವುದು ಕಂಡುಬರುತ್ತದೆ. ಕೋಷ್ಟಕ ೫.೧೦ನ್ನು ನೋಡಿದರೆ ಬಿಹಾರ ರಾಜ್ಯದಲ್ಲಿ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ಅಂದರೆ ಶೇಕಡ ೬೪.೫೭ರಷ್ಟು ಕಾರ್ಮಿಕರು ಕಂಡುಬರುತ್ತಿದ್ದು ಭಾರತದಲ್ಲಿ ಅಧಿಕ ಮಹಿಳಾ ಕಾರ್ಮಿಕರನ್ನು ಹೊಂದಿ ಪ್ರಥಮ ರಾಜ್ಯವಾಗಿದೆ. ಶೇಕಡ ೬೦.೬೮ರಷ್ಟು ಮಹಿಳಾ ಕಾರ್ಮಿಕರನ್ನು ಹೊಂದಿದ ಆಂಧ್ರಪ್ರದೇಶ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರನ್ನು ಹೊಂದಿದ ಎರಡನೇ ರಾಜ್ಯವಾಗಿದೆ. ಶೇಕಡ ೫೪.೩೨ರಷ್ಟು ಮಹಿಳಾ ಕಾರ್ಮಿಕರನ್ನು ಹೊಂದಿದ ತಮಿಳುನಾಡು ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರನ್ನು ಹೊಂದಿದ ನಾಲ್ಕನೇ ರಾಜ್ಯವಾಗಿದೆ.

ಕರ್ನಾಟಕದಲ್ಲಿ ಶೇಕಡ ೫೦.೪೧ರಷ್ಟು ಮಹಿಳಾ ಕೃಷಿ ಕಾರ್ಮಿಕರಿರುವುದು ಕಂಡುಬಂದಿದೆ. ಹಿಮಾಚಲ ಪ್ರದೇಶದಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಮಹಿಳಾ ಕಾರ್ಮಿಕರಿವುದು ಕಂಡುಬರುತ್ತದೆ. ಅಂದರೆ ಹಿಮಾಚಲ ಪ್ರದೇಶದಲ್ಲಿ ಶೇಕಡ ೨.೯೮ರಷ್ಟು ಮಹಿಳಾ ಕಾರ್ಮಿಕರು ಮಾತ್ರ ಇರುವುದು ಕಂಡುಬರುತ್ತದೆ. ಅಧಿಕ ಸಂಖ್ಯೆಯ ಸಾಕ್ಷರರನ್ನು ಹೊಂದಿದ ಕೇರಳ ರಾಜ್ಯದಲ್ಲಿ ಶೇಕಡ ೨೬.೨೪ರಷ್ಟು ಮಹಿಳಾ ಕಾರ್ಮಿಕರಿರುವುದು ಕಂಡುಬರುತ್ತದೆ. ಶೇಕಡ ೫೬.೯೦ರಷ್ಟು ಮಹಿಳಾ ಕಾರ್ಮಿಕರನ್ನು ಹೊಂದಿದ ಒರಿಸ್ಸಾ ರಾಜ್ಯವು ದೇಶದಲ್ಲಿ ಅಧಿಕ ಮಹಿಳಾ ಕಾರ್ಮಿಕರನ್ನು ಹೊಂದಿದ ತೃತೀಯ ರಾಜ್ಯವಾಗಿದೆ.

ಹೀಗೆ ದೇಶದಲ್ಲಿ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಅಸಮಾನವಾಗಿ ಹಂಚಿಕೆಯಾಗಿರುವುದು ಕಂಡುಬರುತ್ತಿದೆ. ಯಾವ ರಾಜ್ಯದಲ್ಲಿ ಮಹಿಳಾ ಜನಸಂಖ್ಯೆ ಅಧಿಕವಿದೆ. ಯಾವ ರಾಜ್ಯದಲ್ಲಿ ಅಧಿಕ

ಅನಕ್ಷರಸ್ಥ ಮಹಿಳೆಯರು ಇದ್ದಾರೋ ಆ ರಾಜ್ಯದಲ್ಲಿ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಸಹ ಅಧಿಕವಿರುವುದು ಕಂಡುಬರುತ್ತಿದೆ.

ಕೋಷ್ಟ ೫.೧೦

ಭಾರತದ ವಿವಿಧ ರಾಜ್ಯಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರ ಹಂಚಿಕೆ (೨೦೦೧)

| ಕ್ರ.ಸಂ. | ರಾಜ್ಯಗಳು | ಒಟ್ಟು ಕೃಷಿ ಕಾರ್ಮಿಕರು (ಲಕ್ಷಗಳಲ್ಲಿ) | ಮಹಿಳಾ ಕೃಷಿ ಕಾರ್ಮಿಕರು (ಲಕ್ಷಗಳಲ್ಲಿ) | ಮಹಿಳಾ ಕೃಷಿ ಕಾರ್ಮಿಕರು (ಶೇಕಡವಾರು) |
|---|---|---|---|---|
| ೧ | ಆಂಧ್ರಪ್ರದೇಶ | ೧೧೮.೫ | ೭೧.೯೧ | ೬೦.೬೮ |
| ೨ | ಅರುಣಾಚಲ ಪ್ರದೇಶ | ೧.೭೧ | ೦.೦೭ | ೪.೬೫ |
| ೩ | ಅಸ್ಸಾಂ | ೨೫.೦೯ | ೪.೩೭ | ೧೭.೪೪ |
| ೪ | ಬಿಹಾರ | ೭೨.೦೫ | ೪೬.೫೨ | ೬೪.೫೭ |
| ೫ | ಗುಜರಾತ್ | ೫೭.೨೧ | ೨೫.೧೫ | ೪೩.೯೬ |
| ೬ | ಹರಿಯಾಣ | ೨೩.೭೬ | ೫.೪೩ | ೨೨.೮೫ |
| ೭ | ಹಿಮಾಚಲ ಪ್ರದೇಶ | ೧೨.೬೬ | ೦.೩೭ | ೨.೯೮ |
| ೮ | ಜಮ್ಮು ಕಾಶ್ಮೀರ | ೯.೪೦ | ೦.೫೦ | ೫.೪೦ |
| ೯ | ಕರ್ನಾಟಕ | ೬೮.೫೪ | ೩೪.೫೫ | ೫೦.೪೦ |
| ೧೦ | ಕೇರಳ | ೧೯.೨೫ | ೫.೦೫ | ೨೬.೨೪ |
| ೧೧ | ಮಹಾರಾಷ್ಟ್ರ | ೧೨೬.೫ | ೬೧.೨೧ | ೪೬.೨೧ |
| ೧೨ | ಮಧ್ಯಪ್ರದೇಶ | ೮೬.೦೯ | ೩೭.೬೯ | ೪೩.೪೮ |
| ೧೩ | ಮಣಿಪುರ | ೩.೮೧ | ೦.೫೫ | ೧೪.೮೫ |
| ೧೪ | ಮಿಜೋರಾಂ | ೧.೧೮ | ೦.೦೫ | ೪.೪೭ |
| ೧೫ | ಒರಿಸ್ಸಾ | ೪೨.೦೦ | ೨೩.೯೦ | ೫೬.೯೦ |
| ೧೬ | ಪಂಜಾಬ್ | ೧೭.೪೯ | ೩.೩೬ | ೨೦.೭೯ |
| ೧೭ | ರಾಜಸ್ಥಾನ | ೮೪.೯೬ | ೧೪.೪೯ | ೧೭.೦೫ |
| ೧೮ | ಸಿಕ್ಕಿಂ | ೦.೯೧ | ೦.೦೮ | ೯.೦೦ |
| ೧೯ | ತಮಿಳುನಾಡು | ೭೧.೭೫ | ೩೮.೯೭ | ೫೪.೩೨ |
| ೨೦ | ಉತ್ತರ ಪ್ರದೇಶ | ೧೧೭.೯ | ೫೧.೮೪ | ೪೩.೪೪ |
| ೨೧ | ಪಶ್ಚಿಮ ಬಂಗಾಳ | ೫೮.೨೧ | ೨೨.೪೪ | ೩೮.೫೫ |

ಮೂಲ : ಪ್ರಾವಿಜನಲ್ ಪಾಪುಲೇಷನ್ ಪೇಪರ್-೩ ಸೆನ್ಸಸ್ ಆಫ್ ಇಂಡಿಯಾ ೨೦೦೧, ಎಸ್.ನಿಂಗಯ್ಯ, ಡಾ.ಜೆ.ಸೋಮಶೇಖರ್, ಮಹಿಳಾ ಕೃಷಿ ಕಾರ್ಮಿಕರು ಒಂದು ವಿಶ್ಲೇಷಣೆ, ಯೋಜನಾ ಜನವರಿ ೨೦೧೧, ಪು.೪೭.[೫೪]

## ಹೈದರಾಬಾದ್ ಕರ್ನಾಟಕದಲ್ಲಿ ಮಹಿಳಾ ಕೃಷಿ ಕಾರ್ಮಿಕರ ಹಂಚಿಕೆ

ಹೈದರಾಬಾದ್ ಕರ್ನಾಟಕದ ಕೃಷಿ ಕಾರ್ಮಿಕರ ಹಂಚಿಕೆಯನ್ನು ನೋಡಿದರೆ ಶೇಕಡ ೬೦ ಕ್ಕಿಂತ ಅಧಿಕ ಮಹಿಳೆಯರು ಕೃಷಿಯಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ಕೋಷ್ಟಕ ೫.೧೧ನ್ನು ಗಮನಿಸಿದರೆ ಹೈದರಾಬಾದ್ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿನ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ತಿಳಿದುಬರುತ್ತದೆ. ಹೈದರಾಬಾದ್ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ಶೇಕಡ ೬೦.೯೦ರಷ್ಟು ಮಹಿಳೆಯರು, ಬೀದರ್ ಜಿಲ್ಲೆಯಲ್ಲಿ ಶೇಕಡ ೫೯.೩೩ರಷ್ಟು ಮಹಿಳೆಯರು, ಗುಲಬರ್ಗಾ ಜಿಲ್ಲೆಯಲ್ಲಿ ಶೇಕಡ ೬೫.೧೯ರಷ್ಟು ಮಹಿಳೆಯರು, ಕೊಪ್ಪಳ ಜಿಲ್ಲೆಯಲ್ಲಿ ಶೇಕಡ ೬೩.೯೬ರಷ್ಟು ಮಹಿಳೆಯರು ಮತ್ತು ರಾಯಚೂರು ಜಿಲ್ಲೆಯಲ್ಲಿ ಶೇಕಡ ೭೧.೩೧ರಷ್ಟು ಮಹಿಳೆಯರು ಕೃಷಿಯಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಎಲ್ಲಾ ಜಿಲ್ಲೆಗಳಲ್ಲೂ ಪುರುಷ ಕಾರ್ಮಿಕರಿಗಿಂತ ಅಧಿಕವಾಗಿರುವುದು ಸ್ಪಷ್ಟವಾಗುತ್ತಿದೆ.

ಹೈದರಾಬಾದ್ ಕರ್ನಾಟಕದಲ್ಲಿ ಪುರುಷ ಕೃಷಿ ಕಾರ್ಮಿಕರ ಪ್ರಮಾಣ ಅತ್ಯಂತ ಕಡಿಮೆ ಇರುವುದು ಕೋಷ್ಟಕ, ೫.೧೧ ರಿಂದ ತಿಳಿದು ಬರುತ್ತದೆ. ಕೋಷ್ಟಕದಲ್ಲಿ ತೋರಿಸಿದಂತೆ ಬಳ್ಳಾರಿ ಜಿಲ್ಲೆಯಲ್ಲಿ ಶೇಕಡ ೨೫.೩೦ರಷ್ಟು ಪುರುಷರು, ಬೀದರ್ ಜಿಲ್ಲೆಯಲ್ಲಿ ೨೫.೯೬ರಷ್ಟು ಪುರುಷರು, ಗುಲಬರ್ಗಾ ಜಿಲ್ಲೆಯಲ್ಲಿ ಶೇಕಡ ೨೩.೩೫ರಷ್ಟು ಪುರುಷರು, ಕೊಪ್ಪಳ ಜಿಲ್ಲೆಯಲ್ಲಿ ಶೇಕಡ ೨೬.೫೫ರಷ್ಟು ಪುರುಷರು ಮತ್ತು ರಾಯಚೂರು ಜಿಲ್ಲೆಯಲ್ಲಿ ಶೇಕಡ ೨೮.೦೭ರಷ್ಟು ಪುರುಷರು ಕೃಷಿಯಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ.

**ಕೋಷ್ಟಕ ೫.೧೧**

**ಹೈದರಾಬಾದ್ ಕರ್ನಾಟಕದಲ್ಲಿ ಮಹಿಳಾ ಕೃಷಿ ಕಾರ್ಮಿಕ ಹಂಚಿಕೆ**

| ಕ್ರ.ಸಂ. | ಜಿಲ್ಲೆಯ ಹೆಸರು | ಕಾರ್ಮಿಕರ ಸಂಖ್ಯೆ ಶೇಕಡವಾರು | |
|---|---|---|---|
| | | ಪುರುಷರು | ಮಹಿಳೆಯರು |
| ೧ | ಬಳ್ಳಾರಿ | ೨೫.೩೦ | ೬೦.೯೦ |
| ೨ | ಬೀದರ್ | ೨೫.೯೬ | ೫೯.೩೩ |
| ೩ | ಗುಲಬರ್ಗಾ | ೨೩.೩೫ | ೬೫.೧೯ |
| ೪ | ಕೊಪ್ಪಳ | ೨೬.೫೫ | ೬೩.೯೬ |

| | | | |
|---|---|---|---|
| ೫ | ರಾಯಚೂರು | ೨೮.೦೭ | ೭೧.೩೧ |
| ೬ | ಕರ್ನಾಟಕ | ೧೭.೨೦ | ೫೦.೪೦ |
| ೭ | ಭಾರತ | ೨೦.೮೫ | ೩೮.೮೭ |

ಮೂಲ : ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾ ಜನಗಣತಿ ೨೦೦೧, ಕರ್ನಾಟಕ ಮಾನವ ಅಭಿವೃದ್ಧಿ ವರ ೨೦೦೫, ಪು.೧೯೫.[೫೫]

ಬಡತನದ ಅನಿವಾರ್ಯತೆ, ಬೇರೆ ಉದ್ಯೋಗಗಳನ್ನು ಮಾಡಲು ಕೌಶಲ್ಯ ಇಲ್ಲದಿರುವುದು ಮತ್ತು ಚಲನಶೀಲತೆಯ ಮೇಲಿನ ನಿರ್ಬಂಧಗಳಿಂದಾಗಿ ಮತ್ತು ಜಾಗತೀಕರಣದಿಂದ ಕೈಗಾರಿಕೆಗಳಲ್ಲಿ ಯಂತ್ರೋಪಕರಣಗಳನ್ನು ಬಳಸುತ್ತಿರುವುದರಿಂದ ಹಾಗೂ ಗೃಹ ಕೈಗಾರಿಕೆಗಳು ನಾಶ ಹೊಂದುತ್ತಿರುವುದರಿಂದಾಗಿ ಅಧಿಕ ಸಂಖ್ಯೆಯ ಕಾರ್ಮಿಕರು ಕೃಷಿಯಲ್ಲಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಆದರೆ ಅವರು ಪಡೆಯುವ ಕೂಲಿ ಮಾತ್ರ ಕನಿಷ್ಠ ಮಟ್ಟದ್ದಾಗಿದೆ. ಪ್ರಸ್ತುತ ದಿನಗಳಲ್ಲಿ ಗಗನಕ್ಕೆ ಏರುತ್ತಿರುವ ಆಹಾರ ಧಾನ್ಯಗಳ ಬೆಲೆಗಳಿಗೆ ಹೋಲಿಸಿದರೆ ವಾಸ್ತವಿಕ ಕೂಲಿ ಅತ್ಯಂತ ಕಡಿಮೆಯಾಗುತ್ತದೆ. ಇಂತಹ ಕನಿಷ್ಠ ಕೂಲಿಗೆ ಈ ಕಾರ್ಮಿಕರು ದುಡಿಯುತ್ತಿದ್ದಾರೆ. ಅವರು ಪಡೆಯುವ ಕನಿಷ್ಠ ಕೂಲಿಯನ್ನು ಕೋಷ್ಟಕ ೫.೧೨ರಲ್ಲಿ ನೋಡಬಹುದು.

**ಕೋಷ್ಟಕ ೫.೧೨.**

**ಭಾರತದ ವಿವಿಧ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿನ ಕೃಷಿ ಕಾರ್ಮಿಕರ ಕನಿಷ್ಠ ವೇತನ : ೩೧.೧೨.೨೦೦೪ ರ ಅಂಕಿ ಸಂಖ್ಯೆ ಪ್ರಕಾರ (ಒಂದು ದಿನಕ್ಕೆ ರೂ.ಗಳಲ್ಲಿ)**

| ಕ್ರ.ಸಂ. | ರಾಜ್ಯಗಳು | ಕಾರ್ಮಿಕರು | ಕ್ರ.ಸಂ. | ರಾಜ್ಯಗಳು | ಕಾರ್ಮಿಕರು |
|---|---|---|---|---|---|
| ೧ | ಆಂಧ್ರಪ್ರದೇಶ | ೬೪.೦೦ | ೧೪ | ಕರ್ನಾಟಕ | ೬೬.೪೮ |
| ೨ | ಅಂಡಮಾನ್ | ೧೦೦.೦೦ | ೧೫ | ಕೇರಳ | ೭೨.೦೦ |
| ೩ | ನಿಕೋಬಾರ್ | ೧೦೭.೦೦ | ೧೬ | ಲಕ್ಷದ್ವೀಪ | ೮೨.೪೦ |
| ೪ | ಅರುಣಾಚಲ ಪ್ರದೇಶ | ೩೯.೮೭ | ೧೭ | ಮನಿಪುರ | ೬೮.೦೫ |
| ೫ | ಅಸ್ಸಾಂ | ೬೮.೭೫ | ೧೮ | ಮೇಘಾಲಯ | ೭೦.೦೦ |
| ೬ | ಬಿಹಾರ | ೫೦.೦೦ | ೧೯ | ಮಿಜಾರಾಂ | ೮೪.೦೦ |
| ೭ | ಸಿ.ಎಲ್.ಸಿ.ಕೇಂದ್ರ | ೯೪.೦೪ | ೨೦ | ಒರಿಸ್ಸಾ | ೫೨.೫೦ |
| ೮ | ಚಂಢೀಗಡ | ೧೦೮.೯೬ | ೨೧ | ಪಂಜಾಬ್ | ೯೧.೩೯ |
| ೯ | ದೆಹಲಿ | ೧೧೧.೩೦ | ೨೨ | ರಾಜಸ್ಥಾನ | ೭೩.೦೦ |
| ೧೦ | ಗೋವಾ | ೯೪.೦೦ | ೨೩ | ತಮಿಳುನಾಡು | ೫೪.೦೦ |
| ೧೧ | ಗುಜರಾತ್ | ೫೦.೦೦ | ೨೪ | ಉತ್ತರ ಪ್ರದೇಶ | ೫೮.೦೦ |
| ೧೨ | ಹರಿಯಾಣ | ೮೮.೨೯ | ೨೫ | ಉತ್ತರಾಂಚಲ | ೭೩.೦೦ |

ಮೂಲ : ಲೇಬರ್ ಬ್ಯೂರೋ ಗೌರ್ನಮೆಂಟ್ ಆಫ್ ಇಂಡಿಯಾ, ಸ್ಟೆಟಿಸ್ಟಿಕ್ಸ್ ಮಿನಿಮಮ್ ವೇಜ್ ಟೇಬಲ್-೪, ಪು.೧-೩೫, ೨-೧೨-೨೦೧೦

ಕೋಷ್ಟಕ ೫.೧೨ನ್ನು ಗಮನಿಸಿದರೆ ಕೃಷಿ ಕಾರ್ಮಿಕರು ಪಡೆಯವ ಕೂಲಿ ಅತ್ಯಂತ ಕನಿಷ್ಠವಾಗಿರುವುದು ಅಂಕಿ ಸಂಖ್ಯೆಗಳಿಂದ ತಿಳಿದುಬರುತ್ತದೆ. ದೆಹಲಿ ಮತ್ತು ಕೆಲವು ದ್ವೀಪ ರಾಜ್ಯಗಳಲ್ಲಿ ಅಧಿಕ ಕೂಲಿ ಅಂದರೆ ರೂ.೧೦೦ಕ್ಕಿಂತಲೂ ಅಧಿಕ ಇರುವುದು ಕಂಡುಬಂದರೆ, ಬಹುತೇಕ ರಾಜ್ಯಗಳಲ್ಲಿ ಕೃಷಿ ಕಾರ್ಮಿಕರ ಕೂಲಿ ೭೦ ರೂಪಾಯಿಗಿಂತ ಕಡಿಮೆ ಇರುವುದು ಕಂಡುಬರುತ್ತದೆ.

ಕೇಂದ್ರಾಡಳಿತ ಪ್ರದೇಶಗಳಾದ ಚಂಢೀಗಡ, ಅಂಡಮಾನ್, ನಿಕೋಬಾರ್ ದ್ವೀಪಗಳು ಮತ್ತು ದೆಹಲಿಗಳಲ್ಲಿ ಕೃಷಿ ಕಾರ್ಮಿಕರ ಕೂಲಿ ಕ್ರಮವಾಗಿ ರೂ.೧೦೮, ರೂ.೧೦೦ ಮತ್ತು ರೂ.೧೧೧.೩೦ ರೂಪಾಯಿಗಳು ಇರುತ್ತದೆ. ಕರ್ನಾಟಕದಲ್ಲಿ ಕೃಷಿ ಕಾರ್ಮಿಕರ ಕೂಲಿ ರೂ.೬೬.೪೮ ರಷ್ಟು ಇದೆ. ಅತ್ಯಂತ ಕಡಿಮೆ ಕೂಲಿ ಅರುಣಾಚಲ ಪ್ರದೇಶ ರಾಜ್ಯದಲ್ಲಿದ್ದು ಅಲ್ಲಿ ಒಂದು ದಿನದ ಕೂಲಿ ರೂ.೩೯.೮೭ ಆಗಿದೆ. ಹೀಗೆ ಕೃಷಿ ಕಾರ್ಮಿಕರು ಕನಿಷ್ಠಕ್ಕಿಂತ ಕನಿಷ್ಠ ಕೂಲಿಯನ್ನು ಪಡೆಯುತ್ತಿರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ. ಕೃಷಿ ಚಟುವಟಿಕೆಯ ವಿವಿಧ ಹಂತಗಳಲ್ಲಿ ಕೃಷಿ ಕಾರ್ಮಿಕರು ಪಡೆಯುವ ಕೂಲಿ ಸಹ ಅತ್ಯಂತ ಕಡಿಮೆ ಇರುತ್ತದೆ. ಅದನ್ನು ಪುರುಷ ಕೂಲಿಗೆ ಹೋಲಿಸಿದರೆ ಮಹಿಳೆಯರು ಪಡೆಯುವ ಕೂಲಿ ಅತ್ಯಂತ ಕಡಿಮೆ ಇರುತ್ತದೆ. ಅದನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ಕೋಷ್ಟಕ ೫.೧೩**

**ಕೃಷಿಯ ವಿವಿಧ ಚಟುವಟಿಕೆಗಳಲ್ಲಿ ಮಹಿಳೆ ಮತ್ತು ಪುರುಷ ಕಾರ್ಮಿಕರು ಪಡೆಯುವ ದಿನದ ಕೂಲಿ ೧೯೯೯-೨೦೦೦ ಅಂಕಿ ಸಂಖ್ಯಾ ಪ್ರಕಾರ(ರೂಪಾಯಿಗಳಲ್ಲಿ)**

| ಕ್ರ.ಸಂ. | ಕೆಲಸದ ವಿಧಗಳು | ಮಹಿಳಾ ಕೂಲಿ | ಪುರುಷ ಕೂಲಿ |
|---|---|---|---|
| | ಅ. ಕೃಷಿಯಲ್ಲಿ ಮಾನವ ಚಟುವಟಿಕೆಗಳು | ೨೭.೯೧ | ೩೯.೦೯ |
| ೧ | ಉಳುವವರು | ೩೨.೭೩ | ೪೧.೮೧ |
| ೨ | ಬಿತ್ತುವುದು | ೨೮.೩೭ | ೩೮.೭೮ |
| ೩ | ನಾಟಿ ಮಾಡುವುದು | ೨೯.೨೨ | ೩೯.೧೫ |
| ೪ | ಕಳೆ ಕೀಳುವುದು | ೨೫.೭೪ | ೩೪.೬೮ |
| ೫ | ಕಟಾವು ಮಾಡುವುದು | ೨೯.೨೪. | ೩೯.೨೧ |
| ೬ | ಇತರೆ ಕೃಷಿ ಚಟುವಟಿಕೆಗಳು | ೨೭.೬೫ | ೩೯.೨೭ |

| | | | |
|---|---|---|---|
| | ಆ. ಸಾಗುವಳಿಯೇತರ ಕೃಷಿಯಲ್ಲಿ ಮಾನವ ಚಟುವಟಿಕೆಗಳು | ೩೦.೬೮ | ೪೪.೮೪ |
| ೧ | ಅರಣ್ಯ | ೩೩.೩೪ | ೪೬.೪೫ |
| ೨ | ತೋಟಗಾರಿಕೆ | ೪೧.೩೦ | ೬೧.೫೯ |
| ೩ | ಪಶು ಸಂಗೋಪನೆ | ೨೧.೮೮ | ೨೮.೧೧ |
| ೪ | ಮೀನುಗಾರಿಕೆ | ೫೫.೭೩ | ೫೭.೭೪ |
| ೫ | ಇತರೆ ಕೃಷಿ ಚಟುವಟಿಕೆ | ೨೭.೩೬ | ೪೨.೬೪ |

ಮೂಲ : ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್ 55th ರೌಂಡ್(ಜುಲೈ ೧೯೯೯, ಜೂನ್ ೨೦೦೦). ವುಮೆನ್ ಆ್ಯಂಡ್ ಮೆನ್ ಇನ್ ಇಂಡಿಯಾ, ೨೦೦೧ ಸೆಂಟ್ರಲ್ ಸ್ಟೆಟಿಸ್ಟಿಕಲ್ ಅರ್ಗನೈಸೇಷನ್ ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ ಆಯಂಡ್ ಪ್ರೋಗ್ರಾಂ ಇಂಪ್ಲಿಮೆಟೇಷನ್ ಗೌರ್ನಮೆಂಟ್ ಆಫ್ ಇಂಡಿಯಾ, ಪು.೬೨, ಲೇಬರ್ ೪೮.[೫೭]

ಕೋಷ್ಟಕ ೫.೧೩ನ್ನು ನೋಡಿದರೆ ಮಹಿಳೆ ಕೃಷಿ ಚಟುವಟಿಕೆಗಳಾದ ಉಳುವುದು, ಬಿತ್ತುವುದು, ನಾಟಿ ಮಾಡುವುದು, ಕಳೆ ಕೀಳುವುದು ಕಟಾವು ಮಾಡುವುದು ಮತ್ತು ಇತರೇ ಕೃಷಿ ಚಟುವಟಿಕೆಗೆ ಪುರುಷರಿಗಿಂತ ಕಡಿಮೆ ಕೂಲಿ ಪಡೆಯುತ್ತಿರುವುದು ಸ್ಪಷ್ಟವಾಗುತ್ತದೆ. ಹಾಗೂ ಕೃಷಿಯ ಸಾಗುವಳಿಯೇತರ ಚಟುವಟಿಕೆಗಳಾದ ಅರಣ್ಯ, ತೋಟಗಾರಿಕೆ, ಪಶುಪಾಲನೆ, ಮೀನುಗಾರಿಕೆ ಮತ್ತು ಇತರೇ ಕೃಷಿ ಚಟುವಟಿಕೆಗಳಿಗೆ ಪುರುಷರಿಗಿಂತ ಕಡಿಮೆ ಕೂಲಿಯನ್ನು ಮಹಿಳೆಯರು ಪಡೆಯುತ್ತಿರುವುದು ಕಂಡುಬರುತ್ತದೆ.

ಹೀಗೆ ಮಹಿಳೆಯರು ಕೃಷಿಯಲ್ಲಿ ಕೃಷಿಯ ಪ್ರತಿಯೊಂದು ಹಂತದಲ್ಲಿ ವೇತನ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಅಲ್ಲದೆ ಅನೇಕ ರೀತಿಯ ಶೋಷಣೆ ದಬ್ಬಾಳಿಕೆಗೆ ಒಳಗಾಗುತ್ತಿದ್ದಾರೆ. ಮಹಿಳಾ ಕೃಷಿಕಾರ್ಮಿಕರು ಎದುರಿಸುವ ಸಮಸ್ಯೆಗಳನ್ನು ಕ್ಷೇತ್ರಕಾರ್ಯದ ಆಧಾರದ ಮೇಲೆ ಅಧ್ಯಯನ ೬ರಲ್ಲಿ ವಿಶ್ಲೇಷಿಸಲಾಗಿದೆ. ಹಾಗೂ ಮಹಿಳಾ ಕೃಷಿ ಕಾರ್ಮಿಕರ ಸಬಲೀಕರಣಕ್ಕೆ ಸರಕಾರ ಕೈಗೊಂಡ ಕ್ರಮಗಳನ್ನು ಆ ಭಾಗದಲ್ಲಿ ವಿಶ್ಲೇಷಿಸಲಾಗಿದೆ. ಹೀಗಾಗಿ ಮಹಿಳಾ ಕೃಷಿ ಕಾರ್ಮಿಕರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಮುಂದಿನ ಅಧ್ಯಾಯದಲ್ಲಿ ನೋಡಬಹುದು.

**೨. ಕಟ್ಟಡ ನಿರ್ಮಾಣ ಕಾರ್ಮಿಕರು**

ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರ ವ್ಯಾಪ್ತಿಗೆ ಕಟ್ಟಡ ನಿರ್ಮಾಣ ಕಾರ್ಮಿಕರು ಒಳಪಡುತ್ತಾರೆ. ನಿರ್ಮಾಣ ಉದ್ಯಮವು ಅಸಂಘಟಿತ ವಲಯದಲ್ಲಿ ಬರುವ ಮತ್ತೊಂದು ದೊಡ್ಡ ಉದ್ಯಮವಾಗಿದೆ. ೧೯೯೯-೨೦೦೦ NSS ಸಮೀಕ್ಷೆ ಪ್ರಕಾರ ಭಾರತದಲ್ಲಿ ೧.೭ ಕೋಟಿ ಕಾರ್ಮಿಕರು ನಿರ್ಮಾಣ ಉದ್ಯಮದಲ್ಲಿ ದುಡಿಯುತ್ತಿದ್ದಾರೆ. ಬಡವರು, ಅನಕ್ಷರಸ್ಥರು, ಮಹಿಳೆಯರು,

ಮಕ್ಕಳು ಇತರ ಉದ್ಯೋಗ ಮಾಡಲು ಅರ್ಹತೆ ಇಲ್ಲದ ಕಾರ್ಮಿಕರು ಮತ್ತು ಅಕುಶಲಿಗಳು ಅಧಿಕ ಸಂಖ್ಯೆಯಲ್ಲಿ ನಿರ್ಮಾಣ ಉದ್ಯಮವನ್ನು ಅಥವಾ ಕಟ್ಟಡ ನಿರ್ಮಾಣ ಕಾರ್ಯವನ್ನು ತಮ್ಮ ಉಪಜೀವನಕ್ಕಾಗಿ ನಂಬಿದ್ದಾರೆ.

ಕಟ್ಟಡವೊಂದನ್ನು ಸಜ್ಜುಗೊಳಿಸಲು ಬೇಕಾಗುವ ಎಲ್ಲ ಕಾರ್ಮಿಕರನ್ನು ಕಟ್ಟಡ ನಿರ್ಮಾಣ ಕಾರ್ಮಿಕರೆಂದು ಕರೆಯಲಾಗುತ್ತದೆ. ಹೀಗೆ ಕಟ್ಟಡವೊಂದರ ನಿರ್ಮಾಣಕ್ಕೆ ಬೇಕಾಗುವ ಪಾಯ ತೋಡುವವರು, ಗಾರೆ ಮಾಡುವವರು, ಎಲೆಕ್ಟ್ರಿಷಿಯನ್‌ಗಳು, ಬಡಗಿಗಳು ಮತ್ತು ಪೇಂಟರ್‌ಗಳು ಕಟ್ಟಡ ನಿರ್ಮಾಣ ಕಾರ್ಮಿಕರಾಗಿರುತ್ತಾರೆ.[೫೮] ೧೯೯೬ರ ಕಟ್ಟಡ ನಿರ್ಮಾಣ ಮತ್ತು ಇತರೇ ನಿರ್ಮಾಣ ಕಾಯ್ದೆ ಪ್ರಕಾರ "ಕಟ್ಟಡ ಮತ್ತು ಇತರೇ ನಿರ್ಮಾಣದ ಕೆಲಸ ಎಂದರೆ ಕಟ್ಟಡಗಳು, ರಸ್ತೆಗಳು, ಬೀದಿಗಳು, ರೈಲುಗಳು, ಟ್ರಾಮ್‌ವೆಜ್, ವಿಮಾನ ನಿಲ್ದಾಣಗಳು, ನೀರಾವರಿ, ಒಳಚರಂಡಿ ಅಪಾರ್ಟ್‌ಮೆಂಟ್ ಮತ್ತು ನೆವಿಗೇಷನ್ ಕಾಮಗಾರಿಗಳು, ಪ್ರವಾಹ ನಿಯಂತ್ರಣದ ಕಾಮಗಾರಿಗಳು, ವಿದ್ಯುತ್ ಉತ್ಪಾದನೆ, ಪ್ರಸರಣ ಮತ್ತು ವಿತರಣೆ, ನೀರಿನ ಕಾಮಗಾರಿಗಳು, ತೈಲ ಮತ್ತು ಅನಿಲಸ್ಥಾವರಗಳು, ವಿದ್ಯುತ್ ತಂತಿಗಳು, ವೈರ್‌ಲೆಸ್, ಆಕಾಶವಾಣಿ, ದೂರದರ್ಶನ, ದೂರವಾಣಿ ತಂತಿ ಮತ್ತು ಸಾಗರೋತ್ತರ ಸಂಪರ್ಕ, ಅಣೆಕಟ್ಟುಗಳು, ಕಾಲುವೆಗಳು ಜಲಾಶಯಗಳು, ವಾಟರ್ ಕೋರ್ಸಸ್, ಸೇತುವೆಗಳು, ವಯಾಡಕ್ಟ್ಸ್, ಅಕ್ವಾಡಕ್ಟ್ಸ್, ಕೊಳವೆ ಮಾರ್ಗಗಳು, ಟವರ್ಸ್, ಕೂಲಿಂಗ್ ಟವರ್ಸ್, ಟ್ರಾನ್ಸ್‌ಮಿಶನ್ ಟವರ್ಸ್ ಇವುಗಳಿಗೆ ಸಂಬಂಧಿಸಿದ ನಿರ್ಮಾಣದ ಕೆಲಸ, ದುರಸ್ತಿ, ನಿರ್ವಹಣೆ ಅಥವಾ ನೆಲಸಮಗೊಳಿಸುವ ಕಾಮಗಾರಿಗಳು ಇದರಲ್ಲಿ ಒಳಗೊಂಡಿರುತ್ತವೆ. ಆದರೆ ಕಾರ್ಖಾನೆಗಳ ಕಾಯ್ದೆ ೧೯೪೮ ಅಥವಾ ಗಡಿಗಳ ಕಾಯ್ದೆ ೧೯೮೨ ಇವುಗಳ ಪ್ರಾವಧಾನ ಅನ್ವಯಿಸುವ ಕಟ್ಟಡ ಮತ್ತು ಇತರೇ ನಿರ್ಮಾಣದ ಕೆಲಸಗಳು ಈ ಕಾಯ್ದೆಯ ಪರಿಮಿತಿಯಲ್ಲಿ ಬರುವುದಿಲ್ಲ."[೫೯]

ಹೀಗೆ ಗಣಿಕಾಯ್ದೆ ಮತ್ತು ಕಾರ್ಖಾನೆಗಳ ಕಾಯ್ದೆಗೆ ಒಳಪಡುವ ನಿರ್ಮಾಣ ಕಾರ್ಯಗಳನ್ನು ಹೊರತುಪಡಿಸಿ ಇತರ ಎಲ್ಲ ನಿರ್ಮಾಣ ಕಾರ್ಯ ಮತ್ತು ಕಟ್ಟಡ ಕಾರ್ಯಗಳನ್ನು ನಿರ್ಮಾಣ ಕಾರ್ಯಗಳೆಂದು ಮತ್ತು ಅಲ್ಲಿ ದುಡಿಯುವ ದುಡಿಮೆಗಾರರನ್ನು ನಿರ್ಮಾಣ ಕಾರ್ಮಿಕರೆಂದು ಕರೆಯಲಾಗುತ್ತದೆ.

### ಭಾರತದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ

೧೯೯೯-೨೦೦೦ ದ NSS ೫೫ನೇ ಸಮೀಕ್ಷೆಯ ಅಂದಾಜಿನಂತೆ ಭಾರತದಲ್ಲಿ ೧.೭ ಕೋಟಿ ಕಾರ್ಮಿಕರು ನಿರ್ಮಾಣ ಉದ್ಯಮದಲ್ಲಿ ದುಡಿಯುತ್ತಿದ್ದಾರೆ. ಕರ್ನಾಟಕದಲ್ಲಿ ೨೦ ಲಕ್ಷಕ್ಕೂ ಅಧಿಕ ಸಂಖ್ಯೆಯ ಕಾರ್ಮಿಕರು ಕಟ್ಟಡ ನಿರ್ಮಾಣ ಕೆಲಸದಲ್ಲಿ ದುಡಿಯುತ್ತಿದ್ದಾರೆ ಎಂಬ ಅಂಶ ಪ್ರಜಾವಾಣಿ ವಾರ್ತೆಯಿಂದ ತಿಳಿದುಬರುತ್ತದೆ. ಸಂಘಟಿತ ಮತ್ತು ಅಸಂಘಟಿತ ವಲಯಗಳೆರಡರಲ್ಲಿಯೂ ಈ

ಕಾರ್ಮಿಕರು ಅಧಿಕ ಪ್ರಮಾಣದಲ್ಲಿ ದುಡಿಯುತ್ತಿದ್ದಾರೆ. ಇವರಲ್ಲಿ ಮಹಿಳಾ ದುಡಿಮೆಗಾರರು ಮತ್ತು ಮಕ್ಕಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದಾರೆ.

**ಕೋಷ್ಟಕ ೫.೧೪**

**ಸಂಘಟಿತ ಮತ್ತು ಅಸಂಘಟಿತ ವಲಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ (ಶೇಕಡವಾರು)**

| ವಲಯವಾರು ನಿರ್ಮಾಣ ಕಾರ್ಮಿಕರು | ವರ್ಷ | | | |
|---|---|---|---|---|
| | ೧೯೮೩ | ೧೯೮೭-೮೮ | ೧೯೯೩-೯೪ | ೧೯೯೪-೨೦೦೦ |
| ಸಂಘಟಿತ ವಲಯ | ೧೭.೭ | ೧೦.೧ | ೧೦.೦ | ೬.೫ |
| ಅಸಂಘಟಿತ ವಲಯ | ೮೨.೩ | ೮೯.೯ | ೯೦.೦ | ೯೩.೫ |
| ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ | ೧೦೦.೦೦ |

ಮೂಲ : ಆರ್ಗನೈಸ್ಡ್ ಎಂಪ್ಲಾಯ್‌ಮೆಂಟ್ ಫಿಗರ್ಸ್ ಆರ್ ಅಬ್ ಬೇಸ್ಡ್ ಫ್ರಂ ಆ್ಯನುವಲ್ ರಿಪೋರ್ಟ್ (೧೯೮೩-೧೯೮೮) ಕ್ವಾಟರ್ಲಿ ಆನ್ ಎಂಪ್ಲಾಮೆಂಟ್ ರಿವ್ಯೂ(೧೯೯೪-೨೦೦೦) ಎಸ್. ಶಕ್ತವೇಲ್ ಪಿನಾಕೀ ಜೋದ್ದರ್ ಇ.ಪಿ.ಡಬ್ಲ್ಯೂ. ಮೇ.೨೭, ೨೦೦೬ ಆನ್‌ಅರ್ಗನೈಸ್ಡ್ ಸೇಕ್ಟರ್ ವರ್ಕ್ ಪೋರ್ಸ್ ಇನ್ ಇಂಡಿಯಾ ಟ್ರೆಂಡ್ ಆ್ಯಂಡ್ ಪು.೨೧೯[೬೦]

ಕೋಷ್ಟಕ ೫.೧೪ನ್ನು ಗಮನಿಸಿದರೆ ನಿರ್ಮಾಣ ಕಾರ್ಮಿಕರ ಪ್ರಮಾಣ ಸಂಘಟಿತ ವಲಯಕ್ಕಿಂತ ಅಸಂಘಟಿತ ವಲಯದಲ್ಲಿ ಅಧಿಕ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಅಲ್ಲದೆ ಸಂಘಟಿತ ವಲಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ ಕಡಿಮೆಯಾಗುತ್ತಿದ್ದರೆ ಅಸಂಘಟಿತ ವಲಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ ಅಧಿಕವಾಗುತ್ತಿರುವುದು ಕೋಷ್ಟಕ ೫.೧೪ರಿಂದ ತಿಳಿದುಬರುತ್ತದೆ. ಅಂಕಿ ಸಂಖ್ಯೆಗಳನ್ನು ಗಮನಿಸಿದರೆ, ಸಂಘಟಿತ ವಲಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ ೧೯೮೩ರಲ್ಲಿ ಶೇಕಡ ೧೭.೭ರಷ್ಟು, ೧೯೮೭-೮೮ರಲ್ಲಿ ಶೇಕಡ ೧೦.೧ರಷ್ಟು, ೧೯೯೩-೯೪ರಲ್ಲಿ ಶೇಕಡ ೧೦.೦೦ರಷ್ಟು ಮತ್ತು ೧೯೯೯-೨೦೦೦ರಲ್ಲಿ ಶೇಕಡ ೬.೫ರಷ್ಟಿರುವುದು ಕಂಡುಬರುತ್ತದೆ. ಅಸಂಘಟಿತ ವಲಯದಲ್ಲಿ ನಿರ್ಮಾಣ ಕಾರ್ಮಿಕರ ಪ್ರಮಾಣ ೧೯೮೩ರಲ್ಲಿ ಶೇಕಡ ೮೨.೩ರಷ್ಟು, ೧೯೮೭-೮೮ರಲ್ಲಿ ಶೇಡಕ ೮೯.೯ರಷ್ಟು ೧೯೯೩-೯೪ರಲ್ಲಿ ಶೇಕಡ ೯೦ರಷ್ಟು ಮತ್ತು ೧೯೯೯-೨೦೦೦ರಲ್ಲಿ ಶೇಕಡ ೯೩.೫ರಷ್ಟು ಇರುವುದು ಕಂಡುಬರುತ್ತದೆ. ಈ ಅಂಕಿ ಸಂಖ್ಯೆಯನ್ನು ನೋಡಿದರೆ ಅಸಂಘಟಿತ ವಲಯದಲ್ಲಿಯೇ ನಿರ್ಮಾಣ ಕಾರ್ಮಿಕರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತವೆ.

ಕೋಷ್ಟಕ ೫.೧೫

ನಿರ್ಮಾಣ ಕಾರ್ಯದಲ್ಲಿ ಮಹಿಳೆ ಮತ್ತು ಪುರುಷ ಕಾರ್ಮಿಕರ ಪ್ರಮಾಣ

| ಲಿಂಗವಾರು | ವರ್ಷಗಳು | | |
|---|---|---|---|
| | ೧೯೮೧ | ೧೯೯೧ | ೨೦೦೧ |
| ಮಹಿಳೆ | ೦.೮೭ | ೦.೬೭ | - |
| ಪುರುಷ | ೧.೮೮ | ೨.೩೧ | - |
| ಒಟ್ಟು | ೨.೭೫ | ೨.೯೭ | - |

ಮೂಲ: ಆಫೀಸ್ ಆಫ್ ರಿಜಿಸ್ಟರ್ಸ್ ಜನರಲ್, ಇಂಡಿಯಾ, ಸೆನ್ಸಸ್ ಆಫ್ ಇಂಡಿಯಾ, ೧೯೯೧, ಪ್ರೇಮರಿ ಸೆನ್ಸಸ್ ಅಬ್‌ಸ್ಟ್ರಕ್ಟ್, ವುಮನ್ ಆ್ಯಂಡ್ ಮೆನ್ ಇನ್ ಇಂಡಿಯಾ ೨೦೦೧, ಸೆಂಟ್ರಲ್ ಸ್ಟೆಟಿಸ್ಟಿಕ್ ಆರ್ಗನೈಷನಲ್ ಗೌರ್ನಮೆಂಟ್ ಆಫ್ ಇಂಡಿಯಾ, ೨೦೦೧, ಪು.೫೫, ಟೇಬಲ್ ೪೧.[೮೧]

ನಿರ್ಮಾಣ ಕಾರ್ಯದಲ್ಲಿ ದುಡಿಯುವ ದುಡಿಮೆಗಾರರಲ್ಲಿ ಮಹಿಳೆಯರಿಗಿಂತ ಪುರುಷ ಕಾರ್ಮಿಕರು ಅಧಿಕ ಸಂಖ್ಯೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಕೋಷ್ಟಕ ೫.೧೫ನ್ನು ಗಮನಿಸಿದರೆ ೧೯೮೧ರಲ್ಲಿ ಶೇಡಕ ೦.೮೭ರಷ್ಟು ಮಹಿಳೆಯರು ಮತ್ತು ಶೇಕಡ ೧.೮೮ರಷ್ಟು ಪುರುಷರು ನಿರ್ಮಾಣ ಕಾರ್ಯದಲ್ಲಿ ತೊಡಗಿರುವುದು ಕಂಡುಬರುತ್ತದೆ. ಪುರುಷ ಕಾರ್ಮಿಕರ ಪ್ರಮಾಣ ಮಹಿಳಾ ಕಾರ್ಮಿಕರ ಪ್ರಮಾಣಕ್ಕಿಂತ ಅಧಿಕವಾಗಿರುವುದು ಕಂಡುಬರುತ್ತದೆ. ೧೯೯೧ರಲ್ಲಿ ನಿರ್ಮಾಣ ಕೆಲಸದಲ್ಲಿ ಶೇಕಡ ೦.೬೭ರಷ್ಟು ಮಹಿಳಾ ಕಾರ್ಮಿಕರು ಮತ್ತು ಶೇಕಡ ೨.೩೧ರಷ್ಟು ಪುರುಷ ಕಾರ್ಮಿಕರು ತೊಡಗಿರುವುದು ತಿಳಿದುಬರುತ್ತದೆ. ಹೀಗಾಗಿ ನಿರ್ಮಾಣ ಉದ್ಯಮವು ಬಹುತೇಕವಾಗಿ ಪುರುಷಕೇಂದ್ರಿತ ಉದ್ಯಮವಾಗಿದೆ. ಇಂತಹ ಉದ್ಯಮದಲ್ಲಿ ಅಲ್ಪಸಂಖ್ಯಾತರಾದ ಮಹಿಳಾ ಕಾರ್ಮಿಕರು ಪುರುಷ ಕಾರ್ಮಿಕರಿಂದ ಮತ್ತು ಉದ್ಯಮ ದಾರರಿಂದ ನಾನಾ ವಿಧದ ಸಮಸ್ಯೆ ಮತ್ತು ತೊಂದರೆಗಳನ್ನು ಅನುಭವಿಸುತ್ತಿದ್ದಾರೆ(ನಿರ್ಮಾಣ ಕಾರ್ಯದಲ್ಲಿನ ಮಹಿಳಾ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಾಯ ೬ರಲ್ಲಿ ವಿಶ್ಲೇಷಿಸಲಾಗಿದೆ. ಹೆಚ್ಚಿನ ಮಾಹಿತಿಯನ್ನು ಅಲ್ಲಿ ನೋಡಬಹುದು).

## ನಿರ್ಮಾಣ ಕಾರ್ಯದಲ್ಲಿ ವೇತನ ತಾರತಮ್ಯ

ಅಸಂಘಟಿತ ಸ್ವರೂಪದ ಲಕ್ಷಣಗಳನ್ನು ಹೊಂದಿದ ನಿರ್ಮಾಣ ಉದ್ಯಮವು ಪುರುಷ ಮತ್ತು ಮಹಿಳಾ ಕಾರ್ಮಿಕರನ್ನು ಹೊಂದಿದೆ. ಅಲ್ಲದೆ ಈ ಕಾರ್ಮಿಕರನ್ನು ಕುಶಲಿಗಳು, ಅರೆ ಕುಶಲಿಗಳು ಮತ್ತು ಅಕುಶಲಿಗಳು ಎಂದು ವಿಂಗಡಿಸುವ ಮೂಲಕ ಅವರ ಕೌಶಲ್ಯಕ್ಕೆ ತಕ್ಕಂತೆ ಕೂಲಿಯನ್ನು ನೀಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಕುಶಲತೆ ಮತ್ತು ಅರೆ ಕುಶಲತೆ ಹೊಂದಿದ ಪುರುಷರು ಅಧಿಕ ಕೂಲಿಯನ್ನು ಹಾಗೂ ಅಕುಶಲರಾದ ಮಹಿಳಾ ಕಾರ್ಮಿಕರು ಕಡಿಮೆ ಕೂಲಿಯನ್ನು ಪಡೆಯುತ್ತಾರೆ. ಮಹಿಳಾ

ಕಾರ್ಮಿಕರು ಒಂದು ವೇಳೆ ಕುಶಲತೆ ಪಡೆದಿದ್ದರೂ ಅವರಿಗೆ ಕುಶಲತೆ ಇರುವ ಕೆಲಸಗಳನ್ನು ಮಾಡಲು ಬಿಡುವುದಿಲ್ಲ. ಅಲ್ಲದೇ ಅವರ ಕೌಶಲ್ಯ ಮತ್ತು ಅನುಭವಕ್ಕೆ ತಕ್ಕಂತೆ ವೇತನವನ್ನು ನೀಡುವುದಿಲ್ಲ. ಹೀಗಾಗಿ ನಿರ್ಮಾಣ ಕಾರ್ಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಪುರುಷರಿಗಿಂತ ಅತ್ಯಂತ ಕಡಿಮೆ ಕೂಲಿಯನ್ನು ಪಡೆಯುತ್ತಾರೆ.

ಕೋಷ್ಟಕ ೫.೧೬ನ್ನು ನೋಡಿದರೆ ಪ್ರದೇಶವಾರು ಮತ್ತು ಕೌಶಲ್ಯವಾರು ವೇತನ ತಾರತಮ್ಯವಿರುವುದು ಕಂಡುಬರುತ್ತದೆ. ಅಕುಶಲಿಗಳು ಎ ಗ್ರೇಡ್ ಪ್ರದೇಶದಲ್ಲಿ ದಿನಕ್ಕೆ ೧೮೦ ರೂಪಾಯಿ ಕೂಲಿ ಪಡೆದರೆ, ಬಿ ಗ್ರೇಡ್ ಪ್ರದೇಶದಲ್ಲಿ ೧೫೦ ರೂಪಾಯಿಗಳನ್ನು 'ಸಿ' ಗ್ರೇಡ್ ಪ್ರದೇಶದಲ್ಲಿ ೧೨೦ ರೂಪಾಯಿ ಕೂಲಿಯನ್ನು ಪಡೆಯುತ್ತಾರೆ. ಅರೆಕೌಶಲ್ಯ/ಕೌಶಲ್ಯರಹಿತ ಮೇಲ್ವಿಚಾರಕರು 'ಎ' ಗ್ರೇಡ್ ಪ್ರದೇಶದಲ್ಲಿ ೨೦೦ ರೂಪಾಯಿಗಳನ್ನು 'ಬಿ' ಗ್ರೇಡ್ ಪ್ರದೇಶದಲ್ಲಿ ೧೭೦ ರೂಪಾಯಿಗಳನ್ನು 'ಸಿ' ಗ್ರೇಡ್ ಪ್ರದೇಶದಲ್ಲಿ ೧೪೦ ರೂಪಾಯಿಗಳನ್ನು ಪಡೆಯುತ್ತಾರೆ. ಕೌಶಲ್ಯ ಹೊಂದಿದ ಕ್ಲರ್ಕ್ ಕಾರ್ಮಿಕರು 'ಎ' ಗ್ರೇಡ್ ಪ್ರದೇಶದಲ್ಲಿ ೨೨೦ ರೂಪಾಯಿಗಳನ್ನು, 'ಬಿ' ಗ್ರೇಡ್ ಪ್ರದೇಶದಲ್ಲಿ ೨೦೦ ರೂಪಾಯಿಗಳನ್ನು ಮತ್ತು 'ಸಿ' ಗ್ರೇಡ್ ಪ್ರದೇಶದಲ್ಲಿ ೧೭೦ ರೂಪಾಯಿಗಳನ್ನು ಪಡೆಯುತ್ತಾರೆ. ಅತೀ ಹೆಚ್ಚು ಕೌಶಲ್ಯ ಹೊಂದಿದ ಕಾರ್ಮಿಕರು 'ಎ' ಗ್ರೇಡ್ ಪ್ರದೇಶದಲ್ಲಿ ೨೪೦ ರೂಪಾಯಿಗಳನ್ನು, 'ಬಿ' ಗ್ರೇಡ್ ಪ್ರದೇಶದಲ್ಲಿ ೨೨೦ ರೂಪಾಯಿಗಳನ್ನು ಮತ್ತು 'ಸಿ' ಗ್ರೇಡ್ ಪ್ರದೇಶದಲ್ಲಿ ೨೦೦ ರೂಪಾಯಿಗಳನ್ನು ಪಡೆಯುತ್ತಾರೆ. ಇಲ್ಲಿ ಕೌಶಲ್ಯ ಹೊಂದಿದ ಕಾರ್ಮಿಕರ ಕೂಲಿ ಅಕೌಶಲ್ಯ ಹೊಂದಿದ ಕಾರ್ಮಿಕರ ಕೂಲಿಯ ಎರಡು ಪಟ್ಟು ಇರುವುದು ಕಂಡುಬರುತ್ತದೆ.

**ಕೋಷ್ಟಕ.೫.೧೬**

ನಿರ್ಮಾಣ ಕಾರ್ಯದಲ್ಲಿ ಕನಿಷ್ಠಕೂಲಿ ಪ್ರತಿ ದಿನಕ್ಕೆ ರೂಪಾಯಿಗಳಲ್ಲಿ

| ಉದ್ಯೋಗ | ಕೆಲಸಗಾರರ ವಿಧಗಳು | ಪ್ರದೇಶವಾರು ದಿನಗೂಲಿ | | |
|---|---|---|---|---|
| | | ಎ ಗ್ರೇಡ್ | ಬಿ ಗ್ರೇಡ್ | ಸಿ ಗ್ರೇಡ್ |
| ನಿರ್ಮಾಣಕಾರ್ಯ | ಅ. ಕುಶಲಿಗಳು | ೧೮೦ | ೧೫೦ | ೧೨೦ |
| | ಅರೆ ಕುಶಲಿಗಳು | | | |
| | ಅ. ಕುಶಲಗಳ ಮೇಲ್ವಿಚಾರಕರು | ೨೦೦ | ೧೭೦ | ೧೪೦ |
| | ಕೌಶಲ್ಯ ಹೊಂದಿದವರು | | | |
| | ಕ್ಲರ್ಕ್ | ೨೨೦ | ೨೦೦ | ೧೭೦ |
| | ಅತಿ ಹೆಚ್ಚಿನ ಕುಶಲತೆ | | | |
| | ಪಡೆದವರು | ೨೪೦ | ೨೨೦ | ೨೦೦ |

ಮೂಲ: ಆನ್ಯುವಲ್ ರಿಪೋರ್ಟ್ ೨೦೦೮-೦೯, ಪು.೬೧

ಪುರುಷರಿಗೆ ಹೋಲಿಸಿದರೆ ಕಡಿಮೆ ಸಂಖ್ಯೆಯಲ್ಲಿ ಇರುವ ಮಹಿಳಾ ಕಾರ್ಮಿಕರು ನಿರ್ಮಾಣ ಕಾರ್ಯದಲ್ಲಿ ಪುರುಷ ಕಾರ್ಮಿಕರಿಂದ ಮತ್ತು ಮೇಸ್ತ್ರಿಗಳಿಂದ ನಾನಾ ವಿಧದ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಕಡಿಮೆ ವೇತನ, ಅಸಮಾನ ಕೆಲಸದ ಅವಕಾಶ, ಅಸ್ಪೃಶ್ಯತೆ, ಲೈಂಗಿಕ ಕಿರುಕುಳ ಮತ್ತು ಶೋಷಣೆಯನ್ನು ಮಹಿಳಾ ಕಾರ್ಮಿಕರು ಅನುಭವಿಸುತ್ತಾರೆ. ಯು.ಎಸ್. ಡಿಪಾರ್ಟ್‌ಮೆಂಟ್ ಆಫ್ ಲೇಬರ್ ಅಕ್ಯುಪೇಷನಲ್ ಸೇಫ್ಟಿ ಆ್ಯಂಡ್ ಹೆಲ್ತ್ ಅಡ್‌ಮಿನಿಸ್ಟ್ರೇಷನ್(OSHA), ಜೂನ್ ೧೯೯೯ರಲ್ಲಿ ಸಲ್ಲಿಸಿದ "Women in the Constuction Work Place Providing Eguitable Safety and hlealth protection" ಎಂಬ ವರದಿಯಲ್ಲಿ ಶೇಕಡ ೮೮ರಷ್ಟು ಮಹಿಳಾ ಕಾರ್ಮಿಕರು ಪುರುಷ ಕಾರ್ಮಿಕರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾರೆ ಎಂಬ ಅಂಶವನ್ನು ವ್ಯಕ್ತಪಡಿಸುತ್ತದೆ.[೬೩] ಇದರಿಂದ ನಿರ್ಮಾಣ ಉದ್ಯಮದಲ್ಲಿ ಮಹಿಳಾ ಕಾರ್ಮಿಕರಿಗೆ ರಕ್ಷಣೆ ಇಲ್ಲವೆಂಬುದು ತಿಳಿದುಬರುತ್ತದೆ.

ಈ ಸಮಸ್ಯೆಗಳಲ್ಲದೆ ಇನ್ನೂ ಅನೇಕ ವಿಧದ ಸಮಸ್ಯೆಗಳನ್ನು ಮಹಿಳಾ ಕಾರ್ಮಿಕರು ಎದುರಿಸುತ್ತಿದ್ದಾರೆ. ಅವುಗಳನ್ನು ವಿವರವಾಗಿ ಕ್ಷೇತ್ರಕಾರ್ಯ ಆಧರಿಸಿದ ಮುಂದಿನ ಅಧ್ಯಾಯದಲ್ಲಿ ನೋಡಬಹುದು. ಮೇಲಿನ ಎಲ್ಲ ಅಂಶಗಳು ಭಾರತದಲ್ಲಿನ ನಿರ್ಮಾಣ ಕಾರ್ಮಿಕರ ವಸ್ತುಸ್ಥಿತಿಯಾಗಿದೆ.

## ೫.೮. ಅಸಂಘಟಿತ ವಲಯದಲ್ಲಿ ಮಹಿಳಾ ದುಡಿಮೆಗಾರರ ಸ್ಥಿತಿಗತಿ ಅಥವಾ ಸಮಸ್ಯೆಗಳು

ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರು ಮಹಿಳೆಯರಾಗಿರಲಿ ಅಥವಾ ಪುರುಷರಾಗಿರಲಿ ಅವರು ಅನೇಕ ವ್ಯಕ್ತ ಮತ್ತು ಅವ್ಯಕ್ತ ಸ್ವರೂಪದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ವೇತನ ತಾರತಮ್ಯ, ಕೆಲಸದಲ್ಲಿ ಅಸಮಾನತೆ, ಉದ್ಯೋಗದ ಅಭದ್ರತೆ, ಸಾಮಾಜಿಕ ಭದ್ರತಾ ಸೌಲಭ್ಯಗಳ ಕೊರತೆ, ಬಡತನ ಮತ್ತು ಸರಕಾರದಿಂದ ಅಲಕ್ಷ್ಯಇತ್ಯಾದಿ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬರುತ್ತಿದೆ. ಅಸಂಘಟಿತ ವಲಯದಲ್ಲಿನ ಮಹಿಳಾ ದುಡಿಮೆಗಾರರು ಎದುರಿಸುವ ಸಮಸ್ಯೆಗಳನ್ನು ಒಂದೊಂದಾಗಿ ಈ ಕೆಳಗಿನಂತೆ ನೋಡಬಹುದು.

### ೧. ಕೆಲಸದ ಸ್ಥಳದಲ್ಲಿ ಲಿಂಗ ತಾರತಮ್ಯ

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ಕೆಲಸದ ಸ್ಥಳದಲ್ಲಿ ಲಿಂಗ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಅಸಂಘಟಿತ ವಲಯದಲ್ಲಿ ಬರುವ ಎಲ್ಲ ವೃತ್ತಿಗಳಲ್ಲಿಯೂ ಪುರುಷರು ಮಾಡುವ ಕೆಲಸ ಶ್ರೇಷ್ಠವಾದುದು, ಉತ್ತಮವಾದುದು ಎಂದು ಹಾಗೂ ಮಹಿಳೆಯರು ಮಾಡುವ ಕೆಲಸ ಕನಿಷ್ಠ ಮತ್ತು ಅಧರ್ಮವಾದುದೆಂದು ತಾರತಮ್ಯವನ್ನು ಮಾಡಲಾಗುತ್ತಿದೆ. ಉದಾಹರಣೆಗೆ ಕೃಷಿ ಕೆಲಸದಲ್ಲಿ ಕಬ್ಬಿನ ಕಳೆ ಮತ್ತು ಬಾಳೆ ಕಳೆ ಕೀಳುವ ಕೆಲಸಗಳನ್ನು ತೆಗೆದುಕೊಂಡರೆ ಪುರುಷರು 'ಸಲಿಕೆ'ಯಿಂದ ಕಳೆ ತೆಗೆದರೆ ಮಹಿಳೆಯರು 'ಮನಾರಿ' ಅಥವಾ 'ಕುರ್ಚಿಗೆ'ಯಿಂದ ಕಳೆ ತೆಗೆಯುತ್ತಾರೆ.

ಪುರುಷರು ಒಳಗಿನ ೬ ಗಂಟೆಯಿಂದ ಮಧ್ಯಾಹ್ನದ ೧೨ ಗಂಟೆವರೆಗೆ ಕೆಲಸ ಮಾಡಿ ಮನೆಗೆ ಮರಳುತ್ತಾರೆ. ಆದರೆ ಮಹಿಳೆಯರು ಒಳಗಿನ ೮.೩೦ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ ಕಳೆ ಕೀಳುತ್ತಾರೆ. ಇಲ್ಲಿ ಪುರುಷ ಮತ್ತು ಮಹಿಳೆ ಮಾಡುವ ಕೆಲಸ ಒಂದೇ 'ಕಳೆ ಕೀಳುವುದು' ಆಗಿದ್ದರೂ ಪುರುಷರು ಮಾಡುವ ಕೆಲಸ ಉತ್ತಮದ್ದು ಮತ್ತು ಮಹಿಳೆಯರು ಮಾಡುವ ಕೆಲಸ 'ಸಾಧಾರಣದ್ದು ಎಂದು ಕೆಲಸದಲ್ಲಿ ತಾರತಮ್ಯವನ್ನು ಮಾಡಲಾಗುತ್ತದೆ. ಈ ರೀತಿಯ ತಾರತಮ್ಯ ಅಸಂಘಟಿತ ವಲಯದ ಎಲ್ಲ ವೃತ್ತಿಗಳಲ್ಲಿಯೂ ಕಂಡುಬರುತ್ತದೆ.

**೨. ವೇತನ ತಾರತಮ್ಯ ಅಥವಾ ಕೂಲಿ ತಾರತಮ್ಯ**

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ವೇತನ ಅಥವಾ ಕೂಲಿ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಅಸಂಘಟಿತ ವಲಯದ ವಿವಿಧ ವೃತ್ತಿಗಳಾದ ಕೃಷಿ, ನಿರ್ಮಾಣ ಕಾರ್ಯ, ಬೀಡಿ ಉದ್ಯಮ, ಅಗರಬತ್ತಿ ಉದ್ಯಮ, ತೋಟಗಾರಿಕೆ ಮತ್ತು ಚಿಲ್ಲರೆ ವ್ಯಾಪಾರಿ ಇತ್ಯಾದಿ ವೃತ್ತಿಗಳಲ್ಲಿ ದುಡಿಯುವ ಕಾರ್ಮಿಕರು ಆ ವೃತ್ತಿಗಳಲ್ಲಿ ದುಡಿಯುವ ಪುರುಷ ಕಾರ್ಮಿಕರಿಗಿಂತ ಕಡಿಮೆ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಕೃಷಿ ಕೆಲಸವನ್ನು ಗಮನಿಸಿದರೆ ಪುರುಷರಿಗೆ ೯೦ ರಿಂದ ೧೨೦ ರೂಪಾಯಿವರೆಗೆ ಒಂದು ದಿನದ ಕೂಲಿ ಸಿಗುತ್ತಿದ್ದರೆ ಮಹಿಳೆಯರಿಗೆ ೩೫ರಿಂದ ೫೦ ರೂಪಾಯಿಗಳವರೆಗೆ ಒಂದು ದಿನದ ಕೂಲಿ ದೊರೆಯುತ್ತಿದೆ. ನಿರ್ಮಾಣ ಕಾರ್ಯದಲ್ಲಿ ಪುರುಷರಿಗೆ ಒಂದು ದಿನಕ್ಕೆ ೧೦೦ರಿಂದ ೧೫೦ ರೂಪಾಯಿಗಳಿದ್ದರೆ ಮಹಿಳೆಯರಿಗೆ ೫೦ರಿಂದ ೭೫ ರೂಪಾಯಿಗಳವರೆಗೆ ಕೂಲಿಯನ್ನು ನೀಡಲಾಗುತ್ತಿದೆ. ಹೀಗೆ ಅಸಂಘಟಿತ ವಲಯದ ಎಲ್ಲ ವೃತ್ತಿಗಳಲ್ಲಿ ಈ ವೇತನ ತಾರತಮ್ಯ ಕಂಡುಬರುತ್ತಿದ್ದು, ಸಾಮಾಜಿಕ ವ್ಯವಸ್ಥೆ ಮತ್ತು ಪುರುಷಶಾಹಿ ದೋರಣೆ ಇದಕ್ಕೆ ಪರೋಕ್ಷವಾಗಿ ಕಾರಣವಾಗಿವೆ.

**೩. ಅಸಂಘಟನೆ**

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಯಾವುದೇ ಕಾರ್ಮಿಕ ಸಂಘಟನೆಗೆ ಸೇರದೆ ಅಸಂಘಟಿತರಾಗಿ ಉಳಿದಿದ್ದಾರೆ. ಕಾರ್ಮಿಕ ಸಂಘಟನೆಗಳು ಮಹಿಳಾ ಕಾರ್ಮಿಕರನ್ನು ಮುಷ್ಕರ ಮತ್ತು ಹೋರಾಟದ ಸಂದರ್ಭದಲ್ಲಿ ಬಳಸಿಕೊಳ್ಳುತ್ತವೆ. ಆದರೂ ಅವರನ್ನು ಸದಸ್ಯರನ್ನಾಗಿ ತಮ್ಮ ಕಾರ್ಮಿಕ ಸಂಘಟನೆಗೆ ಅಧಿಕೃತವಾಗಿ ಸೇರಿಸಿಕೊಳ್ಳುತ್ತಿಲ್ಲ. ಕುಟುಂಬದಲ್ಲಿನ ನಿರ್ಬಂಧ, ಗಂಡ ಮತ್ತು ಅತ್ತೆ-ಮಾವನವರ ಅಸಹಕಾರ ಮತ್ತು ಸಾಮಾಜಿಕ ನಿರ್ಬಂಧಗಳು ಮಹಿಳೆಯ ಚಲನೆಯನ್ನು ನಿರ್ಬಂಧಿಸಿವೆ. ಅಲ್ಲದೆ ಅವಳನ್ನು ಕಾರ್ಮಿಕ ಸಂಘದ ಸದಸ್ಯತ್ವ ಪಡೆಯುವುದನ್ನು ವಿರೋಧಿಸುತ್ತಿವೆ. ಹೀಗಾಗಿ ಮಹಿಳೆ ಅಸಂಘಟಿತಳಾಗಿ ವೈಯಕ್ತಿಕ ನೆಲೆಯಲ್ಲಿ ಸಮಸ್ಯೆಗಳನ್ನು ವಿರೋಧಿಸುತ್ತಾ ದುಡಿಯುತ್ತಿದ್ದಾಳೆ.

### ೪. ಕಡಿಮೆ ವೇತನ

ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರು ಕಡಿಮೆ ವೇತನ ಪಡೆಯುತ್ತಿದ್ದಾರೆ. ಅಸಂಘಟಿತರಾಗಿರುವುದರಿಂದ ಇವರ ಚೌಕಾಶಿ ಸಾಮರ್ಥ್ಯ ಕಡಿಮೆ ಇರುತ್ತದೆ. ಇದರ ಪರಿಣಾಮವಾಗಿ ಇವರು ಕಡಿಮೆ ಕೂಲಿಯನ್ನು ಪಡೆಯುತ್ತಾರೆ. ಅಲ್ಲದೆ ಇವರು ತಮ್ಮ ಶ್ರಮವನ್ನು ಕಡಿಮೆ ಬೆಲೆಗೆ ಕೆಲಸದ ನಿಯಮ ನಿರ್ಬಂಧಗಳನ್ನು ವಿಧಿಸದೆ ಮಾರುವುದರಿಂದ ಅತ್ಯಂತ ಕಡಿಮೆ ಕೂಲಿಯನ್ನು ಪಡೆಯುತ್ತಾರೆ. ವೇತನ ಹೆಚ್ಚಿಸಲು ಉದ್ಯಮದಾರರ ಮುಂದೆ ತಮ್ಮ ಬೇಡಿಕೆಯನ್ನು ಸಲ್ಲಿಸಿದರೆ ಉದ್ಯಮದಾರರು ಇವರನ್ನು ಬಿಟ್ಟು ಬೇರೆ ಕೆಲಸಗಾರರನ್ನು ನೇಮಿಸಿಕೊಂಡು ಕೆಲಸ ಮಾಡಿಸುವ ಸಾಧ್ಯತೆ ಅಧಿಕವಿರುತ್ತದೆ. ಹೀಗಾಗಿ ಉದ್ಯಮದಾರರು ನಿಗದಿಪಡಿಸಿದ ಕೂಲಿಯನ್ನು ಒಪ್ಪಿಕೊಂಡು ದುಡಿಯುತ್ತಾರೆ. ಹಾಗೂ ಕಡಿಮೆ ಕೂಲಿಯನ್ನು ಪಡೆಯುತ್ತಾರೆ.

### ೫. ಕೆಲಸದ ಅಭದ್ರತೆ

ಅಸಂಘಟಿತ ವಲಯದಲ್ಲಿ ಬರುವ ಬಹುತೇಕ ವೃತ್ತಿಗಳು ದಿನಗೂಲಿ ಆಧಾರಿತ, ಗುತ್ತಿಗೆ ಆಧಾರಿತ, ಸಾಂದರ್ಭಿಕ ಋತುಮಾನ ಸಂಬಂಧಿ ಮತ್ತು ಗೃಹ ಆಧಾರಿತ ಕೆಲಸಗಳಾಗಿರುತ್ತವೆ. ಹೀಗಾಗಿ ಈ ಕೆಲಸದಲ್ಲಿ ನಿರತರಾದ ಕಾರ್ಮಿಕರು ಅದರಲ್ಲೂ ಮಹಿಳಾ ಕಾರ್ಮಿಕರು ವರ್ಷಪೂರ್ತಿ ಕೆಲಸ ಪಡೆಯುವುದಿಲ್ಲ. ಅಲ್ಲದೆ ಉದ್ಯಮದಾರರು ಉತ್ಪಾದನೆಯಲ್ಲಿ ಯಂತ್ರೋಪಕರಣಗಳನ್ನು ಅಳವಡಿಸಿ ಕೊಂಡಾಗ ಹೆಚ್ಚುವರಿ ಶ್ರಮಿಕರನ್ನು ಕೆಲಸದಿಂದ ತೆಗೆದು ಹಾಕುತ್ತಾರೆ. ಹಾಗೂ ಅಧಿಕ ವೇತನಕ್ಕೆ ಬೇಡಿಕೆ ಸಲ್ಲಿಸಿದ ಕಾರ್ಮಿಕರ ಬದಲಿಗೆ ಬೇರೆ ಕಾರ್ಮಿಕರನ್ನು ನೇಮಿಸಿಕೊಳ್ಳುತ್ತಾರೆ. ಈ ಎಲ್ಲ ಕಾರಣಗಳಿಂದಾಗಿ ಮಹಿಳಾ ಕಾರ್ಮಿಕರು ಕೆಲಸದ ಅಭದ್ರತೆಯನ್ನು ಅನುಭವಿಸುತ್ತಿದ್ದಾರೆ. ಅಲ್ಲದೆ ಉದ್ಯಮದಾರರು ಮತ್ತು ಕೆಲಸದ ಸ್ಥಳದಲ್ಲಿ ಪುರುಷರು ನೀಡುವ ಶೋಷಣೆಯನ್ನು ಸಹಿಸಿಕೊಂಡು ಬಡತನದ ಅನಿವಾರ್ಯತೆಯಿಂದ ದುಡಿಮೆಯಲ್ಲಿ ತೊಡಗಿದ್ದಾರೆ.

### ೬. ಎರಡು ವಿಧದ ದುಡಿಮೆಯ ಭಾರ

ಅಸಂಘಟಿತ ವಲಯದಲ್ಲಿ ದುಡಿಯುವ ಈ ಮಹಿಳಾ ದುಡಿಮೆಗಾರರು ಎರಡು ವಿಧದ ದುಡಿಮೆಯ ಭಾರವನ್ನು ಹೊರುತ್ತಿದ್ದಾರೆ. ಅಂದರೆ ಉತ್ಪಾದನಾ ದುಡಿಮೆಯ ಜೊತೆಗೆ ಗೃಹವಾರ್ತೆ ದುಡಿಮೆಗಳಾದ ಕಸ, ಮುಸುರೆ, ಮನೆ ಸ್ವಚ್ಛತೆ, ಅಡಿಗೆ ತಯಾರಿಕೆ, ಬಟ್ಟೆ ತೊಳೆಯುವುದು, ಮಕ್ಕಳ ಲಾಲನೆ-ಪಾಲನೆ, ವಯೋವೃದ್ಧರ ಆದ್ಯತೆ ಮತ್ತು ಅತಿಥಿ ಅಭ್ಯಾಗತರನ್ನು ನೋಡಿಕೊಳ್ಳುವುದು ಇತ್ಯಾದಿ ಕೆಲಸಗಳನ್ನು ಮಾಡುತ್ತಿದ್ದಾಳೆ. ಹೀಗೆ ಮಹಿಳೆ ದಿನದ ೨೪ ಗಂಟೆಗಳಲ್ಲಿ ೧೮ ಗಂಟೆಗಳವರೆಗೆ ಅವಿರತವಾಗಿ ದುಡಿಯುತ್ತಿದ್ದಾಳೆ. ಇದರಲ್ಲಿ ಗಂಡನ ಅಥವಾ ಕುಟುಂಬದ ಸದಸ್ಯರ ಸಹಕಾರ ಕಡಿಮೆ ಹೀಗಾಗಿ ಗೃಹವಾರ್ತೆ ಮಹಿಳೆಯ ಮೇಲೆ ಬೀಳುತ್ತದೆ.

## ೭. ಅನಕ್ಷರತೆ ಮತ್ತು ಅಜ್ಞಾನ

ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರಲ್ಲಿ ಶೇಕಡ ೭೦ರಷ್ಟು ಮಹಿಳಾ ದುಡಿಮೆಗಾರರು ಅನಕ್ಷರಸ್ಥರು ಮತ್ತು ಅಜ್ಞಾನಿಗಳು ಆಗಿದ್ದಾರೆ. ಶಿಕ್ಷಣದ ಕೊರತೆಯಿಂದಾಗಿ ಇವರು ಯಾವುದೇ ವಿಧದ ತಾಂತ್ರಿಕ ಕೌಶಲ್ಯ, ವೃತ್ತಿ ಕೌಶಲ್ಯಗಳನ್ನು ಪಡೆದಿರುವುದಿಲ್ಲ. ಇದರಿಂದಾಗಿ ಅವರು ಬೇರೆ ಉದ್ಯೋಗದಲ್ಲಿ ತೊಡಗದೆ ಸುಲಭವಾಗಿ ಸಿಗುವ ಹಾಗೂ ಯಾವುದೇ ಕೌಶಲ್ಯ ಬೇಕಿಲ್ಲದ ಅಸಂಘಟಿತ ವಲಯದ ವೃತ್ತಿಗಳಲ್ಲಿ ತೊಡಗಿದ್ದಾರೆ. ಪರಿಣಾಮವಾಗಿ ಇವರು ಪೂರೈಕೆ ಶ್ರಮಮಾರುಕಟ್ಟೆಯಲ್ಲಿ ಅಧಿಕವಾಗಿ ಕಡಿಮೆ ಕೂಲಿಗೆ ದುಡಿಯುತ್ತಿದ್ದಾರೆ. ಅಲ್ಲದೆ ಮಾಲೀಕರಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ.

## ೮. ಆರೋಗ್ಯ ಸಮಸ್ಯೆ

ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಅನಾರೋಗ್ಯಕರ ಪರಿಸರದಲ್ಲಿ ಕೆಲಸ ಮಾಡುತ್ತಿರುತ್ತಾರೆ. ಇದರಿಂದಾಗಿ ಅವರು ಅನೇಕ ವಿಧದ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಉದಾಹರಣೆಗೆ ಕೃಷಿ ಕಾರ್ಮಿಕರು ಚರ್ಮರೋಗ, ಕ್ಯಾನ್ಸರ್, ಮೂಲ ವ್ಯಾಧಿ, ಸೊಂಟ ನೋವುಗಳಿಂದ ನರಳಿದರೆ, ಕಟ್ಟಡ ಕಾರ್ಮಿಕರು ಕ್ಯಾನ್ಸರ್, ಚರ್ಮರೋಗ, ಸೊಂಟನೋವು, ಆಸ್ತಮ, ಟಿ.ಬಿ. ಇತ್ಯಾದಿ ರೋಗಗಳಿಂದ ಮತ್ತು ಬೀಡಿ ಕಾರ್ಮಿಕರು ಮತ್ತು ಸಿಗರ್ ಕಾರ್ಮಿಕರು ಕ್ಯಾನ್ಸರ್, ಆಸ್ತಮ, ಟಿ.ಬಿ ಅಥವಾ ಕ್ಷಯರೋಗ ಇತ್ಯಾದಿಗಳಿಂದ ನರಳುತ್ತಾರೆ.

## ೯. ಬಡತನ/ಬಡತನದ ಮಹಿಳೀಕರಣ

ಅಸಂಘಟಿತ ವಲಯದಲ್ಲಿ ದುಡಿಯುವ ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಬಡವರಾಗಿದ್ದಾರೆ. ಬಡಕುಟುಂಬಗಳಿಂದ ಬಂದ ಮಹಿಳೆಯರು ಅನಿವಾರ್ಯತೆಯಿಂದಾಗಿ ಕುಟುಂಬದ ಹೊರಗಿನ ದುಡಿಮೆಯಲ್ಲಿ ದುಡಿಯುತ್ತಾರೆ. ಆದರೆ ಅವರು ಪಡೆಯುವ ಕೂಲಿ ಕಡಿಮೆ ಇರುತ್ತದೆ. ಅಲ್ಲದೆ ಬಡತನದ ಭಾರ ಅವಳ ಮೇಲೆ ಬೀಳುವುದರಿಂದ ಎಂತಹ ತೊಂದರೆಗೆ ಒಳಗಾದರು ಕೆಲಸವನ್ನು ಬಿಡದೆ ದುಡಿಯುವಂತಹ ಸ್ಥಿತಿ ಅವರದಾಗಿರುತ್ತದೆ. ಇಂತಹ ಅನಿವಾರ್ಯ ಸ್ಥಿತಿಯಲ್ಲಿ ಅಸಂಘಟಿತ ಮಹಿಳಾ ದುಡಿಮೆಗಾರರು ದುಡಿಯುತ್ತಿದ್ದಾರೆ.

ಅಸಂಘಟಿತ ವಲಯದ ವೃತ್ತಿಗಳಲ್ಲಿ ದುಡಿಯುವ ಕಾರ್ಮಿಕರು ಬಡವರಾಗಿದ್ದು, ಬಡತನದ ರೇಖೆಯ ಕೆಳಗೆ ಜೀವಿಸುವವರಾಗಿರುತ್ತಾರೆ. ಇಂತಹ ಕುಟುಂಬ ವ್ಯವಸ್ಥೆಯಲ್ಲಿ ಬದುಕು ಸಾಗಿಸುತ್ತಿರುವ ಮಹಿಳೆಯರು ಪುರುಷರಿಗಿಂತ ಮಹಿಳೆಯರೇ ಹೆಚ್ಚು ತೊಂದರೆಯನ್ನು ಅನುಭವಿಸುತ್ತಿರುತ್ತಾಳೆ. ಏಕೆಂದರೆ

ಬಡತನದ ಭಾರ ಅವಳ ಮೇಲೆ ಹೆಚ್ಚು ಕೇಂದ್ರೀಕೃತವಾಗುತ್ತದೆ. ಇದರಿಂದಾಗಿ ಅವಳು ಬಡತನದ ವಿಷ ವರ್ತುಲದಲ್ಲಿ ಸಿಲುಕುತ್ತಾಳೆ.

ಬಡತನದ ಕಾರಣದಿಂದಾಗಿ ಅವಳು ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಹೊಂದಿರುತ್ತಾಳೆ. ಇದು ಅವಳಿಗೆ ಕಡಿಮೆ ಉದ್ಯೋಗವಕಾಶ ಮತ್ತು ಕಡಿಮೆ ಉತ್ಪಾದಕತೆಯನ್ನು ಪಡೆಯುವಂತೆ ಮಾಡುತ್ತದೆ. ಅವಳ ಕಡಿಮೆ ಉತ್ಪಾದಕತೆಯು ಅವಳನ್ನು ಕಡಿಮೆ ಆದಾಯ ಪಡೆಯುವಂತೆ ಮಾಡುತ್ತದೆ. ಕಡಿಮೆ ಆದಾಯವನ್ನು ಪಡೆಯುವ ಮೂಲಕ ಮತ್ತೆ ಬಡತನದಲ್ಲಿ ಸಿಲುಕುತ್ತಾಳೆ. ಹೀಗೆ ಬಡತನದ ವಿಷ ವರ್ತುಲದಲ್ಲಿ ಈ ಬಡ ಮಹಿಳೆ ಸಿಲುಕುತ್ತಾಳೆ. ಇದನ್ನು ಈ ಕೆಳಗಿನ ರೇಖಾಚಿತ್ರದಲ್ಲಿ ಕಾಣಬಹುದು.




ಮೂಲ : ಅರುಂಧತಿ ಚಟ್ಟೋಪಾಧ್ಯಾಯ, ವುಮೆನ್ ಆಯ್ಯಂಡ್ ಎನ್‌ಟರ್‌ಪ್ರೆಸನರ್ ಶಿಫ್, ಯೋಜನಾ ಜನವರಿ, ೨೦೦೫, ಪು.೨೮

**೧೦. ಪುರುಷರ ಶೋಷಣೆ**

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ಪುರುಷ ದುಡಿಮೆಗಾರರಿಂದ, ಉದ್ಯಮದಾರರಿಂದ, ಜಮೀನುದಾರರಿಂದ ಮೇಸ್ತ್ರಿಗಳಿಂದ ಅನೇಕ ವಿಧದ ಶೋಷಣೆಯನ್ನು ಅನುಭವಿಸುತ್ತಾರೆ. ರಾತ್ರಿ ಪಾಳಿಯ ದುಡಿಮೆಯಲ್ಲಿ ಕಡಿಮೆ ಕೂಲಿಯನ್ನು ಪಡೆಯುತ್ತಿದ್ದಾರೆ. ಅಲ್ಲದೆ ಪುರುಷ ಕಾರ್ಮಿಕರಿಂದ ಲೈಂಗಿಕ ಕಿರುಕುಳಕ್ಕೂ ಒಳಗಾಗುತ್ತಿದ್ದಾರೆ. ಹೀಗೆ ನಾನಾ ವಿಧದ ಸಮಸ್ಯೆಗಳನ್ನು ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು ಅನುಭವಿಸುತ್ತಿದ್ದಾರೆ.

## ೧೧. ಕೆಲಸದ ಸ್ಥಳದಲ್ಲಿ ಬಾಲವಾಡಿಗಳ ಕೊರತೆ

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ದುಡಿಮೆಗಾರರು ದುಡಿಯುತ್ತಿರುವ ಉದ್ಯಮದಲ್ಲಿ 'ಬಾಲವಾಡಿ'ಗಳ ಕೊರತೆ ಕಂಡುಬರುತ್ತದೆ. ಸರಕಾರ ೧೦ರಿಂದ ೧೫ ಮಹಿಳಾ ಕಾರ್ಮಿಕರನ್ನು ನೇಮಿಸಿಕೊಂಡ ಪ್ರತಿಯೊಂದು ಉದ್ಯಮವು ಕಾರ್ಮಿಕರು ಮಕ್ಕಳನ್ನು ಬಿಡುವುದಕ್ಕಾಗಿ ಅಂಗನವಾಡಿಯನ್ನು ಸ್ಥಾಪಿಸಬೇಕು ಹಾಗೂ ಮಕ್ಕಳನ್ನು ನೋಡಿಕೊಳ್ಳಲು ಒಬ್ಬ ಕಾರ್ಮಿಕರನ್ನು ವೇತನ ನೀಡಿ ನೇಮಿಸಬೇಕೆಂದು ಹೇಳುತ್ತದೆ. ಆದರೆ ಯಾವ ಉದ್ಯಮಗಳೂ ಇದನ್ನು ಪಾಲಿಸುತ್ತಿಲ್ಲ. ಹೀಗಾಗಿ ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು ಕೆಲಸದ ಜೊತೆಗೆ ಮಕ್ಕಳನ್ನು ನೋಡಿಕೊಳ್ಳುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತಿದೆ.

## ೧೨. ಸರಕಾರದ ನಿರ್ಲಕ್ಷ್ಯ ದೋರಣೆ

ಸರಕಾರ ಅಸಂಘಟಿತ ವಲಯದ ಕಾರ್ಮಿಕರ ಬಗ್ಗೆ ನಿರ್ಲಕ್ಷ್ಯ ಧೋರಣೆಯನ್ನು ಹೊಂದಿದೆ. ಇವರ ಕಲ್ಯಾಣಕ್ಕಾಗಿ ಅನೇಕ ಕಾರ್ಯಕ್ರಮ ಯೋಜನೆಗಳನ್ನು ಜಾರಿಗೆ ತಂದರು. ಅವುಗಳ ಅನುಷ್ಠಾನದಲ್ಲಿನ ದೋಷಗಳಿಂದಾಗಿ ತಲುಪಬೇಕಾದ ಕಾರ್ಮಿಕರಿಗೆ ತಲುಪುತ್ತಿಲ್ಲ. ಸರಕಾರ ಜಾರಿಗೊಳಿಸಿದ ಕಾರ್ಯಕ್ರಮಗಳೆಲ್ಲವು ಪುರುಷ ಕಾರ್ಮಿಕರಿಗೆ ಅನ್ವಯವಾಗುವಂತಿದ್ದು, ಮಹಿಳಾ ಕಾರ್ಮಿಕರನ್ನು ಕಡೆಗಣಿಸಿದಂತೆ ಕಂಡುಬರುತ್ತವೆ. ಹೀಗಾಗಿ ಸರಕಾರ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಬಗ್ಗೆ ವಿಶೇಷ ಮಸೂದೆ ಮಂಡಿಸುವುದು ಅವಶ್ಯವಿದೆ.[೬೪]

ಹೀಗೆ ಮೇಲೆ ಸೂಚಿಸಿದ ಸಮಸ್ಯೆಗಳಲ್ಲದೆ ಜಾತಿನಿಂದನೆ, ಕಡಿಮೆ ಜೀವನ ಮಟ್ಟ, ಮೇಲ್ಜಾತಿಯವರ ಶೋಷಣೆ, ಬಂಡವಾಳಶಾಹಿಗಳ ದಬ್ಬಾಳಿಕೆ ಮತ್ತು ಶೋಷಣೆಗೆ ಒಳಗಾಗುತ್ತಿದ್ದಾರೆ. ಈ ಕಾರ್ಮಿಕರ ಶೋಷಣೆಯ ವಿರುದ್ಧ ಸರಕಾರ ಜಾರಿಗೆ ತಂದ ಕಾಯ್ದೆ, ಕಾನೂನುಗಳು ದಾಖಲೆಯಾಗಿ ಉಳಿದಿವೆಯೇ ಹೊರತು ಕಾರ್ಮಿಕರ ರಕ್ಷಣೆಯನ್ನು ಮಾಡಿರುವುದಿಲ್ಲ.

## ೫.೮. ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಕ್ರಮಗಳು

ಕೇಂದ್ರ ಸರಕಾರ ಅಸಂಘಟಿತ ವಲಯದ ಕಾರ್ಮಿಕರ ಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಕಾಲಕಾಲಕ್ಕೆ ಅನೇಕ ಮಸೂದೆಗಳನ್ನು ಜಾರಿಗೆ ತಂದು ಅವರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಿದೆ. ಈ ಉದ್ದೇಶಕ್ಕಾಗಿ 'ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಮಸೂದೆಯನ್ನು ಕೇಂದ್ರ ಸರಕಾರ ಸಂಪತ್ತಿನಲ್ಲಿ ೨೦೦೩, ೨೦೦೪, ೨೦೦೫, ೨೦೦೬, ೨೦೦೭ ಮತ್ತು ೨೦೦೮ರಲ್ಲಿ ಮಂಡಿಸಿದೆ. ಆ ಕಾಯ್ದೆಯ ಮೂಲಕ ಅಸಂಘಟಿತ ವಲಯದ ಕಾರ್ಮಿಕರಿಗೆ ವೃದ್ಧಾಪ್ಯ ವೇತನ, ಜೀವ

ಮತ್ತು ಅಸಮರ್ಥತೆಯ ಸೌಲಭ್ಯ, ಆರೋಗ್ಯ ಮತ್ತು ಹೆರಿಗೆ ಸೌಲಭ್ಯಗಳನ್ನು, ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಧನಸಹಾಯ, ಜೀವ ವಿಮೆ, ಇತ್ಯಾದಿ ಸೌಲಭ್ಯಗಳನ್ನು ನೀಡುತ್ತಿದೆ.

ಅಲ್ಲದೆ ಕೇಂದ್ರ ಸರಕಾರ ಅಸಂಘಟಿತ ವಲಯದ ಕಾರ್ಮಿಕರಿಗಾಗಿ ಕೆಲವು ಪ್ರಮುಖ ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

೧. ನ್ಯಾಷನಲ್ ಓಲ್ಡ್ ಏಜ್ ಪೆನ್‌ಷನ್ ಸ್ಕೀಮ್

೨. ನ್ಯಾಷನಲ್ ಫ್ಯಾಮಿಲಿ ಬೆನಿಫಿಟ್ ಸ್ಕೀಮ್

೩. ನ್ಯಾಷನಲ್ ಮೆಟರ್‌ನಿಟಿ ಬೆನಿಫಿಟ್ ಸ್ಕೀಮ್

೪. ಮಹಾತ್ಮಗಾಂಧಿ ಬುನ್ ಕರ್ ಭೀಮಾ ಯೋಜನೆ

೫. ಹೆಲ್ತ್ ಇನ್‌ಸೂರೆನ್ಸ್ ಸ್ಕೀಮ್ ಫಾರ್ ಹ್ಯಾಂಡಲೂಮ್ ಲೇಬರ್

೬. ಸ್ಕೀಮ್ ಫಾರ್ ಪೆನ್‌ಷನ್ ಟು ಮಾಸ್ಟರ್ ಕ್ರಾಫ್ಟಿಪರಸನ್

೭. ಗ್ರುಪ್ ಆ್ಯಕ್ಸಿಡೆಂಟ್ ಇನಸೂರೆನ್ಸ್ ಸ್ಕೀಮ್ ಫಾರ್ ಆ್ಯಕ್ಸಿಡೆಂಟ್ ಫೀಗ್‌ರ್ ಮೆನ್

೮. ಸೇವಿಂಗ್ ಕಂ ರಿಲೀಫ್ ಫಾರ್ ದ ಫೀಶರ್ ಮೆನ್

೯. ಜನಾಶ್ರೀ ಭೀಮಾ ಯೋಜನೆ

೧೦. ಆಮ್ ಆದ್ ಮೀ ಭೀಮಾ ಯೋಜನಾ

೧೧. ಸ್ವಾಸ್ಥಾ ಭೀಮಾ ಯೋಜನಾ

೧೨. ಕೃಷಿ ಶ್ರಮಿಕ ಸಾಮಾಜಿಕ ಸುರಕ್ಷಾ ಯೋಜನಾ-೨೦೦೧[೬೫]

**೧. ಹಿರಿಯ ನಾಗರಿಕ ರಾಷ್ಟ್ರೀಯ ನಿವೃತ್ತಿ ವೇತನ ಸ್ಕೀಮ್ (NOAPS)**

ಕೇಂದ್ರ ಸರಕಾರದ ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತೆಯನ್ನು ಒದಗಿಸುವುದಕ್ಕಾಗಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಹಾಗೂ ದುಡಿಮೆಯ ಹಿರಿಯ ನಾಗರಿಕರಿಗಾಗಿ ರಾಷ್ಟ್ರೀಯ ನಿವೃತ್ತಿ ವೇತನ ಸ್ಕೀಮನ್ನು ಜಾರಿಗೊಳಿಸಿದೆ. ಈ ಸ್ಕೀಮ್‌ನ ಪ್ರಕಾರ ಹಿರಿಯ ನಾಗರಿಕರಿಗೆ ಪ್ರತಿ ತಿಂಗಳು ೨೦೦ ರೂಪಾಯಿಗಳನ್ನು ವೃದ್ಧಾಪ್ಯ ವೇತನವಾಗಿ ನೀಡುತ್ತದೆ. ೬೦ ವರ್ಷ ದಾಟಿದ ಪ್ರತಿಯೊಬ್ಬ ಅಸಂಘಟಿತ ವಲಯದ ಕಾರ್ಮಿಕರು ಈ ಸ್ಕೀಮಿನ ಪ್ರಯೋಜನ ಪಡೆಯುತ್ತಾರೆ. ಸದ್ಯದಲ್ಲಿ ವೃದ್ಧಾಪ್ಯ ವೇತನವನ್ನು ರೂ.೨೦೦ಗಳಿಂದ ೪೦೦ ರೂಪಾಯಿಗಳಿಗೆ ಹೆಚ್ಚಿಸಲಾಗಿದೆ. ಈ ಯೋಜನೆ ಇಂದಿರಾಗಾಂಧಿ ಸರಕಾರದ ಒಂದು ಕೊಡುಗೆಯಾಗಿದೆ.

೨. ರಾಷ್ಟ್ರೀಯ ಕೌಟುಂಬಿಕ ಸೌಲಭ್ಯ ಸ್ಕೀಮ್ (NFBS)

ಕೇಂದ್ರಸರ್ಕಾರ ಈ ಸ್ಕೀಮನ್ನು ಜಾರಿಗೆ ತರುವ ಮೂಲಕ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಕಾರ್ಮಿಕರ ಕುಟುಂಬಕ್ಕೆ ಮತ್ತು ಮಕ್ಕಳ ಶಿಕ್ಷಣಕ್ಕೆ ಆರ್ಥಿಕ ಸಹಾಯ ನೀಡುತ್ತಿದೆ. ಅಸಂಘಟಿತ ಕಾರ್ಮಿಕರಿಗೆ ಮನೆ ಕಟ್ಟಿಕೊಳ್ಳುವುದಕ್ಕಾಗಿ ಕಡಿಮೆ ಬಡ್ಡಿಯಲ್ಲಿ ಸಾಲ ಸೌಲಭ್ಯ, ಮಕ್ಕಳ ಶಿಕ್ಷಣಕ್ಕೆ ಸಹಾಯಧನ ನೀಡುವ ಮೂಲಕ ಆ ಕುಟುಂಬಗಳಿಗೆ ಆರ್ಥಿಕ ಭದ್ರತೆಯನ್ನು ಒದಗಿಸುತ್ತದೆ.

೩. ರಾಷ್ಟ್ರೀಯ ಹೆರಿಗೆಭತ್ಯೆ, ಸೌಲಭ್ಯ, ಸ್ಕೀಮ್ (NMBS)

ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರಿಗಾಗಿ ಕೇಂದ್ರ ಸರ್ಕಾರ 'ರಾಷ್ಟ್ರೀಯ ಹೆರಿಗೆ ಭತ್ಯೆ ಸೌಲಭ್ಯ ಸ್ಕೀಮ'ನ್ನು ಜಾರಿಗೆ ತಂದಿದೆ. ಈ ಯೋಜನೆಯ ಪ್ರಕಾರ ಮಹಿಳಾ ಕಾರ್ಮಿಕರು ವೇತನಸಹಿತ ರಜೆ ಹಾಗೂ ಹೆರಿಗೆಭತ್ಯೆಯಾಗಿ ೬೦೦ ರೂಪಾಯಿಗಳಿಂದ ೬೦೦ ರೂಪಾಯಿಗಳವರೆಗೆ ಹಣಕಾಸಿನ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಇದನ್ನು ಉದ್ಯಮದಾರ ಹಾಗೂ ಕೇಂದ್ರ ಮತ್ತು ರಾಜ್ಯ ಸರಕಾರಗಳು ಪಾವತಿಸಬೇಕಾಗುತ್ತದೆ.

೪. ಮಹಾತ್ಮಗಾಂಧಿ ಬಂಕರ್ ಭೀಮಾ ಯೋಜನಾ(MGBBY)

ಕೇಂದ್ರ ಸರಕಾರ ಗಣಿ ಉದ್ಯಮದಲ್ಲಿ ದುಡಿಯುತ್ತಿರುವ ಬಂಕರ್ ಕಾರ್ಮಿಕರ ಭದ್ರತೆಗಾಗಿ ಈ ಯೋಜನೆಯನ್ನು ಜಾರಿಗೊಳಿಸಿದೆ. ಗಣಿ ಉದ್ಯಮದ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ 'ಬಂಕರ್' ಕಾರ್ಮಿಕರು ಸಿಡಿಮದ್ದುಗಳನ್ನು ಸಿಡಿಸುವಾಗ ಅಪಘಾತಕ್ಕೆ ಈಡಾಗಿ ಜೀವ ಕಳೆದುಕೊಂಡರೆ ಅಥವಾ ಭಾಗಶಃ ಅಂಗವಿಕಲರಾದರೆ ಅಥವಾ ಶಾಶ್ವತ ಅಂಗವಿಕಲರಾದರೆ ಅವರಿಗೆ ಮತ್ತು ಅವರನ್ನು ನಂಬಿದ ಕುಟುಂಬಕ್ಕೆ ಜೀವವಿಮೆ ಒದಗಿಸುವುದಕ್ಕಾಗಿ ಈ ಯೋಜನೆಯನ್ನು ಜಾರಿಗೊಳಿಸಿದೆ.

೫. ಕೈಮಗ್ಗ ನೇಕಾರರಿಗೆ ಆರೋಗ್ಯ ಭೀಮಾ ಸ್ಕೀಮ್(HISHV)

ಈ ಯೋಜನೆಯನ್ನು ಅಸಂಘಟಿತ ವಲಯದಲ್ಲಿ ಬರುವ ಕೈಮಗ್ಗ ಕಾರ್ಮಿಕರ ಆರೋಗ್ಯ ಭದ್ರತೆಗಾಗಿ ಜಾರಿಗೊಳಿಸಲಾಗಿದೆ. 'ಆರೋಗ್ಯ ಭೀಮಾ ಸ್ಕೀಮ್'ನ ಪ್ರಕಾರ ಕೈಮಗ್ಗ ನೇಕಾರರು ಆರೋಗ್ಯ ವಿಮಾ ಸೌಲಭ್ಯವನ್ನು ಪಡೆಯುತ್ತಾರೆ. ಇದರ ಪ್ರಕಾರ ಕ್ಯಾನ್ಸರ್, ಕ್ಷಯ, ಹೃದಯರೋಗ ಇತ್ಯಾದಿ ಕಾಯಿಲೆಗಳಿಗೆ ತಗಲುವ ವೆಚ್ಚವನ್ನು ಸರಕಾರದಿಂದ ಪಡೆಯುತ್ತಾರೆ. ಅಲ್ಲದೆ ಪ್ರತಿಷ್ಠಿತ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಪಡೆಯುವ ಸೌಲಭ್ಯ ಹೊಂದಿರುತ್ತಾರೆ.

೬. ಪರಿಣತ ಕರಕುಶಲ ವ್ಯಕ್ತಿಗೆ ನಿವೃತ್ತಿ ವೇತನ ಸ್ಕೀಮ್ (SPTMCP)

ಅಸಂಘಟಿತ ವಲಯದಲ್ಲಿ ಬರುವ ಕರಕುಶಲ ಕಾರ್ಮಿಕರ ಸಾಮಾಜಿಕ ಭದ್ರತೆಗೆ ಈ ಯೋಜನೆ ಸಂಬಂಧಿಸಿದೆ. ಈ ಯೋಜನೆಯ ಪ್ರಕಾರ ಪರಿಣತ ಕರಕುಶಲ ವ್ಯಕ್ತಿಗೆ ಪ್ರತಿತಿಂಗಳು ರೂ.೬೦೦ಗಳನ್ನು

ವೃದ್ಧಾಪ್ಯ ಅಥವಾ ನಿವೃತ್ತಿ ವೇತನವಾಗಿ ನೀಡಬೇಕು. ಈ ಯೋಜನೆಯ ಪ್ರಯೋಜನ ಪಡೆಯಲು ಕಾರ್ಮಿಕರಿಗೆ ೬೦ ವರ್ಷ ದಾಟಿರಬೇಕು. ಅಲ್ಲದೆ ಈ ಕಾರ್ಮಿಕರಿಗೆ ಅಪಘಾತ ವಿಮಾ ಸೌಲಭ್ಯಗಳನ್ನು ನೀಡಲಾಗುತ್ತದೆ.

**೭. ಚಟುವಟಿಕೆಯಲ್ಲಿ ನಿರತರಾಗಿದ್ದ ಮೀನುಗಾರರ ಗುಂಪು ಅಪಘಾತ ಜೀವವಿಮಾ ಸ್ಕೀಮ್(GAISAF)**

ಈ ಸ್ಕೀಮನ್ನು ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮೀನುಗಾರರ ಕಲ್ಯಾಣಕ್ಕಾಗಿ ಜಾರಿಗೊಳಿಸಲಾಗಿದೆ. 'ಗುಂಪು ಅಪಘಾತ ಜೀವ ವಿಮಾ ಸ್ಕೀಮ್'ನ ಅಡಿಯಲ್ಲಿ ಸಮುದ್ರ ಮತ್ತು ಸಾಗರದೊಳಗೆ ಮೀನು ಹಿಡಿಯಲು ಹೋಗಿ ಅಪಘಾತಕ್ಕೆ ಒಳಗಾದ ಕಾರ್ಮಿಕರಿಗೆ ಮತ್ತು ಅವರ ಕುಟುಂಬಕ್ಕೆ ವಿಮಾ ಸೌಲಭ್ಯವನ್ನು ಒದಗಿಸಲಾಗುತ್ತದೆ. ಈ ಸ್ಕೀಮನಿಂದ ಮೃತಪಟ್ಟ ವ್ಯಕ್ತಿಗೆ ೫೦,೦೦೦ದಿಂದ ೧,೦೦೦೦ ರೂಪಾಯಿಗಳನ್ನು ಮತ್ತು ಅಂಗವಿಕಲತೆಗೆ ೨೦,೦೦೦ ರೂಪಾಯಿಗಳನ್ನು, ಶಾಶ್ವತ ಅಂಗವಿಕಲತೆಗೆ ೨೫,೦೦೦ ರೂಪಾಯಿಗಳನ್ನು ಸರಕಾರ ಜೀವವಿಮೆ ರೂಪದಲ್ಲಿ ನೀಡುತ್ತದೆ. ಆದರೆ ಈ ಸ್ಕೀಮ್‌ಗೆ ಮೀನುಗಾರರು ನೋಂದಾಯಿತರಾಗಿರಬೇಕು.

**೮. ಆಪತ್ಕಾಲದ ಪರಿಹಾರಕ್ಕಾಗಿ ಮೀನುಗಾರರ ಉಳಿತಾಯ(SCRFF)**

ಆಪತ್ಕಾಲದಲ್ಲಿ ಮೀನುಗಾರರಿಗೆ ಪರಿಹಾರ ನೀಡುವುದಕ್ಕಾಗಿ ಈ ಯೋಜನೆಯನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿದೆ. ಈ ಯೋಜನೆ ಪ್ರಕಾರ ಆಪತ್ಕಾಲ ಪರಿಹಾರಕ್ಕಾಗಿ ಮೀನುಗಾರರು ತಮ್ಮ ಆದಾಯದ ಸ್ವಲ್ಪ ಭಾಗವನ್ನು ಉಳಿತಾಯ ಮಾಡುತ್ತಾರೆ. ಅದಕ್ಕೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೊಡುಗೆ ನೀಡುತ್ತವೆ.

**೯. ಜನಶ್ರೀ ಭೀಮಾ ಯೋಜನಾ(JBY)**

ಕೇಂದ್ರ ಸರಕಾರ ಜನಶ್ರೀ ಭೀಮಾ ಯೋಜನೆಯನ್ನು ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ, ಅವರ ಆರೋಗ್ಯ ರಕ್ಷಣೆಗೆ ವಿಮಾ ಸೌಲಭ್ಯವನ್ನು ಒದಗಿಸುವ ಉದ್ದೇಶದಿಂದ ಜಾರಿಗೊಳಿಸಿದೆ. ಮಹಿಳಾ ಕಾರ್ಮಿಕರು ಹೆರಿಗೆ ಸಂದರ್ಭ, ಶಸ್ತ್ರಚಿಕಿತ್ಸೆ ಮತ್ತು ವೆಚ್ಚದಾಯಕ ಕಾಯಿಲೆಗಳಿಗಾಗಿ ವಿಮಾ ಸೌಲಭ್ಯವನ್ನು ಪಡೆಯುತ್ತಾರೆ.

**೧೦. ಅಮ್ ಅದ್ ಮೀ ಭೀಮಾ ಯೋಜನಾ(AABY)**

ಕೇಂದ್ರ ಸರ್ಕಾರ ೨೦೦೭ರಲ್ಲಿ ಅಮ್ ಆದ್ ಮೀ ಭೀಮಾ ಯೋಜನೆಯನ್ನು ಜಾರಿಗೊಳಿಸಿತು. ಆ ಮೂಲಕ ಬಡವರಿಗಾಗಿ ಮತ್ತು ಅಸಂಘಟಿತ ವಲಯದ ಕಾರ್ಮಿಕರಿಗಾಗಿ ಸರ್ವಮಾನ್ಯ ಆರೋಗ್ಯ ವಿಮಾ ಯೋಜನೆಯನ್ನು ಪ್ರಾರಂಭಿಸಿತು.[೬೬]

## ೧೧. ಸ್ವಾಸ್ಥಾಯೀ ಭೀಮಾ ಯೋಜನಾ(SBY)

ಕೇಂದ್ರ ಸರಕಾರ "ರಾಷ್ಟ್ರೀಯ ಸ್ವಾಸ್ಥ ಭೀಮಾ ಯೋಜನೆ"ಯನ್ನು ೨೦೦೪ರಲ್ಲಿ ಜಾರಿಗೊಳಿಸಿತು. ಈ ಯೋಜನೆಯ ಮೂಲಕ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರಿಗೆ 'ಆರೋಗ್ಯ ವಿಮಾ ಸೌಲಭ್ಯ'ವನ್ನು ನೀಡಿದೆ. ಇದರಿಂದಾಗಿ ಹೃದಯರೋಗ, ಕ್ಯಾನ್ಸರ್, ಕರಳುಬೇನೆ, ಇತ್ಯಾದಿ ರೋಗಗಳಿಗೆ ವಿಮೆಯನ್ನು ಮತ್ತು ಶಸ್ತ್ರಚಿಕಿತ್ಸೆಗೆ ತಗಲುವ ವೆಚ್ಚವನ್ನು ಸರಕಾರವೇ ನೀಡುತ್ತದೆ.[೬೭]

## ೧೨. ಕೃಷಿ ಶ್ರಮಿಕ ಸಾಮಾಜಿಕ ಸುರಕ್ಷೆ ಯೋಜನಾ(KSSSY)

ಈ ಯೋಜನೆಯನ್ನು ಕೇಂದ್ರ ಸರಕಾರ ೨೦೦೧ರಲ್ಲಿ ಜಾರಿಗೊಳಿಸಿದೆ. ಕೃಷಿಕರ ಸ್ಥಿತಿಯನ್ನು ಉತ್ತಮ ಪಡಿಸುವುದಕ್ಕಾಗಿ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. ಈ ಯೋಜನೆಗೆ ೧೮ರಿಂದ ೫೦ ವರ್ಷ ವಯಸ್ಸಿನ ಕೃಷಿ ಕಾರ್ಮಿಕರು ಅರ್ಹರಾಗಿದ್ದು, ಸಾಮಾಜಿಕ ಭದ್ರತೆಗಾಗಿ ಪ್ರತಿ ದಿನ ಕಾರ್ಮಿಕರು ೧ ರೂಪಾಯಿಯನ್ನು ಮತ್ತು ಕೇಂದ್ರ ಸರಕಾರ ೨ ರೂಪಾಯಿಯನ್ನು ವಂತಿಗೆಯಾಗಿ ಸಲ್ಲಿಸಬೇಕಾಗುತ್ತದೆ. ಈ ಯೋಜನೆಗೆ ಸೇರಿದ ಪ್ರತಿಯೊಬ್ಬ ಕಾರ್ಮಿಕನು ಈ ಕೆಳಗಿನ ಭದ್ರತೆಗಳನ್ನು ಪಡೆಯುತ್ತಾನೆ.

೧. ೬೦ ವರ್ಷದೊಳಗೆ ಮರಣ ಹೊಂದಿದರೆ

* ನೈಸರ್ಗಿಕವಾಗಿ ಮರಣ ಹೊಂದಿದರೆ ೨೦,೦೦೦ ರೂಪಾಯಿಗಳನ್ನು
* ಅಪಘಾತದಲ್ಲಿ ಮರಣ ಹೊಂದಿದರೆ ೫೦,೦೦೦ ರೂಪಾಯಿಗಳನ್ನು
* ಮೃತರ ಕುಟುಂಬಕ್ಕೆ ವಂತಿಕೆ ಹಣ ಹಾಗೂ ಅದರ ಬಡ್ಡಿ ಸಮೇತ ನೀಡಲಾಗುತ್ತದೆ.

೨. ೬೦ ವರ್ಷದೊಳಗೆ ಅಂಗವಿಕಲನಾದರೆ

* ಅಪಘಾತದಿಂದ ಭಾಗಶಃ ಅಂಗವಿಕಲನಾದರೆ ೨೫,೦೦೦ ರೂಪಾಯಿಗಳನ್ನು ಮತ್ತು ಶಾಶ್ವತ ಅಂಗವಿಕಲನಾದರೆ ೫೦,೦೦೦ ರೂಪಾಯಿಗಳನ್ನು ವಿಮೆಯಾಗಿ ಪಡೆಯುತ್ತಾರೆ.

೩. ೬೦ ವರ್ಷಕ್ಕಿಂತ ಅಧಿಕ ವರ್ಷ ಜೀವಿಸಿದ್ದರೆ

* ಪ್ರತಿ ತಿಂಗಳು ೧೦೦ರಿಂದ ೧೯೦೦ರವರೆಗೆ ನಿವೃತ್ತಿ ವೇತನವನ್ನು ಪಡೆಯುತ್ತಾರೆ. ಒಂದು ವೇಳೆ ೬೦ ವರ್ಷಕ್ಕೆ ಮೇಲ್ಪಟ್ಟು ಮರಣ ಹೊಂದಿದರೆ ಅವಲಂಬಿತರ ಕುಟುಂಬಕ್ಕೆ ೧೩೦೦ ರಿಂದ ೨,೫೦,೦೦೦ ರೂಪಾಯಿಗಳವರೆಗೆ ನೀಡಲಾಗುತ್ತದೆ.[೬೮]

ಮೇಲಿನ ಯೋಜನೆಗಳಲ್ಲದೆ ಸರಕಾರ ಅನೇಕ ಕಾರ್ಮಿಕ ಮಂಡಳಿಗಳನ್ನು ಸ್ಥಾಪಿಸಿ ನೋಂದಾಯಿತ ಕಾರ್ಮಿಕರಿಗೆ ನಿವೃತ್ತಿ ವೇತನ, ಅಪಘಾತ ವಿಮೆ, ಹೆರಿಗೆ ಭತ್ಯೆ ಸೌಲಭ್ಯಗಳನ್ನು ನೀಡುತ್ತಿದೆ. ಸರಕಾರ

ಈ ಎಲ್ಲ ಯೋಜನೆಗಳ ಮೂಲಕ ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರೂ ಅವುಗಳಿಂದ ಪ್ರಯೋಜನ ಪಡೆದ ಕಾರ್ಮಿಕರ ಪ್ರಮಾಣ ಶೇಕಡ ೨ರಷ್ಟು ಎಂಬುದು ೫೫ನೇ ಸುತ್ತಿನ NSS ವರದಿಯಿಂದ ತಿಳಿದುಬರುತ್ತದೆ.[೬೯] ಇದರಿಂದ ಈ ಯೋಜನೆಗಳ ಪ್ರಯೋಜನ ಕಾರ್ಮಿಕರಿಗೆ ತಲುಪುತ್ತಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

## ೫.೧೧. ಅಸಂಘಟಿತ ವಲಯದ ಮಹಿಳಾ ದುಡಿಮೆಗಾರರ ರಕ್ಷಣೆಗೆ ಸಂವಿಧಾನಾತ್ಮಕ ಹಾಗೂ ಶಾಸನಾತ್ಮಕ ಕ್ರಮಗಳು

ಭಾರತ ೧೯೪೭ರಲ್ಲಿ ಸ್ವಾತಂತ್ರ್ಯವಾದ ನಂತರ ದೇಶವನ್ನು ಮುನ್ನಡೆಸುವ ಉದ್ದೇಶದಿಂದ ಸಂವಿಧಾನವನ್ನು ರಚಿಸಿತು. ಸಂವಿಧಾನವು ಭಾರತವನ್ನು ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯ ಎಂದು ಸಾರಿದೆ. ಸಮಸ್ಯ ನಾಗರಿಕರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ಒದಗಿಸುವುದು ಮತ್ತು ಸಮಾನ ಅವಕಾಶವನ್ನು ನೀಡುವುದು ಹಾಗೂ ಮಹಿಳೆಯರು ದಲಿತರು ಹಿಂದುಳಿದ ಮತ್ತು ಅಲ್ಪಸಂಖ್ಯಾತ ಸಮಾಜಗಳ ಜನರಿಗೆ ಭದ್ರತೆಯನ್ನು ಒದಗಿಸುವುದು ಸಂವಿಧಾನದ ಮುಖ್ಯ ಉದ್ದೇಶವಾಗಿದೆ. ಇದು ಸಂವಿಧಾನದ ಪ್ರಸ್ತಾವನೆಯಿಂದ ತಿಳಿದುಬರುತ್ತದೆ.

ಸಾಮಾಜಿಕ ನ್ಯಾಯವನ್ನು ಮುಖ್ಯ ಧ್ಯೇಯವಾಗಿ ಇಟ್ಟುಕೊಂಡ ಸಂವಿಧಾನವು ಮಹಿಳೆಯರಿಗಾಗಿ ಸಂವಿಧಾನಾತ್ಮಕ ಅವಕಾಶಗಳನ್ನು ಕಲ್ಪಿಸಿದೆ. ಭಾರತೀಯ ಸಂಸತ್ತು ಮಹಿಳೆಯರು ಅಸಂಘಟಿತ ವಲಯದಲ್ಲಿ ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿರುವುದನ್ನು ಗಮನಿಸಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರಿಗಾಗಿ ಶಾಸನಾತ್ಮಕ ಕ್ರಮಗಳನ್ನು ಕೈಗೊಂಡಿದೆ. ಅಲ್ಲದೆ ಮಹಿಳೆಯರಿಗಾಗಿ ಉಪಕ್ರಮಗಳನ್ನು ಜಾರಿಗೊಳಿಸಿ ಆ ಮೂಲಕ ಮಹಿಳಾ ಕಾರ್ಮಿಕರಿಗೆ ರಕ್ಷಣೆ ಮತ್ತು ಭದ್ರತೆಯನ್ನು ಒದಗಿಸಿದೆ. ಅವುಗಳನ್ನು ಈ ಕೆಳಗೆನಂತೆ ನೋಡಬಹುದು.

### ೧. ಸಂವಿಧಾನಾತ್ಮಕ ಅವಕಾಶಗಳು ಅಥವಾ ರಕ್ಷಣೆ

ಭಾರತೀಯ ಸಂವಿಧಾನವು ಮಹಿಳೆಯರಿಗೆ ಮತ್ತು ಮಹಿಳಾ ಕಾರ್ಮಿಕರ ರಕ್ಷಣೆಗಾಗಿ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯ ಒದಗಿಸುವುದಕ್ಕಾಗಿ ಅನೇಕ ವಿಧಿಗಳನ್ನು ರಚಿಸಿದೆ. ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ನೋಡಬಹುದು.

೧. ಸಂವಿಧಾನದ ೧೪ನೇ ವಿಧಿಯು ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂದು ಹೇಳುವ ಮೂಲಕ ಲಿಂಗ ತಾರತಮ್ಯವನ್ನು ನಿಷೇಧಿಸುತ್ತದೆ.

೨. ಸಂವಿಧಾನದ ೧೫(೧)ನೇ ವಿಧಿಯು ರಾಜ್ಯವು ಯಾರಿಗೂ ಧರ್ಮ, ಜಾತಿ, ಲಿಂಗ, ಜನ್ಮಸ್ಥಳಗಳ ಆಧಾರದ ಮೇಲೆ ಪಕ್ಷಪಾತ ಮಾಡಬಾರದೆಂದು ತಿಳಿಸುತ್ತದೆ.

೩. ಸಂವಿಧಾನದ ೧೬ನೇ ವಿಧಿಯು ಸಾರ್ವಜನಿಕ ಉದ್ಯೋಗ ದಂಧೆಗಳಲ್ಲಿ ಧರ್ಮ, ಜಾತಿ, ಜನಾಂಗ, ಲಿಂಗ ಇತ್ಯಾದಿಯಾಗಿ ತಾರತಮ್ಯವನ್ನು ಮಾಡಬಾರದು ಎಂದು ಆದೇಶಿಸುತ್ತದೆ.

೪. ಸಂವಿಧಾನದ ೨೩ನೇ ವಿಧಿಯು ಮಾನವ ವ್ಯಾಪಾರ ಮತ್ತು ಒತ್ತಾಯದ ದುಡಿಮೆಯನ್ನು ನಿಷೇಧಿಸುತ್ತದೆ. ಆ ಮೂಲಕ ಹೆಣ್ಣು ಮಕ್ಕಳ ವ್ಯಾಪಾರವನ್ನು ತಡೆಗಟ್ಟುತ್ತದೆ.

೫. ಸಂವಿಧಾನದ ೨೪ನೇ ವಿಧಿಯು ೧೪ ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಯಾವುದೇ ಕಾರ್ಖಾನೆ ಅಥವಾ ಗಣಿಯಲ್ಲಿ ಕೆಲಸಕ್ಕೆ ನೇಮಿಸಿಕೊಳ್ಳಬಾರದು ಎಂದು ತಿಳಿಸುವ ಮೂಲಕ ಬಾಲಕಾರ್ಮಿಕ ಪದ್ಧತಿಯನ್ನು ನಿಷೇಧಿಸಿದೆ.

೬. ಸಂವಿಧಾನದ ೩೯ನೇ ವಿಧಿಯು ರಾಜ್ಯ ನಿರ್ದೇಶಕ ತತ್ವಗಳಲ್ಲಿ ಮಹಿಳೆ ಮತ್ತು ಪುರುಷರಿಬ್ಬರಿಗೂ ಸರಿ ಸಮಾನವಾದ ಜೀವನಾಂಶಗಳನ್ನು ನೀಡಬೇಕೆಂದು ತಿಳಿಸುತ್ತದೆ. ಸಂವಿಧಾನದ ೩೯(d) ವಿಧಿಯು ಸ್ತ್ರೀ-ಪುರುಷರಿಬ್ಬರಿಗೂ ಸಮಾನ ಕೆಲಸಕ್ಕೆ ಸಮಾನ ವೇತನ ನೀಡಬೇಕೆಂದು ತಿಳಿಸುತ್ತದೆ.

೭. ಸಂವಿಧಾನದ ೪೨ನೇ ವಿಧಿಯ ರಾಜ್ಯ ನೀತಿ ನಿರ್ದೇಶಕ ತತ್ವಗಳಲ್ಲಿ ರಾಜ್ಯವು ನ್ಯಾಯವಾದ ಹಾಗೂ ಮಾನವೀಯ ಉದ್ಯೋಗ ಸ್ಥಿತಿಯನ್ನು ವೈದ್ಯಕೀಯ ನೆರವನ್ನು ಕಾರ್ಮಿಕರಿಗೆ ಒದಗಿಸಬೇಕೆಂದು ತಿಳಿಸುತ್ತದೆ. ಮಹಿಳಾ ಕಾರ್ಮಿಕರಿಗೆ ವೇತನಸಹಿತ ರಜೆಯ ಹೆರಿಗೆ ಸೌಲಭ್ಯವನ್ನು ನೀಡಬೇಕೆಂದು ಆದೇಶಿಸುತ್ತದೆ.

೮. ಸಂವಿಧಾನದ ೪೫ನೇ ವಿಧಿಯು ರಾಜನೀತಿ ನಿರ್ದೇಶಕ ತತ್ವಗಳಲ್ಲಿ ೧೪ ವರ್ಷದೊಳಗಿನ ಎಲ್ಲ ಬಾಲಕ-ಬಾಲಕಿಯರಿಗೆ ಕಡ್ಡಾಯದ ಉಚಿತ ಶಿಕ್ಷಣ ಒದಗಿಸಬೇಕೆಂದು ನಿರ್ದೇಶನ ಮಾಡುತ್ತಿದೆ.

೯. ಸಂವಿಧಾನದ ೪೬ನೇ ವಿಧಿಯು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಕಾರ್ಮಿಕರಿಗೆ ಶೈಕ್ಷಣಿಕ ಮತ್ತು ಆರ್ಥಿಕ ಅವಕಾಶಗಳನ್ನು ಒದಗಿಸುವ ಮೂಲಕ ಅವರ ಪ್ರಗತಿಯನ್ನು ಸಾಧಿಸುವುದು.

೧೦. ಸಂವಿಧಾನದ ೪೧ನೇ ವಿಧಿಯು ಎಲ್ಲರಿಗೂ ಶಿಕ್ಷಣ, ಉದ್ಯೋಗ ದೊರೆಯುವಂತಹ ಹಾಗೂ ನಿರುದ್ಯೋಗ, ವೃದ್ಧಾಪ್ಯ, ಅನಾರೋಗ್ಯ ಹಾಗೂ ಅಸಹಾಯಕ ಸ್ಥಿತಿಯಲ್ಲಿ ಸಾಮಾಜಿಕ ಭದ್ರತೆಗಳನ್ನು ಒದಗಿಸುವಂತಹ ವ್ಯವಸ್ಥೆ ಮಾಡಬೇಕು ಎಂದು ನಿರ್ದೇಶಿಸುತ್ತದೆ.

೧೧. ಸಂವಿಧಾನದ ೪೩ನೇ ವಿಧಿಯು ಪ್ರತಿಯೊಬ್ಬ ಕಾರ್ಮಿಕನಿಗೆ ಜೀವನಾಧಾರ ಕೂಲಿಯನ್ನು ನೀಡಬೇಕೆಂದು ತಿಳಿಸುತ್ತದೆ. ಕಾರ್ಮಿಕ ತಾನು ಪಡೆದ ಕೂಲಿಯಿಂದ ತನ್ನ ಜೀವನ ಸಾಗಿಸುತ್ತಿದ್ದರೆ ಅದನ್ನು ಜೀವನಾಧಾರ ಕೂಲಿ ಎಂದು ಕರೆಯಲಾಗುತ್ತದೆ.

೧೨. ಸಂವಿಧಾನದ ೪೭ನೇ ವಿಧಿಯು ಪೌಷ್ಟಿಕ ಆಹಾರವನ್ನು ಒದಗಿಸುವುದು ಮತ್ತು ಜೀವನಮಟ್ಟ ಹಾಗೂ ಸಾರ್ವಜನಿಕ ಆರೋಗ್ಯ ವೃದ್ಧಿಗೊಳಿಸುವುದು ಸರಕಾರದ ಕರ್ತವ್ಯ ಎಂದು ತಿಳಿಸುತ್ತದೆ.[೨೦]

ಭಾರತದ ಸಂವಿಧಾನವು ಮೇಲಿನ ಎಲ್ಲ ವಿಧಿಗಳಲ್ಲಿ ಲಿಂಗತಾರತಮ್ಯವನ್ನು ನಿಷೇಧಿಸಿದೆ. ಅಲ್ಲದೆ ಮಹಿಳಾ ಕಾರ್ಮಿಕರಿಗಾಗಿ ವಿಶೇಷ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ನೀಡಿದೆ. ಮಹಿಳೆಯರ ರಾಜಕೀಯ ಸಬಲೀಕರಣಕ್ಕಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೩೩ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕೆಂದು ಸಂವಿಧಾನ ತಿಳಿಸುತ್ತದೆ. ಅಲ್ಲದೆ ೨೦೧೦ ಮಾರ್ಚ್ ೮ ಮತ್ತು ೯ ರಂದು ರಾಜ್ಯ ಸಭೆಯಲ್ಲಿ ಮಹಿಳಾ ಮೀಸಲಾತಿ ಮಸೂದೆಗೆ ಸರ್ವಪಕ್ಷಗಳ ಬೆಂಬಲವು ದೊರೆತಿದೆ. ಹೀಗಾಗಿ ಮಹಿಳೆಯರಿಗೆ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿ ಶೇಕಡ ೩೩ ಸ್ಥಾನಗಳು ಸಿಗುವ ಸಾಧ್ಯತೆ ಇದೆ. ಹೀಗೆ ಮಹಿಳಾ ಸಬಲೀಕರಣಕ್ಕೆ ಸಂವಿಧಾನ ಸಾಕಷ್ಟು ಅವಕಾಶ ನೀಡುತ್ತಿರುವುದು ಸ್ಪಷ್ಟವಾಗುತ್ತಿದೆ.

**೨. ಶಾಸನಾತ್ಮಕ ಕ್ರಮಗಳು**

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಸ್ಥಿತಿಯನ್ನು ಸುಧಾರಿಸಲು, ಅವರ ಹಿತಾಸಕ್ತಿಯನ್ನು ರಕ್ಷಿಸಲು, ಅವರ ಕೆಲಸದ ಸ್ಥಿತಿಯನ್ನು ಸುಧಾರಿಸಲು ಮತ್ತು ಯೋಗಕ್ಷೇಮವನ್ನು ನೋಡಿಕೊಳ್ಳಲು ಸರಕಾರವು ಹಲವಾರು ಕಾನೂನುಗಳನ್ನು ಜಾರಿಗೆ ತಂದಿದೆ. ಕನಿಷ್ಟ ವೇತನ ಕಾಯ್ದೆ, ಗಣಿಕಾಯ್ದೆ, ಪ್ಲಾಂಟೇಶನ್ ಕಾಯ್ದೆ, ಮಾತೃತ್ವ ಸೌಲಭ್ಯ ಕಾಯ್ದೆ ಮತ್ತು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆ ಇತ್ಯಾದಿಗಳು ಕಾರ್ಮಿಕರ ಶಾಸನಗಳಾಗಿವೆ. ಪ್ರಮುಖ ಕಾರ್ಮಿಕ ಶಾಸನಗಳನ್ನು ಈ ಕೆಳಗಿನಂತೆ ನೋಡಬಹುದು.

**೧. ಕನಿಷ್ಠ ವೇತನಕಾಯ್ದೆ ೧೯೪೮ :** ಈ ಕಾಯ್ದೆಯನ್ನು ೧೯೪೮ರಲ್ಲಿ ಜಾರಿಗೆ ತರಲಾಯಿತು. ಈ ಕಾಯ್ದೆಯ ಪ್ರಕಾರ ಯಾವ ಕೈಗಾರಿಕೋದ್ಯಮಗಳಲ್ಲಿ ಕಷ್ಟಕರವಾದ ಕೆಲಸವಿದೆಯೋ ಮತ್ತು ಎಲ್ಲಿ ಕಾರ್ಮಿಕರ ಶೋಷಣೆಯಾಗುತ್ತಿದೆಯೋ ಅಂತಹ ಉದ್ಯಮಗಳಲ್ಲಿ ಕೆಲಸ ಮಾಡತ್ತಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ನೀಡಬೇಕೆಂದು ತಿಳಿಸುತ್ತದೆ. ಪ್ಲಾಂಟೇಶನ್ ತೋಟಗಳು, ಅಕ್ಕಿ ಮತ್ತು ಎಣ್ಣೆ ಗಿರಣಿ, ಚರ್ಮ ಹದಮಾಡುವ ಕಾರ್ಖಾನೆ, ಮೋಟಾರು ಸಾರಿಗೆ, ರಸ್ತೆ ಕೆಲಸ, ವಸತಿ ನಿರ್ಮಾಣ, ಹೊಗೆ ಸೊಪ್ಪಿನ ಕಾರ್ಖಾನೆ, ಬಣ್ಣ ತಯಾರಿಕೆ, ಕೃಷಿ ಇತ್ಯಾದಿ ಕಾರ್ಮಿಕರಿಗೆ ಕನಿಷ್ಠ ವೇತನ ನೀಡಬೇಕೆಂದು ತಿಳಿಸುತ್ತದೆ.

**೨. ಬೀಡಿ ಮತ್ತು ಸಿಗರೇಟು ಕಾರ್ಮಿಕರ ಕಾಯ್ದೆ ೧೯೬೬ :** ಈ ಕಾಯ್ದೆಯನ್ನು ೧೯೬೬ರಲ್ಲಿ ಜಾರಿಗೆ ತರಲಾಯಿತು. ಬೀಡಿ ಮತ್ತು ಸಿಗರೇಟು ಕಾರ್ಮಿಕರ ಕೆಲಸದ ಸ್ಥಿತಿಗತಿ ಸುಧಾರಿಸುವುದು ಈ ಕಾಯ್ದೆಯ ಮುಖ್ಯ ಉದ್ದೇಶವಾಗಿದೆ. ಈ ಉದ್ದೇಶದಿಂದಾಗಿ ೫೦ಕ್ಕಿಂತ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರನ್ನು

ಕೆಲಸಕ್ಕೆ ನೇಮಿಸಿಕೊಂಡ ಪ್ರತಿಯೊಂದು ಬೀಡಿ ಮತ್ತು ಸಿಗರೇಟು ಉದ್ಯಮಗಳು ಕೆಲಸದ ಸ್ಥಳದಲ್ಲಿ ಶಿಶುವಿಹಾರ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ತಿಳಿಸುತ್ತದೆ.

**೩. ಪ್ಲಾಂಟೇಶನ್ ಕಾರ್ಮಿಕರ ಕಾಯ್ದೆ ೧೯೫೧ :** ಈ ಕಾಯ್ದೆಯನ್ನು ೧೯೫೧ರಲ್ಲಿ ಪ್ಲಾಂಟೇಶನ್ ತೋಟಗಳಲ್ಲಿ ದುಡಿಯುವ ಕಾರ್ಮಿಕರ ಹಿತರಕ್ಷಣೆಗಾಗಿ ಜಾರಿಗೊಳಿಸಲಾಯಿತು. ಈ ಕಾಯ್ದೆಯ ಪ್ರಕಾರ ಪ್ಲಾಂಟೇಶನ್ ಕೆಲಸಗಳಲ್ಲಿ ೧೫ಕ್ಕಿಂತ ಹೆಚ್ಚು ಮಹಿಳೆಯರು ಕೆಲಸ ಮಾಡುತ್ತಿದ್ದರೆ ಅಥವಾ ಗುತ್ತಿಗೆ ಆಧಾರದಲ್ಲಿ ೨೦ಕ್ಕಿಂತ ಅಧಿಕ ಮಹಿಳೆಯರು ದುಡಿಯುತ್ತಿದ್ದರೆ, ಆ ತೋಟಗಳಲ್ಲಿ ಒಂದು ಶಿಶುವಿಹಾರ ಕೇಂದ್ರವನ್ನು ತೆರೆಯಬೇಕೆಂದು ತಿಳಿಸುತ್ತದೆ. ಮುಂದುವರೆದು ಈ ಕಾಯ್ದೆಯ ಮಕ್ಕಳಿಗೆ ಅಥವಾ ಶಿಶುಗಳಿಗೆ ಹಾಲೂಡಿಸಲು ತಾಯಂದಿರಿಗೆ ಸಮಯ ನೀಡಬೇಕೆಂದು ತಿಳಿಸುತ್ತದೆ.

**೪. ಕಾಂಟ್ರ್ಯಾಕ್ಟ್ ಲೇಬರ್ ಆ್ಯಕ್ಟ್ ಅಥವಾ ಗುತ್ತಿಗೆ ಆಧಾರದ ಕಾರ್ಮಿಕರ ಕಾಯ್ದೆ ೧೯೭೦ :** ಈ ಕಾಯ್ದೆಯನ್ನು ೧೯೭೦ರಲ್ಲಿ ಜಾರಿಗೆ ತರಲಾಯಿತು. ಯಾವುದೇ ಉದ್ಯಮದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡ ಕಾರ್ಮಿಕರಲ್ಲಿ ೨೦ಕ್ಕಿಂತ ಅಧಿಕ ಕಾರ್ಮಿಕರು ಮಹಿಳೆಯರಿದ್ದರೆ ಅಂತಹ ಉದ್ಯಮವು ಕೆಲಸದ ಸ್ಥಳದಲ್ಲಿ ಶಿಶುವಿಹಾರ ಕೇಂದ್ರವನ್ನು ತೆರೆಯಬೇಕೆಂದು ತಿಳಿಸುತ್ತದೆ. ಮಹಿಳಾ ಕಾರ್ಮಿಕರನ್ನು ಗುತ್ತಿಗೆ ಆಧಾರದಲ್ಲಿ ನೇಮಿಸಿಕೊಂಡಿದ್ದರೆ ಅವರ ಕೆಲಸದ ಅವಧಿಯು ಒಳಗೆ ೬ರಿಂದ ೭ ಗಂಟೆಗಳ ನಡುವಿನದಾಗಿರಬೇಕೆಂದು ತಿಳಿಸುತ್ತದೆ.

**೫. ಅಂತರ್ ರಾಜ್ಯ ವಲಸೆ ಕಾರ್ಮಿಕ ಕಾಯ್ದೆ ೧೯೭೯ :** ಅಂತರ್ ರಾಜ್ಯ ವಲಸೆ ಕಾರ್ಮಿಕ ಕಾಯ್ದೆಯನ್ನು ೧೯೭೯ರಲ್ಲಿ ಜಾರಿಗೆ ತರಲಾಯಿತು. ಈ ಕಾಯ್ದೆಯ ಪ್ರಕಾರ ಸಾಮಾನ್ಯ ಕಾರ್ಮಿಕರು ಅಥವಾ ವಲಸೆ ಬಂದ ಕಾರ್ಮಿಕರಲ್ಲಿ ೨೦ ಜನ ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯವರು ಮಹಿಳಾ ಕಾರ್ಮಿಕರಾಗಿದ್ದರೆ ಅವರ ಮಕ್ಕಳಿಗಾಗಿ ಕೆಲಸ ಸ್ಥಳದಲ್ಲಿ ಶಿಶುವಿಹಾರಗಳನ್ನು ಸ್ಥಾಪಿಸಬೇಕು. ವಲಸೆ ಬಂದ ಕಾರ್ಮಿಕರು ಕೆಲಸದ ಸ್ಥಳದಲ್ಲಿ ಮೂರು ತಿಂಗಳು ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯವರೆಗೆ ನೆಲೆಸಿದ್ದರೆ ಅವರನ್ನು ವಲಸೆ ಬಂದ ಕಾರ್ಮಿಕರೆಂದು ಪರಿಗಣಿಸಬೇಕೆಂದು ಕಾಯ್ದೆ ತಿಳಿಸುತ್ತದೆ.

**೬. ಕೈಗಾರಿಕಾ ಕಾಯ್ದೆ-೧೯೪೮ :** ೧೮೮೧ರಲ್ಲಿ ಜಾರಿಗೆ ತಂದ ಕೈಗಾರಿಕಾ ಕಾಯ್ದೆಯನ್ನು ಅನೇಕ ಸಲ ತಿದ್ದುಪಡಿ ಮಾಡಿ ೧೯೪೮ರಲ್ಲಿ ಜಾರಿಗೊಳಿಸಲಾಯಿತು. ಈ ಕಾಯ್ದೆಯು ಕಾರ್ಮಿಕರ ಕೆಲಸದ ಅವಧಿ, ರಜೆಯ ಸೌಲಭ್ಯ, ಕಾರ್ಖಾನೆಗಳಲ್ಲಿ ಕಾರ್ಮಿಕರಿಗೆ ಒದಗಿಸಬೇಕಾದ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. ಅಲ್ಲದೆ ೧೩ಕ್ಕಿಂತ ಅಧಿಕ ಸಂಖ್ಯೆಯಲ್ಲಿ ಮಹಿಳಾ ಕಾರ್ಮಿಕರಿರುವ ಪ್ರತಿಯೊಂದು ಕಾರ್ಖಾನೆಯು ಕಾರ್ಮಿಕರ ಮಕ್ಕಳಿಗಾಗಿ ಶಿಶುವಿಹಾರ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ತಿಳಿಸುತ್ತದೆ.

**೭. ಗಣಿ ಉದ್ಯಮಗಳ ಕಾನೂನು ೧೯೫೨ :** ೧೯೫೨ರಲ್ಲಿ ಗಣಿ ಉದ್ಯಮಗಳ ಕಾಯ್ದೆಯನ್ನು ಜಾರಿಗೊಳಿಸ ಲಾಯಿತು. ಈ ಕಾಯ್ದೆಯು ತಳ ಅಂತಸ್ತಿನ ಗಣಿ ಕೆಲಸದಲ್ಲಿ ಮಹಿಳಾ ಕಾರ್ಮಿಕರನ್ನು ಬೆಳಿಗ್ಗೆ ೬

ಗಂಟೆಯಿಂದ ಸಂಜೆ ೭ ಗಂಟೆಯವರೆಗೆ ದುಡಿಸಿಕೊಳ್ಳಬೇಕು. ಆದರೆ ಮಹಿಳೆಯರನ್ನು ರಾತ್ರಿ ೧೦ ಗಂಟೆಯಿಂದ ಬೆಳಗಿನ ೫ ಗಂಟೆವರೆಗಿನ ಕೆಲಸಕ್ಕೆ ನೇಮಿಸಿಕೊಳ್ಳಬಾರದು ಎಂದು ತಿಳಿಸುತ್ತದೆ. ಮಹಿಳಾ ಕಾರ್ಮಿಕರಿಗೆ ಗಣಿ ಸ್ಥಳದಲ್ಲಿ ಶೌಚಾಲಯ ಮತ್ತು ಸ್ನಾನದ ಸೌಲಭ್ಯವನ್ನು ಒದಗಿಸಬೇಕೆಂದು ತಿಳಿಸುತ್ತದೆ. ಹಾಗೂ ಮಹಿಳಾ ಕಾರ್ಮಿಕರಿಗೆ ೧೧ ಗಂಟೆಗಿಂತ ಕಡಿಮೆ ಅವಧಿಯನ್ನು ವಿಶ್ರಾಂತಿಗಾಗಿ ನೀಡಬಾರದು ಎಂದು ತಿಳಿಸುತ್ತವೆ.

೮. ಮಾತೃತ್ವ ನೆರವಿನ ಕಾನೂನು ೧೯೬೧ : ೧೯೬೧ರಲ್ಲಿ ಈ ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಒಂದು ಉದ್ಯಮದಲ್ಲಿ ೮೦ ದಿನ ಕೆಲಸ ಮಾಡಿದ ಪ್ರತಿಯೊಬ್ಬ ಮಹಿಳಾ ಕಾರ್ಮಿಕರು ಈ ಕಾಯ್ದೆಯ ಸೌಲಭ್ಯ ಪಡೆಯಲು ಅರ್ಹರಾಗುತ್ತಾರೆ. ಈ ಕಾಯ್ದೆಯು ಮಹಿಳಾ ಕಾರ್ಮಿಕರಿಗೆ ಗರ್ಭಿಣಿಯಾಗಿದ್ದಂತಹ ಸಮಯದಲ್ಲಿ ಹೆರಿಗೆಗಿಂತ ಪೂರ್ವ ೬-ವಾರಗಳವರೆಗೆ ಮತ್ತು ಹೆರಿಗೆಯ ನಂತರ ೬ ತಿಂಗಳುಗಳವರೆಗೆ ವೇತನಸಹಿತ ರಜೆ ಸೌಲಭ್ಯವನ್ನು ನೀಡಬೇಕೆಂದು ತಿಳಿಸುತ್ತದೆ. ಹಾಗೂ ರೂ. ೨೫೦ಗಳನ್ನು ವೈದ್ಯಕೀಯ ಬೋನಸ್ ಆಗಿ ನೀಡಬೇಕೆಂದು ತಿಳಿಸುತ್ತದೆ.

**೯. ಸಮಾನ ವೇತನ ಕಾಯ್ದೆ ೧೯೭೬ :** ಸಮಾನ ವೇತನ ಕಾಯ್ದೆಯನ್ನು ೧೯೭೬ರಲ್ಲಿ ಜಾರಿಗೆ ತರಲಾಯಿತು. ಈ ಕಾಯ್ದೆಯು ಸಮಾನ ಕೆಲಸಕ್ಕೆ ಅಥವಾ ಸಮಾನ ಕೆಲಸದ ಸ್ವರೂಪ ಇರುವ ಉದ್ಯೋಗಕ್ಕೆ ಮಹಿಳೆ ಮತ್ತು ಪುರುಷರಿಗೂ ಸಮಾನ ವೇತನ ನೀಡಬೇಕೆಂದು ತಿಳಿಸುತ್ತದೆ. ಮಹಿಳೆ ಮತ್ತು ಪುರುಷ ಎಂಬ ಕಾರಣಕ್ಕಾಗಿ ವೇತನ ತಾರತಮ್ಯ ಮಾಡಬಾರದು ಎಂದು ಈ ಕಾಯ್ದೆ ತಿಳಿಸುತ್ತದೆ. ಆದರೆ ವಾಸ್ತವಿಕವಾಗಿ ಲಿಂಗ ಆಧಾರದ ಮೇಲೆ ಲಿಂಗ ತಾರತಮ್ಯ ನಡೆಯುತ್ತದೆ.

**೧೦. ಬೀಡಿ ಕಟ್ಟುವ ಕಾರ್ಮಿಕರ ಕಲ್ಯಾಣ ನಿಧಿ ಕಾಯ್ದೆ - ೧೯೭೬**

ಈ ಕಾಯ್ದೆಯನ್ನು ೧೯೭೬ರಲ್ಲಿ ಜಾರಿಗೆ ತರಲಾಯಿತು. ಮಹಿಳಾ ಕಾರ್ಮಿಕರನ್ನು ಸಲಹಾ ಮಂಡಳಿ ಮತ್ತು ಕೇಂದ್ರೀಯ ಸಲಹಾ ಮಂಡಳಿ ಸದಸ್ಯರನ್ನಾಗಿ ಕೈಗಾರಿಕಾ ಆಡಳಿತ ಮಂಡಳಿ ನೇಮಿಸಿಕೊಳ್ಳಬೇಕೆಂದು ೧೯೭೬ರ ಕಾಯ್ದೆ ತಿಳಿಸುತ್ತದೆ. ಮಹಿಳಾ ಕಾರ್ಮಿಕರ ಸಮಸ್ಯೆಗಳಿಗೆ ಮಹಿಳೆಯರು ಸ್ಪಂದಿಸಬಹುದೆಂಬುದು ಈ ಕಾಯ್ದೆಯ ಆಶಯವಾಗಿದೆ.

**೧೧. ಕಾರ್ಮಿಕರ ನಷ್ಟ ಪರಿಹಾರ ಕಾನೂನು ೧೯೨೩ :** ಈ ಕಾಯ್ದೆಯನ್ನು ೧೯೨೩ರಲ್ಲಿ ಜಾರಿಗೆ ತರಲಾಗಿದ್ದು, ಕಾರ್ಮಿಕರು ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದಾಗ ಅಥವಾ ಕೆಲಸದ ಸ್ಥಳದಲ್ಲಿ ಅಪಘಾತ ಸಂಭವಿಸಿ ಗಾಯಗೊಂಡರೆ ಅಥವಾ ಮೃತಪಟ್ಟರೆ ಅವರನ್ನು ಅವಲಂಬಿಸಿ ಜೀವಿಸುತ್ತಿದ್ದವರಿಗೆ ಯೋಗ್ಯ ಪರಿಹಾರವನ್ನು ಒದಿಗಸಬೇಕೆಂದು ಕಾಯ್ದೆ ತಿಳಿಸುತ್ತದೆ. ಪರಿಹಾರದ ಮೊತ್ತವನ್ನು ನಿರ್ಣಯಿಸುವಾಗ ಕಾರ್ಮಿಕರ ವೇತನ ಹಾಗೂ ಅಪಘಾತದ ಸ್ವರೂಪವನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಕಾಯ್ದೆ ಹೇಳುತ್ತದೆ.

**೧೨. ಬೋನಸ್ ಕಾಯ್ದೆ ೧೯೬೫ :** ೧೯೪೮ರ ಕಾರ್ಖಾನೆಗಳ ಕಾಯ್ದೆಯ ವ್ಯಾಪ್ತಿಗೊಳಪಡುವ ಎಲ್ಲ ಕಾರ್ಖಾನೆಗಳಿಗೆ ಈ ಕಾಯ್ದೆ ಅನ್ವಯವಾಗುತ್ತದೆ. ಈ ಕಾನೂನು ಮಾಲೀಕರು ಕನಿಷ್ಠ ವರ್ಷಕ್ಕೊಮ್ಮೆ ತಮ್ಮ ಲಾಭಾಂಶದಲ್ಲಿ ಒಂಧು ಭಾಗವನ್ನು ಕಾರ್ಮಿಕರಿಗೆ ಬೋನಸ್ ನೀಡಬೇಕೆಂದು ತಿಳಿಸುತ್ತದೆ. ಹೀಗಾಗಿ ಎಲ್ಲ ಉದ್ಯಮಗಳು ತಮ್ಮ ಲಾಭಾಂಶದ ಒಂದು ಭಾಗವನ್ನು ಕಾರ್ಮಿಕರಿಗೆ ಬೋನಸ್ ರೂಪದಲ್ಲಿ ನೀಡುತ್ತವೆ. ಇದನ್ನು ಕಟ್ಟಡ ನಿರ್ಮಾಣ ಉದ್ಯಮದಲ್ಲಿ ಕಾಣಬಹುದು. ಕೊಪ್ಪಳ ಜಿಲ್ಲೆಯ ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಕಾಂಟ್ರಾಕ್ಟರ್‌ಗಳು ದೀಪಾವಳಿ ಹಬ್ಬದಂದು ಬೋನಸ್ ರೂಪದಲ್ಲಿ ಹೆಚ್ಚಿನ ವೇತನ, ಬಟ್ಟೆ ಹಾಗೂ ಸಮವಸ್ತ್ರಗಳನ್ನು ನೀಡುತ್ತಿರುವುದು ಕಂಡುಬರುತ್ತಿದೆ.

**೧೩. ಗ್ರಾಚ್ಯುಟಿ ಕಾಯ್ದೆ-೧೯೭೨ :** ಈ ಕಾಯ್ದೆಯನ್ನು ೧೯೭೨ರಲ್ಲಿ ಜಾರಿಗೆ ತರಲಾಗಿದ್ದು, ಈ ಕಾಯ್ದೆಯು ಕಾರ್ಮಿಕರ ವೇತನದ ೨೦ ಪಟ್ಟಿನಷ್ಟು ಹಣವನ್ನು ಅವನ ನಿವೃತ್ತಿ ವೇಳೆಯಲ್ಲಿ ನೀಡಬೇಕೆಂದು ತಿಳಿಸುತ್ತದೆ.

**೧೪. ಕಟ್ಟಡ ನಿರ್ಮಾಣ ಮತ್ತು ಇತರ ನಿರ್ಮಾಣ ಕಾರ್ಮಿಕರ ಕಾಯ್ದೆ-೧೯೯೬ :** ಕೇಂದ್ರ ಸರಕಾರ ಈ ಕಾಯ್ದೆಯನ್ನು ೧೯೯೬ರಲ್ಲಿ ಕಟ್ಟಡ ನಿರ್ಮಾಣ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣಕ್ಕಾಗಿ ಜಾರಿಗೊಳಿಸಿದೆ. ಈ ಕಾಯ್ದೆಯ ಪ್ರಕಾರ ಪ್ರತಿಯೊಂದು ರಾಜ್ಯವು ಕಟ್ಟಡ ನಿರ್ಮಾಣ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯನ್ನು ಸ್ಥಾಪಿಸಬೇಕು. ಹಾಗೂ ಮಹಿಳಾ ಕಾರ್ಮಿಕರಿಗೆ ಹೆರಿಗೆಭತ್ಯೆ ಮತ್ತು ವೇತನ ಸಹಿತ ರಜೆ ನೀಡಬೇಕು. ಮಹಿಳಾ ಕಾರ್ಮಿಕರ ಕಲ್ಯಾಣಕ್ಕೆ ಪ್ರತ್ಯೇಕ ನಿಧಿ ಸ್ಥಾಪಿಸಬೇಕೆಂದು ೧೯೯೬ರ ಕಾಯ್ದೆ ತಿಳಿಸುತ್ತದೆ. ಹಾಗೂ ೫೦ ಕ್ಕಿಂತ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ಕೆಲಸ ಮಾಡುವ ನಿರ್ಮಾಣ ಉದ್ಯಮದಲ್ಲಿ ಶಿಶುಪಾಲನಾ ಕೇಂದ್ರ ಅಥವಾ ಅಂಗನವಾಡಿ ಕೇಂದ್ರಗಳನ್ನು ತೆರೆಯಬೇಕೆಂದು ತಿಳಿಸುತ್ತದೆ. ಅಲ್ಲದೆ ಕೆಲಸದ ಸಂದರ್ಭದಲ್ಲಿ ಅಪಘಾತಕ್ಕೆ ಒಳಗಾದ ಕಾರ್ಮಿಕರಿಗೆ ಅಪಘಾತ ವಿಮೆ, ಜೀವ ವಿಮೆ ಮತ್ತು ಕಾರ್ಮಿಕರ ಮಕ್ಕಳ ವಿದ್ಯಾಭ್ಯಾಸಕ್ಕೆ ಆರ್ಥಿಕ ಸಹಾಯ ನೀಡಬೇಕೆಂದು ಈ ಕಾಯ್ದೆ ತಿಳಿಸುತ್ತದೆ.[೭೧]

**೧೫. ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆಗಳು :** ಅಸಂಘಟಿತ ವಲಯದ ಕಾರ್ಮಿಕರ ಸಮಸ್ಯೆಗಳನ್ನು ಮನಗಂಡ ಕೇಂದ್ರ ಸರಕಾರ ೨೦೦೩, ೨೦೦೪, ೨೦೦೫, ೨೦೦೭ ಮತ್ತು ೨೦೦೯ರಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಮಸೂದೆಯನ್ನು ಜಾರಿಗೊಳಿಸಿದೆ. ಆ ಮೂಲಕ ಆ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸಿದೆ ಹಾಗೂ ಒದಗಿಸುವ ಪ್ರಯತ್ನ ಮಾಡುತ್ತಿದೆ.

**೧. ಅಸಂಘಟಿತ ವಲಯದ ಕಾರ್ಮಿಕರು ಕಾಯ್ದೆ ಅಥವಾ ಮಸೂದೆ ೨೦೦೩ :** ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ (SNL-Secand National labour Commission) ಸಂಸತ್ತಿನಲ್ಲಿ ೨೦೦೩ರ

ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆ ಮಂಡಿಸಲು ಶಿಫರಸ್ಸು ಮಾಡಿದೆ. ಈ ಕಾಯ್ದೆಯು ಅಸಂಘಟಿತ ವಲಯದ ಕಾರ್ಮಿಕರಿಗೆ ೮ ಗಂಟೆಗಳ ಕೆಲಸದ ಅವಧಿ, ಕನಿಷ್ಠ ವೇತನ, ಮತ್ತು ಮಹಿಳಾ ಕಾರ್ಮಿಕರಿಗೆ ಸಮಾನ ವೇತನ ನೀಡಬೇಕೆಂದು ತಿಳಿಸುತ್ತದೆ.[೨೨] ಮುಖ್ಯವಾಗಿ ಈ ಮಸೂದೆ ಕೃಷಿ ಕಾರ್ಮಿಕರಿಗೆ ಸಂಬಂಧಿಸಿದೆ.

೨. ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆ ೨೦೦೪ : ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆ ೨೦೦೪ ಮುಖ್ಯವಾಗಿ ನಗರ ಪ್ರದೇಶಗಳಲ್ಲಿ ದುಡಿಯುವ ಹಾಗೂ ಜಾಗತೀಕರಣದಿಂದ ತೊಂದರೆಗೆ ಒಳಗಾದ ಸ್ವಯಂ ಉದ್ಯೋಗ ನಿರತ ಕಾರ್ಮಿಕರು, ರಿಕ್ಷಾವಾಲಗಳು ಮತ್ತು ಬೀದಿ ವ್ಯಾಪಾರಿಗಳ ಕಲ್ಯಾಣದ ಬಗ್ಗೆ ಧ್ವನಿ ಎತ್ತುತ್ತದೆ. ಸ್ವಯಂ ಉದ್ಯೋಗ ನಿರತ ಉದ್ಯೋಗದಲ್ಲಿ ೧೯೪೮ರ ಕನಿಷ್ಠ ಕೂಲಿ ಕಾಯ್ದೆಯನ್ನು ಜಾರಿಗೊಳಿಸಬೇಕೆಂದು ತಿಳಿಸುತ್ತದೆ.

**೩. ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆ-೨೦೦೫ :** ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳ ಮಸೂದೆ ೨೦೦೫ನ್ನು ರಾಷ್ಟ್ರೀಯ ಆಯೋಗದ ಸಲಹೆ ಮೇರೆಗೆ ಸಂಸತ್ತಿನಲ್ಲಿ ಜಾರಿಗೆ ತರಲಾಯಿತು. ಈ ಮಸೂದೆಯು ಇಡೀ ದೇಶದಲ್ಲಿರುವ ಎಲ್ಲ ಅಸಂಘಟಿತ ವಲಯದ ಕಾರ್ಮಿಕರನ್ನು ಒಳಗೊಂಡಿದೆ. ಪ್ರತಿ ತಿಂಗಳು ೫೦೦೦ ರೂಪಾಯಿಗಳಿಗಿಂತ ಕಡಿಮೆ ವೇತನ ಪಡೆಯುವ ಎಲ್ಲ ಕಾರ್ಮಿಕರು ಈ ಮಸೂದೆಗೆ ಒಳಪಡುತ್ತಾರೆ. ಸ್ವಯಂ ಉದ್ಯೋಗದಾರರು, ಸಣ್ಣ ಅತೀ ಸಣ್ಣ ರೈತರು, ಕೂಲಿ ಕಾರ್ಮಿಕರು, ಮನೆ ಆಧಾರಿತ ಕೆಲಸಗಾರರು, ಅನೌಪಚಾರಿಕ ವಲಯದ ಕಾರ್ಮಿಕರು ಮತ್ತು ಸಾಮಾಜಿಕ ಭದ್ರತೆಗಳನ್ನು ಪಡೆಯದ ಸಂಘಟಿತ ವಲಯದ ಕಾರ್ಮಿಕರ ಒಟ್ಟು ೩೦೦ ಮಿಲಿಯನ್ ಕಾರ್ಮಿಕರು ಈ ಕಾಯ್ದೆಯ ವ್ಯಾಪ್ತಿಗೆ ಒಳಪಡುತ್ತಾರೆ.

ಈ ಮಸೂದೆಯಿಂದಾಗಿ ಅಸಂಘಟಿತ ವಲಯದ ಕಾರ್ಮಿಕರು ೧. ೬೦ ವರ್ಷ ದಾಟಿದ ಕಾರ್ಮಿಕರು ನಿವೃತ್ತಿ ವೇತನವನ್ನು, ೨. ಆರೋಗ್ಯ ವಿಮೆಯನ್ನು ಕಾರ್ಮಿಕ ಮತ್ತು ೧೮ ವರ್ಷಗಳಿಗಿದ್ದ ಮಕ್ಕಳು ಪಡೆಯುತ್ತಾರೆ, ೩. ಮಹಿಳಾ ಕಾರ್ಮಿಕರು ಹೆರಿಗೆ ಭತ್ಯ ಸೌಲಭ್ಯವನ್ನು, ೪ ಮರಣ ಹೊಂದಿದರೆ ಜೀವ ವಿಮೆಯನ್ನು ಮತ್ತೆ ಕೆಲಸದ ಸಂದರ್ಭದಲ್ಲಿ ಅಪಘಾತ ಸಂಭವಿಸಿ ಅಂಗವಿಕಲನಾದರೆ "ವಿಮೆ ಪರಿಹಾರವನ್ನು ಪಡೆಯಲು ಕಾರ್ಮಿಕರು ಅರ್ಹರಾಗಿರುತ್ತಾರೆ.[೨೩]

**೪. ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ ೨೦೦೭ :** ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆಯು ೨೦೦೭ "ಗೃಹ ಆಧಾರಿತ ಕೆಲಸಗಾರರು"ರನ್ನು ಅಸಂಘಟಿತ ವಲಯದ ಕಾರ್ಮಿಕರೆಂದು ವ್ಯಾಖ್ಯಾನಿಸಿದೆ. 'ಗೃಹ ಆಧಾರಿತ ಕೆಲಸಗಾರರು' ಮನೆಯಲ್ಲಿಯೇ ಕುಳಿತು ಸರಕು ಮತ್ತು ಸೇವೆಗಳನ್ನು ಉತ್ಪಾದಿಸುವುದನ್ನು ಈ ಕಾಯ್ದೆ ಅಸಂಘಟಿತ ವಲಯದ

ಉದ್ಯೋಗ ಎಂದು ಪರಿಗಣಿಸುತ್ತದೆ. ಈ ರೀತಿಯ ಅಸಂಘಟಿತ ವಲಯದಲ್ಲಿ ತೊಡಗಿದ ಕಾರ್ಮಿಕರಿಗೆ ಈ ಕೆಳಗೆ ಸೂಚಿಸಿದ ಸೌಲಭ್ಯಗಳನ್ನು ಪಡೆಯುತ್ತಾರೆ ಎಂದು ತಿಳಿಸುತ್ತದೆ.

೧. ಜೀವ ವಿಮೆ ಮತ್ತು ಅಪಘಾತ ವಿಮೆ

೨. ಆರೋಗ್ಯ ಮತ್ತು ಮಾತೃತ್ವ ನೆರವು

೩. ನಿವೃತ್ತಿಯ ಅಥವಾ ವೃದ್ಧಾಪ್ಯದ ಭದ್ರತೆ

೪. ಕೇಂದ್ರ ಸರಕಾರವು ನೀಡುವ ಇತರ ಸೌಲಭ್ಯಗಳನ್ನು ಪಡೆಯಲು ಈ ಕಾರ್ಮಿಕರು ಅರ್ಹರಿರುತ್ತಾರೆ.

ಹಾಗೂ ರಾಜ್ಯ ಸರಕಾರಗಳು ಕಾಲಕಾಲಕ್ಕೆ ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣಕ್ಕೆ ಯೋಜನೆಗಳನ್ನು ಜಾರಿಗೊಳಿಸಬೇಕೆಂದು ೨೦೦೭ರ ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ ತಿಳಿಸುತ್ತದೆ. ರಾಜ್ಯ ಸರಕಾರಗಳು ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣಕ್ಕೆ ಈ ಕೆಳಗೆ ಸೂಚಿಸಿದ ಯೋಜನೆಗಳನ್ನು ಜಾರಿಗೆ ತಂದಿದೆ.

೧. ಪ್ರಾವಿಡೆಂಟ್ ಫಂಡ್

೨. ಕೆಲಸದ ಸಮಯದ ಅಪಘಾತ ಪರಿಹಾರ

೩. ವಸತಿ ಸೌಲಭ್ಯ

೪. ಅಸಂಘಟಿತ ವಲಯದ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯ

೫. ಕಾರ್ಮಿಕರ ಸೌಲಭ್ಯವನ್ನು ವೃದ್ಧಿಗೊಳಿಸುವುದು.

೬. ಶವಸಂಸ್ಕಾರಕ್ಕೆ ಹಣಕಾಸಿನ ಸಹಾಯ

೭. ವೃದ್ಧಾಶ್ರಮ ಸ್ಥಾಪನೆ ಇತ್ಯಾದಿ ಸೌಲಭ್ಯಗಳು[೭೪]

ಈ ಎಲ್ಲ ಸೌಲಭ್ಯಗಳನ್ನು ಅಸಂಘಟಿತ ವಲಯದ ಕಾರ್ಮಿಕರಿಗೆ ನೀಡಬೇಕೆಂದು ೨೦೦೭ರ ಕಾಯ್ದೆ ತಿಳಿಸುತ್ತದೆ. "೨೦೦೯ರ ಅಸಂಘಟಿತ ವಲಯದ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ" ಮೇಲೆ ಸೂಚಿಸಿದ ಎಲ್ಲ ಸೌಲಭ್ಯಗಳನ್ನು ಅಸಂಘಟಿತ ವಲಯದ ಕಾರ್ಮಿಕರಿಗೆ ನೀಡಬೇಕೆಂದು ತಿಳಿಸುತ್ತದೆ. ಆದರೆ ೨೦೦೯ರ ಅಸಂಘಟಿತ ಕಾರ್ಮಿಕರ ಕಲ್ಯಾಣ ಕಾಯ್ದೆಯ ಮಾಹಿತಿ ಲಭ್ಯವಿಲ್ಲದಿದ್ದರಿಂದ ಆ ಕಾಯ್ದೆಯ ಕಾರ್ಮಿಕರ ಕಲ್ಯಾಣ ಯೋಜನೆಗಳನ್ನು ವಿವರಿಸಲು ಇಲ್ಲಿ ಸಾಧ್ಯವಾಗಿರುವುದಿಲ್ಲ. ಇದು ಈ ಅಧ್ಯಾಯದ ನ್ಯೂನತೆಗಳಲ್ಲಿ ಒಂದಾಗಿವೆ.

ಸಂವಿಧಾನವು ಎಲ್ಲರಿಗೂ ಸಮಾನತೆ, ಸಮಾನ ಅವಕಾಶಗಳನ್ನು ನೀಡುವುದಕ್ಕಾಗಿ ದುರ್ಬಲ ವರ್ಗದವರಿಗಾಗಿ ಮತ್ತು ಮಹಿಳೆಯರಿಗಾಗಿ ವಿಶೇಷ ಸಂವಿಧಾನಾತ್ಮಕ ಅವಕಾಶಗಳನ್ನು ನೀಡಿದೆ.

ಲಿಂಗತಾರತಮ್ಯ ಮಾಡುವುದನ್ನು ನಿಷೇಧಿಸಿದೆ. ಆದರೆ ಇಂದು ಆರ್ಥಿಕ ವ್ಯವಸ್ಥೆಯಲ್ಲಿ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರನ್ನು ಎರಡನೇ ದರ್ಜೆಯ ವ್ಯಕ್ತಿಯನ್ನಾಗಿ ಕಾಣಲಾಗುತ್ತದೆ. ಅಲ್ಲದೆ ಮಹಿಳೆಯರ ದುಡಿಮೆಗೆ ಸಮಾನ ವೇತನ ನೀಡದೆ ಕಡಿಮೆ ವೇತನವನ್ನು ನೀಡಲಾಗುತ್ತಿದೆ ಹಾಗೂ ಅವರನ್ನು ಅನಾರೋಗ್ಯಕರ ಪರಿಸ್ಥಿತಿಯಲ್ಲಿ ದುಡಿಸಿಕೊಳ್ಳಲಾಗುತ್ತದೆ. ಇದರಿಂದಾಗಿ ಸಂವಿಧಾನಾತ್ಮಕ ಅವಕಾಶ ಹಾಗೂ ಹಕ್ಕುಗಳು ಸಂವಿಧಾನದಲ್ಲಿಯೇ ಉಳಿದಿರುವುದು ಕಂಡುಬರುತ್ತದೆ.

ಸಂಸತ್ತು ಅನೇಕ ಕಾಯ್ದೆ ಕಾನೂನುಗಳನ್ನು ಜಾರಿಗೊಳಿಸಿ ಅಸಂಘಟಿತ ವಲಯದಲ್ಲಿ ದುಡಿಯುವ ಕಾರ್ಮಿಕರ ಕಲ್ಯಾಣಕ್ಕಾಗಿ ಅನೇಕ ಉದ್ಯೋಗ ಭದ್ರತೆ ಹಾಗೂ ಸಾಮಾಜಿಕ ಭದ್ರತಾ ಕ್ರಮಗಳನ್ನು ಜಾರಿಗೊಳಿಸಿದೆ. ಆದರೆ ಆ ಯೋಜನೆಗೆ ಸೌಲಭ್ಯ ಸೌಕರ್ಯಗಳನ್ನು ಪಡೆಯುವಲ್ಲಿ ಮಹಿಳಾ ಕಾರ್ಮಿಕರು ಹಿಂದೆ ಬಿದ್ದಿರುವುದು ಸ್ಪಷ್ಟವಾಗುತ್ತದೆ. ಒಟ್ಟು ಕಾರ್ಮಿಕರಲ್ಲಿ ಶೇಕಡ ೨ರಷ್ಟು ಮಹಿಳಾ ಕಾರ್ಮಿಕರು ಮಾತ್ರ ಸಾಮಾಜಿಕ ಭದ್ರಾ ಸೌಲಭ್ಯಗಳನ್ನು ಪಡೆದಿದ್ದಾರೆ ಎಂಬ ಅಂಶ NSS ಅವರ ವರದಿಯಿಂದ ತಿಳಿದುಬರುತ್ತಿದೆ. ಈ ಅಂಶಗಳನ್ನು ಗಮನಿಸಿದರೆ ಮಹಿಳಾ ಕಾರ್ಮಿಕರು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುವುದರಿಂದ ದೂರ ಉಳಿದಿರುವುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣ ಸರಕಾರ ಜಾರಿಗೆ ತಂದ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳ ಬಗ್ಗೆ ಮಹಿಳಾ ಕಾರ್ಮಿಕರಿಗೆ ಮಾಹಿತಿ ಇಲ್ಲದಿರುವುದು ಹಾಗೂ ಸಮಾಜದಲ್ಲಿನ ಪುರುಷಶಾಹಿ ಧೋರಣೆ ಮತ್ತು ಯೋಜನೆಗಳ ಜಾರಿಯಲ್ಲಿನ ಪುರುಷಶಾಹಿ ಧೋರಣೆ ಮಹಿಳೆಯರನ್ನು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುವುದರಿಂದ ವಂಚಿತರನ್ನಾಗಿ ಮಾಡಿದೆ. ಹೀಗಾಗಿ ಈ ಸೌಲಭ್ಯಗಳು ಮತ್ತು ಕಲ್ಯಾಣ ಯೋಜನೆಗಳು ಯೋಜನೆಗಳಾಗಿ ಉಳಿದಿವೆ.

ಆದ್ದರಿಂದ ಸರಕಾರ ಸಂವಿಧಾನ ನೀಡಿದ ಸಲಹೆಗಳನ್ನು ಪಾಲಿಸಬೇಕು. ಅಲ್ಲದೆ ಮಹಿಳೆಯರ ರಕ್ಷಣೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕು. ಶಾಸಕಾಂಗ ರೂಪಿಸಿದ ಮಹಿಳಾಪರ ಮಸೂದೆಗಳನ್ನು ಕಡ್ಡಾಯವಾಗಿ ಜಾರಿಗೆ ತರಬೇಕು. ಆ ಕಾಯ್ದೆ ಮತ್ತು ಮಸೂದೆಗಳ ಬಗ್ಗೆ ಪ್ರಚಾರ ಕೈಗೊಂಡು ಅವು ಮಹಿಳೆಯರಿಗೆ ತಲುಪುವಂತೆ ಮಾಡಬೇಕು. ಆಗ ಮಾತ್ರ ಮಹಿಳೆಯರ ರಕ್ಷಣೆ ಅಥವಾ ಕಾರ್ಮಿಕರ ರಕ್ಷಣೆ ಹಾಗೂ ಕಾರ್ಮಿಕರ ಕಲ್ಯಾಣ ಸಾಧ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಸುಬ್ರಹ್ಮಣ್ಯ ಆರ್.ಕೆ. ಮತ್ತು ರೇನನ್ ಜಿಹಬ್ ವಾಲ, ೨೦೦೨, ದ ಅನ್‌ಆರ್ಗನೈಸ್ಡ್ ಸೆಕ್ಟರ್, ವರ್ಕ್ ಸೆಕ್ಯೂರಿಟಿ ಆ್ಯಂಡ್ ಸೋಶಿಯಲ್ ಪ್ರೊಟೆಕ್ಷನ್, ಪು.೧೮

೨. ಮಿನಿಸ್ಟರಿ ಆಫ್ ಲೇಬರ್ ಆ್ಯಂಡ್ ಎಂಪ್ಲಾಯ್‌ಮೆಂಟ್, ೨೦೦೫-೦೬, ಗೌರ್ನಮೆಂಟ್ ಆಫ್ ಇಂಡಿಯಾ, ಆ್ಯನುವಲ್ ರಿಪೋರ್ಟ್, ಪು.೬೫

೩. ಎನ್.ಎಸ್.ಎಸ್. ೫೫ನೇ ಸುತ್ತಿನ ವರದಿ, ವರದಿ ಸಂಖ್ಯೆ-೪೫೯(೫೫/೨.೦/೨) *ಇನ್‌ಫಾರ್ಮಲ್ ಸೆಕ್ಟರ್ ಇನ್ ಇಂಡಿಯಾ ೧೯೯೯-೨೦೦೦*, ಸೇಲೆಂಟ್ ಫ್ಯೂಚರ್ಸ್ ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ ಆ್ಯಂಡ್ ಪ್ರೋಗ್ರಾಂ ಇಂಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ, ಮೇ, ೨೦೦೧, ಪು.೩

೪. ಮೆನ್ ಆ್ಯಂಡ್ ವುಮೆನ್ ಇನ್ ಇಂಡಿಯಾ, ೨೦೦೧, ಸೆಂಟ್ರಲ್ ಸ್ಟೆಟಿಸ್ಟಿಕಲ್ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ಸ್ ಆ್ಯಂಡ್ ಪ್ರೋಗ್ರಾಂ ಇಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ ಪು.೪೩, ಟೇಬಲ್ ೩.೧

೫. ಎನ್.ಎಸ್.ಎಸ್. ೫೫ನೇ ಸುತ್ತಿನ ವರದಿ, ವರದಿ ಸಂಖ್ಯೆ-೪೫೯(೫೫/೨.೦/೨) *ಇನ್‌ಫಾರ್ಮಲ್ ಸೆಕ್ಟರ್ ಇನ್ ಇಂಡಿಯಾ ೧೯೯೯-೨೦೦೦*, ಸೇಲೆಂಟ್ ಫ್ಯೂಚರ್ಸ್ ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ ಆ್ಯಂಡ್ ಪ್ರೋಗ್ರಾಂ ಇಂಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ, ಮೇ, ೨೦೦೧, ಪು.೨-೩

೬. ರಿಪೋರ್ಟ್ ಆಫ್ ನ್ಯಾಷನಲ್ ಕಮೀಷನ್ ಆನ್ ಲೇಬರ್, ವಾಲ್ಯೂಮ್-I ಪಾರ್ಟ - I(೨೦೦೨), ಅನ್ ಆರ್ಗನೈಸ್ಡ್ ಸೆಕ್ಟರ್, ಮಿನಿಸ್ಟರಿ ಆಫ್ ಲೇಬರ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೫೯೬-೫೯೭

೭. ಟುವರ್ಡ್ಸ್ ಈಕ್ವಾಲಿಟಿ ರಿಪೋರ್ಟ್ ೧೯೭೪, ರಿಪೋರ್ಟ್ ಆಫ್ ದ ಕಮಿಟಿ ಆನ್ ದ ಸ್ಟೇಟಸ್ ಆಫ್ ವುಮೆನ್ ಇನ್ ಇಂಡಿಯಾ, ಗೌರ್ನಮೆಂಟ್ ಆಫ್ ಇಂಡಿಯಾ ಮಿನಿಸ್ಟರಿ ಆಫ್ ಎಜುಕೇಷನ್ ಆ್ಯಂಡ್ ಸೋಶಿಯಲ್ ವೆಲ್‌ಫೇರ್, ಡಿಪಾರ್ಟಮೆಂಟ್ ಆಫ್ ಸೋಸಿಯಲ್ ವೆಲ್‌ಫೇರ್ ನ್ಯೂ ದೆಹಲಿ, ಪು.೧೫೭

೮. ಎನ್.ಎಸ್.ಎಸ್. ೫೫ನೇ ಸುತ್ತಿನ ವರದಿ, ವರದಿ ಸಂಖ್ಯೆ-೪೫೯(೫೫/೨.೦/೨) *ಇನ್‌ಫಾರ್ಮಲ್ ಸೆಕ್ಟರ್ ಇನ್ ಇಂಡಿಯಾ ೧೯೯೯-೨೦೦೦*, ಸೇಲೆಂಟ್ ಫ್ಯೂಚರ್ಸ್ ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ ಆ್ಯಂಡ್ ಪ್ರೋಗ್ರಾಂ ಇಂಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ, ಮೇ, ೨೦೦೧, ಪು.೭

೯. ಅದೇ, ಪು.೧-೨

೧೦. ಸಕ್ತಿವೇಲ್ ಎನ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್*, ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೦೭-೨೧೦೮

೧೧. ರಿಪೋರ್ಟ್ ಆಫ್ ನ್ಯಾಷನಲ್ ಕಮೀಷನ್ ಆನ್ ಲೇಬರ್, ವಾಲ್ಯೂಮ್-I ಪಾರ್ಟ - I(೨೦೦೨), ಅನ್ ಆರ್ಗನೈಸ್ಡ್ ಸೆಕ್ಟರ್, ಮಿನಿಸ್ಟರಿ ಆಫ್ ಲೇಬರ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೫೯೭

೧೨. ಅದೇ, ಪು.೫೯೭-೫೯೮

೧೩. ಅದೇ, ಪು.೬೦೦-೬೦೧

೧೪. ಅದೇ, ಪು.೬೦೪-೬೦೫

೧೫. ಹೇಮಲತಾ ಎಚ್.ಎಂ., ೨೦೦೬, ಮಹಿಳಾ ಅಧ್ಯಯನ ೩, *ಅಸಂಘಟಿತ ಕ್ಷೇತ್ರದಲ್ಲಿ ಮಹಿಳೆಯರು, ಕಾರ್ಮಿಕ ಸಂಘ ಮತ್ತು ಮಹಿಳೆಯರು*, ಪು.೪೦-೪೧

೧೬. ಜಹವರ್ ಲಾಲ್ ಸಿಂಗ್, ರವಿಕುಮಾರ್ ಪಾಂಡ್ಸ್, ಅರುಣ್ ಕುಮಾರ್ ಸಿಂಗ್, ೨೦೦೨, ವುಮೆನ್ ಇನ್ ದ ಅನ್‌ಆರ್ಗನೈಸ್ಡ್ ಸೆಕ್ಟರ್, ಪು.೪೦-೪೪

೧೭. ಅಸಂಘಟಿತ ಕಾರ್ಮಿಕರ ಕಾಯ್ದೆ ಜಾರಿಗೆ ಆಗ್ರಹ, ಪ್ರಜಾವಾಣಿ, ಡಿಸೆಂಬರ್ ೧೭, ೨೦೦೪

೧೮. ಟುವರ್ಡ್ ಈಕ್ವಾಲಿಟಿ ರಿಪೋರ್ಟ್ ೧೯೭೪, ರಿಪೋರ್ಟ್ ಆಫ್ ದ ಕಮಿಟಿ ಆನ್ ದ ಸ್ಟೇಟಸ್ ಆಫ್ ವುಮೆನ್

ಇನ್ ಇಂಡಿಯಾ, ಗೌರ್ನಮೆಂಟ್ ಆಫ್ ಇಂಡಿಯಾ ಮಿನಿಸ್ಟ್ರಿ ಆಫ್ ಎಜುಕೇಷನ್ ಆ್ಯಂಡ್ ಸೋಶಿಯಲ್ ವೆಲ್‌ಫೇರ್, ಡಿಪಾರ್ಟಮೆಂಟ್ ಆಫ್ ಸೋಸಿಯಲ್ ವೆಲ್‌ಫೇರ್ ನ್ಯೂ ದೆಹಲಿ, ಪು.೧೫೭

೧೯. ರಿಪೋರ್ಟ್ ಆಫ್ ನ್ಯಾಷನಲ್ ಕಮೀಷನ್ ಆನ್ ಲೇಬರ್, ವಾಲ್ಯೂಮ್-I ಪಾರ್ಟ-I(೨೦೦೨), ಅನ್ ಆರ್ಗನೈಸ್ಡ್ ಸೆಕ್ಟರ್, ಮಿನಿಸ್ಟ್ರಿ ಆಫ್ ಲೇಬರ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೫೯೭

೨೦. ಎನ್.ಎಸ್.ಎಸ್. ೫೫ನೇ ಸುತ್ತಿನ ವರದಿ, ವರದಿ ಸಂಖ್ಯೆ-೪೫೯(೫೫/೨.೦/೨) *ಇನ್‌ಫಾರ್ಮಲ್ ಸೆಕ್ಟರ್ ಇನ್ ಇಂಡಿಯಾ ೧೯೯೯-೨೦೦೦,* ಸೇಲೆಂಟ್ ಫ್ಯೂಚರ್ಸ್ ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಸೇಷನ್, ಮಿನಿಸ್ಟ್ರಿ ಆಫ್ ಸ್ಟೆಟಿಸ್ಟಿಕ್ ಆ್ಯಂಡ್ ಪ್ರೋಗ್ರಾಂ ಇಂಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ, ಮೇ, ೨೦೦೧, ಪು.೧೧೨

೨೧. ವಿನಯಾ, ೨೦೦೫, *ಜಾಗತೀಕರಣ ಮತ್ತು ಮಹಿಳಾ ದುಡಿಮೆ,* ಹೊಸತು, ಸೆಪ್ಟೆಂಬರ್ ೨೦೦೫, ಪು.೫೧-೫೩

೨೨. ಪಾಂಡಿಚೇರಿ ಅಸಂಘಟಿತ ಕಾರ್ಮಿಕರ ಕಲ್ಯಾಣ ಸೊಸೈಟಿ, ಕಾರ್ಮಿಕ ಇಲಾಖೆ ಪಾಂಡಿಚೇರಿ, ೧೪.೩.೨೦೦೮, ಪು.೩

೨೩. ರಿಪೋರ್ಟ್ ಆಫ್ ನ್ಯಾಷನಲ್ ಕಮೀಷನ್ ಆನ್ ಲೇಬರ್, ೨೦೦೦, ಅನ್ ಆರ್ಗನೈಸ್ಡ್ ಸೆಕ್ಟರ್, ಮಿನಿಸ್ಟ್ರಿ ಆಫ್ ಲೇಬರ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೭೩೯

೨೪. ರಿಪೋರ್ಟ್ ಆಫ್ ನ್ಯಾಷನಲ್ ಕಮೀಷನ್ ಆನ್ ಲೇಬರ್, ೨೦೦೨, ಅನ್‌ಆರ್ಗನೈಸ್ಡ್ ಲೇಬರ್-೮, ವಾರ್ಷಿಕ ವರದಿ ೨೦೦೧-೦೨, ಪು.೬೦೬-೬೧೦

೨೫. ಅದೇ, ಪು.೬೧೨

೨೬. ಅದೇ, ಪು.೬೧೦-೬೧೩

೨೭. ಅದೇ, ಪು.೬೧೩-೬೧೪

೨೮. ಅದೇ, ಪು.೬೧೫

೨೯. ಅದೇ, ಪು.೬೧೬-೬೧೮

೩೦. ಅದೇ, ಪು.೬೨೪-೬೨೫

೩೧. ಅದೇ ಕೃತಿ, ಪು.೬೩೦-೬೩೨

೩೨. ಅದೇ, ಪು.೬೩೮-೬೩೯

೩೩. ಅದೇ, ಪು.೬೪೩-೬೪೪

೩೪. ಅದೇ, ಪು.೬೫೯-೬೬೦

೩೫. ಅದೇ, ಪು.೬೬೧-೬೬೨

೩೬. ಅದೇ, ಪು.೬೬೩-೬೬೪

೩೭. ಅದೇ, ಪು.೬೬೬-೬೬೮

೩೮. ಅದೇ, ಪು.೬೭೨-೬೭೩

೩೯. ಸಕ್ತಿವೇಲ್ ಎಸ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್,* ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೦೮-೨೧೧೩

೪೦. www.labour.gov.in

೪೧. www.ministery of labour.gov.in

೪೨. ಸಕ್ತಿವೇಲ್ ಎನ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್*, ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೦೮-೨೧೧೩

೪೩. ಅದೇ, ಪು.೨೧೧೪

೪೪. ಟುವರ್ಡ್ಸ್ ಈಕ್ವಾಲಿಟಿ ರಿಪೋರ್ಟ್ ೧೯೭೪, ರಿಪೋರ್ಟ್ ಆಫ್ ದ ಕಮಿಟಿ ಆನ್ ದ ಸ್ಟೇಟಸ್ ಆಫ್ ವುಮೆನ್ ಇನ್ ಇಂಡಿಯಾ, ಗೌರ್ನಮೆಂಟ್ ಆಫ್ ಇಂಡಿಯಾ ಮಿನಿಸ್ಟರಿ ಆಫ್ ಎಜುಕೇಷನ್ ಆ್ಯಂಡ್ ಸೋಶಿಯಲ್ ವೆಲ್‌ಫೇರ್, ಡಿಪಾರ್ಟಮೆಂಟ್ ಆಫ್ ಸೋಸಿಯಲ್ ವೆಲ್‌ಫೇರ್ ನ್ಯೂ ದೆಹಲಿ, ಪು.೧೫೩

೪೫. ಲೀ ಸಂಗ್ ಹಕ್ ಪಾಲಿಸಿ ಡೈರೆಕ್ಟರೇಟ್ ಕೆ.ಸಿ.ಟಿ.ಯು ಕೊರಿಯಾ, ೨೦೦೩, ದ ಇಂಡೆಕ್ಸ್ ಆಫ್ ನಿಯೋ ಲಿಬರಲ್ ಗ್ಲೋಬಲೈಸೇಷನ್, ಇರೇಗುಲರ್ ಜಾಬ್ಸ್, ಇನ್‌ಫಾರ್ಮಲ್ ಸೆಕ್ಟರ್ ವರ್ಕರ್ ಆ್ಯಂಡ್ ಪಾವರ್ಟಿ ಇನ್ ಏಸಿಯನ್ ವರ್ಕರ್, ಪು.೧

೪೬. ಟುವರ್ಡ್ಸ್ ಈಕ್ವಾಲಿಟಿ ರಿಪೋರ್ಟ್ ೧೯೭೪, ರಿಪೋರ್ಟ್ ಆಫ್ ದ ಕಮಿಟಿ ಆನ್ ದ ಸ್ಟೇಟಸ್ ಆಫ್ ವುಮೆನ್ ಇನ್ ಇಂಡಿಯಾ, ಗೌರ್ನಮೆಂಟ್ ಆಫ್ ಇಂಡಿಯಾ ಮಿನಿಸ್ಟರಿ ಆಫ್ ಎಜುಕೇಷನ್ ಆ್ಯಂಡ್ ಸೋಶಿಯಲ್ ವೆಲ್‌ಫೇರ್, ಡಿಪಾರ್ಟಮೆಂಟ್ ಆಫ್ ಸೋಸಿಯಲ್ ವೆಲ್‌ಫೇರ್ ನ್ಯೂ ದೆಹಲಿ, ಪು.೧೫೩

೪೭. *ಆರ್ಗನೈಸ್ಡ್ ಎಪ್ಲಾಯ್‌ಮೆಂಟ್ ಪ್ರೊಗ್ರೆಸ್ ಆ್ಯನುಲ್ ರಿಪೋರ್ಟ್(೧೯೮೩ ಮತ್ತು ೧೯೮೮) ಮತ್ತು ಕ್ವಾಟರ್ಲಿ ಎಂಪ್ಲಾಯ್‌ಮೆಂಟ್ ರಿವ್ಯೂ(೧೯೯೩-೨೦೦೦)*, ಡಿಜಿಈ ಮತ್ತು ಟಿ, ಆನ್ ಅರ್ಗನೈಸ್ಡ್ ಎಂಪ್ಲಾಯ್‌ಮೆಂಟ್ ಫಿಗರ್ಸ್, ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ, ೨೦೦೬, ಪು.೨೧೦೮

೪೮. *ಎಕನಾಮಿಕ್ ಸರ್ವೆ ೨೦೦೩ ೨೦೦೪ ಮತ್ತು ಡಿಜಿಈ ಮತ್ತು ಟಿ, ಆನ್ ಅರ್ಗನೈಸ್ಡ್ ಎಂಪ್ಲಾಯ್‌ಮೆಂಟ್ ಫಿಗರ್ಸ್*, ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ, ೨೦೦೬, ಪು.೨೬೮೩

೪೯. ಸಕ್ತಿವೇಲ್ ಎನ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್*, ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೧೧

೫೦. ಅದೇ, ಪು.೨೧೧೧

೫೧. ಅದೇ, ಪು.೨೧೧೩

೫೨. ಸುಂದರಂ ಕೆ.ಪಿ.ಎಂ. ಮತ್ತು ರುದ್ರದತ್ತ, ೨೦೦೧, ಇಂಡಿಯಾನ್ ಎಕನಾಮಿ, ಪು.೬೨೦-೬೨೭

೫೩. ಜನಗಣತಿ ೨೦೦೧, ಸೆನ್ಸಸ್ ಆಫ್ ಇಂಡಿಯಾ ೨೦೦೧, ಎನ್.ಲಿಂಗಯ್ಯ ಡಾ.ಜೆ.ಸೋಮಶೇಕರ್ ಈ ಮಹಿಳಾ ಕೃಷಿ ಕಾರ್ಮಿಕರು ವಿಶ್ಲೇಷಣೆ ಯೋಜನಾ ಜನವರಿ, ೨೦೧೦, ಪು.೩೫

೫೪. ಅದೇ, ಪು.೪೭

೫೫. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫, ಪು.೧೯೫

೫೬. ಲೇಬರ್ ಬ್ಯೂರೋ ಗೌರ್ನಮೆಂಟ್ ಆಫ್ ಇಂಡಿಯಾ, ಸ್ಟೆಟಿಸ್ಟಿಕ್ಸ್ ಮಿನಿಮಮ್ ವೇಜ್, ಟೇಬಲ್ ೪, ೨.೧೨.೨೦೧೦, ಪು.೧

೫೭. ಅದೇ ಕೃತಿ (೨೦೦೧), ಪ್ರ.ಸಂ.೬೨, ಟೇಬಲ್ ೪೮

೫೫. ಎ.ಎಸ್.ಸುಬ್ರಮಣ್ಯ, ನಿರ್ಮಾಣ ಕಾರ್ಮಿಕರಿಗೆ ರಕ್ಷಣೆಗೆ ಶಾಸನ, ಪ್ರಜಾವಾಣಿ ವಾರ್ತೆ, ೧೭.೦೧.೨೦೦೭

೫೬. ಕೈಪಿಡಿ (೨೦೦೬), ಕರ್ನಾಟಕ ಸರಕಾರ ಕರ್ನಾಟಕ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಕಾಯ್ದೆ ಮತ್ತು ನಿಯಮಗಳ ಸ್ಥೂಲ ಪರಿಚಯ, ಪು.೧೬

೫೭. ಮೆನ್ ಆ್ಯಂಡ್ ವುಮೆನ್ ಇನ್ ಇಂಡಿಯಾ, ೨೦೦೧, ಸೆಂಟ್ರಲ್ ಸ್ಟೆಟಿಸ್ಟಿಕಲ್ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ಸ್ ಆ್ಯಂಡ್ ಪ್ರೋಗ್ರಾಂ ಇಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ ಪು.೬೨, ಟೇಬಲ್ ೪೮

೫೮. ಸುಬ್ರಹ್ಮಣ್ಯ ಎ.ಎಸ್., ಪ್ರಜಾವಾಣಿ ವಾರ್ತೆ, ನಿರ್ಮಾಣ ಕಾರ್ಮಿಕರ ರಕ್ಷಣೆಗೆ ಶಾಸನ, ೧೭.೧.೨೦೦೭

೫೯. ಕರ್ನಾಟಕ ಸರ್ಕಾರ ಕೈಪಿಡಿ, ಕರ್ನಾಟಕ ಕಟ್ಟಡ ಮತ್ತು ಇತರ ನಿರ್ಮಾಣ ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಪು.೧೭

೬೦. ಸಕ್ತಿವೇಲ್ ಎನ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್,* ಇಕನಾಮಿಕ್ ಆ್ಯಂಡ್ ಪೋಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೦೯

೬೧. ಮೆನ್ ಆ್ಯಂಡ್ ವುಮೆನ್ ಇನ್ ಇಂಡಿಯಾ, ೨೦೦೧, ಸೆಂಟ್ರಲ್ ಸ್ಟೆಟಿಸ್ಟಿಕಲ್ ಆರ್ಗನೈಸೇಷನ್, ಮಿನಿಸ್ಟರಿ ಆಫ್ ಸ್ಟೆಟಿಸ್ಟಿಕ್ಸ್ ಆ್ಯಂಡ್ ಪ್ರೋಗ್ರಾಂ ಇಪ್ಲಿಮೆಂಟೇಷನ್, ಗೌರ್ನಮೆಂಟ್ ಆಫ್ ಇಂಡಿಯಾ ಪು.೫೫, ಟೇಬಲ್ ೪೧

೬೨. ಅನ್ಯುವಲ್ ರಿಪೋರ್ಟ್ ೨೦೦೮-೦೯, ಟೇಬಲ್ ೫೨, ಪು.೬೧

೬೩. www.osha.gov.in, ಪು.೧-೧೯

೬೪. ಜವಹರಲಾಲ್ ಸಿಂಗ್, ರವಿಕುಮಾರಪಾಂಡೆ ಮತ್ತು ಅರುಣಕುಮಾರ್ ಸಿಂಗ್, ೨೦೦೭, ವುಮೆನ್ ವರ್ಕರ್ಸ್ ಇನ್ ಅನ್‌ಆರ್ಗನೈಸಡ್ ಸೆಕ್ಟರ್, ಪು.೪೪-೪೯

೬೫. ಸುಬ್ರಹ್ಮಣ್ಯ ಆರ್.ಕೆ. ಮತ್ತು ರೇನನ್ ಜಿಹಬ್ ವಾಲ, ದ ಅನ್ ಅರ್ಗನೈಸ್ಡ್ ಸೆಕ್ಟರ್ ವರ್ಕರ್ಸ್ ಸೋಸಿಯಲ್ ಸೆಕ್ಯೂರಿಟಿ ಬಿಲ್, ೨೦೦೭, ಪು.೧-೧೨ ಮತ್ತು ಅನ್‌ಆರ್ಗನೈಸ್ಡ್ ಲೇಬರ್, ೨೦೦೫, ಪು.೭೨-೭೪

೬೬. ವಸಂತಕುಮಾರ್ ಬಿ.ಎಸ್., ೨೦೦೯, ಭಾರತದಲ್ಲಿ ಆರೋಗ್ಯ ಸೇವೆಗಳು ಸ್ಪರ್ಧಚೈತ್ರ, ಅಕ್ಟೋಬರ್ ೨೦೦೯, ಪು.೨೦-೨೨

೬೭. ರಣದೀಪ್ ಜಗಪಾಲ್, ೨೦೦೯, ಭಾರತದಲ್ಲಿ ಆರೋಗ್ಯ ವಿಮೆ ಯೋಜನಾ, ಅಕ್ಟೋಬರ್, ೨೦೦೯, ಪು.೧೬-೨೪

೬೮. ಮಿನಿಸ್ಟರಿ ಆಫ್ ಲೇಬರ್ ಎನ್ಯುವಲ್ ರಿಪೋರ್ಟ್ ೨೦೦೩, ಪು.೭೪

೬೯. ಸಕ್ತಿವೇಲ್ ಎನ್., ಪಿನಾಕೀ ಜುದ್ದರ್, ೨೦೦೬, *ಆನ್ ಆರ್ಗನೈಸ್ಡ್ ಸೆಕ್ಟರ್ ವರ್ಕ್‌ಫೋರ್ಸ್ ಇಂಡಿಯಾ ಟ್ರೆಂಡ್, ಪ್ಯಾಟರ್ನ್ ಆ್ಯಂಡ್ ಸೋಸಿಯಲ್ ಸೆಕ್ಯೂರಿಟಿ ಕವರೇಜ್,* ಇಕನಾಮಿಕ್ ಆ್ಯಂಡ್ ಪೋಲಿಟಿಕಲ್ ವೀಕ್ಲಿ, ಮೇ ೨೭, ೨೦೦೬, ಪು.೨೧೧೦

೭೦. ಭಕ್ಷಿ ಪಿ.ಎಂ., ೨೦೦೭, ಕಾನೂಸ್ಟಿಟ್ಯೂಸನ್ ಆಫ್ ಇಂಡಿಯಾ, ಪು.೧೩-೯೧

೭೧. ಮಿನಿಸ್ಟರಿ ಆಫ್ ಲೇಬರ್ ಆ್ಯಂಡ್ ಎಂಪ್ಲಾಯ್‌ಮೆಂಟ್ ಆನ್ಯುವಲ್ ರಿಪೋರ್ಟ್ ೨೦೦೮-೦೯, ಪು.೮೭-೯೨

೭೨. ಕುಮಾರಸ್ವಾಮಿ ಎಸ್., ೨೦೦೮, ಡೀ ಕೋಡಿಂಗ್ ದ ಅನ್ ಆರ್ಗನೈಸ್ಡ್ ಸೆಕ್ಟರ್ ವರ್ಕಸ್ ಬಿಲ್ ೨೦೦೩

೭೩. www.unorganised sector worked social security.co ದ ಸೆಂಟರ್ ಫಾರ್ ಸಿವಿಲ್ ಸೊಸೈಟಿ ಸಜೇಷನ್ ಫಾರ್ ದ ಅನ್‌ಆರ್ಗನೈಸ್ಡ್ ಸೆಕ್ಟರ್ ವರ್ಕರ್ಸ್ ಬಿಲ್, ೨೦೦೪, ಪು.೧-೬

೭೪. ಇಂದಿರಾ ಹಿರ್ ಬೇ, ೨೦೦೬, ಅನ್ ಆರ್ಗನೈಸ್ಡ್ ಸೆಕ್ಟರ್ ವರ್ಕರ್ ಸೋಶಿಯಲ್ ಸೆಕ್ಯೂರಿಟಿ ಬಿಲ್ ೨೦೦೫, ಇಕನಾಮಿಕ್ ಆ್ಯಂಡ್ ಪೋಲಿಟಿಕಲ್ ವೀಕ್ಲಿ, ಫೆಬ್ರುವರಿ ೪, ೨೦೦೬, ಪು.೩೭೯-೩೮೦

೭೫. www.ministary of labour.gov.in, Pp.1-12

# ಅಧ್ಯಾಯ ಆರು

# ಕ್ಷೇತ್ರಕಾರ್ಯ ಅಧ್ಯಯನ ಸಮೀಕ್ಷೆ

೬.೧. ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನೆಲೆ

೬.೨. ಕೊಪ್ಪಳ ಜಿಲ್ಲೆಯ ಸಾಮಾನ್ಯ ಮಾಹಿತಿ

೬.೩. ಕೊಪ್ಪಳ ಜಿಲ್ಲೆಯ ಕ್ಷೇತ್ರಕಾರ್ಯ ಸಮೀಕ್ಷೆ ಮಹಿಳೆ ಕೃಷಿ ಹಾಗೂ ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಪರಿಗಣಿಸಿ

ಆರು

# ಕ್ಷೇತ್ರಕಾರ್ಯ ಅಧ್ಯಯನ ಸಮೀಕ್ಷೆ

ಕೊಪ್ಪಳ ಜಿಲ್ಲೆಯು ಹಿಂದುಳಿದ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಒಂದು. ಅನಕ್ಷರಸ್ಥರನ್ನು ಅಧಿಕ ಸಂಖ್ಯೆಯಲ್ಲಿ ಹೊಂದಿರುವ ಬಡಕುಟುಂಬಗಳು ಅಧಿಕ ಸಂಖ್ಯೆಯಲ್ಲಿರುವ ಹಾಗೂ ಒಣಭೂಮಿ ಪ್ರದೇಶ ಮತ್ತು ನೀರಾವರಿ ಪ್ರದೇಶವನ್ನು ಹೊಂದಿರುವ ಕೊಪ್ಪಳ ಜಿಲ್ಲೆಯು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ೧ನೇ ಏಪ್ರಿಲ್ ೧೯೯೮ರಂದು ರಾಯಚೂರು ಜಿಲ್ಲೆಯಿಂದ ಪ್ರತ್ಯೇಕಗೊಂಡು ಸ್ವತಂತ್ರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದ ಕೊಪ್ಪಳ ಜಿಲ್ಲೆಯು ಐತಿಹಾಸಿಕ ಮಹತ್ವವನ್ನು ಪಡೆದಿದೆ. ಅಲ್ಲದೆ ಸಮುದ್ರದ ಆಚೆಗೂ ಭತ್ತವನ್ನು ರಫ್ತು ಮಾಡಿ 'ಭತ್ತದ ಕಣಜ' ಎಂಬ ಹೆಗ್ಗಳಿಕೆಯ ಜೊತೆಗೆ 'ಕೈಗಾರಿಕಾ ನಗರಿಯಾಗಿ' ಬೆಳೆಯುತ್ತಿದೆ.

ಒಣ ಹಾಗೂ ನೀರಾವರಿ ಪ್ರದೇಶಗಳಿಂದ ಕೂಡಿದ ಕೊಪ್ಪಳ ಜಿಲ್ಲೆಯು ಅಧಿಕ ಸಂಖ್ಯೆಯ ಕೃಷಿ ಕಾರ್ಮಿಕರನ್ನು ಹೊಂದಿದ್ದು ಇವರು ಗ್ರಾಮೀಣ ಪ್ರದೇಶ ಮತ್ತು ನೀರಾವರಿ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದಾರೆ. ನಗರ ಪ್ರದೇಶಗಳಲ್ಲಿ ಕಟ್ಟಡ ನಿರ್ಮಾಣ ಕೆಲಸಗಳಲ್ಲಿ ತೊಡಗಿರುವವರು ಗ್ರಾಮೀಣ ಪ್ರದೇಶಕ್ಕಿಂತ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತಿದೆ. ಈ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳೆಯರಾಗಿದ್ದು ಇವರು ಕಾರ್ಮಿಕ ಸಂಘಟನೆಗೆ ಸೇರದ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಈ ವೃತ್ತಿಗಳಲ್ಲಿ ದುಡಿಯುವ ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯ ಮಹಿಳೆಯರು ತಳ ಸಮುದಾಯಕ್ಕೆ ಸೇರಿದ ಪರಿಶಿಷ್ಟಜಾತಿ, ಪರಿಶಿಷ್ಟಪಂಗಡ ಮತ್ತು ಇತರ ಹಿಂದುಳಿದ ಜಾತಿಗೆ ಸೇರಿದ ಮಹಿಳೆಯರೇ ಆಗಿದ್ದು ಸಮಾಜದಲ್ಲಿ ಕಡಿಮೆ ಸಾಮಾಜಿಕ ಸ್ಥಾನಮಾನವನ್ನು ಹೊಂದಿ ಇಂದಿಗೂ ಕೂಡ ಜಾತಿ ನಿಂದನೆ ಮತ್ತು ಅಸ್ಪೃಶ್ಯತೆ ಆಚರಣೆಯಲ್ಲಿ ಬದುಕುತ್ತಿದ್ದಾರೆ.

ಇಂತಹ ಕಡಿಮೆ ಸಾಮಾಜಿಕ ಸ್ಥಾನಮಾನ ಹೊಂದಿರುವ ಈ ದುಡಿಮೆಗಾರರ ಬಗ್ಗೆ ತಿಳಿಯುವುದಕ್ಕಿಂತ ಪೂರ್ವದಲ್ಲಿ ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ ಮತ್ತು ಭೌಗೋಳಿಕ ಸ್ಥಿತಿಗತಿಯನ್ನು ತಿಳಿಯುವುದು ಅತೀ ಅವಶ್ಯವಿದೆ. ಅದನ್ನು ಈ ಮುಂದಿನಂತೆ ನೋಡಬಹುದು.

## ೬.೧. ಕೊಪ್ಪಳ ಜಿಲ್ಲೆಯ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನಲೆ

### ಐತಿಹಾಸಿಕ ಹಿನ್ನೆಲೆ

ಕೊಪ್ಪಳವು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದ ಪ್ರಸಿದ್ಧ ಸ್ಥಳವಾಗಿದೆ. ಭಾರತದ ಮೊದಲ ಸಾಮ್ರಾಜ್ಯ ಮೌರ್ಯರ ಕಾಲದಲ್ಲಿ ಅವರ ಆಡಳಿತಕ್ಕೆ ಒಳಪಟ್ಟು ಪ್ರಸಿದ್ಧಿಯನ್ನು ಪಡೆದ ಈ ಪ್ರದೇಶವು ಜೈನರ ಪವಿತ್ರ ಯಾತ್ರಾ ಸ್ಥಳವಾಗಿಯೂ ಪ್ರಾಮುಖ್ಯತೆಯನ್ನು ಪಡೆದಿದೆ. ಭಾರತದ ಪ್ರಸಿದ್ಧ ಚಕ್ರವರ್ತಿ ಅಶೋಕನ ಕಾಲದ(ಕ್ರಿ.ಪೂ.೨೭೩-೨೩೬)ಎರಡು ಶಾಸನಗಳು ಪಾಲಿ ಗುಂಡು ಮತ್ತು ಗವಿಮಠ ಕೊಪ್ಪಳದಲ್ಲಿ ದೊರೆತಿವೆ. ಇದು ಕೊಪ್ಪಳದ ಇತಿಹಾಸವನ್ನು ಕ್ರಿಸ್ತ ಪೂರ್ವಕ್ಕೆ ಕೊಂಡ್ಯೊಯುತ್ತದೆ. ಅಲ್ಲದೆ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಪ್ರಥಮ ಚಕ್ರವರ್ತಿ ಅಶೋಕ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಕೊಪ್ಪಳವು ಕಲ್ಯಾಣದ ಚಾಲುಕ್ಯರ ಮಾಂಡಲಿಕರಾದ 'ಶಿಲಹಾರರ' ಕೇಂದ್ರ ಸ್ಥಳ ಅಥವಾ ರಾಜಧಾನಿಯಾಗಿ ಮೆರೆದ ಬಗ್ಗೆ ಇತಿಹಾಸ ತಿಳಿಸುತ್ತದೆ.[೧] ಈ ಪ್ರದೇಶವು ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು ಮತ್ತು ಇತರ ಅರಸು ಮನೆತನಗಳೊಂದಿಗೆ ಸಂಬಂಧ ಇಟ್ಟುಕೊಂಡಿರುವುದನ್ನು ಚರಿತ್ರೆ ಸ್ಪಷ್ಟಪಡಿಸುತ್ತದೆ. ಅರಸು ಮನೆತನಗಳಿಗೆ ಚಕ್ರಾಧಿಪತಿಗಳಿಗೆ ಸೇರಿದ ಶಾಸನಗಳಲ್ಲಿ ಸಾಹಿತ್ಯ ಕೃತಿಗಳಲ್ಲಿ, ತಾಮ್ರ ಪತ್ರಗಳಲ್ಲಿ ಕೊಪ್ಪಳದ ಉಲ್ಲೇಖ ಸಿಗುತ್ತದೆ.

ಕೊಪ್ಪಳವನ್ನು ಶಿಲಾಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಕೊಪಣ ತೀರ್ಥ, ಆದಿತೀರ್ಥ, 'ಮಹಾತೀರ್ಥ ಮತ್ತು ಕೊಪಣಾಚಲ' ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಕೊಪಣ ಎಂಬ ಸ್ಥಳವು ಪ್ರಾಚೀನ ಕಾಲದಿಂದಲೂ ಜೈನರ ಪವಿತ್ರ ಯಾತ್ರಾಸ್ಥಳವಾಗಿತ್ತೆಂದು ರನ್ನ ರಚಿಸಿದ ಜೈನಕೃತಿ ತಿಳಿಸುತ್ತದೆ. ಆ ಕೃತಿಯಲ್ಲಿ ಪ್ರಸ್ತಾಪವಾಗಿರುವ 'ಕೊಪಣ' ಅಥವಾ 'ಕೂಪಣಾಚಲ' ಎಂಬ ಪ್ರದೇಶವು ಕೊಪ್ಪಳ ಎಂಬುದೇ ಆಗಿದೆ. ೧೩ನೇ ಶತಮಾನಕ್ಕೆ ಸೇರಿದ ಹರಿಹರ, ರಾಘವಾಂಕ ಅವರ ಕೃತಿಗಳಲ್ಲಿ ಸಹ ಇದೊಂದು ಜೈನರ ಕೇಂದ್ರವಾಗಿತ್ತೆಂದು ತಿಳಿದು ಬರುತ್ತಿದ್ದು ಇಲ್ಲಿ ೭೭೨ ಜಿನಾಲಯಗಳಿದ್ದವು ಎಂದು ಒಂದು ಶಾಸನ ವರ್ಣಿಸುತ್ತದೆ. ಕನ್ನಡದ ಪ್ರಥಮ ಉಪಲಬ್ದ ಕೃತಿ 'ಕವಿರಾಜಮಾರ್ಗ'ದಲ್ಲಿ ಕೊಪ್ಪಳವನ್ನು 'ಮಹಾ ಕೊಪಣನಗರ' ಎಂದು ಕರೆದಿರುವ ಉಲ್ಲೇಖವಿದೆ.[೨]

ವಿಜಯನಗರ ಸಾಮ್ರಾಜ್ಯದ ಪತನದ ನಂತರ ಬಿಜಾಪುರದ ಆದಿಲ್‌ಶಾಹಿ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶವನ್ನು 'ಮುಜಪುರ್ ನಗರ' ಎಂದು ಕರೆಯಲಾಗುತ್ತಿತ್ತು. ಮುಂದೆ ಈ ಪ್ರದೇಶವು ಶಿವಾಜಿ, ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಜೂನ್ ೧೮೫೮ರಲ್ಲಿ ಹುತಾತ್ಮರಾದ 'ಮುಂಡರಗಿ

ಭೀಮರಾವ್' ಮತ್ತು 'ಹಮ್ಮಿಗೆ ಕೆಂಚನಗೌಡ' ಅವರಿಂದ ಸ್ವಾತಂತ್ರ್ಯ ಹೋರಾಟದಲ್ಲಿ ಸ್ಥಾನ ಪಡೆದು ಸ್ವಾತಂತ್ರ ಹೋರಾಟದ ಕಿಚ್ಚನ್ನು ಹರಡಿತು. ಮುಂದೆ ಗಂಗಾವತಿಯ ಮುಸ್ಲಿಮರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಹುತಾತ್ಮರಾದರು. ಇಂತಹ ಕೆಚ್ಚೆದೆಯ ವೀರರನ್ನು ಹೊಂದಿದ ಈ ಪ್ರದೇಶವು ೧೯೪೭ ಆಗಸ್ಟ್ ೧೫ರಂದು ದೇಶ ಸ್ವಾತಂತ್ರ್ಯವನ್ನು ಪಡೆದರೂ ಸ್ವತಂತ್ರವನ್ನು ಪಡೆಯದೆ ಹೈದರಾಬಾದಿನ ನಿಜಾಮರ ಆಳ್ವಿಕೆಗೆ ಒಳಗಾಗಿತ್ತು. ಜನರ ಸತತ ಹೋರಾಟದ ಫಲವಾಗಿ ೧೯೪೮ ಸೆಪ್ಟೆಂಬರ್ ೧೮ರಂದು ಹೈದರಾಬಾದ್ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತು. ೧೯೫೬ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯ ಮೂಲಕ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಗಿ ಇಂದು ಕರ್ನಾಟಕದ ಸ್ವತಂತ್ರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿದೆ.[೩]

ಐತಿಹಾಸಿಕ ಹಿನ್ನೆಲೆ ಹೊಂದಿರುವ ಕೊಪ್ಪಳ ಜಿಲ್ಲೆಯ ಅನೇಕ ಪ್ರದೇಶಗಳು ವಿಜಯನಗರ ಅರಸರ ಮತ್ತು ಚಾಲುಕ್ಯ ಅರಸರ ಆಳ್ವಿಕೆಗೆ ಒಳಗಾಗಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ಅಶೋಕ ಚಕ್ರವರ್ತಿಯ ಆನೇ ಪ್ರಾಂತವಾಗಿ ಗಂಗಾವತಿ ತಾಲೂಕಿನ ಕನಕಗಿರಿ ಗ್ರಾಮವು ಅಂದು 'ಸುವರ್ಣಗಿರಿ'ಯಾಗಿ ಮೆರೆದಿತ್ತು ಮತ್ತು ವಿಜಯನಗರ ಅರಸರ ಕಾಲದಲ್ಲಿ ಅವರ ಸಾಮಂತ ದೊರೆ 'ಉಡಚಪ್ಪನಾಯಕನ' ಆಳ್ವಿಕೆಗೆ ಒಳಗಾಗಿ ವಿಜಯನಗರದ ಹಿರಿಮೆಯನ್ನು ಮೆರೆದಿತ್ತು. ಇಂದಿನ 'ಆನೆಗೊಂದಿ' ಅಂದಿನ ವಿಜಯನಗರ ಅರಸರ ಪ್ರಮುಖ ರಾಜಧಾನಿಯಾಗಿ ಕಂಗೊಳಿಸಿತ್ತು. ಯಲಬುರ್ಗ ತಾಲೂಕಿನ ಇಟಗಿ, ಕುಕನೂರುಗಳು ಚಾಲುಕ್ಯ ಅರಸರ ಸಾಂಸ್ಕೃತಿಕ ತಾಣಗಳಾಗಿ ಬೆಳೆದಿದ್ದವು. ಕೊಪ್ಪಳದಿಂದ ೧೩ ಕಿಲೋಮೀಟರ್ ದೂರದಲ್ಲಿರುವ ಕಿನ್ನಾಳ ಪ್ರಾಚೀನ ಕಾಲದಿಂದಲು ಇಂದಿನವರೆಗೂ ಗೊಂಬೆ ತಯಾರಿಕೆಗೆ ಪ್ರಸಿದ್ಧಿಯನ್ನು ಪಡೆದಿದೆ. ಹೀಗೆ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದ ಕೊಪ್ಪಳ ಜಿಲ್ಲೆಯು ಇಂದು ವಾಣಿಜ್ಯ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯುತ್ತಿದೆ.

## ಕೊಪ್ಪಳ ಜಿಲ್ಲೆಯ ಭೌಗೋಳಿಕ ವಿವರ

ಹಿಂದುಳಿದ ಪ್ರದೇಶವೆಂದು ಹಣೆಪಟ್ಟಿ ಕಟ್ಟಿಕೊಂಡಿರುವ ಹೈದರಾಬಾದ್ ಕರ್ನಾಟಕಕ್ಕೆ ಸೇರಿರುವ ಕೊಪ್ಪಳ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಕೊಪ್ಪಳ ಜಿಲ್ಲೆಯು ೧೫°.೨೧° ಉತ್ತರ ಅಕ್ಷಾಂಶ ೭೬°.೦೯° ಪೂರ್ವ ರೇಖಾಂಶದಿಂದ ೧೫.೩೫° ಉತ್ತರ ಅಕ್ಷಾಂಶ ೭೬.೧೫° ಪೂರ್ವ ರೇಖಾಂಶಗಳ ಮಧ್ಯೆ ಕೇಂದ್ರೀಕೃತವಾಗಿದೆ. ಈ ಜಿಲ್ಲೆಯು ತುಂಗಭದ್ರ ನದಿಗೆ ಸಮೀಪದಲ್ಲಿದ್ದು ಈ ಜಿಲ್ಲೆಯ ಕೆಲವು ಪ್ರದೇಶಗಳು ನೀರಾವರಿಗೆ ಒಳಪಟ್ಟಿವೆ. ಒಟ್ಟು ೭,೧೯೦ ಚ.ಕೀ.ಮೀ ಮತ್ತು ವಿಸ್ತೀರ್ಣ ಹೊಂದಿದೆ ಕೊಪ್ಪಳ ಜಿಲ್ಲೆಯು ೨೦೦೧, ಜನಗಣತಿಯ ಪ್ರಕಾರ, ೧,೧೯೬,೦೮೯ ಜನಸಂಖ್ಯೆಯನ್ನು ಹೊಂದಿದೆ. ಪ್ರತಿ ಚದರ ಚ.ಕಿ.ಮೀ ೧೬೬ರಷ್ಟು ಜನಸಾಂದ್ರತೆಯನ್ನು ಹೊಂದಿರುವ ಕೊಪ್ಪಳ ಜಿಲ್ಲೆಯು ಪೂರ್ವ ದಿಕ್ಕಿನಲ್ಲಿ ರಾಯಚೂರು ಮತ್ತು ಬಳ್ಳಾರಿ ಪಶ್ಚಿಮದಲ್ಲಿ ಗದಗ, ಉತ್ತರದಲ್ಲಿ ಬಾಗಲಕೋಟೆ

ಮತ್ತು ರಾಯಚೂರು ಮತ್ತು ದಕ್ಷಿಣದಲ್ಲಿ ಬಳ್ಳಾರಿ ಮತ್ತು ತುಂಗಭದ್ರ ನದಿಯನ್ನು ಮರೆಯನ್ನಾಗಿ ಹೊಂದಿದೆ. ಕೊಪ್ಪಳ ಜಿಲ್ಲೆಯು ತ್ರಿಕೋನಾಕೃತಿಯಲ್ಲಿದ್ದು ಅದರ ಉತ್ತರದ ತುದಿಯು ವಿಸ್ತ್ರತವಾಗದ್ದರೆ ದಕ್ಷಿಣದ ತುದಿಯು ಚೂಪಾಗಿದೆ.[೪]

ಕೊಪ್ಪಳ, ಗಂಗಾವತಿ, ಯಲಬುರ್ಗ ಮತ್ತು ಕುಷ್ಠಗಿ ಎಂಬ ನಾಲ್ಕು ತಾಲೂಕು ಕೇಂದ್ರಗಳನ್ನು ಹೊಂದಿದ ಕೊಪ್ಪಳ ಜಿಲ್ಲೆಯು ೨೦ ಹೋಬಳಿಗಳನ್ನು ೬೨೯ ಗ್ರಾಮಗಳನ್ನು ಹೊಂದಿರುವ ಜಿಲ್ಲೆಯಾಗಿದೆ.

**ಕೊಪ್ಪಳ ಜಿಲ್ಲೆಯ ಮೇಲ್ಮೈ ಲಕ್ಷಣ**

ಕೊಪ್ಪಳ ಜಿಲ್ಲೆಯು ಪ್ರಾಕೃತಿಕವಾಗಿ ಬಯಲುಸೀಮೆ ಪ್ರದೇಶವಾಗಿದ್ದು ಕಲ್ಲು ಬಂಡೆಗಳಿಂದ ಹಾಗೂ ಅಲ್ಲಲ್ಲಿ ಕುರುಚಲು ಗಿಡಗಳಿಂದ ಕೂಡಿದ ಬೆಟ್ಟ ಗುಡ್ಡಗಳಿಂದ ಕೂಡಿದೆ. ಕುಷ್ಟಗಿ ಹಾಗೂ ಯಲಬುರ್ಗಾ ತಾಲೂಕುಗಳಲ್ಲಿ ಗ್ರಾನೈಟ್ ಕಲ್ಲುಗಳ ನಿಕ್ಷೇಪಗಳಿದ್ದರೆ ಕೊಪ್ಪಳ ಮತ್ತು ಗಂಗಾವತಿ ತಾಲೂಕುಗಳಲ್ಲಿ ಕಟ್ಟಡ ಕಟ್ಟಲು ಉಪಯೋಗಿಸುವ ಕಲ್ಲುಗಳ ನಿಕ್ಷೇಪಗಳಿವೆ. ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ಅತಿ ಕಡಿಮೆಯಾಗಿದ್ದು ಒಟ್ಟು ಭೌಗೋಳಿಕ ವಿಸ್ತೀರ್ಣದ ಶೇಕಡ ೫ರಷ್ಟಿದೆ. ಕೊಪ್ಪಳ ಜಿಲ್ಲೆಯು ಮರಳು ಮಿಶ್ರಿತ ಕೆಂಪು ಮಣ್ಣು, ಕಪ್ಪು ಮಣ್ಣು ಹಾಗೂ ಜೇಡಿ ಮಣ್ಣಿನ ರಚನೆಯಿಂದ ಕೂಡಿದೆ. ತುಂಗಭದ್ರದ ಎಡದಂಡೆ ಕಾಲುವೆಯಿಂದ ಗಂಗಾವತಿ ತಾಲೂಕಿನ ಅರ್ಧ ಭಾಗ ಮತ್ತು ಕೊಪ್ಪಳ ತಾಲೂಕಿನ ಸ್ವಲ್ಪಭಾಗ ನೀರಾವರಿ ಪ್ರದೇಶವಾಗಿರುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ವಾಡಿಕೆಯಂತೆ ಸರಾಸರಿ ೫೭೨.೦೦ ಮೀ.ಮೀ ಮಳೆಯಾಗುತ್ತಿದೆ. ೨೦೦೮ರಲ್ಲಿ ೫೫೭.೨ ಮೀ.ಮೀ. ಮಳೆಯಾಗಿದೆ. ೨೦೦೯ರಲ್ಲಿ ವರ್ಷಕ್ಕಿಂತ ಅಧಿಕ ಪ್ರಮಾಣದಲ್ಲಿ ಮಳೆಯಾಗಿ ನೆರೆಹಾವಳಿಗೆ ಒಳಗಾದ ಜಿಲ್ಲೆಯಾಗಿದ್ದಿತು. ಈ ಪ್ರದೇಶದಲ್ಲಿ ಉದ್ಯೋಗಾವಕಾಶ, ಸಾರಿಗೆ ಸೌಲಭ್ಯ ಇತ್ಯಾದಿ ಮೂಲಭೂತ ಸೌಕರ್ಯಗಳು ಕಡಿಮೆ ಇರುವದರಿಂದ ಕೃಷಿ ಚಟುವಟಿಕೆಯೇ ಇಲ್ಲಿಯ ಜನರ ಮುಖ್ಯ ಉದ್ಯೋಗವಾಗಿದೆ. ಇತ್ತೀಚೆಗೆ ನಿರ್ಮಾಣ ಉದ್ಯಮ ಇಲ್ಲಿ ಬೆಳೆಯುತ್ತಿರುವುದರಿಂದ ಕಟ್ಟಡ ನಿರ್ಮಾಣ ಮತ್ತು ಇತರೆ ನಿರ್ಮಾಣ ಕೆಲಸದಲ್ಲಿ ದುಡಿಯುತ್ತಿರುವ ಕಾರ್ಮಿಕರ ಸಂಖ್ಯೆಯು ಹೆಚ್ಚುತ್ತಿದೆ.

ಒಣ ಭೂಮಿ ಮತ್ತು ನೀರಾವರಿ ಪ್ರದೇಶವನ್ನು ಹೊಂದಿರುವ ಕೊಪ್ಪಳ ಜಿಲ್ಲೆಯಲ್ಲಿ ಮುಸುಕಿನ ಜೋಳ, ಭತ್ರ, ಜೋಳ, ಸಜ್ಜೆ, ದ್ವಿದಳಧಾನ್ಯಗಳು, ಎಣ್ಣೆ ಬೀಜಗಳು, ಹತ್ತಿ, ಕಬ್ಬು ಮತ್ತು ತೃಣ ಧಾನ್ಯಗಳನ್ನು ಬೆಳೆಯಲಾಗುತ್ತದೆ. ಇಲ್ಲಿನ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಆಹಾರ ಪದ್ಧತಿಯು ಬೆಳೆದಿದ್ದು ಅನ್ನ ಮತ್ತು ರೊಟ್ಟಿ ಇಲ್ಲಿನ ಜನರ ಮುಖ್ಯ ಆಹಾರವಾಗಿದೆ. ಭತ್ತ ಮತ್ತು ಜೋಳ, ಸಜ್ಜೆ ಮುಖ್ಯ ಆಹಾರದ ಬೆಳೆಗಳಾಗಿವೆ.

## ೬.೨. ಕೊಪ್ಪಳ ಜಿಲ್ಲೆಯ ಸಾಮಾನ್ಯ ಮಾಹಿತಿ

ನಾಲ್ಕು ತಾಲೂಕು ಕೇಂದ್ರಗಳನ್ನು ಒಳಗೊಂಡ ಕೊಪ್ಪಳ ಜಿಲ್ಲೆಯು ೨೦೦೧ರ ಜನಗಣತಿಯ ಪ್ರಕಾರ ಒಟ್ಟು ೧೧.೯೩ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು, ಅದು ೬.೦೩ ಲಕ್ಷ ಪುರುಷರು ಮತ್ತು ೫.೯೩ ಲಕ್ಷ ಹೆಂಗಸರನ್ನು ಒಳಗೊಂಡಿದೆ. ಜನಸಂಖ್ಯೆಯಲ್ಲಿ ತಾಲೂಕುವಾರು ಹೋಲಿಸಿದರೆ ಗಂಗಾವತಿ ತಾಲೂಕು ೪.೦೬ ಲಕ್ಷ ಜನಸಂಖ್ಯೆಯನ್ನು ಹೊಂದಿ ಪ್ರಥಮ ಸ್ಥಾನದಲ್ಲಿದ್ದರೆ ೨.೩೬ ಲಕ್ಷ ಜನಸಂಖ್ಯೆಯನ್ನು ಹೊಂದಿದ ಯಲಬುರ್ಗಾ ತಾಲೂಕು ಕೊನೆಯ ಸ್ಥಾನದಲ್ಲಿದೆ. ಜಿಲ್ಲೆಯ ಲೈಂಗಿಕ ಅನುಪಾತದ ಪ್ರಮಾಣವು ಒಂದು ಸಾವಿರ ಪುರುಷರಿಗೆ ೯೮೩ (೧೦೦೦:೯೮೩) ಜನ ಮಹಿಳೆಯರು ಇರುವುದು ಕಂಡುಬರುತ್ತದೆ. ಜಿಲ್ಲೆಯ ಜನಸಂಖ್ಯೆಯು ೧೯೯೧ರಿಂದ ೨೦೦೧ರವರೆಗಿನ ೧೦ ವರ್ಷಗಳ ಅವಧಿಯಲ್ಲಿ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆಯ ಪ್ರಮಾಣವು ೧೩.೦೩ರಷ್ಟಿರುವುದು ಅಂಕಿಸಂಖ್ಯೆಗಳಿಂದ ತಿಳಿದುಬರುತ್ತಿದೆ.

ಅಧಿಕ ಸಂಖ್ಯೆಯಲ್ಲಿ ಅನಕ್ಷರಸ್ಥರನ್ನು ಹೊಂದಿರುವ ಕೊಪ್ಪಳ ಜಿಲ್ಲೆಯ ಸಾಕ್ಷರತೆ ಪ್ರಮಾಣ ರಾಜ್ಯಕ್ಕೆ ಹೋಲಿಸಿದರೆ ಕಡಿಮೆ ಇರುವುದು ಕಂಡುಬರುತ್ತಿದೆ. ೨೦೦೧ರ ಜನಗಣತಿಯ ಪ್ರಕಾರ ರಾಜ್ಯದ ಸಾಕ್ಷರತೆ ಪ್ರಮಾಣ ೬೭.೦೪ರಷ್ಟಿದೆ. ಅದೇ ಅವಧಿಯಲ್ಲಿ ಕೊಪ್ಪಳ ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇ. ೫೪.೧ರಷ್ಟಿದೆ ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ. ೬೮.೪ರಷ್ಟಿದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ.೩೯.೬ರಷ್ಟಿದೆ. ಈ ಅಂಕಿಸಂಖ್ಯೆಯನ್ನು ಗಮನಿಸಿದರೆ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಮಹಿಳೆಯರು ಅನಕ್ಷರಸ್ಥರಾಗಿರುವುದು ತಿಳಿದುಬರುತ್ತದೆ.[೫]

ಕೊಪ್ಪಳ ಜಿಲ್ಲೆಯ ದುಡಿಯುವ ವರ್ಗದ ಕಾರ್ಮಿಕರನ್ನು ಗಣನೆಗೆ ತೆಗೆದುಕೊಂಡರೆ ಅಧಿಕ ಸಂಖ್ಯೆಯಲ್ಲಿ ಕೃಷಿ ಕಾರ್ಮಿಕರಿರುವುದು ಕಂಡುಬರುತ್ತಿದೆ. ಈ ಕೃಷಿಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳೆಯರೇ ಆಗಿದ್ದಾರೆ. ಈ ಅಧಿಕ ಸಂಖ್ಯೆಯ ಕೃಷಿ ಕಾರ್ಮಿಕರಲ್ಲಿ ಶೇ.೬೦ಕ್ಕಿಂತ ಅಧಿಕ ಜನರು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡಕ್ಕೆ ಸೇರಿದ ಮಹಿಳೆಯರು ಅಧಿಕವಾಗಿರುವುದು ಕ್ಷೇತ್ರಕಾರ್ಯದ ಅಧ್ಯಯನದಿಂದ ತಿಳಿದುಬರುತ್ತಿದೆ.

### ೬.೨.೧. ಕೊಪ್ಪಳ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ

ಕರ್ನಾಟಕದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳ ಜಿಲ್ಲೆಯ ವಿಸ್ತೀರ್ಣವು ಶೇಕಡ ೨.೯೦ರಷ್ಟಿದ್ದು ಜನಸಂಖ್ಯೆಯಲ್ಲಿ ಶೇಕಡ ೨.೧೩ರಷ್ಟು ಪಾಲನ್ನು ಪಡೆದಿದೆ. ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳ ಜಿಲ್ಲೆಯು ರಾಜ್ಯದಲ್ಲಿ ೧೮ನೇ ಸ್ಥಾನ ಪಡೆದರೆ ಜನಸಂಖ್ಯೆಯಲ್ಲಿ ೨೪ನೇ ಸ್ಥಾನವನ್ನು ಪಡೆದಿದೆ.

ಕೋಷ್ಟಕ ೬.೧

ತಾಲೂಕುವಾರು ವಿಸ್ತೀರ್ಣ

| ಕ್ರ.ಸಂ | ತಾಲೂಕುಗಳು | ಭೌಗೋಳಿಕ ವಿಸ್ತೀರ್ಣ ಚ.ಕಿ.ಮಿಗಳಲ್ಲಿ | ಜನಸಂಖ್ಯೆ-೨೦೦೧ ಲಕ್ಷಗಳಲ್ಲಿ |
|---|---|---|---|
| ೧. | ಗಂಗಾವತಿ | ೧೩೧೧.೨೧ | ೪.೦೬ |
| ೨. | ಕೊಪ್ಪಳ | ೧೩೬೪.೨೫ | ೩.೧೪ |
| ೩. | ಕುಷ್ಟಗಿ | ೧೩೭೦.೩೮ | ೨.೩೯ |
| ೪. | ಯಲಬುರ್ಗಾ | ೧೪೮೯.೬೬ | ೨.೩೬ |
| ೫. | ಕೊಪ್ಪಳ ಜಿಲ್ಲೆ | ೭೧೮೯.೦೦ | ೧೧.೯೬ |
| ೬. | ಕರ್ನಾಟಕ | ೧೯೧೭೯೭.೦೦ | ೫೨.೮೫ |

ಮೂಲ : ಕೊಪ್ಪಳ ಜಿಲ್ಲೆಯ ಅಂಕಿ ಸಂಖ್ಯೆಗಳ ನೋಟ ೨೦೦೮-೦೯, ಪು.೭ ಮತ್ತು ೭೧೬

ಕೋಷ್ಟಕ ೨.೧ನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯ ತಾಲೂಕುವಾರು ವಿಸ್ತೀರ್ಣ ಮತ್ತು ಜನಸಂಖ್ಯೆಯ ಮಾಹಿತಿ ತಿಳಿದು ಬರುತ್ತದೆ. ಗಂಗಾವತಿ ತಾಲೂಕು ೧೩೧೧ ಚ.ಕಿ.ಮೀ. ವಿಸ್ತೀರ್ಣವನ್ನು ಮತ್ತು ೪.೬ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಕೊಪ್ಪಳ ತಾಲೂಕು ೧೩೬೪ ಚ.ಕಿ.ಮೀ. ವಿಸ್ತೀರ್ಣ ಮತ್ತು ೩.೧೪ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಕುಷ್ಟಗಿ ತಾಲೂಕು ೧೩೭೦ ಚ.ಕೀ.ಮಿ ವಿಸ್ತೀರ್ಣ ಮತ್ತು ೨.೩೯ಲಕ್ಷ ಜನಸಂಖ್ಯೆಯನ್ನು ಹಾಗೂ ಯಲಬುರ್ಗಾ ತಾಲೂಕು ೧೪೮೯ ಚ.ಕಿ.ಮೀ.ವಿಸ್ತೀರ್ಣ ೨.೩೬ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ಒಟ್ಟು ೭೧೮೯ ಚ.ಕಿ.ಮೀ ವಿಸ್ತೀರ್ಣವನ್ನು ಮತ್ತು ೧೧.೯೬ ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ೨೦೦೧ ಜನಗಣತಿಯ ಪ್ರಕಾರ ರಾಜ್ಯದ ಜನಸಂಖ್ಯೆ ೫೨.೮೫ ಲಕ್ಷಗಳಿದ್ದರೆ. ವಿಸ್ತೀರ್ಣ ೧,೯೧.೭೯೧ ಚ.ಕಿ.ಮೀ ಇರುವುದು ಕಂಡುಬರುತ್ತದೆ.

ಮೇಲಿನ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ವಿಸ್ತೀರ್ಣದಲ್ಲಿ ಯಲಬುರ್ಗಾ ತಾಲೂಕು(೧೪೮೯ ಚ.ಕಿ.ಮೀ)ದೊಡ್ಡದಾಗಿದ್ದರೆ. ಗಂಗಾವತಿ ತಾಲೂಕು(೧೩೧೧ ಚ.ಕಿ.ಮೀ) ಚಿಕ್ಕ ತಾಲೂಕಾಗಿರುವುದು ಕಂಡುಬರುತ್ತದೆ. ಜಿಲ್ಲೆಯ ಜನಸಂಖ್ಯೆಯನ್ನು ಪರಿಗಣಿಸಿದರೆ ೪.೦೬ಲಕ್ಷ ಜನಸಂಖ್ಯೆಯನ್ನು ಹೊಂದಿದ ಗಂಗಾವತಿ ತಾಲೂಕು ಜನಸಂಖ್ಯೆಯಲ್ಲಿ ಪ್ರಥಮ ಸ್ಥಾನದಲ್ಲಿದ್ದರೆ ೨.೩೬ ಲಕ್ಷ ಜನಸಂಖ್ಯೆಯನ್ನು ಹೊಂದಿದ ಯಲಬುರ್ಗಾ ತಾಲೂಕು ಜಿಲ್ಲೆಯು ಕೊನೆಯ ಸ್ಥಾನದಲ್ಲಿದೆ.

### ೬.೨.೨. ಕೊಪ್ಪಳ ಜಿಲ್ಲೆಯ ಜನಸಂಖ್ಯೆ

ಕೊಪ್ಪಳ ಜಿಲ್ಲೆಯು ಜನಸಂಖ್ಯೆಯಲ್ಲಿ ರಾಜ್ಯದಲ್ಲಿ ೨೪ನೇ ಸ್ಥಾನವನ್ನು ಪಡೆದರೆ, ಜನಸಂಖ್ಯಾ ದೃಷ್ಟಿಯಿಂದ ರಾಜ್ಯದಲ್ಲಿ ನಾಲ್ಕನೆಯ ಚಿಕ್ಕ ಪುಟ್ಟ ಜಿಲ್ಲೆಯಾಗಿರುವುದು ತಿಳಿದುಬರುತ್ತಿದೆ. ರಾಜ್ಯದಲ್ಲಿ

ಬೆಳಗಾವಿ, ಗುಲಬರ್ಗಾ ಮತ್ತು ತುಮಕೂರು ಜನಸಂಖ್ಯೆ ದೃಷ್ಟಿಯಿಂದ ಅತೀ ದೊಡ್ಡ ಜಿಲ್ಲೆಗಳಾಗಿವೆ. ೨೦೦೯ ಡಿಸೆಂಬರ್ ೩೦ರಂದು ಗುಲಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ತಾಲೂಕುನ್ನು ರಾಜ್ಯದ ೩೦ನೇ ಜಿಲ್ಲೆಯಾಗಿ ರಚಿಸಲಾಗಿದೆ. ಇದರಿಂದಾಗಿ ರಾಜ್ಯದಲ್ಲಿ ಬೆಂಗಳೂರು ಜಿಲ್ಲೆ ನಂತರ ಬೆಳಗಾವಿ ಮತ್ತು ತುಮಕೂರು ಜಿಲ್ಲೆಗಳು ದೊಡ್ಡ ಜಿಲ್ಲೆಗಳಾಗಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೨

ತಾಲೂಕುವಾರು ಜನಸಂಖ್ಯೆ

| ಕ್ರ. ಸಂ | ತಾಲೂಕುಗಳು | ಜನಸಂಖ್ಯೆ-೨೦೦೧ ಲಕ್ಷಣಗಳಲ್ಲಿ | | | | | |
|---|---|---|---|---|---|---|---|
| | | ಗಂಡಸರು | ಹೆಂಗಸರು | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧. | ಗಂಗಾವತಿ | ೨೦೪೩೫೬ | ೨೦೧೯೭೮ | ೪೦೬೩೩೪ | ೩೦೪೯೪೨ | ೧೦೧೩೯೨ | ೪೦೬೩೩೪ |
| ೨. | ಕೊಪ್ಪಳ | ೧೫೯೦೭೧ | ೧೫೪೯೮೦ | ೩೧೪೦೫೧ | ೨೪೯೭೭೬ | ೬೪೨೭೫ | ೩೧೪೦೫೧ |
| ೩. | ಕುಷ್ಟಗಿ | ೧೨೦೬೨೧ | ೧೧೮೭೧೦ | ೨೩೯೩೩೧ | ೨೧೮೧೪೮ | ೨೧೧೮೩ | ೨೩೯೩೩೧ |
| ೪. | ಯಲಬುರ್ಗ | ೧೧೯೨೬೪ | ೧೧೭೧೦೯ | ೨೩೬೩೭೩ | ೨೨೪೯೩೧ | ೧೧೪೪೨ | ೨೩೬೩೭೩ |
| ೫. | ಜಿಲ್ಲೆಯ ಮೊತ್ತ | ೬೦೩೩೧೨ | ೫೯೨೭೭೭ | ೧೧೯೬೦೮೯ | ೯೯೭೭೯೭ | ೧೯೮೨೯೨ | ೨೧೧೯೬೦೮೯ |
| ೬. | ಕರ್ನಾಟಕ | ೨೬೮೯೮೯೧೮ | ೨೫೯೫೧೬೪೪ | ೫೨೮೫೦೫ | ೩೪೮೮೯೦೩೩ | ೧೭೯೬೧೫೨೯ | ೫೨೮೫೦೫೬೨ |

ಮೂಲ : ಕೊಪ್ಪಳ ಜಿಲ್ಲೆಯ ಅಂಕಿ ಸಂಖ್ಯೆಗಳ ನೋಟ ೨೦೦೮-೦೯ ಪು.ಸಂ.೭ ಮತ್ತು ಕೊಪ್ಪಳ ಜಿಲ್ಲಾ ಜನಸಂಖ್ಯೆ ಬುಕ್‌ಲೆಟ್ ಸೆನ್ಸಸ್ ಆಫ್ ಇಂಡಿಯಾ-೨೦೦೧ ಡಿಸ್ಟ್ರಿಕ್ಟ್ ಸೆನ್ಸಸ್ ಆಪರೇಷನ್ ಕರ್ನಾಟಕ ಪು.ಸಂ.೫[2]

ಮೇಲಿನ ಕೋಷ್ಟಕ ೨.೨ನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯ ಜನಸಂಖ್ಯೆಯ ಪೂರ್ಣಚಿತ್ರಣ ದೊರೆಯುತ್ತದೆ. ೨೦೦೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯು ಒಟ್ಟು ೧೧.೯೬ ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು. ಅದರಲ್ಲಿ ೬.೩ ಲಕ್ಷ ಜನ ಪುರುಷರು ಮತ್ತು ೫.೯೨ ಲಕ್ಷ ಜನ ಮಹಿಳೆಯರು ಇರುವುದು ಕಂಡುಬರುತ್ತದೆ.

ತಾಲೂಕುವಾರು ಜನಸಂಖ್ಯೆಯನ್ನು ಗಮನಿಸಿದರೆ ಗಂಗಾವತಿ ತಾಲೂಕು ಒಟ್ಟು ೪.೬೩ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು. ಅದರಲ್ಲಿ ೨.೪೩ ಲಕ್ಷ ಜನ ಪುರುಷರು ಮತ್ತು ೨.೧೯ ಲಕ್ಷ ಜನ ಮಹಿಳೆರು ಇದ್ದಾರೆ. ಕೊಪ್ಪಳ ತಾಲೂಕಿನಲ್ಲಿ ಒಟ್ಟು ೩.೧೪ಲಕ್ಷ ಜನಸಂಖ್ಯೆ ಇದ್ದು, ಇದರಲ್ಲಿ ೧.೫೯ ಲಕ್ಷ ಜನ ಪುರುಷರು ಮತ್ತು ೧.೫೪ ಲಕ್ಷ ಜನ ಮಹಿಳೆಯರಿರುವುದು ಕಂಡುಬರುತ್ತಿದೆ. ಕುಷ್ಟಗಿ

ತಾಲೂಕಿನಲ್ಲಿ ಒಟ್ಟು ೨.೩೯ ಲಕ್ಷ ಜನಸಂಖ್ಯೆ ಇದ್ದು, ಅದರಲ್ಲಿ ೧.೨ ಲಕ್ಷ ಜನ ಪುರುಷರು ಮತ್ತು ೧.೧೮ ಲಕ್ಷ ಜನ ಮಹಿಳೆಯರಿದ್ದಾರೆ. ಕೊನೆಯದಾಗಿ ಯಲಬುರ್ಗಾ ತಾಲೂಕುನ್ನು ಗಮನಿಸಿದರೆ ಈ ತಾಲೂಕಿನ ಒಟ್ಟು ಜನಸಂಖ್ಯೆ ೨.೩೬ ಲಕ್ಷ ಆಗಿದ್ದು. ಅದರಲ್ಲಿ ೧.೧೯ಲಕ್ಷ ಜನ ಪುರುಷರು ಮತ್ತು ೧.೧೭ ಲಕ್ಷ ಜನ ಮಹಿಳೆಯರು ಇರುವುದು ಕಂಡುಬರುತ್ತಿದೆ.

ಜನಸಂಖ್ಯೆಯಲ್ಲಿ ೪.೬೩ಲಕ್ಷ ಹೊಂದಿದ ಗಂಗಾವತಿ ತಾಲೂಕಿನ ಪ್ರಥಮ ಸ್ಥಾನದಲ್ಲಿದ್ದು. ಉಳಿದ ತಾಲೂಕುಗಳಿಗಿಂತ ಅಧಿಕ ಸಂಖ್ಯೆಯ ಮಹಿಳೆಯರನ್ನು ಹೊಂದಿದೆ. ಅಂದರೆ ೨.೧೯ ಲಕ್ಷ ಮಹಿಳೆಯರು ಈ ತಾಲೂಕಿನಲ್ಲಿದ್ದು ಜಿಲ್ಲೆಯಲ್ಲಿ ಅಧಿಕ ಮಹಿಳೆಯರನ್ನು ಹೊಂದಿದ ತಾಲೂಕಾಗಿದೆ. ಜನಸಂಖ್ಯೆಯಲ್ಲಿ ೨.೩೬ ಲಕ್ಷ ಜನಸಂಖ್ಯೆಯನ್ನು ಹೊಂದಿದ ಯಲಬುರ್ಗಾ ತಾಲೂಕು ಜಿಲ್ಲೆಯಲ್ಲಿ ಕಡಿಮೆ ಜನಸಂಖ್ಯೆಯನ್ನು ಹೊಂದಿದ ತಾಲೂಕಾಗಿದೆ. ಈ ತಾಲೂಕಿನಲ್ಲಿ ೧.೧೭ಲಕ್ಷ ಜನ ಮಹಿಳೆಯರಿದ್ದು. ಜಿಲ್ಲೆಯಲ್ಲಿಯೇ ಕಡಿಮೆ ಸಂಖ್ಯೆಯ ಮಹಿಳೆಯರನ್ನು ಹೊಂದಿದ ತಾಲೂಕಾಗಿದೆ.

ಕೊಪ್ಪಳ ಜಿಲ್ಲೆಯ ನಗರ ಮತ್ತು ಗ್ರಾಮೀಣ ಜನಸಂಖ್ಯೆಯನ್ನು ಗಮನಿಸಿದರೆ ಅಧಿಕ ಸಂಖ್ಯೆಯ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಕೋಷ್ಟಕ ೬.೨ ತೋರಿಸುವಂತೆ ೯.೯೭ಲಕ್ಷ ಜನ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದರೆ ಕೇವಲ ೧.೯೮ ಲಕ್ಷ ಜನ ನಗರ ಪ್ರದೇಶ ದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಅಧಿಕ ಸಂಖ್ಯೆಯ ಜನಸಂಖ್ಯೆಯನ್ನು ಹೊಂದಿದ ಗಂಗಾವತಿ ತಾಲೂಕಿನಲ್ಲಿ ೩.೪೯ ಲಕ್ಷ ಜನ ಗ್ರಾಮೀಣ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಈ ತಾಲೂಕಿನಲ್ಲಿ ೧.೧೩ಲಕ್ಷ ಜನ ನಗರ ಪ್ರದೇಶದಲ್ಲಿ ವಾಸಿಸುತ್ತಿರುವುದು ತಾಲೂಕಿನಲ್ಲಿ ಕಂಡುಬರುತ್ತಿದೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಜನಸಂಖ್ಯೆಯನ್ನು ಹೊಂದಿದ ಯಲಬುರ್ಗಾ ತಾಲೂಕಿನಲ್ಲಿ ೨.೨೪ ಲಕ್ಷ ಜನ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ೧.೧೪ ಲಕ್ಷ ಜನರು ನಗರ ಪ್ರದೇಶದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಒಟ್ಟಾರೆಯಾಗಿ ಇಡೀ ಕೊಪ್ಪಳ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ೯.೯೭ ಲಕ್ಷ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ಅದರಲ್ಲಿ ೪.೯೫ ಲಕ್ಷ ಜನ ಮಹಿಳೆಯರಿರುವುದು ಕಂಡುಬರುತ್ತದೆ.

### ೬.೨.೩. ಕೊಪ್ಪಳ ಜಿಲ್ಲೆಯ ಜನಸಾಂದ್ರತೆ ಮತ್ತು ಲೈಂಗಿಕ ಪ್ರಮಾಣ

ಜನಸಾಂದ್ರತೆ ಎಂದರೆ ಒಂದು ಪ್ರದೇಶದಲ್ಲಿ ಪ್ರತಿ ಚದರ ಕಿಲೋ ಮೀಟರ್‌ನಲ್ಲಿ ವಾಸಿಸುವ ಸರಾಸರಿ ಜನಸಂಖ್ಯೆಯಾಗಿದೆ. ದೇಶದ ವಿಸ್ತೀರ್ಣವನ್ನು ಒಟ್ಟು ಜನಸಂಖ್ಯೆಯಿಂದ ಭಾಗಿಸಿದರೆ ಆ ಜನಸಾಂದ್ರತೆ ದೊರೆಯುತ್ತದೆ. ಒಂದು ಪ್ರದೇಶದಲ್ಲಿ ಒಂದು ಸಾವಿರ ಪುರುಷರಿಗೆ ಎಷ್ಟು ಜನ ಮಹಿಳೆಯರು ಇದ್ದಾರೆ ಎಂಬುದರ ಪ್ರಮಾಣವನ್ನು ಲೈಂಗಿಕ ಪ್ರಮಾಣವೆನ್ನಬಹುದು. ಒಂದು ದೇಶದಲ್ಲಿ

ವಾಸಿಸುವ ಪುರುಷರ ಜನಸಂಖ್ಯೆಯನ್ನು ಮಹಿಳೆಯರ ಜನಸಂಖ್ಯೆಯಿಂದ ಭಾಗಿಸಿದರೆ ಲೈಂಗಿಕ ಪ್ರಮಾಣ ದೊರೆಯುತ್ತದೆ.

ದೇಶದ ಜನಸಾಂದ್ರತೆ ೨೦೦೧ರ ಪ್ರಕಾರ ಪ್ರತಿ ಚ.ಕಿ.ಮೀ.ಗೆ ೩೨೪ ಇದ್ದರೆ ಕರ್ನಾಟಕದ ಜನಸಾಂದ್ರತೆ ೨೭೫ ಇದೆ. ಲೈಂಗಿಕ ಪ್ರಮಾಣವನ್ನು ಗಮನಿಸಿದರೆ ದೇಶದ ಲೈಂಗಿಕ ಅನುಪಾತ ೨೦೦೧ರ ಪ್ರಕಾರ ೯೩೩ ಇದ್ದರೆ ಕರ್ನಾಟಕದ ಲೈಂಗಿಕ ಅನುಪಾತ ೯೬೪ ಇದೆ. ಕೊಪ್ಪಳ ಜಿಲ್ಲೆಯ ಜನಸಾಂದ್ರತೆ ಮತ್ತು ಲೈಂಗಿಕ ಅನುಪಾತವನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ಕೋಷ್ಟಕ ೬.೩**

**ಕೊಪ್ಪಳ ಜಿಲ್ಲೆಯ ಜನಸಾಂದ್ರತೆ ಮತ್ತು ಲೈಂಗಿಕ ಪ್ರಮಾಣ**

| ಕ್ರ.ಸಂ | ತಾಲೂಕುಗಳು | ಜನಸಾಂದ್ರತೆ ಪ್ರತಿ ಚ.ಕಿ.ಮೀ | ಲೈಂಗಿಕ ಅನುಪಾತ |
|---|---|---|---|
| ೧. | ಗಂಗಾವತಿ | ೩೧೦ | ೯೮೮ |
| ೨. | ಕೊಪ್ಪಳ | ೨೩೦ | ೯೭೪ |
| ೩. | ಕುಷ್ಟಗಿ | ೧೭೫ | ೯೮೪ |
| ೪. | ಯಲಬುರ್ಗ | ೧೫೯ | ೯೮೨ |
| ೫. | ಜಿಲ್ಲೆಯ ಮೊತ್ತ | ೧೬೬ | ೯೮೩ |
| ೬. | ಕರ್ನಾಟಕ | ೨೭೫ | ೯೬೪ |

ಮೂಲ : ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯ ಪು.ಸಂ.೦೭ ಮತ್ತು ಸೆನ್ಸಸ್ ಆಫ್ ಇಂಡಿಯಾ. ೨೦೦೧ District poputotion profile ಡೈರೆಕ್ಟರೇಟ್ ಆಫ್ ಸೆನ್ಸಸ್ ಅಪರೇಷನ್ಸ್ ಕರ್ನಾಟಕ.[೮]

ಕೋಷ್ಟಕ ೬.೩ರನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯ ಜನಸಾಂದ್ರತೆ ಮತ್ತು ಲೈಂಗಿಕ ಅನುಪಾತದ ವಿವರ ತಿಳಿದುಬರುತ್ತಿದೆ. ಪ್ರತಿ ಚದರ ಕಿಲೋಮೀಟರ್‌ಗೆ ಜನಸಾಂದ್ರತೆಯು ಗಂಗಾವತಿ ತಾಲೂಕಿನಲ್ಲಿ ೩೧೦, ಕೊಪ್ಪಳ ತಾಲೂಕಿನಲ್ಲಿ ೨೩೦, ಕುಷ್ಟಗಿ ತಾಲೂಕಿನಲ್ಲಿ ೧೭೫ ಮತ್ತು ಯಲಬುರ್ಗ ತಾಲೂಕಿನಲ್ಲಿ ೧೫೯ ಇರುವುದು ಕಂಡುಬರುತ್ತದೆ. ಒಟ್ಟು ಕೊಪ್ಪಳ ಜಿಲ್ಲೆಯ ಜನಸಾಂದ್ರತೆಯ ಪ್ರತಿಚದರ ಕಿಲೋ ಮೀಟರ್‌ಗೆ ೧೬೬ ಇರುವುದು ಕಂಡುಬರುತ್ತಿದೆ. ಕೊಪ್ಪಳ ಜಿಲ್ಲೆಯಲ್ಲಿ ಗಂಗಾವತಿ ತಾಲೂಕು ಪ್ರತಿ ಚದರ ಕಿಲೋ ಮೀಟರ್‌ಗೆ ೩೧೦ ಜನಸಂಖ್ಯೆಯನ್ನು ಹೊಂದಿ ಪ್ರಥಮ ಸ್ಥಾನದಲ್ಲಿದ್ದರೆ. ಪ್ರತಿ ಚದರ ಕಿಲೋಮೀಟರ್‌ಗೆ ೧೫೯ ಜನಸಂಖ್ಯೆಯನ್ನು ಹೊಂದಿದ ಯಲಬುರ್ಗಾ ತಾಲೂಕು ಜನಸಾಂದ್ರತೆಯಲ್ಲಿ ಕೊನೆಯ ಸ್ಥಾನದಲ್ಲಿರುವುದು ಕಂಡುಬರುತ್ತದೆ.

ಕೋಷ್ಟಕ ೬.೩ ಮತ್ತು ಸ್ತಂಭರೇಖಾ ನಕ್ಷೆಯನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯ ಲೈಂಗಿಕ ಅನುಪಾತ ಕಂಡುಬರುತ್ತದೆ. ಒಟ್ಟು ಕೊಪ್ಪಳ ಜಿಲ್ಲೆಯಲ್ಲಿ ೧೦೦೦ ಪುರುಷರಿಗೆ ೯೮೩ ಜನ ಮಹಿಳೆಯರು ಇರುವುದು ಕಂಡುಬರುತ್ತಿದೆ. ರಾಜ್ಯಕ್ಕೆ ಹೋಲಿಸಿದರೆ ಜಿಲ್ಲೆಯಲ್ಲಿ ಕಾಣೆಯಾದ ಮಹಿಳೆಯರ ಪ್ರಮಾಣ ಶೇಕಡ ೨ರಷ್ಟು ಕಡಿಮೆ ಇರುವುದು ಕಂಡುಬರುತ್ತಿದೆ(೧೦೦೦:೯೬೪).

ಜಿಲ್ಲೆಯ ತಾಲೂಕುವಾರು ಲಿಂಗಾನುಪಾತವನ್ನು ಗಮನಿಸಿದರೆ ಗಂಗಾವತಿ ತಾಲೂಕು ೧೦೦೦ ಪುರುಷರಿಗೆ ೯೮೮ ಜನ ಮಹಿಳೆಯರನ್ನು ಹೊಂದಿ ಪ್ರಥಮ ಸ್ಥಾನದಲ್ಲಿದ್ದರೆ, ೧೦೦೦ ಪುರುಷರಿಗೆ ೯೭೪ ಜನ ಮಹಿಳೆಯರನ್ನು ಹೊಂದಿದ ಕೊಪ್ಪಳ ತಾಲೂಕು ಅತ್ಯಂತ ಕಡಿಮೆ ಲೈಂಗಿಕ ಅನುಪಾತವನ್ನು ಹೊಂದಿ ಕೊನೆಯ ಸ್ಥಾನದಲ್ಲಿರುವುದು ಕಂಡುಬರುತ್ತಿದೆ. ಉಳಿದ ತಾಲೂಕುಗಳಾದ ಕುಷ್ಟಗಿಯಲ್ಲಿ ೧೦೦೦ ಪುರುಷರಿಗೆ ೯೮೪ ಜನ ಮಹಿಳೆಯರಿದ್ದರೆ ಯಲಬುರ್ಗಾದಲ್ಲಿ ೧೦೦೦ ಪುರುಷರಿಗೆ ೯೮೨ ಮಹಿಳೆಯರು ಇರುವುದು ಕಂಡುಬರುತ್ತಿದೆ. ಈ ಎರಡು ತಾಲೂಕುಗಳ ಸರಾಸರಿ ಲೈಂಗಿಕ ಅನುಪಾತ ೯೮೦ಕ್ಕಿಂತ ಅಧಿಕವಾಗಿರುವುದು ತಿಳಿದುಬರುತ್ತಿದೆ. ಕೊಪ್ಪಳ ಜಿಲ್ಲೆಯ ಲೈಂಗಿಕ ಅನುಪಾತವನ್ನು ಗಮನಿಸಿದರೆ ಕೊಪ್ಪಳ ತಾಲೂಕಿನಲ್ಲಿ ಕಳೆದುಹೋದ ಮಹಿಳೆಯರ ಪ್ರಮಾಣ (೧೦೦೦:೯೭೪೨೬) ಶೇಕಡ ೯೭೪ರಷ್ಟು ಇರುವುದು ಕಂಡುಬರುತ್ತಿದೆ. ಜನರಲ್ಲಿರುವ ಅನಕ್ಷರತೆ, ಮೂಢನಂಬಿಕೆ, ಅವಿಭಕ್ತ ಕುಟುಂಬಗಳ ಅಸ್ತಿತ್ವ ಮತ್ತು ಗಂಡು ಬೇಕೆಂಬ ಇಚ್ಛೆಯಿಂದ ಮಹಿಳೆಯರ ಸಂಖ್ಯೆ ಕಡಿಮೆಯಾಗುತ್ತಿದೆ.

### ೬.೨.೪. ಕೊಪ್ಪಳ ಜಿಲ್ಲೆಯ ಸಾಕ್ಷರತೆ ಪ್ರಮಾಣ

ಸಾಕ್ಷರತೆಯು ಒಂದು ಪ್ರದೇಶದ ಅಭಿವೃದ್ಧಿಯ ಮಟ್ಟವನ್ನು ತಿಳಿಸುವ ಸೂಚಿಯಾಗಿದೆ. ಸಾಕ್ಷರತೆ ಪಡೆದ ಜನರು ತಾಂತ್ರಿಕ ಕೌಶಲ್ಯವನ್ನು ಪಡೆದು ಕೃಷಿಯೇತರ ಉದ್ಯೋಗಗಳಲ್ಲಿ ತೊಡಗುವ ಮೂಲಕ ಅಧಿಕ ಆದಾಯ ಗಳಿಸಿ ಆ ಪ್ರದೇಶದ ಅಭಿವೃದ್ಧಿಗೆ ಕಾರಣರಾಗುತ್ತಾರೆ. ಅಭಿವೃದ್ಧಿಗೆ ಕಾರಣವಾಗುವ ಸಾಕ್ಷರತೆ ಪ್ರಮಾಣವನ್ನು ಗಮನಿಸಿದರೆ ದೇಶ, ರಾಜ್ಯ ಮತ್ತು ಜಿಲ್ಲೆಗಳಲ್ಲಿ ಕಡಿಮೆ ಇರುವುದು ಕಂಡುಬರುತ್ತದೆ ಅದರಲ್ಲಿ ಮಹಿಳಾ ಸಾಕ್ಷರತೆಯನ್ನು ತೆಗೆದುಕೊಂಡರೆ ಅತ್ಯಂತ ಕಡಿಮೆ ಇರುವುದು ಅಂಕಿ ಸಂಖ್ಯೆಗಳಿಂದ ತಿಳಿದುಬರುತ್ತಿದೆ. ೨೦೦೧ರ ಜನಗಣತಿಯ ಪ್ರಕಾರ ಭಾರತದಲ್ಲಿ ಸಾಕ್ಷರತೆ ಪ್ರಮಾಣ ಶೇಕಡ ೬೫.೩೮ ರಾಜ್ಯದಲ್ಲಿ ೬೭.೦೪ರಷ್ಟು ಮತ್ತು ಜಿಲ್ಲೆಯಲ್ಲಿ ಶೇಕಡ ೫೪.೧ರಷ್ಟಿರುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಸಾಕ್ಷರತಾ ಪ್ರಮಾಣವನ್ನು ಅವಲೋಕಿಸಿದರೆ ಅಧಿಕ ಪ್ರಮಾಣದ ಜನರು ಅನಕ್ಷರಾಗಿದ್ದು ಅದರಲ್ಲಿ ಅಧಿಕ ಸಂಖ್ಯೆಯ ಪ್ರಮಾಣ ಮಹಿಳೆಯರದ್ದಾಗಿರುವುದು ಅಂಕಿ ಸಂಖ್ಯೆಯಿಂದ ತಿಳಿದುಬರುತ್ತಿದೆ.

## ಕೋಷ್ಟಕ ೬.೪

## ಕೊಪ್ಪಳ ಜಿಲ್ಲೆಯ ತಾಲೂಕುವಾರು ಸಾಕ್ಷರತೆ ಪ್ರಮಾಣ

## ೨೦೦೧ರ ಜನಗಣತಿ ಪ್ರಕಾರ

| ಕ್ರ.ಸಂ. | ತಾಲೂಕುಗಳು | ಸಾಕ್ಷರತಾ ಪ್ರಮಾಣ | | |
|---|---|---|---|---|
| | | ಪುರುಷರು | ಮಹಿಳೆಯರು | ಒಟ್ಟು |
| ೧. | ಗಂಗಾವತಿ | ೬೫.೯ | ೪೦.೩ | ೫೩.೧ |
| ೨. | ಕೊಪ್ಪಳ | ೭೧.೪ | ೪೪.೦ | ೫೭.೮ |
| ೩. | ಕುಷ್ಟಗಿ | ೬೭.೭ | ೩೪.೬ | ೫೧.೩ |
| ೪. | ಯಲಬುರ್ಗ | ೬೯.೭ | ೩೭.೬ | ೫೩.೭ |
| ೫. | ಜಿಲ್ಲೆಯ ಒಟ್ಟು ಮೊತ್ತ | ೬೮.೪ | ೩೯.೬ | ೫೪.೧ |
| ೬. | ರಾಜ್ಯದ ಪ್ರಮಾಣ | ೭೬.೨೯ | ೫೭.೪೫ | ೬೭.೦೪ |

**ಮೂಲ :** ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯, ಪು.ಸಂ.೧೪ ಮತ್ತು ಸೆನ್ಸಸ್ ಆಫ್ ಇಂಡಿಯಾ-೨೦೦೧, ಡಿಸ್ಟ್ರಿಕ್ಟ್ ಪಾಪುಲೇಷನ್ ಬುಕ್‌ಲೆಟ್ ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಷನ್ ಕರ್ನಾಟಕ-೨




ಕೋಷ್ಟಕ ೬.೪ ಮತ್ತು ಸಂಭರೇಖಾ ನಕ್ಷೆಯನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯ ಸಾಕ್ಷರತಾ ಪ್ರಮಾಣ ಕಂಡುಬರುತ್ತದೆ. ಗಂಗಾವತಿ ತಾಲೂಕುನ್ನು ಗಮನಿಸಿದರೆ ಅಲ್ಲಿ ಶೇಕಡ ೫೩.೧ರಷ್ಟು ಸಾಕ್ಷರತಾ ಪ್ರಮಾಣ ಇರುವುದು ಕಂಡುಬರುತ್ತಿದ್ದು ಅದರಲ್ಲಿ ಶೇಕಡ ೬೫.೯ರಷ್ಟು ಪುರುಷ ಸಾಕ್ಷರತೆ

ಇದ್ದರೆ, ಶೇಕಡ ೪೦.೩ರಷ್ಟು ಮಹಿಳಾ ಸಾಕ್ಷರತೆ ಕಂಡುಬರುತ್ತಿದೆ. ಕೊಪ್ಪಳ ತಾಲೂಕುನ್ನು ಗಮನಿಸಿದರೆ ಅಲ್ಲಿ ಒಟ್ಟು ಶೇಕಡ ೫೭.೮ರಷ್ಟು ಸಾಕ್ಷರತೆ ಪ್ರಮಾಣ ಇದ್ದು, ಅದರಲ್ಲಿ ಶೇಕಡ ೭೧.೪ರಷ್ಟು ಪುರುಷರು ಮತ್ತು ಶೇಕಡ ೪೪ರಷ್ಟು ಮಹಿಳೆಯರು ಸಾಕ್ಷರರಾಗಿರುವುದು ತಿಳಿದುಬರುತ್ತದೆ. ಕುಷ್ಟಗಿ ತಾಲೂಕುನ್ನು ಗಮನಿಸಿದರೆ ತಾಲೂಕಿನ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೫೧.೩ರಷ್ಟಿದ್ದು, ಅದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೬೭.೭ರಷ್ಟು ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೩೪.೬ರಷ್ಟು ಇರುವುದು ಕಂಡುಬರುತ್ತದೆ. ಚಿಕ್ಕ ತಾಲೂಕಾದ ಯಲಬುರ್ಗಾ ತಾಲೂಕುನ್ನು ಗಮನಿಸಿದರೆ ಆ ತಾಲೂಕಿನ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೫೩.೭ರಷ್ಟು ಇದ್ದು ಅಲ್ಲಿನ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೬೯.೭ ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೩೭.೬ರಷ್ಟಿರುವುದು ಕಂಡುಬರುತ್ತದೆ.

ಜಿಲ್ಲೆಯ ಒಟ್ಟಾರೆ ಸಾಕ್ಷರತಾ ಪ್ರಮಾಣವನ್ನು ಗಮನಿಸಿದರೆ ಜಿಲ್ಲೆಯ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೫೪.೧ರಷ್ಟಿದ್ದು, ಅದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೬೮.೪ರಷ್ಟಿದ್ದು ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡ ೩೯.೬ರಷ್ಟಿರುವುದು ತಿಳಿದುಬರುತ್ತಿದೆ. ಜಿಲ್ಲೆಯಲ್ಲಿ ಅಧಿಕ ಸಾಕ್ಷರ ಪ್ರಮಾಣವನ್ನು (ಶೇಕಡ ೫೭.೮) ಕೊಪ್ಪಳ ತಾಲೂಕು ಹೊಂದಿದರೆ ಅತ್ಯಂತ ಕಡಿಮೆ ಸಾಕ್ಷರತಾ ಪ್ರಮಾಣವನ್ನು (ಶೇಕಡ ೫೧.೩) ಕುಷ್ಟಗಿ ತಾಲೂಕು ಹೊಂದಿರುವುದು ಕಂಡುಬರುತ್ತಿದೆ. ಜಿಲ್ಲೆಯ ಲಿಂಗವಾರು ಸಾಕ್ಷರತೆ ಪ್ರಮಾಣವನ್ನು ಗಮನಿಸಿದರೆ ಪುರುಷ ಸಾಕ್ಷರತೆ ಪ್ರಮಾಣ (ಶೇಕಡ ೬೮.೪) ಅಧಿಕವಾಗಿದ್ದು ಮಹಿಳಾ ಸಾಕ್ಷರತಾ ಪ್ರಮಾಣ (ಶೇಕಡ ೩೯.೬) ಕಡಿಮೆ ಇರುವುದು ತಿಳಿದುಬರುತ್ತಿದೆ. ರಾಜ್ಯದ ಸಾಕ್ಷರತೆ ಪ್ರಮಾಣವನ್ನು ಗಮನಿಸಿದರೆ ರಾಜ್ಯದ ಒಟ್ಟು ಸಾಕ್ಷರತೆ ಪ್ರಮಾಣ ಶೇಕಡ ೬೭.೦೪ರಷ್ಟಿದ್ದು ಅದರಲ್ಲಿ ಪುರುಷರ ಸಾಕ್ಷರತೆ ಪ್ರಮಾಣ ಶೇಕಡ ೭೬.೨೯ ಮತ್ತು ಮಹಿಳಾ ಸಾಕ್ಷರತಾ ಪ್ರಮಾಣ ಶೇಕಡ ೫೭.೪೫ರಷ್ಟಿರುವುದು ಕಂಡುಬರುತ್ತಿದೆ.

ಸಮಗ್ರವಾಗಿ ರಾಜ್ಯ, ಜಿಲ್ಲೆ ಮತ್ತು ತಾಲೂಕು ಮಟ್ಟದಲ್ಲಿನ ಮಹಿಳಾ ಸಾಕ್ಷರತೆ ಪ್ರಮಾಣ ಪುರುಷರಿಗಿಂತ ಕಡಿಮೆ ಇರುವುದು ಕಂಡುಬರುತ್ತಿದೆ. ಮಹಿಳಾ ಸಾಕ್ಷರತೆ ಪ್ರಮಾಣ ಕಡಿಮೆ ಇರುವುದನ್ನು ಗಮನಿಸಿದರೆ ಮಹಿಳೆಯರ ಶೈಕ್ಷಣಿಕ ಅನುಭೋಗ ಕಡಿಮೆ ಇರುವುದನ್ನು ತಿಳಿಯಬಹುದು.

### ೬.೨.೫. ಕೊಪ್ಪಳ ಜಿಲ್ಲೆಯ ದುಡಿಮೆಯ ಸಹಭಾಗಿತ್ವದ ಪ್ರಮಾಣ

ದುಡಿಮೆ ಸಹಭಾಗಿತ್ವದ ಪ್ರಮಾಣವು ಒಂದು ಪ್ರದೇಶ ಒಟ್ಟು ಜನಸಂಖ್ಯೆಯಲ್ಲಿ ಎಷ್ಟು ಜನರು ದುಡಿಮೆಯಲ್ಲಿ ತೊಡಗಿದ್ದಾರೆ ಎಂಬುದನ್ನು ತಿಳಿಯಪಡಿಸುತ್ತದೆ. ಕೊಪ್ಪಳ ಜಿಲ್ಲೆಯ ದುಡಿಮೆಯ ಸಹಭಾಗಿತ್ವದ ಪ್ರಮಾಣವನ್ನು ಗಮನಿಸಿದರೆ ಮಹಿಳೆಯರಿಗಿಂತ ಪುರುಷರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಅಧಿಕ ಇರುವುದು ಕಂಡುಬರುತ್ತದೆ. ಅದನ್ನು ಕೋಷ್ಟಕದಲ್ಲಿ ಗಮನಿಸಬಹುದು.

ಕೋಷ್ಟಕ ೬.೫

ಕೊಪ್ಪಳ ಜಿಲ್ಲೆಯ ದುಡಿಮೆಯ ಸಹಭಾಗಿತ್ವದ ಪ್ರಮಾಣ

| ಮುಖ್ಯ ಕೆಲಸಗಾರರು | | | ಅರೆಕಾಲಿಕ ಕೆಲಸಗಾರರು | | | ಕೆಲಸಗಾರರಲ್ಲದವರು | | |
|---|---|---|---|---|---|---|---|---|
| ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ೪೭.೫ | ೨೨.೮ | ೩೫.೩ | ೬.೧ | ೧೬.೧ | ೧೧.೧ | ೪೬.೩ | ೬೧.೧ | ೫೩.೬ |

ಮೂಲ : ಸೆನ್ಸಸ್ ಆಫ್ ಇಂಡಿಯಾ ೨೦೦೧-ಡಿಸ್ಟ್ರಿಕ್ಟ್ ಪಾಪುಲೇಷನ್ ಬುಕ್‌ಲೆಟ್ ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಷನ್ಸ್ ಕರ್ನಾಟಕ ಪು.ಸಂ.೫[೦]

ಕೋಷ್ಟಕ ೬.೫. ತಿಳಿಸುವಂತೆ ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ಶೇಕಡ ೩೫.೩ರಷ್ಟು ಮುಖ್ಯ ಕೆಲಸಗಾರಿದ್ದು ಅವರಲ್ಲಿ ಶೇಕಡ ೪೭.೫ರಷ್ಟು ಜನ ಪುರುಷರು ಮತ್ತು ೨೨.೮ರಷ್ಟು ಜನ ಮಹಿಳೆಯರಿರುವುದು ಕಂಡುಬರುತ್ತಿದೆ. ಜಿಲ್ಲೆಯಲ್ಲಿ ಅರೆಕೆಲಸಗಾರರ ದುಡಿಮೆ ಸಹಭಾಗಿತ್ವದ ಪ್ರಮಾಣ ಒಟ್ಟು ಶೇಕಡ ೧೧.೧ರಷ್ಟಿದೆ. ಅದರಲ್ಲಿ ಶೇಕಡ ೬.೧ರಷ್ಟು ಪುರುಷರಾಗಿದ್ದರೆ ಶೇಕಡ ೧೬.೧ರಷ್ಟು ಜನರು ಮಹಿಳೆಯರಿದ್ದಾರೆ. ಜಿಲ್ಲೆಯಲ್ಲಿ ದುಡಿಮೆಯ ಸಹಭಾಗಿತ್ವದಲ್ಲಿ ದುಡಿಮೆಗಾರರಲ್ಲದವರು ಒಟ್ಟು ಶೇಕಡ ೫೩.೬ರಷ್ಟಿದ್ದು. ಅದರಲ್ಲಿ ಶೇಕಡ ೪೬.೩ರಷ್ಟು ಜನರು ಪುರುಷರು ಮತ್ತು ಶೇಕಡ ೬೧.೧ರಷ್ಟು ಜನರು ಮಹಿಳೆಯರಾಗಿರುವುದು ಕಂಡುಬರುತ್ತಿದೆ.

ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಮುಖ್ಯ ಕೆಲಸಗಾರರಲ್ಲಿ ಮಹಿಳೆಯರಿಗಿಂತ ಪುರುಷರು ಅಧಿಕ ಪ್ರಮಾಣದಲ್ಲಿರುವುದು ಕಂಡುಬರುತ್ತಿದೆ. ಈ ಒಂದು ಅಂಶವು ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಕಡಿಮೆ ಎಂಬುದನ್ನು ಸೂಚಿಸುತ್ತದೆ. ಅರೆಕಾಲಿಕ ಕೆಲಸಗಾರರನ್ನೇ ತೆಗೆದುಕೊಂಡರೆ ಪುರುಷರಿಗಿಂತ ಮಹಿಳೆಯರ ಪ್ರಮಾಣ ಅಧಿಕವಾಗಿರುವುದು ಕಂಡುಬರುತ್ತಿದೆ. ಇದು ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಅರೆಕಾಲಿಕ, ಋತುಮಾನ ಸಂಬಂಧಿ ಕೆಲಸಗಳಲ್ಲಿ ತೊಡಗಿರುತ್ತಾರೆಂಬುದನ್ನು ಸೂಚಿಸುತ್ತದೆ. ಕೆಲಸಗಾರರಲ್ಲಿದವರ ಪ್ರಮಾಣವನ್ನು ಗಮನಿಸಿದರೆ ಶೇಕಡ ೬೧.೧ರಷ್ಟು ಮಹಿಳೆಯರು ಕೆಲಸಗಾರರಲ್ಲ ಎಂಬುದನ್ನು ತಿಳಿಸುತ್ತದೆ. ಅಂದರೆ ಪುರುಷರಿಗಿಂತ ಮಹಿಳೆಯರೇ ಅಧಿಕ ಸಂಖ್ಯೆಯಲ್ಲಿ ಕೆಲಸಗಾರಲ್ಲದವರಾಗಿದ್ದಾರೆ ಎಂಬುದನ್ನು ತೋರಿಸುತ್ತದೆ. ಅಧಿಕ ಪ್ರಮಾಣದ ಮಹಿಳೆಯರನ್ನು ಕೆಲಸ ಗಾರರಲ್ಲದವರು ಎಂದು ಪರಿಗಣಿಸಿರುವುದನ್ನು ಗಮನಿಸಿದರೆ ಮಹಿಳೆಯರ ದುಡಿಮೆಯ ಅಪಮೌಲ್ಯ ವಾಗಿರುವ ಅಂಶ ಕಂಡುಬರುತ್ತದೆ.

ಕೋಷ್ಟಕ ೬.೬

ಕೊಪ್ಪಳ ಜಿಲ್ಲೆಯ ತಾಲೂಕುವಾರು ದುಡಿಮೆ ಸಹಭಾಗಿತ್ವದ ಪ್ರಮಾಣ

| ಕ್ರ.ಸಂ | ತಾಲೂಕು | ಗ್ರಾಮೀಣ | | ನಗರ | | ಒಟ್ಟು | |
|---|---|---|---|---|---|---|---|
| | | ಪುರುಷ | ಮಹಿಳೆ | ಪುರುಷ | ಮಹಿಳೆ | ಪುರುಷ | ಮಹಿಳೆ |
| ೧. | ಗಂಗಾವತಿ | ೫೪.೧ | ೩೮.೧ | ೫೨.೧ | ೧೫.೬ | ೫೩.೬ | ೩೨.೫ |
| ೨. | ಕೊಪ್ಪಳ | ೫೩.೯ | ೪೨.೩ | ೫೧.೦ | ೧೨.೪ | ೫೩.೩ | ೩೬.೩ |
| ೩. | ಕುಷ್ಟಗಿ | ೫೨.೯ | ೪೫.೬ | ೪೬.೦ | ೧೩.೫ | ೫೨.೩ | ೪೨.೮ |
| ೪. | ಯಲಬುರ್ಗಾ | ೫೬.೦ | ೫೦.೯ | ೪೮.೬ | ೨೫.೬ | ೫೫.೭ | ೪೯.೭ |
| ೫. | ಕೊಪ್ಪಳ ಜಿಲ್ಲೆ | ೫೪.೨ | ೪೩.೭ | ೫೦.೯ | ೧೫.೦ | ೫೩.೭ | ೩೮.೯ |

ಮೂಲ : ಸೆನ್ಸಸ್ ಆಫ್ ಇಂಡಿಯಾ ೨೦೦೧, ಡಿಸ್ಟ್ರಿಕ್ಟ್ ಪಾಪುಲೇಷನ್ ಬುಕ್‌ಲೆಟ್ ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಷನ್ ಕರ್ನಾಟಕ ಪು.ಸಂ.೭ ರಿಂದ ೨೪[೧೧]




ಕೋಷ್ಟಕ ೬.೬ನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯಲ್ಲಿ ಗ್ರಾಮೀಣ ಭಾಗದಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೪.೨ರಷ್ಟಿದ್ದರೆ ಮಹಿಳೆಯರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಶೇಕಡ ೪೩.೭ರಷ್ಟಿರುವುದು ಕಂಡುಬರುತ್ತದೆ. ಮಹಿಳೆಯರಿಗೆ ಹೋಲಿಸಿದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಅಧಿಕವಾಗಿರುವುದು ಕಂಡುಬರುತ್ತಿದೆ. ನಗರ ಪ್ರದೇಶವನ್ನು ಗಮನಿಸಿದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೦.೯ರಷ್ಟು ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೧೫ರಷ್ಟಿರುವುದು ಕಂಡುಬರುತ್ತಿದೆ. ನಗರ ಪ್ರದೇಶದಲ್ಲಿ ಮಹಿಳೆಯರ

ದುಡಿಮೆ ಸಹಭಾಗಿತ್ವದ ಪ್ರಮಾಣ ಪುರುಷರಿಗೆ ಹೋಲಿಸಿದರೆ ಅತ್ಯಂತ ಕಡಿಮೆ ಇರುವುದು ಕಂಡುಬರುತ್ತಿದೆ. ಜಿಲ್ಲೆಯ ಒಟ್ಟು ದುಡಿಮೆ ಸಹಭಾಗಿತ್ವವನ್ನು ಅವಲೋಕಿಸಿದರೆ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೩.೭ರಷ್ಟಿದ್ದರೆ ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೩೮.೯ರಷ್ಟಿರುವುದು ತಿಳಿದುಬರುತ್ತದೆ.

ತಾಲೂಕುವಾರು ದುಡಿಮೆ ಸಹಭಾಗಿತ್ವವನ್ನು ಅವಲೋಕಿಸಿದರೆ ಗಂಗಾವತಿ ತಾಲೂಕಿನಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೩.೬ರಷ್ಟಿದ್ದರೆ ಮಹಿಳಾ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೩೨.೫ರಷ್ಟಿದೆ. ಕೊಪ್ಪಳ ತಾಲೂಕಿನಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೩.೩ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೩೬.೩ರಷ್ಟಿದೆ. ಕುಷ್ಟಗಿ ತಾಲೂಕಿನಲ್ಲಿ ಪುರುಷರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೫೨.೩ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೪೨.೮ರಷ್ಟಿದೆ. ಯಲಬುರ್ಗಾ ತಾಲೂಕಿನಲ್ಲಿ ಪುರುಷರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಶೇಕಡ ೫೫.೭ರಷ್ಟಿದ್ದರೆ ಮಹಿಳೆಯರ ದುಡಿಮೆ ಸಹಭಾಗಿತ್ವದ ಪ್ರಮಾಣ ಶೇಕಡ ೪೯.೭ ರಷ್ಟಿರುವುದು ಕಂಡುಬರುತ್ತದೆ.

ದುಡಿಮೆಯ ಸಹಭಾಗಿತ್ವದ ಪ್ರಮಾಣವನ್ನು ಗಮನಿಸಿದರೆ ಪುರುಷರ ದುಡಿಮೆಯ ಸಹಭಾಗಿತ್ವದ ಪ್ರಮಾಣ ಮಹಿಳೆಯರಿಗಿಂತ ಅಧಿಕವಾಗಿರುವುದು ಮೇಲಿನ ಅಂಕಿ ಸಂಖ್ಯೆಗಳಿಂದ ತಿಳಿದುಬರುತ್ತಿದೆ. ಜಿಲ್ಲೆಯಲ್ಲಿ ಯಲಬುರ್ಗಾ ತಾಲೂಕು ಪುರುಷರ ದುಡಿಮೆ ಸಹಭಾಗಿತ್ವ(ಶೇ.೫೫.೭) ಮತ್ತು ಮಹಿಳೆಯರ ದುಡಿಮೆ ಸಹಭಾಗಿತ್ವದಲ್ಲಿ(ಶೇ.೪೯.೭) ಪ್ರಥಮ ಸ್ಥಾನದಲ್ಲಿದರ ಕುಷ್ಟಗಿ ತಾಲೂಕು ಪುರುಷರ ದುಡಿಮೆ ಸಹಭಾಗಿತ್ವದಲ್ಲಿ(ಶೇ.೫೨.೩) ಗಂಗಾವತಿ ತಾಲೂಕು ಮಹಿಳೆಯರ ದುಡಿಮೆ ಸಹಭಾಗಿತ್ವದಲ್ಲಿ (ಶೇ.೩೨.೫) ಕೊನೆಯ ಸ್ಥಾನದಲ್ಲಿರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ.

**೬.೨.೬. ಕಡಿಮೆ ಮಾನವ ಅಭಿವೃದ್ಧಿ ಸೂಚ್ಯಂಕ**

ಮಾನವ ಅಭಿವೃದ್ಧಿ ಅನುಸೂಚಿಯು ಒಂದು ದೇಶ, ರಾಜ್ಯ, ಜಿಲ್ಲೆಯ ಅಭಿವೃದ್ಧಿ ಮಟ್ಟ ಯಾವ ಸ್ಥಾನದಲ್ಲಿದೆ ಎಂಬುದನ್ನು ಸೂಚಿಸುತ್ತದೆ. ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಯುಎನ್‌ಡಿಪಿ(ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ UNDP)ಯು ೧೯೯೦ರಿಂದ ಮಾನವ ಅಭಿವೃದ್ಧಿ ಅನು ಸೂಚಿಯ (HDI) ಮೂಲಕ ಮಾನವ ಅಭಿವೃದ್ಧಿಯನ್ನು ಮಾಪನ ಮಾಡುವ ಪ್ರಯತ್ನ ಮಾಡುತ್ತಿದೆ. ಪಾಕಿಸ್ತಾನದ ಖ್ಯಾತ ಅರ್ಥಶಾಸ್ತ್ರಜ್ಞ ಮಹಬೂಬ್ ಉಲ್‌ಹಕ್ ಮತ್ತು ಭಾರತದ ಅರ್ಥಶಾಸ್ತ್ರಜ್ಞ ಡಾ.ಅಮರ್ತ್ಯಸೇನ್ ಅವರು ಮಾನವ ಅಭಿವೃದ್ಧಿ ಅನುಸೂಚಿಯನ್ನು ಅಭಿವೃದ್ಧಿಪಡಿಸಿದ್ದಾರೆ. ಈ ಒಂದು ಅನುಸೂಚಿಯು ಸಾಮಾಜಿಕ ಸೂಚಕಗಳ ಒಂದು ಸಂಯುಕ್ತ ಅನುಸೂಚಿಯಾಗಿದೆ. ಮಾನವ ಅಭಿವೃದ್ಧಿ ಅನುಸೂಚಿಯನ್ನು ದೀರ್ಘ

ಆಯುಸ್ಸು, ಶಿಕ್ಷಣದ ಪ್ರಾಪ್ತಿ ಮತ್ತು ಜೀವನ ಮಟ್ಟ ಎಂಬ ಮೂರು ಸೂಚನೆಗಳ ಸಹಾಯದಿಂದ ಮಾಪನ ಮಾಡಲಾಗುತ್ತದೆ.[೨]

೨೦೦೯ರ ಮಾನವ ಅಭಿವೃದ್ಧಿ ಸೂಚ್ಯಂಕದ ಪ್ರಕಾರ ಭಾರತದ ಸ್ಥಾನ ೧೩೭ ಇರುವುದು ಕಂಡುಬರುತ್ತಿದೆ. ೨೦೦೧ರ ಮಾನವ ಅಭಿವೃದ್ಧಿ ವರದಿಯಲ್ಲಿ ರಾಜ್ಯ ಮತ್ತು ಜಿಲ್ಲಾವಾರು ಸ್ಥಾನವನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

ಕೋಷ್ಟಕ ೬.೭

ಜಿಲ್ಲಾವಾರು ಮಾನವ ಅಭಿವೃದ್ಧಿ ಸೂಚ್ಯಂಕಗಳು

| ಕ್ರ.ಸಂ. | ಜಿಲ್ಲೆಯ ಹೆಸರು | ಮಾನವ ಅಭಿವೃದ್ಧಿ ಸೂಚ್ಯಂಕ-HDI | | | |
|---|---|---|---|---|---|
| | | ಮೌಲ್ಯ | | ಸ್ಥಾನ | |
| | | ೨೦೦೧ | ೧೯೯೧ | ೨೦೦೧ | ೧೯೯೧ |
| ೧. | ಬಾಗಲಕೋಟೆ | ೦.೫೯೧ | ೦.೫೦೫ | ೨೨ | ೨೦ |
| ೨. | ಬೆಂಗಳೂರು ಗ್ರಾಮಾಂತರ | ೦.೬೫೩ | ೦.೫೩೯ | ೦೬ | ೧೧ |
| ೩. | ಬೆಂಗಳೂರು ನಗರ | ೦.೭೫೩ | ೦.೬೨೩ | ೦೧ | ೦೪ |
| ೪. | ಬೆಳಗಾವಿ | ೦.೬೪೮ | ೦.೫೪೫ | ೦೮ | ೦೯ |
| ೫. | ಬಳ್ಳಾರಿ | ೦.೬೧೭ | ೦.೫೧೨ | ೧೮ | ೧೮ |
| ೬. | ಬೀದರ್ | ೦.೫೯೯ | ೦.೪೯೬ | ೨೧ | ೨೩ |
| ೭. | ಬಿಜಾಪುರ | ೦.೫೮೯ | ೦.೫೦೪ | ೨೩ | ೨೧ |
| ೮. | ಚಾಮರಾಜನಗರ | ೦.೫೭೬ | ೦.೪೮೮ | ೨೫ | ೨೪ |
| ೯. | ಚಿಕ್ಕಮಗಳೂರು | ೦.೬೪೭ | ೦.೫೫೯ | ೦೯ | ೦೭ |
| ೧೦. | ಚಿತ್ರದುರ್ಗ | ೦.೬೨೭ | ೦.೫೩೫ | ೧೬ | ೧೩ |
| ೧೧. | ದಕ್ಷಿಣ ಕನ್ನಡ | ೦.೭೨೨ | ೦.೬೬೧ | ೨ | ೦೧ |
| ೧೨. | ದಾವಣಗೆರೆ | ೦.೬೩೫ | ೦.೫೪೮ | ೧೨ | ೦೮ |
| ೧೩. | ಧಾರವಾಡ | ೦.೬೪೨ | ೦.೫೩೯ | ೧೦ | ೧೦ |
| ೧೪. | ಗದಗ | ೦.೬೩೪ | ೦.೫೧೬ | ೧೩ | ೧೭ |
| ೧೫. | ಗುಲ್ಬರ್ಗ | ೦.೫೬೪ | ೦.೪೫೩ | ೨೬ | ೨೫ |
| ೧೬. | ಹಾಸನ | ೦.೬೩೯ | ೦.೫೧೯ | ೧೧ | ೧೬ |
| ೧೭. | ಹಾವೇರಿ | ೦.೬೦೩ | ೦.೪೯೬ | ೨೦ | ೨೨ |
| ೧೮. | ಕೊಡಗು | ೦.೬೯೭ | ೦.೬೨೩ | ೦೪ | ೦೩ |

| | | | | | |
|---|---|---|---|---|---|
| ೧೯. | ಕೋಲಾರ | ೦.೬೨೫ | ೦.೫೨೨ | ೧೭ | ೧೫ |
| ೨೦. | ಕೊಪ್ಪಳ | ೦.೫೮೨ | ೦.೪೪೬ | ೨೪ | ೨೬ |
| ೨೧. | ಮಂಡ್ಯ | ೦.೬೦೯ | ೦.೫೧೧ | ೧೯ | ೧೯ |
| ೨೨. | ಮೈಸೂರು | ೦.೬೩೧ | ೦.೫೨೪ | ೧೪ | ೧೪ |
| ೨೩. | ರಾಯಚೂರು | ೦.೫೪೭ | ೦.೪೪೩ | ೨೭ | ೨೭ |
| ೨೪. | ಶಿವಮೊಗ್ಗ | ೦.೬೭೩ | ೦.೫೮೪ | ೦೫ | ೦೫ |
| ೨೫. | ತುಮಕೂರು | ೦.೬೩೦ | ೦.೫೩೯ | ೧೫ | ೧೨ |
| ೨೬. | ಉಡುಪಿ | ೦.೭೧೪ | ೦.೬೫೯ | ೩ | ೨ |
| ೨೭. | ಉತ್ತರ ಕನ್ನಡ | ೦.೬೫೩ | ೦.೫೬೭ | ೭ | ೬ |
| | ಕರ್ನಾಟಕ | ೦.೬೫೦ | ೦.೫೪೧ | - | |

ಮೂಲ : ಶ್ರೀ ವಿ.ಶಾಂತಪ್ಪ. ಸಂಯೋಜಕರು, ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫, ಪು.೩೬೦[೧೩]

ಕೋಷ್ಟಕ ೬.೭ನ್ನು ಗಮನಿಸಿದರೆ ರಾಜ್ಯದಲ್ಲಿನ ವಿವಿಧ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಂಕದ ಸ್ಥಾನ ತಿಳಿದುಬರುತ್ತಿದೆ. ೧೯೯೧ರಲ್ಲಿ ಹೆಚ್.ಡಿ.ಐದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ಪ್ರಥಮ ಸ್ಥಾನ ದಲ್ಲಿದ್ದರೆ ೨೦೦೧ರಲ್ಲಿ ಹೆಚ್.ಡಿ.ಐದಲ್ಲಿ ಬೆಂಗಳೂರು ನಗರ ಪ್ರಥಮ ಸ್ಥಾನದಲ್ಲಿರುವುದು ಕಂಡುಬರುತ್ತಿದೆ. ೧೯೯೧ರಲ್ಲಿ ಉಡುಪಿ ಜಿಲ್ಲೆಯು ಹೆಚ್.ಡಿ.ಐದಲ್ಲಿ ಎರಡನೇ ಸ್ಥಾನದಲ್ಲಿದ್ದರೆ ೨೦೦೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ಎರಡನೇ ಸ್ಥಾನದಲ್ಲಿದೆ. ೧೯೯೧ರಲ್ಲಿ ಕೊಡಗು ಜಿಲ್ಲೆಯು ಹೆಚ್.ಡಿ.ಐ.ದಲ್ಲಿ ಮೂರನೇ ಸ್ಥಾನದಲ್ಲಿದ್ದರೆ ೨೦೦೧ರಲ್ಲಿ ಉಡುಪಿ ಜಿಲ್ಲೆಯು ಮೂರನೇ ಸ್ಥಾನದಲ್ಲಿರುವುದು ತಿಳಿದು ಬರುತ್ತಿದೆ. ೧೯೯೧ರಲ್ಲಿ ಹೆಚ್.ಡಿ.ಐ.ದಲ್ಲಿ ರಾಯಚೂರು ಜಿಲ್ಲೆ ೨೭ನೇ ಸ್ಥಾನ ಪಡೆದು ರಾಜ್ಯದಲ್ಲಿ ಕೊನೆಯ ಸ್ಥಾನದಲ್ಲಿದ್ದರೆ ೨೦೦೧ರಲ್ಲಿ ಸಹ ಅದೇ ೨೭ನೇ ಸ್ಥಾನದೊಂದಿಗೆ ರಾಯಚೂರು ಜಿಲ್ಲೆಯು ಕೊನೆಯ ಸ್ಥಾನದಲ್ಲಿರುವುದು ಕಂಡುಬರುತ್ತದೆ.

ಮಾನವ ಅಭಿವೃದ್ಧಿ ಅನುಸೂಚಿಯಲ್ಲಿ ಕೊಪ್ಪಳ ಜಿಲ್ಲೆಯ ಸ್ಥಾನವನ್ನು ನೋಡಿದರೆ ೧೯೯೧ರಲ್ಲಿ ೨೬ನೇ ಸ್ಥಾನ ಪಡೆದು ಎರಡನೇ ಕೊನೆಯ ಜಿಲ್ಲೆಯಾಗಿದ್ದರೆ ೨೦೦೧ರಲ್ಲಿ ೨೪ನೇ ಸ್ಥಾನದೊಂದಿಗೆ HDIದಲ್ಲಿ ಕೊನೆಯ ಸ್ಥಾನ ಪಡೆದ ನಾಲ್ಕನೇ ಜಿಲ್ಲೆಯಾಗಿ ಹೊರಹೊಮ್ಮಿರುವುದು ಕಂಡುಬರುತ್ತಿದೆ. HDIದಲ್ಲಿ ೨೪ನೇ ಸ್ಥಾನ ಪಡೆದ ಕೊಪ್ಪಳ ಜಿಲ್ಲೆಯು ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಹಿಂದುಳಿದ ಜಿಲ್ಲೆಯಾಗಿದ್ದು ಇಲ್ಲಿ ಆಯುಸ್ಸಿನ ಪ್ರಮಾಣ, ಶಿಕ್ಷಣದ ಪಟ್ಟಿ ಮತ್ತು ಜೀವನಮಟ್ಟ ಎಂಬ ಮೂಲಭೂತ ಸೌಕರ್ಯಗಳು ಕಡಿಮೆ ಇರುವುದನ್ನು ತಿಳಿಸುತ್ತದೆ. ಜಿಲ್ಲೆಯ ಲೈಂಗಿಕ ಅನುಪಾತ(೧೦೦೦:೯೮೩) ಕಡಿಮೆ ಇರುವುದು ಮತ್ತು ಮಹಿಳಾ ಸಾಕ್ಷರತೆ ಪ್ರಮಾಣ(ಶೇಕಡ ೩೯.೬) ಕಡಿಮೆ ಇರುವದನ್ನು ಗಮನಿಸಿದರೆ

ಕೊಪ್ಪಳ ಜಿಲ್ಲೆಯ ಲಿಂಗ ಅಭಿವೃದ್ಧಿ ಸೂಚ್ಯಂಕ(GDI) ಸಹ ಕಡಿಮೆ ಇರಬಹುದು ಎಂಬ ಅಂಶ ವ್ಯಕ್ತವಾಗುತ್ತದೆ.

ಜಿಲ್ಲೆಯ ಎಲ್ಲ ಸಾಮಾನ್ಯ ಮಾಹಿತಿಯನ್ನು ಅವಲೋಕಿಸಿದರೆ ಕೊಪ್ಪಳ ಜಿಲ್ಲೆಯು ಒಂದು ಹಿಂದುಳಿದ ಜಿಲ್ಲೆ ಎಂಬ ಅಂಶ ವ್ಯಕ್ತವಾಗುತ್ತದೆ. ಆರ್ಥಿಕ ರಚನೆಯನ್ನು ನೋಡಿದರೆ ಅಧಿಕ ಸಂಖ್ಯೆಯ ಜನರು ಪ್ರಥಮ ವಲಯದಲ್ಲಿ (ಶೇ.೫೫) ದುಡಿಯುತ್ತಿರುವುದು ಕಂಡುಬರುತ್ತದೆ. ಕಡಿಮೆ ಸಾಕ್ಷರತಾ ಪ್ರಮಾಣ ಮತ್ತು ಆರ್ಥಿಕ ಸಂಖ್ಯೆಯ ದುಡಿಮೆಗಾರರನ್ನು ಹೊಂದಿದ ಕೊಪ್ಪಳ ಜಿಲ್ಲೆಯು ಅಧಿಕ ಅಸಂಘಟಿತ ವಲಯದ ದುಡಿಮೆಗಾರರನ್ನು ಹೊಂದಿದ ಜಿಲ್ಲೆಯಾಗಿದೆ.

## ೩.೩ ಕೊಪ್ಪಳ ಜಿಲ್ಲೆಯ ಕ್ಷೇತ್ರಕಾರ್ಯ ಸಮೀಕ್ಷೆ

**ಮಹಿಳಾ ಕೃಷಿ ಕಾರ್ಮಿಕರು ಹಾಗೂ ಕಟ್ಟಡ ನಿರ್ಮಾಣ ಕಾರ್ಮಿಕರ ಆರ್ಥಿಕ ಸ್ಥಿತಿಗತಿಯ ಒಂದು ಅಧ್ಯಯನ**

ಕೊಪ್ಪಳ ಜಿಲ್ಲೆಯ ಸಾಮಾನ್ಯ ಮಾಹಿತಿಯನ್ನು ಅವಲೋಕಿಸಿದರೆ ಜಿಲ್ಲೆಯ ದುಡಿಮೆಯ ಸಹಭಾಗಿತ್ವದಲ್ಲಿ ಮಹಿಳಾ ದುಡಿಮೆಗಾರರು ಅಧಿಕ ಪ್ರಮಾಣದಲ್ಲಿ ಅಂದರೆ ಶೇಕಡ ೩೮.೯ರಷ್ಟು ಇರುವುದು ಕಂಡುಬರುತ್ತಿದ್ದು, ಜಿಲ್ಲೆಯಲ್ಲಿ ಒಟ್ಟು ೨.೩೪ ಲಕ್ಷ ಜನ ಕೃಷಿ ಕಾರ್ಮಿಕರಿದ್ದು ಅದರಲ್ಲಿ ೧.೫೦ಲಕ್ಷ ಜನ ಮಹಿಳಾ ಕಾರ್ಮಿಕರಿರುವುದು ಕಂಡುಬರುತ್ತಿದೆ.[೧೪] ಜಿಲ್ಲೆಯಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರು ೨೦೫೨ ಜನ ನೋಂದಣಿಯಾಗಿರುವುದು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ತಿಳಿದುಬರುತ್ತದೆ. ನೋಂದಣಿಯಾದ ಕಾರ್ಮಿಕರಿಗಿಂತಲೂ ಅಧಿಕ ಸಂಖ್ಯೆಯ ಕಾರ್ಮಿಕರು ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದು ಅವರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳೆಯರೇ ಆಗಿದ್ದಾರೆ.

ಬಡತನದ ಭಾರ, ಅನಕ್ಷರತೆ ಮತ್ತು ಕೌಶಲ್ಯವಿಲ್ಲದ ಅನೇಕ ಸಂಖ್ಯೆಯ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಕೃಷಿ ಮತ್ತು ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದಾರೆ. ಇವರಲ್ಲಿ ಬಹುತೇಕರು ತಳಸಮುದಾಯಕ್ಕೆ ಸೇರಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯರಾಗಿದ್ದು, ಕಡಿಮೆ ಪ್ರಮಾಣದ ಮಹಿಳೆಯರು ಮಾತ್ರ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ ಮಹಿಳೆಯರಾಗಿರುವುದು ಕ್ಷೇತ್ರಕಾರ್ಯದಿಂದ ಕಂಡುಬಂದಿದೆ. ಬಡತನದ ಭಾರವನ್ನು ತಮ್ಮ ಹೆಗಲ ಮೇಲೆ ಏರಿಕೊಂಡ ವಿಧವೆಯರು, ದೇವದಾಸಿಯರು, ವೃದ್ಧರು ಮತ್ತು ನಿರ್ಗತಿಕರು ಕೃಷಿ ಮತ್ತು ನಿರ್ಮಾಣ ಕಾರ್ಯದಂತ ವೃತ್ತಿಯನ್ನು ಅವಲಂಬಿಸಿರುವುದು ಕಂಡುಬರುತ್ತದೆ.

ಬದುಕುವ ಅನಿವಾರ್ಯತೆಯಿಂದ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕಾರ್ಮಿಕರಾಗ, ದುಡಿಯುತ್ತಿರುವ ಈ ಮಹಿಳೆ ಮೂರು ವಿಧದ ದುಡಿಮೆ, ಕೂಲಿತಾರತಮ್ಯ, ಕೆಲಸದ ತಾರತಮ್ಯ, ಪುರುಷ ಕಾರ್ಮಿಕರ ಶೋಷಣೆ, ಜಮೀನುದಾರರ ದಬ್ಬಾಳಿಕೆ, ಸಾಮಾಜಿಕ ಬಹಿಷ್ಕಾರ ಮತ್ತು ಸರಕಾರಿ ಯೋಜನೆ ಹಾಗೂ ಪಾಲನೆಗಳ ಪ್ರಯೋಜನದಿಂದ ವಂಚಿತರಾಗಿ ಕಡಿಮೆ ಜೀವನ ಮಟ್ಟವನ್ನು ಸಾಗಿಸುತ್ತಿರುವುದು ಕಂಡುಬರುತ್ತದೆ.

೬.೩.೧. ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಲಕ್ಷಣಗಳು

ದೇಶದ ಆರ್ಥಿಕ ಸಂರಚನೆಯನ್ನು ಗಮನಿಸಿದರೆ ಒಟ್ಟು ಜನಸಂಖ್ಯೆಯ ಶೇಕಡ ೭೨.೨೬ರಷ್ಟು ಜನರು ಗ್ರಾಮೀಣ ಭಾಗದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದೆ. ಇದರಲ್ಲಿ ಅಧಿಕ ಸಂಖ್ಯೆಯ ಅಂದರೆ ಶೇಕಡ ೮೨.೫ರಷ್ಟು ಮಹಿಳೆಯರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ ಎಂಬ ಅಂಶ ಅಂಕಿಸಂಖ್ಯೆಯಿಂದ ವ್ಯಕ್ತವಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಇಂತಹ ಮಹಿಳೆಯರು ಕೃಷಿಯನ್ನು ಒಂದು ಜೀವನಾಧರ ಎಂದು ನಂಬಿ ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ರಾಜ್ಯದ ಜನಸಂಖ್ಯೆಯನ್ನು ಗಮನಿಸಿದರೆ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೩.೪೫ರಷ್ಟು ಮಹಿಳೆಯರು ಕೃಷಿ ಕಾರ್ಮಿಕರಾಗಿ ದುಡಿಯುತ್ತಿದ್ದು ಶೇಕಡ ೬.೪೬ರಷ್ಟು ಮಹಿಳೆಯರು ಮಾತ್ರ ಗೃಹ ಆಧಾರಿತ ಕೈಗಾರಿಕಾ ಕೆಲಸಗಾರರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ.[೧೫] ಅಂದರೆ ಅಧಿಕ ಸಂಖ್ಯೆಯ ಮಹಿಳೆಯರು ಕೃಷಿಕಾರ್ಮಿಕರಾಗಿ ಮತ್ತು ಸ್ವಲ್ಪ ಪ್ರಮಾಣದಲ್ಲಿ ಕಟ್ಟಡ ನಿರ್ಮಾಣ ಉದ್ಯದಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ.

೧. ಅಧಿಕ ಸಂಖ್ಯೆಯ ಕೃಷಿ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು.

ಕೊಪ್ಪಳ ಜಿಲ್ಲೆಯ ಆರ್ಥಿಕ ಸ್ಥಿತಿಯನ್ನು ಗಮನಿಸಿದರೆ ೪.೯೫ಲಕ್ಷ ಜನ ಮಹಿಳೆಯರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತಿದ್ದು ಕೇವಲ ೦.೯೭ ಲಕ್ಷ ಜನ ಮಹಿಳೆಯರು ನಗರ ಪ್ರದೇಶದಲ್ಲಿ ವಾಸಿಸುತ್ತಿರುವುದು ತಿಳಿದುಬರುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಮಹಿಳೆಯರಲ್ಲಿ ೧.೫೦ಲಕ್ಷ ಜನ ಮಹಿಳೆಯರು ಕೃಷಿಕಾರ್ಮಿಕರಾಗಿರುವುದು ತಿಳಿದುಬರುತ್ತದೆ. ಅಂದರೆ ಅಧಿಕ ಸಂಖ್ಯೆಯ ಜನರು ಕೃಷಿಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ.[೧೬] ಒಟ್ಟು ಜಿಲ್ಲೆಯಲ್ಲಿ ಶೇಕಡ ೬೩.೯೬ರಷ್ಟು ಮಹಿಳೆಯರು ಕೃಷಿಕಾರ್ಮಿಕರಾಗಿ ಮತ್ತು ಶೇಕಡ ೩.೩೬ರಷ್ಟು ಮಹಿಳೆಯರು ಗೃಹ ಆಧಾರಿತ ಕೈಗಾರಿಕೆ ಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.[೧೭] ಒಟ್ಟಾರೆಯಾಗಿ ಜಿಲ್ಲೆಯಲ್ಲಿ ಮಹಿಳಾ ಕೃಷಿ ಕಾರ್ಮಿಕರು ಅಧಿಕವಿರುವುದು ಕಂಡುಬರುತ್ತದೆ. ಅದನ್ನು ಕೆಳಗಿನ ಕೋಷ್ಟಕ ೬.೮ರಲ್ಲಿ ನೋಡಬಹುದು.

ಈ ಕೋಷ್ಟಕದಲ್ಲಿ ತೋರಿಸಿರುವಂತೆ ಶೇಕಡ ೪೩.೪೮ರಷ್ಟು ಮಹಿಳೆಯರು ಕೃಷಿ ಕಾರ್ಮಿಕರಾಗಿ ಮತ್ತು ಶೇಕಡ ೬.೬೮ರಷ್ಟು ಮಹಿಳೆಯರು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ರಾಜ್ಯದಲ್ಲಿ ದುಡಿಯುತ್ತಿರುವುದು ಕಂಡುಬರುತ್ತಿದೆ.

**ಕೋಷ್ಟಕ ೬.೮**

ಹೈದರಾಬಾದ್ ಕರ್ನಾಟಕದ ಕೃಷಿಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು (ಪ್ರತಿಶತ)
೨೦೦೧ರ ಜನಗಣತಿ

| ಕ್ರ.ಸಂ | ಹೈದರಾಬಾದ್ ಕರ್ನಾಟಕದ ಜಿಲ್ಲೆಗಳು | ಕೃಷಿಕಾರ್ಮಿಕರು | | ಗೃಹ ಆಧಾರಿತ ಕೈಗಾರಿಕಾ ಕಾರ್ಮಿಕರು | |
|---|---|---|---|---|---|
| | | ಪುರುಷ | ಮಹಿಳೆ | ಪುರುಷ | ಮಹಿಳೆ |
| ೧. | ಉತ್ತರ ಕನ್ನಡ | ೯.೪೬ | ೨೫.೩೧ | ೨.೨೭ | ೨.೦೯ |
| ೨. | ಬಳ್ಳಾರಿ | ೨೫.೩೦ | ೬೦.೩೯೦ | ೨.೨೫ | ೩.೪೪ |
| ೩. | ಬೀದರ್ | ೨೫.೯೬ | ೫೯.೩೩ | ೨.೧೦ | ೨.೮೨ |
| ೪. | ಗುಲಬರ್ಗಾ | ೨೩.೩೫ | ೬೫.೧೯ | ೨.೨೨ | ೨.೭೬ |
| ೫. | ಕೊಪ್ಪಳ | ೨೬.೫೫ | ೬೩.೯೬ | ೩.೩೩ | ೩.೩೬ |
| ೬. | ರಾಯಚೂರು | ೨೮.೦೭ | ೭೧.೩೧ | ೧.೯೪ | ೧.೮೬ |
| ೭. | ಕರ್ನಾಟಕ | ೧೭.೨೦ | ೪೩.೪೫ | ೨.೬೬ | ೬.೬೮ |

**ಮೂಲ :** ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯ ಜನಗಣತಿ ೨೦೦೧, ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫, ಪು.೧೯೫[೧೮]

**೨. ಎಲ್ಲಾ ವಯೋಮಾನದ ಜನರ ಈ ವೃತ್ತಿಗಳಲ್ಲಿ ಕಂಡುಬರುತ್ತಿದ್ದಾರೆ.**

ಕರ್ನಾಟಕದ ಮಾನವ ಅಭಿವೃದ್ಧಿ ವರದಿ ೨೦೦೫, ಜನಗಣತಿ ವರದಿ ೨೦೦೧ ಮತ್ತು ಜೂನ್ ೨೦೦೦ರಂದು ಸೇವಾ (SEWA) ಸಂಸ್ಥೆ ನಡೆಸಿದ ಕಟ್ಟಡ ನಿರ್ಮಾಣ ಕಾರ್ಮಿಕರ ಒಂದು ಅಧ್ಯಯನ ಇತ್ಯಾದಿಗಳು ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಎಲ್ಲ ವಯೋಮಾನದ ಜನರು ಕಂಡುಬರುತ್ತಿರುವ ಅಂಶಗಳನ್ನು ವ್ಯಕ್ತಪಡಿಸುತ್ತಿವೆ. ಕ್ಷೇತ್ರಕಾರ್ಯದ ಅಧ್ಯಯನ ಸಮೀಕ್ಷೆಯನ್ನು ವಿಶ್ಲೇಷಿಸಿದರೂ ಇದೇ ಅಂಶ ವ್ಯಕ್ತವಾಗುತ್ತಿರುವುದು ಕಂಡುಬರುತ್ತದೆ.

## ಕೋಷ್ಟಕ ೬.೯

## ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ವಯೋಮಾನದ ವಿವರ

ಶೇಕಡವಾರು

| ವಯೋಮಾನ | ಮಹಿಳಾ ಕೃಷಿಕಾರ್ಮಿಕರು | ಶೇಕಡವಾರು | ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು | ಶೇಕಡವಾರು |
|---|---|---|---|---|
| ೧೦ ರಿಂದ ೧೫ | ೧೨ | ೦೮ | ೦೮ | ೫.೩೩ |
| ೧೫ ರಿಂದ ೨೦ | ೨೨ | ೧೪.೬೭ | ೨೫ | ೧೬.೬೭ |
| ೨೦ ರಿಂದ ೨೫ | ೩೫ | ೨೩.೩೩ | ೩೨ | ೨೧.೩೩ |
| ೨೫ ರಿಂದ ೩೦ | ೨೫ | ೧೬.೬೭ | ೨೫ | ೧೬.೬೭ |
| ೩೦ ರಿಂದ ೩೫ | ೨೫ | ೧೬.೬೭ | ೩೧ | ೨೦.೬೭ |
| ೩೫ ರಿಂದ ೪೦ | ೧೫ | ೧೦.೦೦ | ೧೩ | ೮.೬೭ |
| ೪೫ ರಿಂದ ೫೦ | ೧೧ | ೭.೩೩ | ೧೧ | ೭.೩೩ |
| ೫೦ ಕ್ಕಿಂತ ಅಧಿಕ | ೦೬ | ೩೩.೩೩ | ೦೫ | ೩.೩೩ |
| ಒಟ್ಟು | ೧೫೦ | ೧೦೦% | ೧೫೦ | ೧೦೦% |

ಮೂಲ : ಕ್ಷೇತ್ರಕಾರ್ಯದ ಮಾಹಿತಿ

ಕೊಪ್ಪಳ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯಕ್ಕೆಂದು ೩೦೦ ಜನರನ್ನು ಸಮೀಕ್ಷೆ ಮಾಡಿದ್ದು ಅದರಲ್ಲಿ ೧೫೦ ಜನ ಮಹಿಳಾ ಕೃಷಿ ಕಾರ್ಮಿಕರು ಮತ್ತು ೧೫೦ ಜನರು ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರಾಗಿದ್ದಾರೆ. ಕೋಷ್ಟಕ ೬.೯ರಲ್ಲಿ ತೋರಿಸಿರುವಂತೆ ಮಹಿಳಾ ಕೃಷಿ ಕಾರ್ಮಿಕರಲ್ಲಿ ೧೦ರಿಂದ ೧೫ ವರ್ಷದ ವಯಸ್ಸಿನವರು ಶೇಕಡ ೮ರಷ್ಟು, ೧೫ರಿಂದ ೨೦ ವರ್ಷ ವಯಸ್ಸಿನವರು ಶೇಕಡ ೧೪.೬೭ರಷ್ಟು, ೨೦ರಿಂದ ೨೫ವರ್ಷ ವಯಸ್ಸಿನವರು ಶೇಕಡ ೨೩.೩೩ರಷ್ಟು, ೨೫ರಿಂದ ೩೦ವರ್ಷ ವಯಸ್ಸಿನವರು ಶೇಕಡ ೧೬.೬೭ರಷ್ಟು, ೩೦ರಿಂದ ೩೫ ವರ್ಷ ವಯಸ್ಸಿನವರು ಶೇಕಡ ೧೬.೬೭ರಷ್ಟು ೩೫ ರಿಂದ ೪೦ವರ್ಷ ವಯಸ್ಸಿನವರು ಶೇಕಡ ೧೦ರಷ್ಟು, ೪೫ರಿಂದ ೫೦ವರ್ಷ ವಯಸ್ಸಿನವರು ಶೇಕಡ ೭.೩೩ರಷ್ಟು ಮತ್ತು ೫೦ ವರ್ಷ ವಯಸ್ಸಿಗಿಂತ ಅಧಿಕ ವಯಸ್ಸಿನವರು ಶೇಕಡ ೩.೩೩ರಷ್ಟು ಜನ ಇರುವುದು ಕಂಡುಬರುತ್ತಿದೆ. ಮಹಿಳಾ ಕೃಷಿ ಕಾರ್ಮಿಕರಲ್ಲಿ ೨೦ ವರ್ಷದಿಂದ ೪೦ವರ್ಷ ವಯಸ್ಸಿನವರು ಶೇಕಡ ೬೬.೬೭ರಷ್ಟಿರುವುದು ಕಂಡುಬರುತ್ತಿದ್ದೆ. ೧೦ರಿಂದ ೨೦ವರ್ಷದ ಒಳಗಿನವರು ಶೇಕಡ ೨೨.೬೭ ರಷ್ಟು ಜನರಿರುವುದು ತಿಳಿದುಬರುತ್ತಿದೆ. ಆದರೆ ೫೦ ವರ್ಷ ವಯಸ್ಸಿಕ್ಕಿಂತ ಅಧಿಕ ವಯಸ್ಸಿನ ಪ್ರಮಾಣ ಅತ್ಯಂತ ಕಡಿಮೆ ಅಂದರೆ ಶೇಕಡ ೩.೩೩ರಷ್ಟು ಇರುವುದು ಕಂಡುಬರುತ್ತಿದೆ.

ಕೋಷ್ಟಕ ೬.೯ರಲ್ಲಿ ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣ ನೋಡಿದರೆ ೧೦ರಿಂದ ೧೫ ವರ್ಷ ವಯಸ್ಸಿನವರು ಶೇಕಡ ೫.೩೩ರಷ್ಟು, ೧೫ರಿಂದ ೨೦ ವರ್ಷ ವಯಸ್ಸಿನವರು ಶೇಕಡ ೧೬.೬೭ರಷ್ಟು, ೨೦ರಿಂದ ೨೫ವರ್ಷ ವಯಸ್ಸಿನವರು ಶೇಕಡ ೨೧.೩೩ರಷ್ಟು, ೨೫ರಿಂದ ೩೦ ವರ್ಷ ವಯಸ್ಸಿನವರು ಶೇಕಡ ೧೬.೬೭ರಷ್ಟು, ೩೦ರಿಂದ ೩೫ವರ್ಷ ವಯಸ್ಸಿನವರು ಶೇಕಡ ೨೦.೬೭ರಷ್ಟು ೩೫ರಿಂದ೪೦ ವರ್ಷ ವಯಸ್ಸಿನವರು ಶೇಕಡ ೮.೬೭ರಷ್ಟು, ೪೫ರಿಂದ ೫೦ವರ್ಷ ವಯಸ್ಸಿನವರು ಶೇಕಡ ೭.೩೩ರಷ್ಟು ಮತ್ತು ೫೦ಕ್ಕಿಂತ ಅಧಿಕ ವಯಸ್ಸಿನವರು ಶೇಕಡ ೩.೩೩ರಷ್ಟು ಜನ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ದುಡಿಯುತ್ತಿರುವುದು ತಿಳಿದುಬರುತ್ತಿದೆ. ೧೦ರಿಂದ ೨೦ ವರ್ಷದ ಒಳಗಿನ ಕಾರ್ಮಿಕರು ಶೇಕಡ ೨೨ರಷ್ಟು ಮತ್ತು ೫೦ ವರ್ಷಕ್ಕಿಂತ ಅಧಿಕ ವಯಸ್ಸಿನವರು ಶೇಕಡ ೩.೩೩ರಷ್ಟು ಇರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ. ಮೇಲಿನ ಕೋಷ್ಟಕವನ್ನು ಗಮನಿಸಿದರೆ ಜಿಲ್ಲೆಯಲ್ಲಿ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಎಲ್ಲ ವಯೋಮಾನದವರು ಇರುವುದು ಕಂಡುಬರುತ್ತಿದೆ.

ಮಹಾರಾಷ್ಟ್ರದ ಸೆಲ್ಫ್ ಎಂಪ್ಲಾಯ್‌ಮೆಂಟ್ ವುಮನ್ ಆಸೋಸೇಷಿಯನ್(SEWA) ಕಟ್ಟಡ ನಿರ್ಮಾಣ ಕಾರ್ಮಿಕರ ಬಗ್ಗೆ ನಡೆಸಿದ ಒಂದು ಅಧ್ಯಯನವು ಸಹ ೨೬-೪೫ ವರ್ಷ ವಯಸ್ಸಿನ ಮಹಿಳೆಯರು ಶೇಕಡ ೭೦ ರಷ್ಟು ೧೫ ರಿಂದ ೨೫ ವರ್ಷ ವಯಸ್ಸಿನ ಮಹಿಳೆಯರು ಶೇಕಡ ೧೯.೨ರಷ್ಟು ಇದೇ ವಯಸ್ಸಿನ ಪುರುಷರು ಶೇಕಡ ೩೬.೮ರಷ್ಟು ಜನರು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾ ಎಂಬ ಅಂಶ ವ್ಯಕ್ತಪಡಿಸುತ್ತದೆ.

**೩. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳಾ ಕಾರ್ಮಿಕ ಸಂಖ್ಯೆ ಅಧಿಕವಾಗಿರುತ್ತದೆ.**

**ಕೋಷ್ಟಕ ೬.೧೦**

**ಜಾತಿವಾರು ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು**

| ಜಾತಿಯ ವಿವರ | ಮಹಿಳಾ ಕೃಷಿ ಕಾರ್ಮಿಕರು | ಶೇಕಡ ಪ್ರಮಾಣ | ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು | ಶೇಕಡವಾರು ಪ್ರಮಾಣ |
|---|---|---|---|---|
| ಪರಿಶಿಷ್ಟ ಜಾತಿ | ೬೮ | ೪೫.೩೩ | ೭೨ | ೪೮.೦೦ |
| ಪರಿಶಿಷ್ಟ ಪಂಗಡ | ೫೨ | ೩೪.೬೭ | ೪೮ | ೩೨.೦೦ |
| ಇತರೆ ಹಿಂದುಳಿದ ವರ್ಗ | ೧೮ | ೧೨.೦೦ | ೨೫ | ೧೭.೩೩ |
| ಇತರೆ ಜಾತಿ | ೧೨ | ೮.೦೦ | ೦೪ | ೨.೬೭ |
| ಒಟ್ಟು | ೧೫೦ | ೧೦೦% | ೧೫೦ | ೧೦೦% |

ಕೊಪ್ಪಳ ಜಿಲ್ಲೆಯಲ್ಲಿ ಕೃಷಿ ಮತ್ತು ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ಮಹಿಳೆಯರಲ್ಲಿ ಅಧಿಕ ಸಂಖ್ಯೆಯ ಮಹಿಳೆಯರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯರು ಅಧಿಕ

ಸಂಖ್ಯೆಯಲ್ಲಿರುವುದು ಕಂಡುಬರುತ್ತಿದೆ. ಕೋಷ್ಟಕ ೬.೧೦ನ್ನು ಗಮನಿಸಿದರೆ ಮಹಿಳಾ ಕೃಷಿಕಾರ್ಮಿಕರಲ್ಲಿ ಶೇಕಡ ೪೫.೩೩ರಷ್ಟು ಪ್ರಮಾಣ ಪರಿಶಿಷ್ಟ ಜಾತಿಯ ಮಹಿಳೆಯರು, ಶೇಕಡ ೩೪.೬೭ರಷ್ಟು ಪ್ರಮಾಣ ಪರಿಶಿಷ್ಟ ಪಂಗಡದ ಮಹಿಳೆಯರು, ಶೇಕಡ ೧೨ರಷ್ಟು ಪ್ರಮಾಣ ಇತರೆ ಹಿಂದುಳಿದ ವರ್ಗದ ಮಹಿಳೆಯರು ಮತ್ತು ಶೇಕಡ ೮ರಷ್ಟು ಪ್ರಮಾಣ ಇತರೆ ಜಾತಿಗೆ ಸೇರಿದ ಮಹಿಳೆಯರು ಇರುವುದು ಕಂಡುಬರುತ್ತಿದೆ. ಮೇಲಿನ ಅಂಕಿ ಸಂಖ್ಯೆಗಳ ಶೇಕಡವಾರು ಪ್ರಮಾಣವನ್ನು ನೋಡಿದರೆ ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ(ಶೇ.೪೫.೩೩) ಇರುವುದು ಕಂಡುಬರುತ್ತಿದೆ. ನಂತರದ ಸ್ಥಾನವನ್ನು ಪರಿಶಿಷ್ಟ ಪಂಗಡಕ್ಕೆ ಸೇರಿದ ಮಹಿಳೆಯರು(ಶೇ. ೩೪.೬೭) ತುಂಬಿರುವುದು ತಿಳಿದು ಬರುತ್ತಿದೆ.

ಕೋಷ್ಟಕ ೬.೧೦ನ್ನು ಗಮನಿಸಿದರೆ ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೪೮.೦೦ರಷ್ಟು ಪ್ರಮಾಣದ ಮಹಿಳೆಯರು ಪರಿಶಿಷ್ಠ ಜಾತಿಗೆ, ಶೇಕಡ ೩೨.೦೦ರಷ್ಟು ಪ್ರಮಾಣದ ಮಹಿಳೆಯರು ಪರಿಶಿಷ್ಟ ಪಂಗಡದ, ಶೇಕಡ ೧೭.೩೩ರಷ್ಟು ಪ್ರಮಾಣದ ಮಹಿಳೆಯರು ಇತರೆ ಹಿಂದುಳಿದ ವರ್ಗಕ್ಕೆ ಸೇರಿದವರು ಮತ್ತು ಶೇಕಡ ೨.೬೭ರಷ್ಟು ಪ್ರಮಾಣದ ಮಹಿಳೆಯರು ಇತರೆ ಜಾತಿಗೆ ಸೇರಿದವರಾಗಿರುವುದು ಕಂಡುಬರುತ್ತದೆ. ಈ ಅಂಕೆ ಸಂಖ್ಯೆಗಳ ಶೇಕಡವಾರು ಪ್ರಮಾಣವನ್ನು ಗಮನಿಸಿದರೆ ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಪರಿಶಿಷ್ಠ ಜಾತಿಯ ಮಹಿಳೆಯರು(ಶೇ.೪೮) ಪ್ರಥಮ ಸ್ಥಾನ ಪಡೆದರೆ, ಪರಿಶಿಷ್ಟ ಪಂಗಡದ ಮಹಿಳೆಯರು(ಶೇ.೩೨) ದ್ವಿತೀಯ ಸ್ಥಾನ ಪಡೆದಿರುವುದು ಕಂಡುಬರುತ್ತದೆ.

ಜಿಲ್ಲೆಯಲ್ಲಿನ ಕೃಷಿಕಾರ್ಮಿಕರಲ್ಲಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಪರಿಶಿಷ್ಟ ಜಾತಿಯ, ಚಲವಾದಿ, ಮಾದಿಗ, ಭೂಮಿ, ವಡ್ಡರ್, ಲಮಾಣಿ ಜನರು, ಪರಿಶಿಷ್ಟ ಪಂಗಡದ ಬೇಡರು, ನಾಯಕರು, ಹಿಂದುಳಿದ ವರ್ಗದ ಮುಸ್ಲಿಂ ಜನಾಂಗದವರು, ಕುರುಬರು, ಮತ್ತು ಇತರ ವರ್ಗದವರಾದ ಕಂಬಾರರು ಮತ್ತು ಲಿಂಗಾಯಿತ ಜನಾಂಗದವರು ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಈ ದುಡಿಮೆಗಾರರಲ್ಲಿ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡಕ್ಕೆ ಸೇರಿದ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ದುಡಿಯುತ್ತಿರುವುದು ಕಂಡುಬರುತ್ತದೆ. ೧೯೭೪ರ ಟುವರ್ಡ್ ಈಕ್ವಾಕಾರ್ಮಿಕರಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರ ಸಂಖ್ಯೆ ಅಧಿಕವಾಗಿರುವುದನ್ನು ತಿಳಿಸುತ್ತದೆ.[೨೦] ಅಲ್ಲದೆ ಎಸ್.ಎನ್.ರಾನಡೆಯವರ ದೆಹಲಿಯ ಅಧ್ಯಯನ ಮತ್ತು ಜಿ.ಪಿ.ಸಿನ್ಹಾರವರ ಬಿಹಾರದ ಅಧ್ಯಯನಗಳು (೧೯೭೫) ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ.

**೪. ಅನಕ್ಷರಸ್ಥರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದಾರೆ**

ಜಿಲ್ಲೆಯಲ್ಲಿ ದುಡಿಯುತ್ತಿರುವ ಕೃಷಿ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಾಕ್ಷರತೆಯನ್ನು ಪರಿಶೀಲಿಸಿದರೆ ಅಧಿಕ ಸಂಖ್ಯೆಯ ಮಹಿಳೆಯರು ಅನಕ್ಷರಸ್ಥರಾಗಿರುವುದು ಕಂಡುಬರುತ್ತಿದೆ. ಕೋಷ್ಟಕ ೩.೪ರಲ್ಲಿ ಅದನ್ನು ಕಾಣಬಹುದು.

## ಕೋಷ್ಟಕ ೬.೧೧

### ಕೃಷಿ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಶೈಕ್ಷಣಿಕ ವಿವರ

| ಕ್ರ.ಸಂ. | ಶೈಕ್ಷಣಿಕ ವಿವರ | ಮಹಿಳಾ | ಶೇಕಡ | ಮಹಿಳಾ | ಶೇಕಡ |
|---|---|---|---|---|---|
| | | ಕೃಷಿಕಾರ್ಮಿಕರು | | ಕಟ್ಟಡ ಕಾರ್ಮಿಕರು | |
| ೧. | ಅನಕ್ಷರಸ್ಥರು | ೯೬ | ೬೪.೦೦ | ೮೭ | ೫೮.೦೦ |
| ೨. | ಪ್ರಾಥಮಿಕ ಶಿಕ್ಷಣ | ೩೭ | ೨೪.೬೩ | ೩೩ | ೨೨.೦೦ |
| ೩. | ಮಾದ್ಯಮಿಕ ಶಿಕ್ಷಣ | ೧೨ | ೮.೦೦ | ೨೪ | ೧೬.೦೦ |
| ೪. | ಪದವಿ ಪೂರ್ವ ಶಿಕ್ಷಣ | ೦೬ | ೩.೦೦ | ೦೬ | ೪.೦೦ |
| ೫. | ಪದವಿ ಶಿಕ್ಷಣ | ೦೦ | ೦೦ | ೦೦ | ೦೦ |
| | ಒಟ್ಟು | ೧೫೦ | ೧೦೦% | ೧೫೦ | ೧೦೦% |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ




ಕೃಷಿ ಕಾರ್ಮಿಕರ ಶೈಕ್ಷಣಿಕ ಪ್ರಮಾಣ




ಕಟ್ಟಡ ನಿರ್ಮಾಣ ಶೈಕ್ಷಣಿಕ ಪ್ರಮಾಣ

ಕೋಷ್ಟಕ ೬.೧೧ನ್ನು ಗಮನಿಸಿದರೆ ಅಧಿಕ ಸಂಖ್ಯೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅನಕ್ಷರಸ್ಥರಾಗಿರುವುದು ಕಂಡುಬರುತ್ತಿದೆ. ಕೃಷಿ ಕಾರ್ಮಿಕರಲ್ಲಿ ಶೇಡಡ ೬೪ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದರೆ ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೫೮ರಷ್ಟು ಕಾರ್ಮಿಕರು ಅನಕ್ಷರಸ್ಥರಾಗಿರುವುದು ಕಂಡುಬರುತ್ತದೆ. ಕೃಷಿ ಕಾರ್ಮಿಕರ ಶೈಕ್ಷಣಿಕ ಮಟ್ಟವನ್ನು ಗಮನಿಸಿದರೆ ಶೇಕಡ ೬೪ರಷ್ಟು ಕಾರ್ಮಿಕರು ಅನಕ್ಷರಸ್ಥರಾಗಿದ್ದರೆ, ಶೇಕಡ ೨೪.೬೭ರಷ್ಟು ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದವರಾಗಿದ್ದಾರೆ, ಶೇಕಡ ಲರಷ್ಟು ಕಾರ್ಮಿಕರು ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣವನ್ನು ಪಡೆದಿದ್ದರೆ, ಕೇವಲ ಶೇಕಡ ೩.೩೩ರಷ್ಟು ಕಾರ್ಮಿಕರು ಮಾತ್ರ ಪದವಿಪೂರ್ವ ಶಿಕ್ಷಣ ಪಡೆದಿರುವುದು ಕಂಡುಬರುತ್ತದೆ. ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೫೮ರಷ್ಟು ಮಹಿಳಾ ಕಾರ್ಮಿಕರು ಅನಕ್ಷರಸ್ಥರಾಗಿದ್ದು, ಶೇಕಡ ೨೨.ರಷ್ಟು ಕಾರ್ಮಿಕರು ಪ್ರಾಥಮಿಕ ಶಿಕ್ಷಣವನ್ನು, ಶೇಡಕ ೧೬.ರಷ್ಟು ಕಾರ್ಮಿಕರು ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣವನ್ನು ಪಡೆದಿದ್ದರೆ ಕೇವಲ ಶೇಕಡ ೪ರಷ್ಟು ಕಾರ್ಮಿಕರು ಮಾತ್ರ ಪದವಿ ಪೂರ್ವಶಿಕ್ಷಣವನ್ನು ಪಡೆದಿರುವುದು ಕಂಡುಬರುತ್ತಿದೆ. ಪದವಿ ಹಂತದ ಶಿಕ್ಷಣ ಪಡೆದ ಕಾರ್ಮಿಕರ ಪ್ರಮಾಣ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ '೦೦' ಇದೆ.

ಕೋಷ್ಟಕ ೭.೧೧ನ್ನು ಗಮನಿಸಿದರೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೪೮ ರಷ್ಟು ಪುರುಷರು ಶೇಕಡ ೫೩.೩೩ರಷ್ಟು ಮಹಿಳೆಯರು ಅನಕ್ಷರಸ್ಥರಾಗಿರುವುದು ಕಂಡುಬರುತ್ತಿದೆ. ಶೇಕಡ ೧೮.೬೭ರಲ್ಲಿ ಪುರುಷರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದರೆ ಶೇಕಡ ೨೪.೬೭ರಷ್ಟು ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಪಡೆದಿರುವುದು ತಿಳಿದುಬರುತ್ತಿದೆ. ಶೇಕಡ ೧೪.ರಷ್ಟು ಜನ ಪುರುಷರು ಮಾಧ್ಯಮಿಕ ಶಿಕ್ಷಣ ಪಡೆದವರಾಗಿದ್ದರೆ ಶೇಕಡ ೧೮.೬೭ರಷ್ಟು ಮಹಿಳೆಯರು ಮಾಧ್ಯಮಿಕ ಶಿಕ್ಷಣ ಪಡೆದವರಾಗಿದ್ದಾರೆ. ಶೇಕಡ ೧೨ರಷ್ಟು ಪುರುಷರು ಮತ್ತು ಶೇಕಡ ೩.೩೩ರಷ್ಟು ಮಹಿಳೆಯರು ಪದವಿಪೂರ್ವ ಶಿಕ್ಷಣ ಪಡೆದವರಾಗಿದ್ದಾರೆ. ಶೇಕಡ ೭.೩೩ರಷ್ಟು ಪುರುಷರು ಪದವಿಶಿಕ್ಷಣ ಪಡೆದವರಾಗಿದ್ದಾರೆ. ಆದರೆ ಪದವಿ ಶಿಕ್ಷಣದ ಹಂತದಲ್ಲಿ ಮಹಿಳೆಯರ ಪ್ರಮಾಣ ೦೦ ಇರುವುದು ಕಂಡುಬರುತ್ತದೆ.

ಈ ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಪ್ರಾಥಮಿಕ ಶಿಕ್ಷಣ ತಮ್ಮು ಮಾಧ್ಯಮಿಕ ಶಿಕ್ಷಣ ಪಡೆಯುವಲ್ಲಿ ಪುರುಷರಿಗಿಂತ ಮಹಿಳೆಯರು (ಶೇಕಡ ೨೪.೬೭ ಮತ್ತು ೧೮.೬೭) ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಿದೆ. ಆದರೆ ಪದವಿಪೂರ್ವ ಮತ್ತು ಪದವಿ ಶಿಕ್ಷಣದಲ್ಲಿ ಅವರ ಪ್ರಮಾಣ (ಶೇಕಡ ೩.೩೩ ಮತ್ತು ೦೦) ಅತ್ಯಂತ ಕಡಿಮೆ ಇರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಅವರನ್ನು ಮಧ್ಯದಲ್ಲಿ ಶಾಲೆ ಬಿಡಿಸುತ್ತಿರುವುದು ಮತ್ತು ಚಿಕ್ಕವಯಸ್ಸಿನಲ್ಲಿ ಮದುವೆ ಮಾಡುತ್ತಿರುವ ಅಂಶ ಬೆಳಕಿಗೆ ಬರುತ್ತಿದೆ.

೫. ವಿಧವೆ, ದೇವದಾಸಿ ಮತ್ತು ನಿರ್ಗತಿಕರಿಗೆ ಆಶ್ರಯ.

ಕೊಪ್ಪಳ ಜಿಲ್ಲೆಯಲ್ಲಿ ನಡೆಸಿದ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಮಾದರಿ ಸಮೀಕ್ಷೆಯಲ್ಲಿ ಕಾರ್ಮಿಕರಾಗಿ ದುಡಿಯುವವರಲ್ಲಿ ಅಧಿಕ ಸಂಖ್ಯೆಯ ಮಹಿಳೆಯರು ವಿಧವೆಯರು, ದೇವದಾಸಿಗಳು ಮತ್ತು ಗಂಡಬಿಟ್ಟ ಅಥವಾ ನಿರ್ಗತಿಕರಾಗಿರುವುದು ಕಂಡುಬರುತ್ತಿದೆ. ಬಡತನದಲ್ಲಿ ನರಳುವಂತಹ ಈ ಮಹಿಳೆಯರು ಬೇರೆ ವೃತ್ತಿಗಳ ಬಗ್ಗೆ ಕೌಶಲ್ಯವಿಲ್ಲದೆ ಈ ವೃತ್ತಿಗಳಲ್ಲಿ ತೊಡಗಿರುವುದು ತಿಳಿದು ಬರುತ್ತಿದೆ.

ಕೋಷ್ಟಕ ೬.೧೨

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ವೈವಾಹಿಕ ಸ್ಥಿತಿಗತಿ

| ಕ್ರ.ಸಂ. | ವೈವಾಹಿಕ ಸ್ಥಿತಿ | ಮಹಿಳೆಯರ ಸಂಖ್ಯೆ | ಶೇಕಡವಾರು ಪ್ರಮಾಣ | |
|---|---|---|---|---|
| ೧. | ಅವಿವಾಹಿತರು | ೨೫ | ೮.೩೩ | |
| ೨. | ವಿವಾಹಿತರು | ೧೬೧ | ೫೩.೬೭ | |
| ೩. | ವಿಧವೆಯರು | ೭೨ | ೨೪.೦೦ | ೩೮% |
| ೪. | ದೇವದಾಸಿಯರು | ೩೩ | ೧೧.೦೦ | |
| ೫. | ನಿರ್ಗತಿಕರು ಗಂಡಬಿಟ್ಟವರು | ೦೯ | ೦೩.೦೦ | |
| | ಒಟ್ಟು | ೩೦೦೦ | ೧೦೦ | |

ಕೋಷ್ಟಕ ೭.೧೨ರಲ್ಲಿ ತಿಳಿಸುವಂತೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ನಿರತರಾದ ಮಹಿಳೆಯರಲ್ಲಿ ಶೇಕಡ ೮.೩೩ ರಷ್ಟು ಮಹಿಳೆಯರು ಅವಿವಾಹಿತರಾಗಿರುವುದು ತಿಳಿದುಬರುತ್ತಿದೆ. ಇವರಲ್ಲಿ ಬಾಲಕಾರ್ಮಿಕರು ಸೇರಿರುತ್ತಾರೆ. ಶೇಕಡ ೫೩.೬೭ರಷ್ಟು ಮಹಿಳೆಯರು ವಿವಾಹಿತರಾಗಿರುವುದು ಕಂಡುಬರುತ್ತಿದೆ. ಈ ವಿವಾಹಿತ ಮಹಿಳೆಯರು ಗಂಡಂದಿರು ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸದಲ್ಲಿ ದುಡಿಯುತ್ತಿರುವುದರಿಂದ ಬಹುತೇಕರು ಈ ವೃತ್ತಿಗಳಲ್ಲಿ ತೊಡಗಿರುವುದು ಕಂಡುಬರುತ್ತಿದೆ. ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ಮಹಿಳೆಯರಲ್ಲಿ ಶೇಕಡ ೨೪ರಷ್ಟು ಮಹಿಳೆಯರು ವಿಧವೆಯರು, ಶೇಕಡ ೧೧ರಷ್ಟು ಮಹಿಳೆಯರು ದೇವದಾಸಿಯರು ಮತ್ತು ಶೇಕಡ ೩ರಷ್ಟು ಮಹಿಳೆಯರು ನಿರ್ಗತಿಕರು ಅಥವಾ ಗಂಡಬಿಟ್ಟವರು ಇರುವುದು ಕಂಡುಬರುತ್ತಿದೆ. ಒಟ್ಟು ದುಡಿಮೆಗಾರರಲ್ಲಿ ಇವರ ಪ್ರಮಾಣ ಶೇಕಡ ೩೮ರಷ್ಟಿರುವುದು ಕಂಡುಬರುತ್ತಿದೆ. ಈ ಅಂಕಿ ಸಂಖ್ಯೆಯನ್ನು ನೋಡಿದರೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸಗಳು ಇಂತ ಅಸಹಾಯಕ ಮಹಿಳೆಯರಿಗೆ ಉದ್ಯೋಗಾವಕಾಶ ನೀಡಿರುವುದು ಕಂಡುಬರುತ್ತಿದೆ.

ಮಹಾರಾಷ್ಟ್ರದ ಸೇವಾ ಸಂಸ್ಥೆ ನಡೆಸಿದ ಕಟ್ಟಡ ನಿರ್ಮಾಣ ಕಾರ್ಮಿಕರ ಸಮೀಕ್ಷೆಯು ಸಹ ಶೇಕಡ ೮೧೬.ರಷ್ಟು ಮಹಿಳೆಯರು ವಿವಾಹಿತರು ಮತ್ತು ಶೇಕಡ ೧೪.೪ರಷ್ಟು ಮಹಿಳೆಯರು ವಿಧವೆಯರು ಎಂಬ ಮಾಹಿತಿಯನ್ನು ನೀಡುತ್ತದೆ.[೨೧] ಕೊಪ್ಪಳ ಜಿಲ್ಲೆಯ ಹವಾಗುಣ, ಜೀವನ ಮಟ್ಟ ಮತ್ತು ಸಾಂಸ್ಕೃತಿಕ ಪರಂಪರೆಯ ಅಂಶಗಳು ಮಹಿಳಾ ದುಡಿಮೆಗಾರರ ಮೇಲೆ ಪ್ರಬಾವ ಬೀರುತ್ತಿರುವುದರಿಂದ ಅಧಿಕ ಸಂಖ್ಯೆಯಲ್ಲಿ ವಿಧವೆಯರು ದೇವದಾಸಿಯರು ಮತ್ತು ನಿರ್ಗತಿಕರು ಕೃಷಿ ಮತ್ತು ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದಾರೆ.

### ೬.೩.೧. ಜಿಲ್ಲೆಯಲ್ಲಿ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣ

ಕೊಪ್ಪಳ ಜಿಲ್ಲೆಯು ಒಂದು ಕೃಷಿ ಪ್ರಧಾನ ಜಿಲ್ಲೆಯಾಗಿರುವದರಿಂದ ಕೃಷಿಯ ಜನರ ಮೂಲ ಮತ್ತು ಜೀವನಾಧಾರದ ಉದ್ಯೋಗವಾಗಿದೆ. ಆದ್ದರಿಂದಾಗಿ ಶೇಕಡ ೭೦ರಷ್ಟು ಜನರು ಕೃಷಿಯನ್ನು ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಕಟ್ಟಡ ನಿರ್ಮಾಣ ಉದ್ಯಮವು ಇತ್ತೀಚೆಗೆ ಬೆಳೆಯುತ್ತಿರುವ ಉದ್ಯಮವಾಗಿದ್ದು ಕೃಷಿ ಕಾರ್ಮಿಕರನ್ನು ಮತ್ತು ಕೃಷಿಕರನ್ನು ತನ್ನ ಕಡೆ ಸೆಳೆದು ಬೆಳೆಯುತ್ತಿದೆ. ಕೃಷಿ ವಲಯವು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಅಧಿಕ ಪ್ರಮಾಣದಲ್ಲಿ ಕ್ರಿಯಾಶೀಲವಾಗಿದ್ದರೆ ಕಟ್ಟಡ ನಿರ್ಮಾಣ ಉದ್ಯಮವು ಅಧಿಕ ಪ್ರಮಾಣದಲ್ಲಿ ನಗರಗಳಲ್ಲಿ ಮತ್ತು ಗ್ರಾಮೀಣ ಪ್ರದೇಶದಲ್ಲಿ ಕಡಿಮೆ ಪ್ರಮಾಣದಲ್ಲಿ ಕ್ರಿಯಾಶೀಲತೆಯಿಂದ ಬೆಳೆಯುತ್ತಿದೆ. ಹೀಗಾಗಿ ಕೃಷಿಯಲ್ಲಿ ಕಾರ್ಮಿಕರಾಗಿ ಅಧಿಕ ಸಂಖ್ಯೆಯ ಜನರು ಮತ್ತು ಕಟ್ಟಡ ನಿರ್ಮಾಣದಲ್ಲಿ ಕಡಿಮೆ ಸಂಖ್ಯೆಯ ಜನರು ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಆದರೆ ಈ ಎರಡು ವೃತ್ತಿಗಳಲ್ಲಿ ಮಹಿಳೆಯರ ಪ್ರಮಾಣ ಪುರುಷರಿಗಿಂತ ಅಧಿಕಾಗಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೧೩ರಲ್ಲಿ ತೋರಿಸಿರುವಂತೆ ಕೊಪ್ಪಳ ಜಿಲ್ಲೆಯಲ್ಲಿ ಶೇಕಡ ೨೬.೫೫ರಷ್ಟು ಪುರುಷ ಕೃಷಿಕಾರ್ಮಿಕರು ಮತ್ತು ಶೇಕಡ ೬೩.೯೬ರಷ್ಟು ಮಹಿಳಾ ಕೃಷಿ ಕಾರ್ಮಿಕರಿರುವುದು ಕಂಡುಬರುತ್ತದೆ. ಹಾಗೆ ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣವನ್ನು ನೋಡಿದರೆ ಶೇಕಡ ೩.೩೩ರಷ್ಟು ಪುರುಷ ಕಾರ್ಮಿಕರು ಮತ್ತು ಶೇಕಡ ೩.೩೬ರಷ್ಟು ಮಹಿಳಾ ಕಾರ್ಮಿಕರಿರುವುದು ಕಂಡುಬರುತ್ತಿದೆ. ಈ ಒಂದು ಅಂಕೆ ಸಂಖ್ಯೆಯಿಂದ ಕೊಪ್ಪಳ ಜಿಲ್ಲೆಯಲ್ಲಿ ಮಹಿಳಾ ಕೃಷಿ ಕಾರ್ಮಿಕರ ಸಂಖ್ಯೆ ಅಧಿಕವಿರುವುದು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಂಖ್ಯೆ ಕಡಿಮೆ ಇರುವುದು ತಿಳಿದುಬರುತ್ತದೆ.

## ಕೋಷ್ಟಕ ೬.೧೩

### ತಾಲೂಕುವಾರು ಕೃಷಿ ಕಾರ್ಮಿಕರ ಸಂಖ್ಯೆ

| ಕ್ರ.ಸಂ | ತಾಲೂಕುಗಳು | ಕೃಷಿಕಾರ್ಮಿಕರ ಪ್ರಮಾಣ | | | | | |
|---|---|---|---|---|---|---|---|
| | | ಪುರುಷರು | ಶೇಕಡ | ಮಹಿಳೆಯರು | ಶೇಕಡವಾರು | ಒಟ್ಟು | ಶೇಕಡವಾರು |
| ೧. | ಗಂಗಾವತಿ | ೩೩೫೬೫ | ೩೯.೮೪ | ೪೫.೯೨೯ | ೩೦.೪೭ | ೭೯೪೯೪ | ೩೩.೮೨ |
| ೨. | ಕೊಪ್ಪಳ | ೧೯೯೯೦ | ೨೩.೭೩ | ೩೫೮೨೭ | ೨೩.೭೭ | ೫೫೮೧೭ | ೨೩.೭೫ |
| ೩. | ಕುಷ್ಟಗಿ | ೧೧೬೯೬ | ೧೩.೮೯ | ೩೦೨೮೦ | ೨೦.೦೮ | ೪೧೯೭೬ | ೧೭.೮೭ |
| ೪. | ಯಲಬುರ್ಗಾ | ೧೮೯೮೮ | ೨೨.೫೪ | ೩೮೭೧೭ | ೨೫.೬೮ | ೫೭೭೦೫ | ೨೪.೫೬ |
| ೫. | ಜಿಲ್ಲೆಯ ಮೊತ್ತ | ೮೪೨೩೯ | ೧೦೦% | ೧೫೦೭೫೩ | ೧೦೦ | ೨೩೪೯೯೨ | ೧೦೦% |

ಮೂಲ : ಜನಗಣತಿ ೨೦೦೧ ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯ ಪು.ಸಂ.೧೨




ತಾಲ್ಲೂಕುವಾರು ಕೃಷಿ ಕಾರ್ಮಿಕರು

ಕೋಷ್ಟಕ ೬.೧೩ರನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯಲ್ಲಿ ಗಂಗಾವತಿ ತಾಲೂಕುನ್ನು ಹೊರತು ಪಡಿಸಿ ಉಳಿದ ತಾಲೂಕುಗಳಲ್ಲಿ ಕೃಷಿಕಾರ್ಮಿಕರಲ್ಲಿ ಪುರುಷರಿಗಿಂತ ಮಹಿಳೆಯರೇ ಅಧಿಕವಿರುವುದು ತಿಳಿದುಬರುತ್ತಿದೆ. ಗಂಗಾವತಿ ತಾಲೂಕಿನಲ್ಲಿ ಪುರುಷ ಕೃಷಿಕಾರ್ಮಿಕರು ಶೇಕಡ ೩೯.೮೪ರಷ್ಟು ಮತ್ತು ಮಹಿಳಾ ಕೃಷಿಕಾರ್ಮಿಕರು ಶೇಕಡ ೩೦.೪೭ರಷ್ಟು ಇದ್ದು ತಾಲೂಕಿನಲ್ಲಿ ಒಟ್ಟು ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೩೩.೮೨ರಷ್ಟಿರುವುದು ಕಂಡುಬರುತ್ತದೆ. ಕೊಪ್ಪಳ ತಾಲೂಕಿನಲ್ಲಿ ಪುರುಷ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೨೩.೭೩ರಷ್ಟು ಮತ್ತು ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೨೩.೭೭ರಷ್ಟಿದ್ದು.

ತಾಲೂಕಿನ ಒಟ್ಟು ಕೃಷಿಕಾರ್ಮಿಕರ ಪ್ರಮಾಣ ಶೇಕಡ ೨೩.೭೫ರಷ್ಟಿರುವುದು ತಿಳಿದುಬರುತ್ತದೆ. ಕುಷ್ಟಗಿ ತಾಲೂಕಿನಲ್ಲಿ ಪುರುಷ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೧೩.೮೯ರಷ್ಟು ಮತ್ತು ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೨೦.೦೮ರಷ್ಟು ಇದ್ದು ಒಟ್ಟು ತಾಲೂಕಿನ ಕೃಷಿಕಾರ್ಮಿಕರ ಪ್ರಮಾಣ ಶೇಕಡ ೧೭.೮೯ರಷ್ಟಿರುವುದು ಕಂಡುಬರುತ್ತಿದೆ. ಹಾಗೂ ಯಲಬುರ್ಗಾ ತಾಲೂಕಿನಲ್ಲಿ ಪುರುಷ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೨೨.೫೪ರಷ್ಟು ಮತ್ತು ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಶೇಕಡ ೨೫.೬೮ರಷ್ಟು ಇದ್ದು. ತಾಲೂಕಿನ ಒಟ್ಟು ಕೃಷಿಕಾರ್ಮಿಕರ ಪ್ರಮಾಣ ೨೪.೫೬ರಷ್ಟು ಇರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ.

ಜಿಲ್ಲೆಯಲ್ಲಿ ಗಂಗಾವತಿ ತಾಲೂಕು ಬಹುಭಾಗ ನೀರಾವರಿ ಪ್ರದೇಶವಾಗಿರುವದರಿಂದ ಈ ತಾಲೂಕಿನಲ್ಲಿ ಪುರುಷ(ಶೇ ೩೯.೮೪) ಕೃಷಿ ಕಾರ್ಮಿಕರ ಪ್ರಮಾಣ ಮಹಿಳಾ(ಶೇ. ೩೦.೪೭) ಕೃಷಿಕಾರ್ಮಿಕರ ಪ್ರಮಾಣಕ್ಕಿಂತ ಅಧಿಕವಾಗಿರುವುದು ಕಂಡುಬರುತ್ತಿದೆ. ಆದರೆ ಉಳಿದ ತಾಲೂಕುಗಳಾದ ಕೊಪ್ಪಳ ಕುಷ್ಟಗಿ ಮತ್ತು ಯಲಬುರ್ಗಾಗಳಲ್ಲಿ ಪುರುಷ ಕೃಷಿ ಕಾರ್ಮಿಕರಿಗಿಂತ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಅಧಿಕವಾಗಿರುವುದು ಕಂಡುಬರುತ್ತದೆ. ಯಾಕೆಂದರೆ ಈ ಪ್ರದೇಶಗಳು ಒಣಭೂಮಿ ಪ್ರದೇಶಗಳಾಗಿದ್ದು ಇಲ್ಲಿನ ಜನರು ಉದ್ಯೋಗ ಅರಸಿ ವಲಸೆ ಹೋಗುವವರಾಗಿರುತ್ತಾರೆ. ಹೀಗಾಗಿ ಗ್ರಾಮಗಳಲ್ಲಿ ಉಳಿದ ಮಹಿಳೆಯರು ಮತ್ತು ಮಕ್ಕಳು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಈ ಪ್ರದೇಶಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರ ಸಂಖ್ಯೆ ಅಧಿಕವಿರುವುದು ಕಂಡುಬರುತ್ತಿದೆ.

**೭.೩.೨. ಕೊಪ್ಪಳ ಜಿಲ್ಲೆಯ ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣ**

ರಾಜ್ಯದಲ್ಲಿ ಕಟ್ಟಡ ನಿರ್ಮಾಣ ಮತ್ತು ಇತರೆ ನಿರ್ಮಾಣ ಕಾರ್ಯಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸ್ಥಿತಿಗತಿಯನ್ನು ಸುಧಾರಿಸುವ ಉದ್ದೇಶದಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಾಯ್ದೆ ೧೯೯೬ ಮತ್ತು ಕರ್ನಾಟಕ ನಿಯಮಗಳು, ೨೦೦೬ ಹಾಗೂ ಸುಂಕ ಕಾಯ್ದೆ, ೧೯೯೬ ಮತ್ತು ಕೇಂದ್ರ ನಿಯಮಗಳು, ೧೯೯೮ರ ಅನ್ವಯ ೨೦೦೬ರಲ್ಲಿ ರಾಜ್ಯದಲ್ಲಿ 'ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ'ಯನ್ನು ಸ್ಥಾಪಿಸಲಾಯಿತು. ಈ ಒಂದು ಮಂಡಳಿಯು ಕಟ್ಟಡ ನಿರ್ಮಾಣ ಕಾರ್ಮಿಕರ ನೋಂದಣಿ ಮತ್ತು ಅವರ ಕಲ್ಯಾಣಕ್ಕಾಗಿ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುತ್ತದೆ. ಈ ಮಂಡಳಿ ಸ್ಥಾಪನೆಯಾಗಿ ಇಲ್ಲಿನವರೆಗೂ ೫೯.೮೫೭ ಜನ ಪುರುಷ ಕಾರ್ಮಿಕರು ಮತ್ತು ೧೭,೯೫೫ ಜನ ಮಹಿಳಾ ಕಾರ್ಮಿಕರು ನೋಂದಾಯಿತರಾಗಿದ್ದು ರಾಜ್ಯದಲ್ಲಿ ಒಟ್ಟು ೭೭,೮೧೨ ಜನರು ನೋಂದಣೆಯಾಗಿರುವುದು ಕಂಡುಬರುತ್ತಿದೆ. ಕೊಪ್ಪಳ ಜಿಲ್ಲೆಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ನೋಂದಣಿ ೨೦೦೯-೧೦ನೇ ಸಾಲಿನಲ್ಲಿ ೨೨೯೮ ಇರುವುದು ಕಂಡುಬರುತ್ತಿದೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಂಡಳಿಯ ಪ್ರಗತಿ ವರದಿ ೨೦೦೯-೧೦

**ಕೋಷ್ಟಕ ೬.೧೪**

**ಕೊಪ್ಪಳ ಜಿಲ್ಲೆಯ ನೋಂದಾಯಿತ ಕಟ್ಟಡ ನಿರ್ಮಾಣ ಕಾರ್ಮಿಕರ ಸಂಖ್ಯೆ**

| ವರ್ಷಗಳು ಏಪ್ರಿಲ್-ಮಾರ್ಚ್ | ಕೊಪ್ಪಳ ಜಿಲ್ಲೆಯ ನೋಂದಾಯಿತ ಕಾರ್ಮಿಕರ ಸಂಖ್ಯೆ | ಕರ್ನಾಟಕದ ಒಟ್ಟು ನೋಂದಾಯಿತ ಕಾರ್ಮಿಕರ ಸಂಖ್ಯೆ |
|---|---|---|
| ೨೦೦೭-೦೮ | ೧೦೯೨ | ೩೩೯೫೨ |
| ೨೦೦೮-೦೯ | ೨೦೫೨ | ೭೨೩೧೫ |
| ೨೦೦೯-೧೦ | ೨೨೯೮ | ೭೭೮೧೨ |

ಮೂಲ : ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಂಡಳಿಯ ಪ್ರಗತಿಯ ವರದಿ, ಕರ್ನಾಟಕ ಸರಕಾರ.[೨]




ಕೋಷ್ಟಕ ೬.೧೪ರಲ್ಲಿ ತೋರಿಸಿದಂತೆ ೨೦೦೭-೦೮ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ೧೦೯೨ ಜನ ಕಾರ್ಮಿಕರು ಮತ್ತು ರಾಜ್ಯದಲ್ಲಿ ೩೩೯೫೨ ಜನ ಕಾರ್ಮಿಕರು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ನೋಂದಣಿಯಾಗಿರುವುದು ತಿಳಿದುಬರುತ್ತಿದೆ. ೨೦೦೮-೦೯ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ೨೦೫೨ ಜನ ಮತ್ತು ರಾಜ್ಯದಲ್ಲಿ ೭೨೩೧೫ ಜನ ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ನೋಂದಾಯಿತರಾಗಿದ್ದಾರೆ. ೨೦೦೯-೧೦ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ೨೨೯೮ ಜನ ಮತ್ತು ರಾಜ್ಯದಲ್ಲಿ ೭೭೮೧೨ ಜನ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರಾಗಿ ನೋಂದಣಿಯಾಗಿರುವುದು ಕಂಡುಬರುತ್ತಿದೆ. ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಜಿಲ್ಲೆಯ ಮತ್ತು ರಾಜ್ಯದಲ್ಲಿನ ನೋಂದಾಯಿತರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಅಧಿಕವಾಗುತ್ತಿರುವುದು ಕಂಡುಬರುತ್ತದೆ. ಕ್ಷೇತ್ರ ಕಾರ್ಯದ ಮಾಹಿತಿಯನ್ನು ಗಮನಿಸಿದರೆ ಕೃಷಿ ಮತ್ತು ನಿರ್ಮಾಣ ಕಾರ್ಯದಲ್ಲಿ ನಿರತರಾದ ಮಹಿಳೆಯರ ಸಂಖ್ಯೆ ಪುರುಷರಿಗಿಂತಲೂ ಅಧಿಕವಾಗಿರುವುದು ಕಂಡುಬರುತ್ತದೆ.

### ಕೋಷ್ಟಕ ೬.೧೫

### ಕೊಪ್ಪಳ ಜಿಲ್ಲೆಯ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಲಿಂಗವಾರು ಮಾಹಿತಿ ಶೇಕಡವಾರು

| ಲಿಂಗ | ಕೃಷಿಕಾರ್ಮಿಕರು | ಶೇಕಡವಾರು | ಕಟ್ಟಡ ನಿರ್ಮಾಣ ಕಾರ್ಮಿಕರು | ಶೇಕಡವಾರು |
|---|---|---|---|---|
| ಪುರುಷ | ೫೨ | ೩೪೬೭% | ೪೮ | ೩೨% |
| ಮಹಿಳೆ | ೯೮ | ೬೫.೩೩% | ೧೦೨ | ೬೮% |
| ಒಟ್ಟು | ೧೫೦ | ೧೦೦% | ೧೫೦ | ೧೦೦% |

ಮೂಲ : ಕ್ಷೇತ್ರ ಕಾರ್ಯದ ಮಾಹಿತಿ




ಕೋಷ್ಟಕ ೬.೧೫ನ್ನು ಗಮನಿಸಿದರೆ ಕೊಪ್ಪಳ ಜಿಲ್ಲೆಯಲ್ಲಿ ಪುರುಷರಿಗಿಂತ ಮಹಿಳೆಯರೇ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಕೃಷಿ ಕಾರ್ಮಿಕರ ಪ್ರಮಾಣವನ್ನು ಗಮನಿಸಿದರೆ ಶೇಕಡ ೩೪.೬೭ರಷ್ಟು ಜನ ಪುರುಷರು ಮತ್ತು ಶೇಕಡ ೬೫.೩೩ರಷ್ಟು ಜನ ಮಹಿಳೆಯರು ಕೃಷಿಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಇಲ್ಲಿ ಪುರುಷ ಕಾರ್ಮಿಕರಿಗಿಂತ ಮಹಿಳಾ ಕಾರ್ಮಿಕರು ಶೇಕಡ ೩೦.೬೬ರಷ್ಟು ಅಧಿಕವಿರುವುದು ತಿಳಿದು ಬರುತ್ತದೆ. ಜಿಲ್ಲೆಯಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣವನ್ನು ನೋಡಿದರೆ ಶೇಕಡ ೩೨ರಷ್ಟು ಜನ ಪುರುಷರು ಮತ್ತು ಶೇಕಡ ೬೮ರಷ್ಟು ಜನ ಮಹಿಳೆಯರು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತದೆ. ಈ ವೃತ್ತಿಯಲ್ಲಿ ಪುರುಷರಿಗಿಂತ ಶೇಕಡ ೩೬ರಷ್ಟು ಅಧಿಕ ಮಹಿಳಾ ಕಾರ್ಮಿಕರು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ.

ಕೃಷಿ ಮತ್ತು ಕಟ್ಟಡ ನಿರ್ಮಾಣಗಳಗಿಂಥ ಕೆಲಸಗಳಲ್ಲಿ ಹಗುರದಾಯಕ ಮತ್ತು ಮೇಲುಸ್ತುವಾರಿಯ ಕೆಲಸಗಳಾದ ಪೈರುಗಳ ನಿರ್ವಹಣೆ, ಮಾರುಕಟ್ಟೆ ವ್ಯವಹಾರ, ಗಂಡಾಳು ಕೆಲಸ, ಮೇಷನ್ ಆಫ್

ಮೇಷನ್ ಮತ್ತು ಮೇಸ್ತ್ರಿ ಎಂಬ ಉನ್ನತ ಕೆಲಸಗಳನ್ನು ಮಾಡುವವರು ಪುರುಷರಾಗಿರುವದರಿಂದ ಅವರ ಸಂಖ್ಯೆ ಕಡಿಮೆ ಇರುತ್ತಿದ್ದು, ಕಾರ್ಮಿಕರಾಗಿ ಎಲ್ಲ ಹಂತಗಳಲ್ಲಿ ಪುರುಷ ಕಾರ್ಮಿಕರಿಗೆ ಸಹಾಯಕ ಕೆಲಸಗಾರರಾಗಿ ದುಡಿಯುವ ಮಹಿಳಾ ಕಾರ್ಮಿಕರ ಸಂಖ್ಯೆ ಅಧಿಕವಾಗಿರುತ್ತದೆ. ಅಲ್ಲದೆ ಪುರುಷ ಕಾರ್ಮಿಕರು ಅಧಿಕ ಕೂಲಿಗಾಗಿ ವಲಸೆ ಹೋಗಿರುವುದರಿಂದಲೂ ಮಹಿಳಾ ಕಾರ್ಮಿಕರ ಸಂಖ್ಯೆ ಅಧಿಕವಾಗಿರುತ್ತದೆ. ಹಾಗಾಗಿ ಪುರುಷ ಕಾರ್ಮಿಕರಿಗಿಂತ ಮಹಿಳಾ ಕಾರ್ಮಿಕರ ಸಂಖ್ಯೆ ಅಧಿಕ ಪ್ರಮಾಣದಲ್ಲಿದೆ.

### ೬.೩.೩. ಕೃಷಿ ಮತ್ತು ನಿರ್ಮಾಣ ಕೆಲಸದ ಸ್ವರೂಪ ಮತ್ತು ಕೆಲಸದ ಹಂತಗಳು

ಕೃಷಿಯು ನೈಸರ್ಗಿಕ ಕ್ರಿಯೆಯೊಂದಿಗೆ ಅಥವಾ ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ನಡೆಯುವ ಒಂದು ಆರ್ಥಿಕ ಚಟುವಟಿಕೆಯಾಗಿದೆ. ಇದರಿಂದಾಗಿ ಅನಿಶ್ಚಿತತೆ, ಕಾಲದ ಅಂತರ ಹವಾಮಾನ ಮತ್ತು ವಾಯುಗುಣಗಳು ಕೃಷಿ ಚಟುವಟಿಕೆಯ ಮೇಲೆ ಪ್ರಭಾವ ಬೀರುತ್ತವೆ. ಹೀಗಾಗಿ ಈ ವೃತ್ತಿಯನ್ನು ನಂಬಿದ ಕಾರ್ಮಿಕರು ಸಹ ಅನೇಕ ವಿಧದ ಬದಲಾವಣೆಗೆ ಒಳಗಾಗಬೇಕಾಗುತ್ತದೆ. ಕೃಷಿಯು ಪ್ರಕೃತಿಯ ಪ್ರಭಾವದಿಂದಾಗಿ ಋತುಮಾನ ಸಂಬಂಧಿ ಉದ್ಯೋಗವಾಗಿರುವುದರಿಂದ ಇಲ್ಲಿನ ಕಾರ್ಮಿಕರು ವರ್ಷದಲ್ಲಿ ನಾಲ್ಕರಿಂದ ೫ ತಿಂಗಳು ಉದ್ಯೋಗವನ್ನು ಪಡೆಯುತ್ತಾರೆ.

ಕೃಷಿ ಕೆಲಸಗಳನ್ನು ಮಾಡುವುದಕ್ಕೆ ಕೌಶಲ್ಯ ಅಷ್ಟಾಗಿ ಬೇಕಾಗಿರುವುದಿಲ್ಲವಾದ್ದರಿಂದ ಕೃಷಿ ಕಾರ್ಮಿಕರಾಗಿ ದುಡಿಯುವವರಲ್ಲಿ ಅನೇಕರು ಅಕೌಶಲ್ಯ ಹೊಂದಿದ ಕಾರ್ಮಿಕರಾಗಿದ್ದಾರೆ. ಅಲ್ಲದೆ ಕೃಷಿಯ ಚಟುವಟಿಕೆಗಳು ಪ್ರದೇಶದಿಂದ ಪ್ರದೇಶಕ್ಕೆ ಬೇರೆ ಬೇರೆಯಾಗಿರುವುದರಿಂದ ಕೃಷಿಯ ಕಾರ್ಮಿಕರ ಕೆಲಸದ ಸ್ವರೂಪವು ಬೇರೆ ಬೇರೆಯಾಗಿರುತ್ತದೆ. ಉದಾಹರಣೆಗೆ ನೀರಾವರಿ ಪ್ರದೇಶದಲ್ಲಿ ಭತ್ತದ ಸಸಿ ನೆಡುವುದು, ಕಳೇಕೀಳುವುದು, ಗೊಬ್ಬರ ಹಾಕುವುದು, ಭತ್ತ ಕೊಯ್ಲು ಮಾಡುವುದು, ಮೆದೆ(ಭತ್ತ ಹೊರುವುದು) ಹೊರುವುದು, ಕಬ್ಬು ಕಡಿಯುವುದು ಮತ್ತು ಹೊರುವುದು ಇತ್ಯಾದಿ ಕೆಲಸಗಳಿದ್ದರೆ ಒಣ ಭೂಮಿಯಲ್ಲಿ ಜೋಳ, ಸಜೆ ಶೇಂಗಾ ಮತ್ತು ನವಣೆ ಬಿತ್ತುವುದು, ಕಳೆ ಕೀಲುವುದು ತೆನೆ ಒಡೆದು ರಾಶಿ ಮಾಡುವುದು ಮತ್ತು ತೂರುವುದು ತೋಟಗಾರಿಕಾ ಬೆಳೆಗಳಿದ್ದಲ್ಲಿ ಕಳೆ ಕೀಳುವುದು ಮತ್ತು ಹಣ್ಣು ಕೀಳುವುದು ಇತ್ಯಾದಿ ಕೆಲಸಗಳಿರುತ್ತವೆ.

ಕೃಷಿಯ ಕೆಲಸಗಳು ಕೆಲವೇ ಋತುಮಾನಗಳಲ್ಲಿ ಅಧಿಕವಿರುವುದರಿಂದ ಆ ಸಮಯದಲ್ಲಿ ಕೂಲಿ ಅಧಿಕವಿದ್ದರೆ ಕೆಲಸ ಇಲ್ಲದ ಸಮಯದಲ್ಲಿ ಕೂಲಿ ಕಡಿಮೆ ಇರುತ್ತದೆ. ಅಲ್ಲದೆ ಕೃಷಿ ಕೆಲಸದಲ್ಲಿ ಪುರುಷ ಕಾರ್ಮಿಕರ ಕೆಲಸವು ಕಡಿಮೆ ಭಾರದ ಕೆಲಸವಾಗಿದ್ದರೆ ಮಹಿಳೆಯರ ಕೆಲಸವು ಬಾರದ ಹಾಗೂ ತ್ರಾಸದಾಯಕ ಕೆಲಸವಾಗಿರುತ್ತದೆ. ಹಾಗೂ ಕೃಷಿ ಕೆಲಸಗಳು ಹೆಚ್ಚಾಗಿ ದಿನಗೂಲಿ ಆಧರಿತವಾಗಿದ್ದು, ಕೆಲವು ಸಾರಿ ಗುತ್ತಿಗೆ ಆಧರಿತ ಕೆಲಸಗಳಾಗಿವೆ.

ಕಟ್ಟಡ ನಿರ್ಮಾಣದ ಕೆಲಸದ ಸ್ವರೂಪವು ಕೃಷಿ ಕೆಲಸದ ಸ್ವರೂಪಕ್ಕಿಂತ ಭಿನ್ನವಾಗಿರುವುದು ಕಂಡುಬರುತ್ತದೆ. ೨೦೦೦ರಲ್ಲಿ 'ಸೇವಾ'(SE) ಸಂಸ್ಥೆಯವರು ನಡೆಸಿದ ಗುಜರಾತ್‌ನ ಕಟ್ಟಡ ನಿರ್ಮಾಣ ಕಾರ್ಮಿಕರ ಒಂದು ಅಧ್ಯಯನ, ದೆಹಲಿ ಕಟ್ಟಡ ನಿರ್ಮಾಣ ಕಾರ್ಮಿಕರ ಕುರಿತ ಎಸ್.ಎನ್.ರಾನಡೆ ಅಧ್ಯಯನ, ಬಿಹಾರದ ಕಟ್ಟಡ ನಿರ್ಮಾಣ ಕಾರ್ಮಿಕರ ಕುರಿತು ಜಿ.ಡಿ.ಸಿನ್ಹಾ ಅವರ ಅಧ್ಯಯನಗಳ ಕಟ್ಟಡ ನಿರ್ಮಾಣ ಕಾರ್ಯದ ಸ್ವರೂಪದ ಬಗ್ಗೆ ತಿಳಿಸುತ್ತವೆ. ಕಟ್ಟಡ ನಿರ್ಮಾಣ ಕೆಲಸವು ಕೃಷಿಯ ನಂತರ ಅಧಿಕ ಜನ ಕೃಷಿ ಮಹಿಳಾ ಕಾರ್ಮಿಕರಿಗೆ ಹಾಗೂ ಪುರುಷ ಕಾರ್ಮಿಕರಿಗೆ ಉದ್ಯೋಗ ನೀಡುತ್ತಿರುವ ಉದ್ಯಮವಾಗಿದೆ. ಈ ಉದ್ಯಮವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಇಂದು ನಗರೀಕರಣದ ಪ್ರಭಾವದಿಂದಾಗಿ ತೀವ್ರಗತಿಯಲ್ಲಿ ಬೆಳೆಯುತ್ತಿರುವ ಉದ್ಯಮವಾಗಿದೆ. ಈ ಉದ್ಯಮವು ನಗರ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದು ಗ್ರಾಮೀಣ ಜನರನ್ನು ಮತ್ತು ಕೃಷಿ ಕಾರ್ಮಿಕರನ್ನು ತನ್ನತ್ತ ಸೆಳೆಯುವ ಒಂದು ಉದ್ಯಮವಾಗಿ ಬೆಳೆಯುತ್ತಿದೆ.

ಕಟ್ಟಡ ನಿರ್ಮಾಣದ ಕೆಲಸದ ಸ್ವರೂಪವು 'ಕ್ಯಾಸುವೆಲ್ ನೇಚರ್' ಅಥವಾ 'ದಿನಗೂಲಿ ಸ್ವರೂಪ'ದ ಉದ್ಯೋಗವಾಗಿದೆ. ಇಲ್ಲಿ ಕೌಶಲ್ಯ ಹೊಂದಿದ, ಅರೆಕೌಶಲ್ಯ ಹೊಂದಿದ ಮತ್ತು ಕೌಶಲ್ಯ ರಹಿತ ಕಾರ್ಮಿಕರು ಉದ್ಯೋಗದಲ್ಲಿ ನಿರತರಾಗಿರುತ್ತಾರೆ. ಕೌಶಲ್ಯ ಮತ್ತು ಅರೆಕೌಶಲ್ಯ ಹೊಂದಿದ ಕಾರ್ಮಿಕರು ಪುರುಷರಾಗಿದ್ದರೆ ಕೌಶಲ್ಯರಹಿತ ಕಾರ್ಮಿಕರು ಮಹಿಳೆಯರಾಗಿದ್ದಾರೆ. ಈ ಉದ್ಯಮದಲ್ಲಿ ಕಾರ್ಮಿಕರಾಗಿ ದುಡಿಯುವವರಲ್ಲಿ ಅಧಿಕ ಸಂಖ್ಯೆಯ ಜನರು ಮಹಿಳೆಯರೇ ಆಗಿದ್ದಾರೆ. ಹಾಗೂ ಪರಿಶಿಷ್ಟ ಜಾತಿ ಪಂಗಡಕ್ಕೆ ಸೇರಿದವರು ಆಗಿದ್ದಾರೆ. ಕಟ್ಟಡ ನಿರ್ಮಾಣ ಕೆಲಸವು ಒಂದು ಕಟ್ಟಡ ನಿರ್ಮಾಣಕ್ಕೆ ಬೇಕಾದ ಎಲ್ಲ ಹಂತದ ಎಲ್ಲ ಕಾರ್ಮಿಕರನ್ನು ಒಳಗೊಂಡಿದೆ. ಈ ಉದ್ಯೋಗದ ಅವಧಿಯು ಸೀಮಿತ ಅವಧಿಯದ್ದಾಗಿರುತ್ತದೆ. ಒಂದು ಸೈಟ್(ಸ್ಥಳ)ನಲ್ಲಿ ಉದ್ಯೋಗ ಪೂರ್ಣಗೊಂಡರೆ ಮತ್ತೊಂದು ಸೈಟ್ ಹುಡುಕಿ ಕೆಲಸ ಮಾಡಬೇಕಾದ್ದರಿಂದ ಇದೊಂದು ಸಂಚಾರಿ ಸ್ವರೂಪದ ಉದ್ಯೋಗವಾಗಿದೆ. ಕೆಲಸದ ಅವಧಿಯು ಸೀಮಿತವಾಗಿರುವುದರಿಂದ ವಾರದಲ್ಲಿ ಕೆಲವು ದಿನಗಳು ಅಥವಾ ತಿಂಗಳಲ್ಲಿ ಕೆಲವು ವಾರಗಳವರೆಗೆ ಮಾತ್ರ ಕಾರ್ಮಿಕರಿಗೆ ಕೆಲಸ ದೊರೆಯುತ್ತದೆ. ಕಟ್ಟಡ ನಿರ್ಮಾಣ ಕಾರ್ಯಗಳು ನಗರ ಪ್ರದೇಶಗಳಲ್ಲಿ ಅಥವಾ ನಗರದಿಂದ ದೂರದ ಪ್ರದೇಶಗಳಲ್ಲಿ ನಡೆಯುತ್ತಿರುವುದರಿಂದ ಕಾರ್ಮಿಕರು ಕೆಲಸದ ಸ್ಥಳಗಳಿಗೆ ಪ್ರಯಾಣ ಮಾಡಬೇಕಾಗುತ್ತದೆ. ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕೃಷಿಯ ಕೂಲಿಗಿಂತಲೂ ಅಧಿಕ ಕೂಲಿ ದೊರೆಯುವುದರಿಂದ ಕೃಷಿ ಕಾರ್ಮಿಕರು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ವಲಸೆ ಬರುತ್ತಿರುವುದು ಕಂಡುಬರುತ್ತದೆ. ಕೆಲಸದಲ್ಲಿ ಕೌಶಲ್ಯ ಪಡೆದ ಪುರುಷರ ಕೆಲಸ ಆರಾಮದಾಯಕ ಮತ್ತು ಕೈಚಳಕದಿಂದ ಕೂಡಿದ್ದರೆ ಮಹಿಳೆಯರ ಕೆಲಸವು ಶ್ರಮದಾಯಕ ಮತ್ತು ಕೌಶಲ್ಯರಹಿತವಾಗಿರುತ್ತದೆ.

**ಕೃಷಿ ಮತ್ತು ಕಟ್ಟಡ ನಿರ್ಮಾಣದ ಕೆಲಸದ ಹಂತಗಳು**

ಕೃಷಿ ಪ್ರಕೃತಿಯೊಂದಿಗೆ ನಡೆಯುವ ಚಟುವಟಿಕೆ ಆಗಿರುವುದರಿಂದ ಕೃಷಿ ಕಾರ್ಯದ ಪ್ರತಿಯೊಂದು ಹಂತದಲ್ಲೂ ಪುರುಷ ಮತ್ತು ಮಹಿಳೆಯರು ತೊಡಗಿರುವುದು ಕಂಡುಬರುತ್ತದೆ. ಈ ಹಂತದಲ್ಲಿ ಮಹಿಳಾ ಕಾರ್ಮಿಕರ ಭಾಗವಹಿಸುವಿಕೆಯೇ ಅಧಿಕವಿರುವುದು ಕಂಡುಬರುತ್ತದೆ.

**ಕೃಷಿ ಕಾರ್ಯದಲ್ಲಿ ಲಿಂಗವಾರು ಶ್ರಮ ವಿಭಜನೆ**

| ಮಹಿಳೆಯರ ಕಾರ್ಯಗಳು | ಪುರುಷರ ಕಾರ್ಯಗಳು |
|---|---|
| **ಬಿತ್ತನೆ ಪೂರ್ವ ಹಂತ** | **ಬಿತ್ತನೆ ಪೂರ್ವ ಹಂತ** |
| ೧. ಜಮೀನಿನ ಸ್ವಚ್ಛತೆ | ೧. ಜಮೀನಿನ ಸ್ವಚ್ಛತೆ ಕುಂಟೆ, ರಂಟೆ, ಮಡಿಕೆ ಒಡೆಯುವುದು |
| ೨. ತಿಪ್ಪೆ ಗೊಬ್ಬರ ಹರಡುವುದು | ೨. ತಿಪ್ಪೆಗೊಬ್ಬರ ಹೊರುವುದು |
| ೩. ತವಡ ಮಾಡುವುದು | ೩. ತವಡೆ ಮಾಡುವುದು ಮತ್ತು ಬದುವು ಹಾಕುವುದು |
| ೪. ಸಸಿ ಮತ್ತು ಬೀಜ ಬಿತ್ತುವುದು | ೪. ಧಾನ್ಯಗಳನ್ನು ಬೀಜಕ್ಕೆ ಹಾಕುವುದು |
| **ಬಿತ್ತನೆ ನಂತರದ ಹಂತ** | **ಬಿತ್ತನೆ ನಂತರದ ಹಂತ** |
| ೧. ಸಸಿಗಳನ್ನು ನೆಡುವುದು | ೧. ಸಸಿಗಳನ್ನು ಹೊರುವುದು |
| ೨. ಕಳೆ ಕೀಳುವುದು | ೨. ರಾಸಾಯನಿಕ ಮತ್ತು ಗೊಬ್ಬರಗಳನ್ನು ಸಿಂಪಡಣೆ |
| ೩. ರಾಸಾಯನಿಕ ಗೊಬ್ಬರ ಹಾಕುವುದು | ೩. ಫಸಲನ್ನು ಕೊಯ್ಯುವುದು ಮತ್ತು ಸಂಗ್ರಹಿಸುವುದು ಬಣವಿ ಹಾಕುವುದು |
| ೪. ಫಸಲನ್ನು ಕೊಯ್ಯುವುದು, ಕಡಿಯುವುದು, ಮುರಿಯುವುದು, ಕೀಳುವುದು | ೪. ಫಸಲನ್ನು ಯಂತ್ರಕ್ಕೆ ಹಾಕುವುದು |
| ೫. ಫಸಲನ್ನು ಹೊರುವುದು ಮತ್ತು ರಾಶಿ ಮಾಡುವುದು | ೫. ರಾಶಿ ಮಾಡುವುದು |
| **ರಾಶಿಯ ನಂತರದ ಹಂತ** | **ರಾಶಿಯ ನಂತರದ ಹಂತ** |
| ೧. ತೋರುವುದು | ೧. ತೂರುವುದು |
| | ೨. ಮಾರುಕಟ್ಟೆಗೆ ಸಾಗಿಸುವುದು |

ಮೂಲ : ಕೊಪ್ಪಳ ಜಿಲ್ಲೆಯ ಕ್ಷೇತ್ರ ಕಾರ್ಯದ ಸಮೀಕ್ಷೆ

ಮೇಲೆ ಸೂಚಿಸಿರುವ ಕೃಷಿ ಕಾರ್ಮಿಕರ ಕೆಲಸದ ಹಂತಗಳನ್ನು ಗಮನಿಸಿದರೆ ಮಹಿಳೆಯರು ಭಾರವಾದ ಮತ್ತು ದೈಹಿಕವಾಗಿ ಹೆಚ್ಚು ಶ್ರಮವಿರುವ ಕೆಲಸಗಳಲ್ಲಿ ನಿರತರಾಗಿರುವುದು ಕಂಡುಬಂದರೆ ಪುರುಷರು ಭಾರವಿರಲಾರದ ಕಡಿಮೆ ದೈಹಿಕ ಶ್ರಮವಿರುವ ಮತ್ತು ನಿರ್ವಹಣೆ ಕಾರ್ಯದಲ್ಲಿ ನಿರತರಾಗಿರುವುದು ಕಂಡುಬರುತ್ತದೆ ಮಹಿಳೆ ಭಾರವಾದ ಮತ್ತು ಶ್ರಮದಾಯಕ ಕೆಲಸಗಳನ್ನು ಮಾಡುತ್ತಿದ್ದರೂ ಪುರುಷರಿಗೆ ಹೋಲಿಸಿದರೆ ಅವರು ಪಡೆಯುವ ಕೂಲಿಯು ಕಡಿಮೆ ಇರುವುದು ತಿಳಿದುಬರುತ್ತದೆ. ಅಲ್ಲದೆ ಭೂಮಿಯನ್ನು ಸ್ವಚ್ಛಗೊಳಿಸುವ ಮತ್ತು ರಾಶಿ ಮಾಡುವ ಯಂತ್ರಗಳನ್ನು ನಿರ್ವಹಿಸುವವರು ಮತ್ತು ಫಸಲನ್ನು ಮಾರುಕಟ್ಟೆಗೆ ಸಾಗಿಸುವವರು ಪುರುಷರೇ ಆಗಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತಿದೆ.

**ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಲಿಂಗವಾರು ಶ್ರಮದ ವಿಂಗಡಣೆ**

| ಪುರುಷರು ಮಾಡುವ ಕಾರ್ಯಗಳು | ಮಹಿಳೆಯರು ಮಾಡುವ ಕಾರ್ಯಗಳು |
|---|---|
| ೧. ಬುನಾದಿ ಕಡಿಯುವುದು ಕಾರ್ಮಿಕರು | ೧. ಕಲ್ಲು ಹೊರುವುದು, ಇಟ್ಟಂಗಿ ಹೊರುವುದು |
| ೨. ರಬ್ಬಲ್ ಹಾಕುವುದು | ೨. ಮಣ್ಣು ಹೊರುವುದು |
| ೩. ಬುನಾದಿ ಕಟ್ಟುವುದು | ೩. ಉಸುಕು ಹೊರುವುದು |
| ೪. ಗಂಡಾಳು ಕೆಲಸ(ಸಿಮೆಂಟ್ ಕಲಸುವುದು ಸೆಂಟ್ರಿಂಗ್ ಹೊಡೆಯುವುದು) | ೪. ಮಾಲ್ ಕೊಡುವುದು(ಸಿಮೆಂಟ್ ಮತ್ತು ಉಸುಕುಮಿಶ್ರಿತ ವಸ್ತು) |
| ೫. ಆಫ್ ಮೇಷನ್ ಅಥವಾ ಆಫ್ ಮೇಸನ್ ಕಟ್ಟಡ ಕಟ್ಟುವುದು | ೫. ಕಾಂಕ್ರೆಟ್ ಕೊಡುವುದು ಸಿಮೆಂಟ್ ಮತ್ತು ಸಣ್ಣ ಕಲ್ಲಿನ ಮಿಶ್ರಣ |
| ೬. ಫುಲ್ ಮೇಷನ್ ಅಥವಾ ಫುಲ್ ಮೇಸನ್ ಕಟ್ಟಡ ಕಟ್ಟುವುದು | ೬. ನೀರು ಹೊರುವುದು |
| ೭. ಮೇಸ್ತ್ರಿ ಕೆಲಸದ ಉಸ್ತುವಾರಿ ನೋಡುವವರು | ೭. ಕಟ್ಟಡಕ್ಕೆ ನೀರು ಹಾಯಿಸುವುದು |
| ೮. ಕಾಂಟ್ರ್ಯಾಕ್ಟರ್ ಕೆಲಸದ ಗುತ್ತಿಗೆ ಹಿಡಿಯುವವರು | ೮. ಉಸುಕನ್ನು ಜರಡಿ ಹಿಡಿಯುವುದು |
| ೯. ಕಾರ್ಪೆಂಟರ್ ಮನೆಗೆ ಕಿಟಕಿ ಬಾಗಿಲು ತಯಾರಿಸುವವ | ೯. ರಬ್ಬರ್ ಹೊರುವುದು ಮತ್ತು ಹಾಕುವುದು |
| ೧೦. ಎಲೆಕ್ಟ್ರೀಷಿಯನ್ ಮನೆಗೆ ವಿದ್ಯುತ್ ಸಂಪರ್ಕ ವ್ಯವಸ್ಥೆ ರೂಪಿಸುವುದು | ೧೦. ಮಿಕ್ಸರ್ ಯಂತ್ರ ತಿರುಗಿಸುವುದು. |

ಮೂಲ: ಕ್ಷೇತ್ರಕಾರ್ಯದ ಸಮೀಕ್ಷೆ

ಕಟ್ಟಡ ನಿರ್ಮಾಣ ಕಾರ್ಯದ ವಿವಿಧ ಹಂತಗಳಲ್ಲಿ ದುಡಿಯುವ ಮಹಿಳೆ ಮತ್ತು ಪುರುಷರು ಮಾಡುವ ಕಾರ್ಯಗಳನ್ನು ಗಮನಿಸಿದರೆ ಇಬ್ಬರು ಮಾಡುವ ಕಾರ್ಯಗಳಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಮಹಿಳೆಯರು ಇಟ್ಟಂಗಿ ಸುಡವ, ಕಲ್ಲು ಹೊರುವ, ಮಣ್ಣು ಹೊರುವ, ಉಸುಕು ಹೊರುವ, ಸಿಮೆಂಟ್ ಹೊರುವ, ಮಾಲ್ ಕೊಡುವ, ಕಾಂಕ್ರೆಟ್ ಕೊಡುವ, ನೀರು ಹೊರುವ, ಕಟ್ಟಡಕ್ಕೆ ನೀರುಹಾಯಿಸುವ ಮತ್ತು ಉಸುಕನ್ನು ಜರಡಿ ಹಿಡಿಯುವ ಇತ್ಯಾದಿ ಕೆಲಸಗಳನ್ನು ಮಾಡುತ್ತಿರುವುದು ಕಂಡುಬರುತ್ತಿದೆ. ಈ ಕೆಲಸಗಳು ಭಾರವಾಗಿದ್ದು ಬಗ್ಗಿ ಎದ್ದು ಮಾಡುವ ಕೆಲಸಗಳಾಗಿವೆ. ಆದರೆ ಪುರುಷರು ಮಾಡುವ ಕೆಲಸಗಳಾದ ಬುನಾದಿ ಕಡಿಯುವುದನ್ನು ಹೊರತುಪಡಿಸಿ ರಬ್ಬಲ್ ಹಾಕುವುದು, ಸಿಮೆಂಟ್ ಕಲೆಸುವುದು, ಮೇಷನ್ ಆಫ್ ಮೇಷನ್ ಅಥವಾ ಗಾರೆ ಕೆಲಸ, ಮೇಸ್ತ್ರಿ ಕೆಲಸ, ಕಾಂಟ್ರ್ಯಾಕ್ಟರ್ ಕೆಲಸಗಳು ಮತ್ತು ಮನೆಯ ನಿರ್ಮಾಣಕ್ಕೆ ಅಗತ್ಯವಾದ ಕಿಟಕಿ ಬಾಗಿಲು ತಯಾರಿಸುವ ಕಾರ್ಪೆಂಟರ್ ಅಥವಾ ಬಡಗಿ ಕೆಲಸ ಮತ್ತು ಎಲೆಕ್ಟ್ರಿಷಿಯನ್ ಕೆಲಸಗಳು ಕುಳಿತು ಮಾಡುವ ಹಾಗೂ ಕಡಿಮೆ ದೈಹಿಕ ಶ್ರಮ ಹೊಂದಿರುವ ಕೆಲಸಗಳಾಗಿವೆ.

ಪುರುಷರು ಮಾಡುವ ಈ ಕೆಲಸಗಳು ಕೈಚಳಕಕ್ಕೆ ಸಂಬಂಧಿಸಿದ, ಕೌಶಲ್ಯದಿಂದ ಕೂಡಿದ ಕೆಲಸಗಳಾಗಿದ್ದು ಇವು ಪುರುಷರಿಗೆ ಅಧಿಕ ಕೂಲಿಯನ್ನು ಒದಗಿಸುತ್ತದೆ. ಆದರೆ ಮಹಿಳೆಯರು ಮಾಡುವ ಕೆಲಸಗಳು ಕೈಚಳಕ ರಹಿತ, ಕೌಶಲ್ಯರಹಿತ, ಅಥವಾ ಅರೆಕೌಶಲ್ಯದಿಂದ ಮಾಡುವ ಹಾಗೂ ದೈಹಿಕ ಶ್ರಮವಹಿಸಿ ಮಾಡುವ ಕೆಲಸಗಳಾಗಿದ್ದು ಇವು ಅವರಿಗೆ ಕಡಿಮೆ ಕೂಲಿಯನ್ನು ನೀಡುವಂತೆ ಮಾಡಿವೆ. ಆದ್ದರಿಂದಾಗಿ ಅವರು ಕಡಿಮೆ ಕೂಲಿಯನ್ನು ಪಡೆಯುತ್ತಾರೆ.

ಮೇಲೆ ವಿಂಗಡಿಸಿದ ಕೃಷಿ ಮತ್ತು ಕಟ್ಟಡ ನಿರ್ಮಾಣದ ಕಾರ್ಯಗಳನ್ನು ಗಮನಿಸಿದರೆ ಈ ಪುರುಷಶಾಹಿ ವ್ಯವಸ್ಥೆ ಅಥವಾ ಪುರುಷರು ಕಡಿಮೆ ಭಾರದ ಅಥವಾ ದೈಹಿಕಶ್ರಮ ಕಡಿಮೆ ಇರುವ ಕೆಲಸಗಳನ್ನು ಹಾಗೂ ಅಧಿಕ ಆದಾಯ ತರುವ ಕೆಲಸಗಳನ್ನು ತಮ್ಮ ಬಳಿ ಇಟ್ಟುಕೊಂಡು ಹೆಚ್ಚು ದೈಹಿಕ ಶ್ರಮ ಇರುವ ಹಾಗೂ ಕಡಿಮೆ ಕೂಲಿ ದೊರೆಯುವ ಕೆಲಸಗಳನ್ನು ಮಹಿಳೆಯರಿಗೆ ಬಿಟ್ಟುಕೊಟ್ಟಿರುವುದು ತಿಳಿದುಬರುತ್ತದೆ.

### ೬.೩.೪. ಕೂಲಿಯ ಪಾವತಿ ಮತ್ತು ಕಾರ್ಮಿಕ ಪೇಟೆ

ಕೃಷಿ ಮತ್ತು ನಿರ್ಮಾಣಕಾರ್ಯ ಎರಡು ಉದ್ಯಮಗಳಲ್ಲಿ ವೇತನ ಅಥವಾ ಕೂಲಿ ಪಾವತಿಯು ವಾರದ ಕೊನೆಯಲ್ಲಿ ಅಂದರೆ ಪ್ರತಿ ರವಿವಾರದಂದು ನಡೆಯುತ್ತದೆ. ಆದರೆ ಕೆಲವರದು ಪ್ರದೇಶಗಳಲ್ಲಿ (ಊರಿನಲ್ಲಿ) ಯಾವ ದಿನ ಊರ ಸಂತೆ ಇರುತ್ತದೋ ಅಂದೇ ಕೂಲಿಯನ್ನು ನೀಡಲಾಗುತ್ತಿದೆ. ಆದರೂ ಕೃಷಿ ಕಾರ್ಮಿಕರಿಗೆ ನೀಡುವ ಕೂಲಿ ಒಂದು ವಾರ ಅಥವಾ ಎರಡು ವಾರ ತಡವಾಗಿ ದೊರೆಯುತ್ತಿರುವುದು ಕ್ಷೇತ್ರಕಾರ್ಯದ ಸಮಯದಲ್ಲಿ ತಿಳಿದುಬಂದಿದೆ. ಇದರಿಂದಾಗಿ ಕೃಷಿ ಕೂಲಿಕಾರ್ಮಿಕರ ಜೀವನ

ನಿರ್ವಹಣೆಗೆ ತೊಂದರೆಯಾಗುತ್ತದೆ. ಇದೇ ರೀತಿಯ ಕೂಲಿಯ ವಿಳಂಬ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಕಂಡುಬರುತ್ತಿದೆ.

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಕೂಲಿಯಲ್ಲಿ ಅಗಾದ ಪ್ರಮಾಣದ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕಟ್ಟಡ ನಿರ್ಮಾಣದ ಕಾರ್ಮಿಕರಿಗೆ ನೀಡುವ ಕೂಲಿಯು ಕೃಷಿ ಕಾರ್ಮಿಕರಿಗೆ ನೀಡುವ ಕೂಲಿಯ ಎರಡರಷ್ಟಿರುವುದು ಕಂಡುಬರುತ್ತದೆ. ಅಲ್ಲದೆ ಈ ಎರಡು ವೃತ್ತಿಗಳಲ್ಲಿ ಪುರುಷ ಮತ್ತು ಮಹಿಳೆಯರ ಕೂಲಿಯು ವ್ಯತ್ಯಾಸದಿಂದ ಕೂಡಿರುವುದು ಕಂಡುಬರುತ್ತದೆ. ಅದನ್ನು ಕೆಳಗಿನ ಕೋಷ್ಟಕ ೩-೯ರಲ್ಲಿ ನೋಡಬಹುದು.

**ಕೋಷ್ಟಕ ೬.೧೬**

**ಕೃಷಿ ಕಾರ್ಮಿಕರಿಗೆ ನೀಡುವ ದಿನದ ಕೂಲಿಯ ಪ್ರಮಾಣ**

| ಕ್ರ. ಸಂ | ಮಹಿಳೆಯರ ಕೂಲಿಯ ಪ್ರಮಾಣ | | | ಪುರುಷರ ಕೂಲಿಯ ಪ್ರಮಾಣ | | |
|---|---|---|---|---|---|---|
| | ದಿನದ ಕೂಲಿ (ರೂಪಾಯಿಗಳಲ್ಲಿ) | ಒಟ್ಟು ಸಂಖ್ಯೆ | ಶೇಕಡ | ದಿನದ ಕೂಲಿ (ರೂಪಾಯಿಗಳಲ್ಲಿ) | ಒಟ್ಟು ಸಂಖ್ಯೆ | ಶೇಕಡ |
| ೧. | ೩೦ ರೂ | ೧೧ | ೭.೩೩ | ೫೦ | ೦೯ | ೬.೦೦ |
| ೨. | ೩೫ | ೧೨೧ | ೮೦.೬೭ | ೮೦ | ೧೦೭ | ೧.೩೩ |
| ೩. | ೫ | ೧೩ | ೮.೬೭ | ೧೦೦ | ೨೭ | ೧೮.೦೦ |
| ೪. | ೫೦ಕ್ಕಿಂತ ಅಧಿಕ | ೦೫ | ೩.೩೩ | ೧೨೦ಕ್ಕಿಂತ ಅಧಿಕ | ೦೭ | ೪.೬೭ |
| | ಒಟ್ಟು | ೧೫೦ | ೧೦೦% | ಒಟ್ಟು | ೧೫೦ | ೧೦೦% |

ಮೂಲ : ಕ್ಷೇತ್ರ ಕಾರ್ಯದ ಸಮೀಕ್ಷೆ



ಮಹಿಳಾ ಕೃಷಿ ಕಾರ್ಮಿಕರ ಒಂದು ದಿನದ ಕೂಲಿ



ಪುರುಷ ಕೃಷಿ ಕಾರ್ಮಿಕರ ಒಂದು ದಿನದ ಕೂಲಿ

ಮೇಲಿನ ಕೋಷ್ಟಕ ಮತ್ತು ಪೈನಕ್ಷೆಯನ್ನು ಗಮನಿಸಿದರೆ ಮಹಿಳಾ ಕೃಷಿ ಕಾರ್ಮಿಕರು ಪಡೆಯುತ್ತಿರುವ ಕೂಲಿ ಅತ್ಯಂತ ಕಡಿಮೆ ಎಂಬುದು ಸ್ಪಷ್ಟವಾಗುತ್ತದೆ. ಕೋಷ್ಟಕ ಮತ್ತು ಪೈನಕ್ಷೆಯನ್ನು ಗಮನಿಸಿದರೆ ಶೇಕಡ ೭.೩೩ರಷ್ಟು ಮಹಿಳಾ ಕಾರ್ಮಿಕರು ೩೦ ರೂಪಾಯಿ ಕೂಲಿಯನ್ನು ಶೇಕಡ ೮೦.೬೩ರಷ್ಟು ಮಹಿಳಾ ಕಾರ್ಮಿಕರು ೩೫ ರೂಪಾಯಿ ಕೂಲಿಯನ್ನು ಶೇಕಡ ೮.೬೭ರಷ್ಟು ಮಹಿಳಾ ಕಾರ್ಮಿಕರು ೫೦ ರೂಪಾಯಿ ಕೂಲಿಯನ್ನು ಮತ್ತು ಶೇಕಡ ೩.೩೩ರಷ್ಟು ಕಾರ್ಮಿಕರು ೫೦ ರೂಪಾಯಿಗಿಂತಲೂ ಅಧಿಕ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಮೇಲಿನ ಪೈ ನಕ್ಷೆಯನ್ನು ಗಮನಿಸಿದರೆ ಶೇಕಡ ೮೦.೬೭ರಷ್ಟು ಮಹಿಳಾ ಕಾರ್ಮಿಕರು ೩೫ ರೂಪಾಯಿ ಕೂಲಿ ಪಡೆಯುತ್ತಿದ್ದರೆ. ಕೇವಲ ಶೇಕಡ ೩.೩೩ ರಷ್ಟು ಮಹಿಳೆಯರು ೫೦ ರೂಪಾಯಿಗಿಂತಲೂ ಅಧಿಕ ಕೂಲಿ ಪಡೆಯುತ್ತಿರುವುದು ಕಂಡುಬರುತ್ತದೆ.

ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವ ಪುರುಷ ಕಾರ್ಮಿಕರ ಕೂಲಿಯನ್ನು ಗಮನಿಸಿದರೆ ಶೇಕಡ ೬ರಷ್ಟು ಕಾರ್ಮಿಕರು ೫೦ ರೂಪಾಯಿ ಕೂಲಿಯನ್ನು ಶೇಕಡ ೭೧.೩೩ರಷ್ಟು ಕಾರ್ಮಿಕರು ೮೦ರೂಪಾಯಿ ಕೂಲಿಯನ್ನು, ಶೇಕಡ ೧೮ರಷ್ಟು ಕಾರ್ಮಿಕರು ೧೦೦ ರೂಪಾಯಿ ಕೂಲಿಯನ್ನು ಮತ್ತು ಶೇಕಡ ೪.೬೭ ರಷ್ಟು ಕಾರ್ಮಿಕರು ಮಾತ್ರ ೧೨೦ರೂಪಾಯಿಗಿಂತಲೂ ಅಧಿಕ ಕೂಲಿ ಪಡೆಯುತ್ತಿರುವುದು ತಿಳಿದುಬರುತ್ತದೆ. ಪುರುಷ ಕಾರ್ಮಿಕರಲ್ಲಿ ಅಧಿಕ ಜನರು (ಶೇಕಡ ೭೧.೩೩ರಷ್ಟು) ೮೦ ರೂಪಾಯಿ ಕೂಲಿಯನ್ನು ಪಡೆಯುತ್ತಿದ್ದಾರೆ. ಕೇವಲ ಶೇಕಡ ೪.೬೭ರಷ್ಟು ಕಾರ್ಮಿಕರು ೧೨೦ ಕ್ಕಿಂತಲು ಅಧಿಕ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ.

ಮೇಲಿನ ಕೋಷ್ಟಕ ಮತ್ತು ಪೈನಕ್ಷೆಯನ್ನು ಗಮನಿಸಿದರೆ ಪುರುಷರಿಗೆ ಮತ್ತು ಮಹಿಳೆಯರಿಗೆ ನೀಡುವ ಕೂಲಿಯ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಅಧಿಕ ಸಂಖ್ಯೆಯ ಮಹಿಳಾ ಕೃಷಿ ಕಾರ್ಮಿಕರು ಪಡೆಯುವ ಕೂಲಿಯು ೩೫ ರೂಪಾಯಿಗಳಾಗಿದ್ದರೆ. ಅಧಿಕ ಪುರುಷ ಕೃಷಿ ಕಾರ್ಮಿಕರು ಪಡೆಯುವ ಕೂಲಿಯು ೮೦ ರೂಪಾಯಿಗಳಾಗಿರುವುದು ಕಂಡುಬರುತ್ತದೆ. ಇಲ್ಲಿ ಪುರುಷ ಮತ್ತು ಮಹಿಳೆಯರು ಕೂಲಿಯ ವ್ಯತ್ಯಾಸ ಶೇಕಡ ೩೯.೧೩ ಇರುವುದು ಕಂಡುಬರುತ್ತದೆ. ಅಂದರೆ ಮಹಿಳೆಯರು ಪುರುಷರಿಗಿಂತಲು ೪೫ ರೂಪಾಯಿಗಳನ್ನು ಕಡಿಮೆ ಪಡೆಯುತ್ತಿರುವುದು ಕಂಡುಬರುತ್ತದೆ.

## ಕೋಷ್ಟಕ ೬.೧೭

### ಕಟ್ಟಡ ನಿರ್ಮಾಣ ಕಾರ್ಮಿಕರು ಪಡೆಯುವ ದಿನದ ಕೂಲಿ ಮತ್ತು ಪ್ರಮಾಣ

| ಕ್ರ. ಸಂ | ಮಹಿಳೆಯರ ಕೂಲಿಯ ಪ್ರಮಾಣ | | | ಪುರುಷರ ಕೂಲಿಯ ಪ್ರಮಾಣ | | |
|---|---|---|---|---|---|---|
| | ದಿನದ ಕೂಲಿ ರೂ.ಗಳಲ್ಲಿ | ಕಾರ್ಮಿಕರ ಸಂಖ್ಯೆ | ಶೇಕಡವಾರು | ದಿನದ ಕೂಲಿ ರೂ. ಗಳಲ್ಲಿ | ಕಾರ್ಮಿಕರ ಸಂಖ್ಯೆ | ಶೇಕಡವಾರು |
| ೧. | ೪೦ | ೨೧ | ೧೪.೦೦ | ೫೦ (ಗಂಡಾಳು) | ೩೨ | ೨೧.೩೩ |
| ೨. | ೬೫ | ೧೧೭ | ೭೮.೦೦ | ೧೦೦ (ಆಫ್ ಮೇಷನ್) | ೫೩ | ೩೫.೩೩<br>೬೮ |
| ೩. | ೧೦೦ | ೧೦ | ೬.೬೭ | ೧೨೦ ಫುಲ್ ಮೇಷನ್ | ೪೯ | ೩೨.೬೭<br>೬೮ |
| ೪. | ೧೨೦ಕ್ಕಿಂತ ಅಧಿಕ | ೦೨ | ೧.೩೩ | ೧೫೦ ಕ್ಕಿಂತ ಅಧಿಕ | ೧೬ | ೧೦.೬೭ |
| | ಒಟ್ಟು | ೧೫೦ | ೧೦೦ | ಒಟ್ಟು | ೧೫೦ | ೧೦೦ |




**ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರ ಒಂದು ದಿನದ ಕೂಲಿ**




**ಪುರುಷ ಕಟ್ಟಡ ನಿರ್ಮಾಣ ಕಾರ್ಮಿಕರ ಒಂದು ದಿನದ ಕೂಲಿ**

ಕಟ್ಟಡ ನಿರ್ಮಾಣ ಕಾರ್ಮಿಕರ ಕೂಲಿಯ ಪ್ರಮಾಣವನ್ನು ಗಮನಿಸಿದರೆ ಅವರು ಪಡೆಯುವ ಕೂಲಿ ವ್ಯತ್ಯಾಸದಿಂದ ಇರುವುದು ಕಂಡುಬರುತ್ತದೆ. ಈ ಕಾರ್ಮಿಕರಿಗೆ ಸಾಮಾನ್ಯ ಕೆಲಸದ ದಿನದಲ್ಲಿ ಸಾಮಾನ್ಯ ಕೂಲಿಯನ್ನು ಹಾಗೂ RCC ಅಥವಾ ಕಟ್ಟಡಕ್ಕೆ ಮೇಲ್ಛಾವಣಿ ಹಾಕುವಾಗ ಅಧಿಕ ಕೂಲಿಯನ್ನು ನೀಡಲಾಗುತ್ತದೆ. ಕೋಷ್ಟಕ ೬.೧೭ನ್ನು ಗಮನಿಸಿದರೆ ಶೇಕಡ ೧೪ರಷ್ಟು ಮಹಿಳಾ ಕಾರ್ಮಿಕರು ೪೫ ರೂಪಾಯಿ ಕೂಲಿಯನ್ನು ಶೇಕಡ ೭೮ರಷ್ಟು ಮಹಿಳಾ ಕಾರ್ಮಿಕರು ೬೫ ರೂಪಾಯಿ ಕೂಲಿಯನ್ನು ಶೇಕಡ ೬.೬೭ರಷು ಮಹಿಳಾ ಕಾರ್ಮಿಕರು ೧೦೦ ರೂಪಾಯಿ ಕೂಲಿಯನ್ನು ಮತ್ತು ಶೇಕಡ ೧.೩೩ರಷ್ಟು ಮಹಿಳಾ

ಕಾರ್ಮಿಕರು ೧೨೦ ರೂಪಾಯಿಗಿಂತಲು ಅಧಿಕ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಈ ಮಹಿಳಾ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಶೇಕಡ ೭೮ರಷ್ಟು ಕಾರ್ಮಿಕರು ೮೦ ರೂಪಾಯಿ ಕೂಲಿಯನ್ನು ಪಡೆಯುತ್ತಿದ್ದರೆ. ಕಡಿಮೆ ಸಂಖ್ಯೆಯ ಕೇವಲ ಶೇಕಡ ೧.೩೩ರಷ್ಟು ಕಾರ್ಮಿಕರು ೧೨೦ಕ್ಕಿಂತಲೂ ಅಧಿಕ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೧೭ರಲ್ಲಿ ತೋರಿಸಿರುವಂತೆ ಪುರುಷರು ಪಡೆಯುವ ಕೂಲಿ ಮಹಿಳೆಯರು ಪಡೆಯುವ ಕೂಲಿಗಿಂತಲೂ ಅಧಿಕವಿರುವುದು ಕಂಡುಬರುತ್ತದೆ. ಶೇಕಡ ೨೧.೩೩ರಷ್ಟು ಪುರುಷ ಕಾರ್ಮಿಕರು ೫೦ ರೂಪಾಯಿ ಕೂಲಿಯನ್ನು, ಶೇಕಡ ೩೫.೩೩ರಷ್ಟು ಪುರುಷ ಕಾರ್ಮಿಕರು ೧೦೦ ರೂಪಾಯಿ ಕೂಲಿಯನ್ನು, ಶೇಕಡ ೩೨.೬೭ರಷ್ಟು ಪುರುಷ ಕಾರ್ಮಿಕರು ೧೨೦ ರೂಪಾಯಿ ಕೂಲಿಯನ್ನು ಮತ್ತು ಶೇಕಡ ೧೦.೬೭ರಷ್ಟು ಪುರುಷ ಕಾರ್ಮಿಕರು ೧೫೦ ರೂಪಾಯಿಗಿಂತಲೂ ಅಧಿಕ ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ. ಮೇಲಿನ ಕೋಷ್ಟಕವನ್ನು ಗಮನಿಸಿದರೆ ಶೇಕಡ ೬೮ ಪುರುಷ ಕಾರ್ಮಿಕರು ೮೦ರಿಂದ ೧೦೦ ರೂಪಾಯಿ ಕೂಲಿ ಪಡೆಯುತ್ತಿದ್ದು ಕೇವಲ ಶೇಕಡ ೧೦.೬೭ರಷ್ಟು ಪುರುಷ ಕಾರ್ಮಿಕರು ೧೫೦ ರೂಪಾಯಿಗಿಂತಲೂ ಅಧಿಕ ಕೂಲಿ ಪಡೆಯುತ್ತಿರುವುದು ಕಂಡುಬರುತ್ತದೆ.

ಈ ಕೆಲಸದಲ್ಲಿ ಪುರುಷರಿಗೆ ಮತ್ತು ಮಹಿಳೆಯರಿಗೆ ನೀಡುವ ಕೂಲಿಯನ್ನು ಗಮನಿಸಿದರೆ ತಾರತಮ್ಯದಿಂದ ಕೂಡಿರುವುದು ಕಂಡುಬರುತ್ತದೆ. ಶೇಕಡ ೭೮ರಷ್ಟು ಅಂದರೆ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ೬೫ ರೂಪಾಯಿ ಕೂಲಿ ಪಡೆಯುತ್ತಿದ್ದರೆ. ಶೇಕಡ ೬೮ರಷ್ಟು ಅಧಿಕ ಸಂಖ್ಯೆಯ ಪುರುಷ ಕಾರ್ಮಿಕರು ೧೦೦ ರೂಪಾಯಿಯಿಂದ ೧೨೦ ರೂಪಾಯಿ ಕೂಲಿ ಪಡೆಯುತ್ತಿರುವುದು ಕಂಡುಬರುತ್ತದೆ. ಇಲ್ಲಿ ಮಹಿಳೆಯರ ಕೂಲಿಗಿಂತ ಪುರುಷರ ಕೂಲಿ ಎರಡು ಪಟ್ಟು ಅಥವಾ ಮೂರುಪಟ್ಟು ಅಧಿಕವಿರುವುದು ಕಂಡುಬರುತ್ತದೆ.

**ಕಾರ್ಮಿಕರ ಪೇಟೆ ಅಥವಾ ಮಾರುಕಟ್ಟೆ**

ಕೊಪ್ಪಳ ಜಿಲ್ಲೆಯ ಪ್ರತಿಯೊಂದು ತಾಲೂಕು ಕೇಂದ್ರ ಮತ್ತು ಹೋಬಳಿಗಳಲ್ಲಿ ಒಂದು ನಿಗದಿ ಪಡಿಸಿದ ಸ್ಥಳವಿದ್ದು ಅಲ್ಲಿಗೆ ಕಾರ್ಮಿಕರು ಬಂದು ಸೇರುತ್ತಾರೆ. ಅದನ್ನು ಕಾರ್ಮಿಕ ಪೇಟೆ ಎನ್ನುವರು. ಮಾರುಕಟ್ಟೆಯಲ್ಲಿ ಕೆಲಸದ ಉಸ್ತುವಾರಿ ನೋಡಿಕೊಳ್ಳುವ ಮೇಸ್ತ್ರಿಗಳು ತಮ್ಮ ಕೆಲಸದ ಬೇಡಿಕೆಗೆ ಅನುಗುಣವಾಗಿ ಕಾರ್ಮಿಕರನ್ನು ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ. ಕೆಲಸ ಸಿಗದ ಕಾರ್ಮಿಕರು ಮರಳಿ ಮನೆಗೆ ಹೊರಡುತ್ತಾರೆ. ಬಹುತೇಕ ಕಾರ್ಮಿಕರಿಗೆ ತಮ್ಮ ಕೆಲಸದ ಖಾತರಿ ಹಿಂದಿನ ದಿನವೆ ತಿಳಿದಿರುತ್ತದೆ. ಕೆಲಸದ ಬಗ್ಗೆ ಖಾತರಿ ಇಲ್ಲದವರಿಗೆ ಇಲ್ಲಿ ಕೆಲಸದ ಖಾತರಿಯಾಗುತ್ತದೆ.

ಕೃಷಿ ಮತ್ತು ನಿರ್ಮಾಣ ಕಾರ್ಯಗಳು ವಾರ ಪೂರ್ತಿ ದೊರೆಯುವದಿಲ್ಲ. ಕೆಲವು ಬಾರಿ ವಾರದಲ್ಲಿ ನಾಲ್ಕು ದಿನ ಸಿಕ್ಕರೆ ಕೆಲವು ಬಾರಿ ಐದು ದಿನ, ಕೆಲವು ಬಾರಿ ಮೂರು ದಿನ, ಕೆಲವು ಬಾರಿ ವಾರಪೂರ್ತಿ ಕೆಲಸ ದೊರೆಯುವ ಸಾಧ್ಯತೆ ಇರುತ್ತದೆ.

### ೬.೩.೫. ಕೃಷಿ ಮತ್ತು ಕಟ್ಟಡ ನಿರ್ಮಾಣದ ಕೆಲಸದ ಸ್ಥಿತಿ ಮತ್ತು ಕಲ್ಯಾಣ ಸೌಲಭ್ಯಗಳು

ಕೊಪ್ಪಳ ಜಿಲ್ಲೆಯ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಕೆಲಸದ ಸ್ಥಿತಿ ಮತ್ತು ಕಲ್ಯಾಣ ಸೌಲಭ್ಯಗಳನ್ನು ಗಮನಿಸಿದರೆ ಕಾರ್ಮಿಕರು ಕೆಲಸದ ಅಭದ್ರತೆ ೮ ಗಂಟೆಗಿಂತಲೂ ಅಧಿಕ ಅವಧಿಯವರೆಗೆ ದುಡಿಮೆ ಮತ್ತು ಕಲ್ಯಾಣ ಸೌಲಭ್ಯಗಳು ಅವರಿಗೆ ದೊರೆಯುತ್ತಿಲ್ಲದಿರುವುದು ಕಂಡುಬರುತ್ತದೆ.

೧. ಕೆಲಸದ ಸಮಯ

ಕೋಷ್ಟಕ ೬.೧೮

ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸದ ಸಮಯ

| ಕ್ರ. ಸಂ | ಕೃಷಿ ಕಾರ್ಮಿಕರ ಕೆಲಸದ ಸಮಯ | | | ಕಟ್ಟಡ ನಿರ್ಮಾಣ ಕಾರ್ಯದ ಕೆಲಸದ ಸಮಯ | | |
|---|---|---|---|---|---|---|
| | ಸಮಯ | ಕಾರ್ಮಿಕರ ಸಂಖ್ಯೆ | ಶೇಕಡವಾರು | ಸಮಯ | ಕಾರ್ಮಿಕರ ಸಂಖ್ಯೆ | ಶೇಕಡವಾರು |
| ೧. | ೬ ಗಂಟೆ | ೧೪ | ೯.೩೩ | ೬ ಗಂಟೆ | ೧೨ | ೮.೦೦ |
| ೨. | ೮ ಗಂಟೆ | ೧೨೭ | ೮೪.೬೭ | ೮ ಗಂಟೆ | ೯೩ | ೬೨.೦೦ |
| ೩. | ೧೦ ಗಂಟೆ | ೬ | ೪.೦೦ | ೧೦ ಗಂಟೆ | ೪೫ | ೩೦.೦೦ |
| ೪. | ೧೨ ಗಂಟೆ | ೩ | ೨.೦೦ | ೧೨ ಗಂಟೆ | ೦೦ | ೦೦.೦೦ |
| | ಒಟ್ಟು | ೧೫೦ | ೧೦೦% | ಒಟ್ಟು | ೧೫೦ | ೧೦೦% |




ಕೋಷ್ಟಕ ೬.೧೮ರಲ್ಲಿ ತೋರಿಸಿರುವಂತೆ ಅಧಿಕ ಸಂಖ್ಯೆಯ ಕೃಷಿ ಕಾರ್ಮಿಕರು ೮ಗಂಟೆ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಕೋಷ್ಟಕದಲ್ಲಿ ತೋರಿಸಿರುವಂತೆ ಶೇಕಡ ೯.೩೩ರಷ್ಟು ಮಹಿಳಾ

ಕೃಷಿ ಕಾರ್ಮಿಕರು ೬ ಗಂಟೆಯವರೆಗೆ ಕೆಲಸ ಮಾಡಿದರೆ ಶೇಕಡ ೮೪.೬೭ರಷ್ಟು ಮಹಿಳಾ ಕಾರ್ಮಿಕರು ೮ ಗಂಟೆವರೆಗೆ ಕೆಲಸ ಮಾಡುತ್ತಿದ್ದಾರೆ. ಕೇವಲ ಶೇಕಡ ೪ರಷ್ಟು ಮಹಿಳಾ ಕಾರ್ಮಿಕರು ೧೦ ಗಂಟೆ ವರೆಗೆ ಮತ್ತು ಶೇಕಡ ೨ ರಷ್ಟು ಮಹಿಳಾ ಕಾರ್ಮಿಕರು ೧೨ ಗಂಟೆ ವರೆಗೆ ಕೃಷಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡುಬರುತ್ತಿದೆ. ಮಹಿಳಾ ಕಾರ್ಮಿಕರು ಗುತ್ತಿಗೆ ಆಧಾರದ ಮೇಲೆ ಕೃಷಿ ಕಾರ್ಯ ಮಾಡುತ್ತಿರುವ ಸಂದರ್ಭದಲ್ಲಿ ಅವರು ೧೦ ಗಂಟೆ ಅಥವಾ ೧೨ ಗಂಟೆಗಳವರೆಗೆ ಕೆಲಸ ಮಾಡುತ್ತಿರುವುದು ಕಂಡುಬರುತ್ತಿದ್ದು ಉಳಿದಂತೆ ೮ ಗಂಟೆವರೆಗೆ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

ಕೋಷ್ಟಕ ೬.೧೮ರಲ್ಲಿ ನಿರ್ಮಾಣ ಕಾರ್ಮಿಕರ ಕೆಲಸದ ಅವಧಿಯನ್ನು ಗಮನಿಸಿದರೆ ಶೇಕಡ ೮ರಷ್ಟು ಕಾರ್ಮಿಕರು ೬ ಗಂಟೆಗಳವರೆಗೆ, ಶೇಕಡ ೬೨ ರಷ್ಟು ಕಾರ್ಮಿಕರು ೮ ಗಂಟೆಗಳವರೆಗೆ ಮತ್ತು ಶೇಕಡ ೩೦ ರಷ್ಟು ಕಾರ್ಮಿಕರು ೧೦ ಗಂಟೆಗಳವರೆಗೆ ದುಡಿಯುತ್ತಿರುವುದು ಕಂಡುಬರುತ್ತದೆ. ಕಟ್ಟಡ ನಿರ್ಮಾಣ ಕೆಲಸದಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಶೇಕಡ ೬೨ ರಷ್ಟು ೮ ಗಂಟೆಗಳವರೆಗೆ ದುಡಿಯುತ್ತಿರುವುದು ಕಂಡುಬರುತ್ತಿದೆ. ಶೇಕಡ ೩೦ ರಷ್ಟು ಕಾರ್ಮಿಕರು ಮಾತ್ರ ೧೦ ಗಂಟೆಗಳವರೆಗೆ ದುಡಿಯುತ್ತಿರುವುದು ತಿಳಿದುಬರುತ್ತದೆ. ಕಟ್ಟಡ ನಿರ್ಮಾಣ ಕೆಲಸ ನಡೆಯುವಂತಹ ಸಮಯದಲ್ಲಿ ಅಗತ್ಯಕ್ಕಿಂತ ಅಧಿಕ ಸಿಮೆಂಟ್ ಮತ್ತು ಉಸುಕನ್ನು ಕಲೆಸಿದ ಸಂದರ್ಭದಲ್ಲಿ ಕಾರ್ಮಿಕರು ಅದು ಮುಕ್ತಾಯವಾಗುವವರೆಗೂ ಕೆಲಸ ಮಾಡಬೇಕಾಗುತ್ತದೆ. ಇದರಿಂದಾಗಿ ಅವರ ಕೆಲಸದ ಸಮಯ ೮ ಗಂಟೆಗಿಂತಲೂ ಅಧಿಕವಾಗುವ ಸಾಧ್ಯತೆ ಇರುತ್ತದೆ.

**೨. ಕೆಲಸದ ಮಧ್ಯೆ ಬಿಡುವು ಅಥವಾ ವಿರಾಮ**

**ಕೋಷ್ಟಕ ೬.೧೯**

**ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸದ ಮಧ್ಯೆ ಬಿಡುವು ಅಥವಾ ವಿರಾಮ**

| ಕ್ರ.ಸಂ | ವಿರಾಮ ಪಡೆಯುವ ವಿವರ | ಒಟ್ಟು ಕಾರ್ಮಿಕರು | ಶೇಕಡವಾರು |
|---|---|---|---|
| ೧. | ವಿರಾಮ ನೀಡುವುದಿಲ್ಲ | ೯೪ | ೩೧.೩೩ |
| ೨. | ವಿರಾಮ ನೀಡುತ್ತಾರೆ | ೩೮ | ೧೨.೬೭ |
| ೩. | ನಾವೇ ಕೆಲಸದ ಮಧ್ಯೆ ಬಿಡುವಿಗೆ ಅನುಕೂಲ ಮಾಡಿಕೊಳ್ಳುತ್ತದೆ | ೧೬೮ | ೫೬.೦೦ |
| ಒಟ್ಟು | | ೩೦೦ | ೧೦೦% |

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಮೀಕ್ಷೆಯನ್ನು ಗಮನಿಸಿದರೆ ಕೃಷಿ ಮತ್ತು ನಿರ್ಮಾಣ ಕಾರ್ಮಿಕರಿಗೆ ಕೆಲಸದ ಮಧ್ಯೆ ವಿರಾಮ ಅಥವಾ ಬಿಡುವು ದೊರೆಯುತ್ತಿಲ್ಲವೆಂಬ ಅಂಶ ವ್ಯಕ್ತವಾಗುತ್ತದೆ.

ಕೆಲಸದ ಮಧ್ಯೆ ವಿರಾಮ ದೊರೆಯದಿದ್ದರಿಂದ ಅವರು ತಂಬಾಕು ಸೇವಿಸುವ ನೆಪದಲ್ಲಿ ಮತ್ತು ಎಲೆ ಅಡಿಕೆ ತಿನ್ನುವ ನೆಪದಲ್ಲಿ ವಿರಾಮವನ್ನು ಪಡೆಯುತ್ತಿರುವ ಅಂಶ ಕಂಡುಬರುತ್ತದೆ. ಕೋಷ್ಟಕ ೬.೧೯ನ್ನು ಗಮನಿಸಿದರೆ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ದೊರೆಯುವ ಬಿಡುವಿ ವಿವರ ತಿಳಿಯುತ್ತದೆ. ಕಾರ್ಮಿಕರಲ್ಲಿ ಶೇಕಡ ೩೧.೩೩ರಷ್ಟು ಕಾರ್ಮಿಕರು ವಿರಾಮ ನೀಡುವದಿಲ್ಲ ಎಂಬ ಅಭಿಪ್ರಾಯ ವ್ಯಕ್ತ ಪಡಿಸಿದರೆ, ಕೇವಲ ಶೇಕಡ ೧೨.೬೭ರಷ್ಟು ಕಾರ್ಮಿಕರು ಕೆಲಸದ ಮಧ್ಯ ವಿರಾಮ ದೊರೆಯುತ್ತದೆ ಎಂಬ ಅಭಿಪ್ರಾಯವನ್ನು ಮತ್ತು ಶೇಕಡ ೫೬ರಷ್ಟು ಕಾರ್ಮಿಕರು ನಾವೇ ಸ್ವತಃ ಕೆಲಸದ ಮಧ್ಯೆ ಬಿಡುವು ಮಾಡಿಕೊಳ್ಳುತ್ತೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರುವುದು ಕಂಡುಬರುತ್ತದೆ.

ಮಹಿಳೆಯರು ಕೆಲಸದ ಮಧ್ಯೆ ವಿರಾಮ ಪಡೆಯುತ್ತಿದ್ದರೆ ಮೇಸ್ತ್ರಿಗಳು ಮತ್ತು ಮೇಷನ್‌ಗಳು ಅವರನ್ನು ಬೈಯ್ಯುತ್ತಿರುವ ಅಂಶ ಕ್ಷೇತ್ರ ಸಮೀಕ್ಷೆಯ ಸಂದರ್ಭದಲ್ಲಿ ಕಂಡುಬಂದಿದೆ.

**೩. ಕೆಲಸದ ಅನುಭವ ಮತ್ತು ಬಡ್ತಿ**

ಕೆಲಸದ ಅನುಭವ ಮತ್ತು ಬಡ್ತಿಯ ವಿಷಯ ಕೃಷಿ ಕಾರ್ಮಿಕರಿಗೆ ಅಷ್ಟೊಂದು ಅನ್ವಯಿಸುವುದಿಲ್ಲ ಯಾಕೆಂದರೆ ಮಾರುಕಟ್ಟೆಯ ಹಂತವನ್ನು ಬಿಟ್ಟು ಉಳಿದ ಎಲ್ಲ ಕೆಲಸಗಳನ್ನು ಪುರುಷರೊಂದಿಗೆ ಸಮಾನವಾಗಿ ಮಾಡುತ್ತಾರೆ. ಆ ಕೆಲಸದ ಬಗ್ಗೆ ಅವರಿಗೆ ಎಷ್ಟೇ ಅನುಭವವಿದ್ದರೂ ಅವರಿಗೆ ಕೆಲಸದಲ್ಲಿ ಬಡ್ತಿಯ ಪ್ರಶ್ನೆಯೇ ಬರುವುದಿಲ್ಲ. ಹೀಗಾಗಿ ಈ ಅಂಶ ಕೃಷಿ ಕಾರ್ಮಿಕರಿಗೆ ಅಷ್ಟಾಗಿ ಅನ್ವಯಿಸುವುದಿಲ್ಲ.

**ಕೋಷ್ಟಕ ೬.೨೦**

**ಕೆಲಸದ ಅನುಭವ ಕಟ್ಟಡ ನಿರ್ಮಾಣ ಕಾರ್ಯಕ್ಕೆ ಸಂಬಂಧಿಸಿದಂತೆ**

| ಕ್ರ.ಸಂ | ಕೆಲಸದ ಅನುಭವ ವರ್ಷಗಳಲ್ಲಿ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ೨೦ ವರ್ಷಕ್ಕಿಂತ ಅಧಿಕ | ೨೨ | ೧೪.೬೭ |
| ೨. | ೧೫ ವರ್ಷ | ೨೮ | ೧೮.೬೭ |
| ೩. | ೧೦ ವರ್ಷ | ೪೨ | ೨೮.೦೦ |
| ೪. | ೫ ವರ್ಷ | ೩೦ | ೨೦.೦೦ |
| ೫. | ೧-೨ವರ್ಷ | ೨೩ | ೧೫.೩೩ |
| ೬. | ಅನುಭವವಿಲ್ಲ | ೦೫ | ೩.೩೩ |
| ಒಟ್ಟು | | ೧೫೦ | ೧೦೦% |




**ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರ ಕೆಲಸದ ಅನುಭವ**

ಕೋಷ್ಟಕ ೬.೨೦ನ್ನು ಗಮನಿಸಿದರೆ ಕಟ್ಟಡ ನಿರ್ಮಾಣ ಕಾರ್ಯದ ಬಗ್ಗೆ ಮಹಿಳಾ ಕಾರ್ಮಿಕರಿಗೆ ಕನಿಷ್ಟ ೫ ವರ್ಷದಿಂದ ೨೦ ವರ್ಷಕ್ಕಿಂತಲೂ ಹೆಚ್ಚು ಅನುಭವ ಹೊಂದಿರುವುದು ಕಂಡುಬರುತ್ತದೆ. ಶೇಕಡ ೧೪.೬೭ರಷ್ಟು ಮಹಿಳಾ ಕಾರ್ಮಿಕರು ೨೦ ವರ್ಷಕ್ಕಿಂತ ಅಧಿಕ ಅನುಭವ ಪಡೆದವರು, ಶೇಕಡ ೧೮.೬೭ರಷ್ಟು ಮಹಿಳಾ ಕಾರ್ಮಿಕರು ೧೫ ವರ್ಷ ಅನುಭವ ಹೊಂದಿದವರು, ಶೇಕಡ ೨೮ರಷ್ಟು ಕಾರ್ಮಿಕರು ೧೦ ವರ್ಷ ಅನುಭವ ಹೊಂದಿದವರು, ಶೇಕಡ ೨೦ರಷ್ಟು ಕಾರ್ಮಿಕರು ೫ ವರ್ಷ ಅನುಭವ ಹೊಂದಿರುವುದು, ಶೇಕಡ ೧೫.೩೩ ರಷ್ಟು ಕಾರ್ಮಿಕರು ೧ರಿಂದ ೨ವರ್ಷ ಅನುಭವ ಹೊಂದಿದವರು ಮತ್ತು ಶೇಕಡ ೩.೩೩ ರಷ್ಟು ಕಾರ್ಮಿಕರು ಅನುಭವ ಇಲ್ಲದವರು ಇರುವುದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ.

ಸಮೀಕ್ಷೆ ನಡೆಸಿದ ಕೋಷ್ಟಕವನ್ನು ನೋಡಿದರೆ ಅಧಿಕ ಸಂಖ್ಯೆಯ ಮಹಿಳೆಯರು ಕಟ್ಟಡ ನಿರ್ಮಾಣ ಕೆಲಸದ ಬಗ್ಗೆ ದೀರ್ಘ ಅವಧಿಯ ಅನುಭವ ಹೊಂದಿರುವುದು ಕಂಡುಬರುತ್ತದೆ. ಇದು ಅವರಲ್ಲಿ ಕಟ್ಟಡ ನಿರ್ಮಾಣ ಹಂತದ ಎಲ್ಲ ಕೆಲಸಗಳನ್ನು ಮಾಡುವ ಸಾಮರ್ಥ್ಯ ಹೊಂದಿರುತ್ತಾರೆ ಎಂಬ ಅಂಶವನ್ನು ಬಿಂಬಿಸುತ್ತದೆ. ಆದರೂ ಅವರಿಗೆ ಉನ್ನತ ಕೆಲಸ ಅಥವಾ ಮೇಲಿನ ಹಂತದ ಕೆಲಸ ಮಾಡುವದಕ್ಕೆ ಮತ್ತು ಅಧಿಕ ಆದಾಯ ಪಡೆಯುವುದಕ್ಕೆ ಈ ಪುರುಷಶಾಹಿ ಸಮಾಜ ಬಿಡುತ್ತಿಲ್ಲ. ಅದಕ್ಕೆ ಅನೇಕ ಕಾರಣಗಳು ಇರುವುದು ಕಂಡುಬರುತ್ತಿವೆ.

ಕೋಷ್ಟಕ ೬.೨೧

ಕೆಲಸದಲ್ಲಿ ಬಡ್ತಿ ನೀಡದೇ ಇರುವುದಕ್ಕೆ ಕಾರಣಗಳು

| ಕ್ರ.ಸಂ | ಕಾರಣಗಳು | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಹೆಂಗಸರೆಂಬ ಕಾರಣ | ೦೯ | ೬.೦೦ |
| ೨. | ಮೇಲಿನ ಹಂತದ ಕೆಲಸ ಮಾಡಲು ಆಸಕ್ತಿ ಇಲ್ಲ | ೧೧ | ೭.೩೩ |
| ೩. | ಮೇಲಿನ ಹಂತದ ಕೆಲಸ ಬರುವುದಿಲ್ಲ | ೩೩ | ೨೨.೦೦ |
| ೪. | ಮೇಷನ್ ಮತ್ತು ಮೇಸ್ತ್ರಿಗಳು ಬಿಡುವುದಿಲ್ಲ | ೯೭ | ೬೪.೬೭ |
| | ಒಟ್ಟು | ೧೫೦ | ೧೦೦% |




**ಮಹಿಳಾ ಕಟ್ಟಡ ಕಾರ್ಮಿಕರಿಗೆ ಕೆಲಸದಲ್ಲಿ ಬಡ್ತಿ ನೀಡದೆ ಇರುವುದಕ್ಕೆ ಕಾರಣಗಳು**

ಕಟ್ಟಡ ನಿರ್ಮಾಣ ಕೆಲಸದ ಬಗ್ಗೆ ಮಹಿಳಾ ಕಾರ್ಮಿಕರಿಗೆ ಎಷ್ಟು ಅನುಭವ ಇದ್ದರೂ ಅವರಿಗೆ ಮೇಲಿನ ಹಂತದ ಕೆಲಸ ನೀಡಲು ನಿರಾಕರಿಸಲಾಗುತ್ತದೆ. ಅದಕ್ಕೆ ಅನೇಕ ಕಾರಣಗಳಿದ್ದು ಅದಕ್ಕೆ ಮಹಿಳೆಯರ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಬಡ್ತಿ ನೀಡದೇ ಇರುವುದಕ್ಕೆ ಶೇಕಡ ೬ರಷ್ಟು ಮಹಿಳಾ ಕಾರ್ಮಿಕರು ಹೆಂಗಸರೆಂಬ ಕಾರಣ ಎಂದು, ಶೇಕಡ ೭.೩೩ರಷ್ಟು ಕಾರ್ಮಿಕರು ಮೇಲಿನ ಹಂತದ ಕೆಲಸ ಮಾಡಲು ಆಸಕ್ತಿ ಇಲ್ಲವೆಂದು, ಶೇಕಡ ೨೨.ರಷ್ಟು ಕಾರ್ಮಿಕರು ಮೇಲಿನ ಕೆಲಸ ಬರುವುದಿಲ್ಲವೆಂದು ಮತ್ತು ಶೇಕಡ ೬೪.೬೭ರಷ್ಟು ಕಾರ್ಮಿಕರು ಮೇಷನ್ ಮತ್ತು ಮೇಸ್ತ್ರಿಗಳು ಬಿಡುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮೇಲಿನ ಅಂಶವನ್ನು ಗಮನಿಸಿದರೆ ಈ ಪುರುಷಶಾಹಿ ಸಮಾಜ ಮಹಿಳೆಯರಲ್ಲಿ ಒಂದು ಮಾನಸಿಕ ಸಿದ್ಧತೆಯನ್ನು ತುಂಬಿರುವುದು ಕಂಡುಬರುತ್ತದೆ. ಅಂದರೆ ಮಹಿಳೆಯರಿಗೆ ಉನ್ನತ ಹಂತದ ಕೆಲಸ

ನಮ್ಮದಲ್ಲ ಅದು ಪುರುಷರ ಕೆಲಸ ಎಂಬ ಭಾವನೆಯನ್ನು ಮಹಿಳೆಯರಲ್ಲಿ ಬೆಳೆಸಿದೆ. ಅಲ್ಲದೆ ಕೆಲಸದಲ್ಲಿ ಪುರುಷ ಕಾರ್ಮಿಕರು ಪ್ರಬಲರಾಗಿರುವುದರಿಂದ ಮಹಿಳೆಗೆ ಉನ್ನತ ಹಂತದ ಕೆಲಸ ಮಾಡಲು ಬಿಡುವುದಿಲ್ಲ ಅನುಭವ ಹೊಂದಿದ ಮಹಿಳಾ ಕಾರ್ಮಿಕರೇ ಇಡೀ ಕಟ್ಟಡವನ್ನು ಕಟ್ಟಬಲ್ಲರು ಎಂದು 'ಸೇವಾ' (SEWN) ಸಂಸ್ಥೆಯವರ ನಿರ್ದೇಶನ ನೋಡಿದರೆ ಮಹಿಳೆಯರು ಕಟ್ಟಡ ನಿರ್ಮಾಣದ ಎಲ್ಲ ಹಂತಗಳ ಕೆಲಸಗಳನ್ನು ಮಾಡಲು ಸಮರ್ಥರು ಎಂಬುದು ಸ್ಪಷ್ಟವಾಗುತ್ತದೆ.

೪. ರಾತ್ರಿ ಪಾಳೆಯ ಕೆಲಸ

ಕೋಷ್ಟಕ ೬.೨೨

ರಾತ್ರಿ ಪಾಳೆಯ ಕೆಲಸ

| ರಾತ್ರಿ ಪಾಳೆಯ ಕೆಲಸ ಮಾಡುವವರ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|
| ಮಾಡುತ್ತೇವೆ | ೨೬ | ೮.೬೭ |
| ಮಾಡುವುದಿಲ್ಲ | ೨೭೪ | ೯೧.೩೩ |
| ಒಟ್ಟು | ೩೦೦ | ೧೦೦% |

ಕೃಷಿ ಮತ್ತು ಕಟ್ಟಡ ನಿರ್ಮಾಣದ ಮಹಿಳಾ ಕಾರ್ಮಿಕರು ಬಡತನದ ಬೇಗೆಯನ್ನು ತಾಳಲಾರದೆ ಅಧಿಕ ಆದಾಯ ಹೊಂದುವ ಉದ್ದೇಶದಿಂದ ರಾತ್ರಿ ಪಾಳೆಯ ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತದೆ. ಕೃಷಿ ಕಾರ್ಮಿಕರು ಸುಗ್ಗಿಯ ಸಮಯದಲ್ಲಿ ಫಸಲನ್ನು ರಾಶಿ ಮಾಡುವಾಗ, ತೂರುವಾಗ ರಾತ್ರಿ ಪಾಳಿ ಕೆಲಸಕ್ಕೆ ಹೋಗುತ್ತಾರೆ. ಕಟ್ಟಡ ನಿರ್ಮಾಣ ಕಾರ್ಮಿಕರು ತಮಗೆ ಅನುಕೂಲವಾದಾಗ ಹಾಗೂ ರಾತ್ರಿ ಪಾಳಿ ಕೆಲಸ ಲಭ್ಯವಿದ್ದಾಗ ರಾತ್ರಿ ಪಾಳಿ ಕೆಲಸಕ್ಕೆ ಹೋಗುತ್ತಾರೆ. ರಾತ್ರಿ ಪಾಳಿ ಕೆಲಸಕ್ಕೆ ಕೂಲಿಯಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ ಆದರೆ ಮಾಡಬೇಕಾದ ಕೆಲಸ ಮುಗಿದ ನಂತರ ಮನೆಗೆ ತೆರಳುತ್ತಾರೆ. ಮಾಡುವ ಕೆಲಸ ಬೇಗ ಮುಗಿದರೆ ಬೇಗ ತೆರಳುತ್ತಾರೆ. ಕೋಷ್ಟಕ ೬.೨೨ನ್ನು ಗಮನಿಸಿದರೆ ರಾತ್ರಿ ಪಾಳಿ ಕೆಲಸಕ್ಕೆ ಹೊರಡುವ ಪ್ರಮಾಣ ಅತ್ಯಂತ ಕಡಿಮೆ ಇರುವುದು ಕಂಡುಬರುತ್ತದೆ. ಶೇಕಡ ೮.೬೭ರಷ್ಟು ಕಾರ್ಮಿಕರು ಮಾತ್ರ ರಾತ್ರಿ ಪಾಳಿ ಕೆಲಸ ಮಾಡುತ್ತಿದ್ದು ಉಳಿದ ಶೇಕಡ ೯೧.೩೩ರಷ್ಟು ಕಾರ್ಮಿಕರು ರಾತ್ರಿ ಪಾಳಿ ಕೆಲಸ ಮಾಡಲು ಇಷ್ಟಪಡುತ್ತಿಲ್ಲದಿರುವುದು ಕಂಡುಬರುತ್ತದೆ.

೫. ಕೆಲಸದ ಸಂದರ್ಭದಲ್ಲಿ ಪುರುಷರ ದಬ್ಬಾಳಿಕೆ

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ಮಹಿಳಾ ಕಾರ್ಮಿಕರ ಮೇಲೆ ದಬ್ಬಾಳಿಕೆ, ದೌರ್ಜನ್ಯಗಳು ನಡೆಯುತ್ತಿರುವುದು ಕಂಡುಬರುತ್ತಿದೆ. ಗ್ರಾಮೀಣ ಭಾಗದಲ್ಲಿ ಇಂದಿಗೂ ಕೂಡ ಗೌಡಿಕೆ

ಪದ್ಧತಿ, ನಾಯಕ ಪದ್ಧತಿ ಮತ್ತು ಜಮಿನ್ದಾರಿ ಪದ್ಧತಿಗಳು ಆಚರಣೆಯಲ್ಲಿರುವುದು ಕಂಡುಬರುತ್ತದೆ. ಇಂತಹ ಅಧಿಕಾರಶಾಹಿ ಮತ್ತು ಶ್ರೀಮಂತರ ಜಮೀನಿನಲ್ಲಿ ಕೆಲಸಕ್ಕೆ ಹೋದ ಕೃಷಿ ಕಾರ್ಮಿಕರು ಅವರಿಂದ ನಾನಾ ರೀತಿಯ ದಬ್ಬಾಳಿಕೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ಈ ಜಮೀನುದಾರರ ಹೊಲದಲ್ಲಿ ೮ ಗಂಟೆಗಿಂತಲೂ ಅಧಿಕ ಸಮಯದವರೆಗೆ ಕೆಲಸ. ಕಡಿಮೆ ಕೂಲಿ, ಕೂಲಿ ರಹಿತ ಕೆಲಸ ಸಣ್ಣ ತಪ್ಪಿಗೂ ಅವಾಚ್ಯ ಶಬ್ದಗಳಿಂದ ಬೈಸಿಕೊಳ್ಳುವುದು, ಕೃಷಿ ಕಾರ್ಮಿಕರಾಗಿ ಸಂಬಳ(ಜೀತ) ಇದ್ದಂತ ಸಂದರ್ಭದಲ್ಲಿ ಒಡೆತನವನ್ನು ಸಹಿಸ ಬೇಕಾಗುತ್ತದೆ. ಜಮೀನುದಾರರು ಹಾಗೂ ಗೌಡರು ಮಹಿಳಾ ಕೃಷಿ ಕಾರ್ಮಿಕರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿದ್ದಾರೆ. ಇದರ ಪರಿಣಾಮವಾಗಿ ಇಂದಿಗೂ ಕೊಪ್ಪಳ ಜಿಲ್ಲೆಯ ಕೆಲವು ಪಟ್ಟಣ ಮತ್ತು ಗ್ರಾಮಗಳಲ್ಲಿ ಬಸವಿ ಅಥವಾ ದೇವದಾಸಿ ಪದ್ಧತಿ ಇರುವುದು ಕಂಡುಬರುತ್ತದೆ. ಈ ಪದ್ಧತಿಗೆ ಒಳಗಾದ ಕೆಲವು ಮಹಿಳೆಯ ಏಡ್ಸ್ ಎಂಬ ಭಯಾನಕ ಮಹಾಮಾರಿಗೆ ಒಳಗಾಗಿ ಸಾವನ್ನಪ್ಪಿದ್ದರೆ ಕೆಲವರು ಆರೋಗ್ಯದಿಂದ ನರಳುತ್ತಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಪುರುಷರಿಂದ ಅನೇಕ ರೀತಿಯ ದಬ್ಬಾಳಿಕೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ಇಲ್ಲಿ ಮಹಿಳಾ ಕಾರ್ಮಿಕರ ಮೇಲೆ ಗಂಡಾಳುಗಳು ಮತ್ತು ಮೇಷನ್ (ಗಾರೆಕೆಲಸದವ) ದಬ್ಬಾಳಿಕೆ ನಡೆಸುತ್ತಾರೆ. ಮೇಸ್ತ್ರಿಗಳು ಕೂಲಿಯನ್ನು ತಡವಾಗಿ ನೀಡುವ ಮೂಲಕ ತೊಂದರೆ ನೀಡಿದರೆ, ಮೇಷನ್‌ಗಳು ಮಹಿಳಾ ಕಾರ್ಮಿಕರಿಗೆ ಅವಾಚ್ಯ ಶಬ್ದಗಳಿಂದ ಬಯ್ಯುವುದು, ಕೆಲವು ಬಾರಿ ಹೊಡೆಯುವುದು ಮತ್ತೆ ಕಾಮುಕ ದೃಷ್ಟಿಯಿಂದ ನೋಡುವುದು ಕಂಡುಬರುತ್ತಿದೆ. ಆದರೆ ಇದರ ಪ್ರಮಾಣ ಕಡಿಮೆ.

**ಕೋಷ್ಟಕ ೬.೨೩**

**ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಮೇಲೆ ನಡೆಯುವ ದಬ್ಬಾಳಿಕೆ**

| ಕ್ರ.ಸಂ | ದಬ್ಬಾಳಿಕೆಯ ಸ್ವರೂಪ | ದಬ್ಬಾಳಿಕೆಗೆ ಒಳಗಾಗುವ ಮಹಿಳಾ ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಲೈಂಗಿಕ ಕಿರುಕುಳ | ೧೭ | ೫.೬೬ |
| ೨. | ಅವಾಚ್ಯ ಶಬ್ದಗಳಿಂದ ಬಯ್ಯುವುದು | ೨೨೨ | ೭೪.೦೦ |
| ೩. | ಹೊಡೆಯುವುದು | ೧೨ | ೦೪.೦೦ |
| ೪. | ಸರಿಯಾಗಿ ಕೂಲಿ ನೀಡದೇ ಇರುವುದು | ೪೯ | ೧೬.೩೩ |
| | ಒಟ್ಟು | ೩೦೦ | ೧೦೦ |




**ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಮೇಲೆ ನಡೆಯು ಪುರುಷರ ದಬ್ಬಳಿಕೆ ಪ್ರಮಾಣ**

ಕೋಷ್ಟಕ ೭.೨೩ ಮತ್ತು ಪೈನಕ್ಷೆಯನ್ನು ಗಮನಿಸಿದರೆ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಮೇಲೆ ನಡೆಯುತ್ತಿರುವ ಪುರುಷ ಕಾರ್ಮಿಕರ ದಬ್ಬಾಳಿಕೆ ತಿಳಿದುಬರುತ್ತದೆ. ಶೇಕಡ ೫.೬೬ರಷ್ಟು ಮಹಿಳಾ ಕಾರ್ಮಿಕರು ಪುರುಷರಿಂದ ಕೆಲಸದ ಸಮಯದಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಿದ್ದರೆ, ಶೇಕಡ ೭೪ರಷ್ಟು ಮಹಿಳಾ ಕಾರ್ಮಿಕರು ಪುರುಷ ಕಾರ್ಮಿಕರು, ಜಮೀನ್ದಾರ್ ಮತ್ತು ಮೇಷನ್ ಹಾಗೂ ಮೇಸ್ತ್ರಿಗಳಿಂದ ಅವಾಚ್ಯ ಶಬ್ದಗಳಲ್ಲಿ ಬೈಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಕೇವಲ ಶೇಕಡ ೪ರಷ್ಟು ಮಹಿಳಾ ಕಾರ್ಮಿಕರು ಪುರುಷ ಕಾರ್ಮಿಕರಿಂದ ಅಥವಾ ಮೇಲೆ ತಿಳಿಸಿದವರಿಂದ ಹೊಡೆತಗಳನ್ನು ತಿನ್ನುತ್ತಿದ್ದರೆ ಶೇಕಡ ೧೬.೩೩ರಷ್ಟು ಮಹಿಳಾ ಕಾರ್ಮಿಕರು ಸರಿಯಾದ ಸಮಯಕ್ಕೆ ಕೂಲಿ ದೊರೆಯದೆ ತೊಂದರೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ಮೇಲಿನ ಅಂಕಿ ಸಂಖ್ಯೆಗಳಲ್ಲಿ ಶೇಕಡ ೭೪ರಷ್ಟು ಮಹಿಳಾ ಕಾರ್ಮಿಕರು ಪುರುಷರಿಂದ ಅವಾಚ್ಯ ಶಬ್ದಗಳಲ್ಲಿ ಬೈಯಿಸಿಕೊಳ್ಳುತ್ತಿರುವ ಅಂಶವನ್ನು ಗಮನಿಸಿದರೆ ಬಡತನದ ಮಹಿಳಾ ಕಾರ್ಮಿಕರ ಬಗ್ಗೆ ಪುರುಷಶಾಹಿ ಸಮಾಜ ಹೊಂದಿರುವ ದೋರಣೆ ಸ್ಪಷ್ಟವಾಗುತ್ತದೆ.ಪಾಂಡಿಚೆರಿಯಲ್ಲಿ ನಡೆದ ಒಂದು ಅಧ್ಯಯನವು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ದುಡಿಯುವ ಮಹಿಳೆಯರಲ್ಲಿ ಶೇಕಡ ೮೦ರಷ್ಟು ಮಹಿಳೆಯರು ಲೈಂಗಿಕ ಕಿರುಕುಳಕ್ಕೆ ಒಳಗಾಗುತ್ತಾರೆ ಎಂಬ ಅಂಶವನ್ನು ತಿಳಿಸುತ್ತದೆ.

**೬. ಅಪಘಾತಗಳು ಮತ್ತು ಪರಿಹಾರ**

ಕೃಷಿ ಮತ್ತು ನಿರ್ಮಾಣ ಕಾರ್ಯಗಳಲ್ಲಿ ಅಪಘಾತಗಳು ಸಂಭವಿಸುವುದು ಸರ್ವೇಸಾಮಾನ್ಯ. ಆದರೆ ಅಪಘಾತದ ತೀವ್ರತೆ ಮಾತ್ರ ಬಹಳ ಕಡಿಮೆ ಇದ್ದು ಸಣ್ಣ ಪುಟ್ಟ ಗಾಯಗಳು ಆಗಿರುವುದೇ ಹೆಚ್ಚು. ಗಂಭೀರ ಪ್ರಮಾಣದ ಅಪಘಾತ ಮತ್ತು ಸಾವುಗಳು ಸಂಭವಿಸಿರುವಂತ ಘಟನೆಗಳು ಕಡಿಮೆ ಆದರೆ ಕೆಲಸಕ್ಕಾಗಿ ಬೇರೆ ಊರುಗಳಿಗೆ ಟ್ರ್ಯಾಕ್ಟರ್ ಅಥವಾ ಟಾಂಟಾಂಗಳಲ್ಲಿ ಸಂಚರಿಸುವಾಗ ಅಪಘಾತಗಳಾಗಿರುವುದು ಕಂಡುಬರುತ್ತಿದ್ದು ಅದರ ಪ್ರಮಾಣ ಬಹಳ ಕಡಿಮೆ ಇದೆ. ಕ್ಷೇತ್ರಕಾರ್ಯದ ಸಮೀಕ್ಷೆಯ ಮಾಹಿತಿ

ತಿಳಿಸುವಂತೆ ಗಂಗಾವತಿ ತಾಲೂಕಿನ ಕನಕಗಿರಿ ಗ್ರಾಮ ಮತ್ತು ಅರಳಹಳ್ಳಿ ಗ್ರಾಮಗಳಲ್ಲಿ ಮಹಿಳಾ ಕೃಷಿ ಕಾರ್ಮಿಕರಿಬ್ಬರೂ ಕೃಷಿ ಕೆಲಸ ಮುಗಿಸಿಕೊಂಡು ಮರಳಿ ಬರುವಾಗ ಟ್ರ್ಯಾಕ್ಟರ್ ಅಪಘಾತದಲ್ಲಿ ಅಸುನೀಗಿದರು. ಇವರ ಕುಟುಂಬಕ್ಕೆ ನೀಡಬೇಕಾದ ಪರಿಹಾರವನ್ನು ಜಮೀನುದಾರರಾಗಲಿ ಅಥವಾ ಸರಕಾರವಾಗಲಿ ಇನ್ನೂ ನೀಡುತ್ತಿಲ್ಲ. ಆದರೆ ಸರಕಾರದಿಂದ ಭರವಸೆ ಮಾತ್ರ ಬರುತ್ತಿದೆ. ಅಪಘಾತದ ಕೇಸು ಹಿಡಿದ ವಕೀಲರ ಮತ್ತು ನಾಯಕರ ಜೇಬು ಮಾತ್ರ ತುಂಬುತ್ತಿದೆ.

ಕೋಷ್ಟಕ ೬.೨೮

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಅಪಘಾತಗಳ ಪ್ರಮಾಣ

| ಕ್ರ ಸಂ. | ಮಹಿಳಾ ಕೃಷಿ ಕಾರ್ಮಿಕರು | | | ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು | | |
|---|---|---|---|---|---|---|
| | ಅಪಘಾತಗಳ ಸ್ವರೂಪ | ಕಾರ್ಮಿಕರ ಸಂಖ್ಯೆ | ಶೇಕಡ ವಾರು | ಅಪಘಾತಗಳ ಸ್ವರೂಪ | ಕಾರ್ಮಿಕರ ಸಂಖ್ಯೆ | ಶೇಕಡ ವಾರು |
| ೧. | ಕೈಬೆರಳಿಗೆ ಗಾಯ ಮತ್ತು ರಕ್ತಸ್ರಾವ | ೬೭ | ೪೪.೬೭ | ಮೇಲಿಂದ ಬಿದ್ದು | ೧೭ | ೧೧.೩೩ |
| ೨. | ಕಾಲುಗಳಿಗೆ ಗಾಯ ಮತ್ತು ರಕ್ತಸ್ರಾವ | ೫೧ | ೩೪.೦೦ | ನಿರ್ಮಾಣ ಹಂತದ ಕಟ್ಟಡ ಕುಸಿತ | ೧೩ | ೮.೬೭ |
| ೩. | ಸೊಂಟ ನೋವು | ೨೮ | ೧೮.೬೭ | ಇಟ್ಟಂಗಿ ಅಥವಾ ಕಲ್ಲಿಗಳಿಂದ | ೧೧೨ | ೭೪.೬೭ |
| ೪. | ಹಾವು ಕಡಿತ | ೦೧ | ೦೦.೬೬ | | | |
| ೫. | ವಾಹನ ಅಪಘಾತ | ೦೨ | ೦೨.೦೦ | ವಾಹನ ಅಪಘಾತ | ೦೮ | ೫.೩೩ |
| | ಒಟ್ಟು | ೧೫೦ | ೧೦೦% | ಒಟ್ಟು | ೧೫೦ | ೧೦೦% |

ಕೋಷ್ಟಕ ೬.೨೮ನ್ನು ಗಮನಿಸಿದರೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ಸಂಭವಿಸುವ ಅಪಘಾತಗಳ ವಿವರ ಮತ್ತು ಪ್ರಮಾಣ ಸ್ಪಷ್ಟವಾಗುತ್ತದೆ. ಕೃಷಿ ಕಾರ್ಮಿಕರಲ್ಲಿ ಶೇಕಡ ೪೪.೬೭ರಷ್ಟು ಕಾರ್ಮಿಕರು ಕೈಗಳಿಗೆ ಗಾಯ ಮತ್ತು ರಕ್ತಸ್ರಾವ ಮಾಡಿಕೊಳ್ಳುತ್ತಿರುವುದು ಕಂಡುಬಂದರೆ, ಶೇಕಡ ೩೪ರಷ್ಟು ಕಾರ್ಮಿಕರು ಕಾಲುಗಳಿಗೆ ಗಾಯ ಮಾಡಿಕೊಂಡು ರಕ್ತಸ್ರಾವದಿಂದ ನರಳುತ್ತಿರುವುದು ಕಂಡುಬರುತ್ತದೆ. ಕೇವಲ ಶೇಕಡ ೧೮.೬೭ರಷ್ಟು ಕಾರ್ಮಿಕರು ಸೊಂಟ ನೋವಿನಿಂದ ನರಳಿದರೆ ಶೇಕಡ ೦.೬೬ರಷ್ಟು ಕಾರ್ಮಿಕರು ಹಾವು ಕಡಿತದಿಂದ ಮತ್ತು ಶೇಕಡ ೨ರಷ್ಟು ಕಾರ್ಮಿಕರು ವಾಹನ ಅಪಘಾತಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತದೆ.




ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಅಪಘಾತಗಳ ಪ್ರಮಾಣ

ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೧೧.೩೩ರಷ್ಟು ಕಾರ್ಮಿಕರು ಕೆಲಸದಲ್ಲಿ ಮೇಲಿಂದ ಬಿದ್ದು ಅಪಘಾತಕ್ಕೆ ಒಳಗಾಗುತ್ತಿದ್ದರೆ. ಶೇಕಡ ೮.೬೭ರಷ್ಟು ಕಾರ್ಮಿಕರು ನಿರ್ಮಾಣ ಹಂತದಲ್ಲಿದ ಕಟ್ಟಡಗಳ ಕುಸಿತದಿಂದ ಅಪಘಾತಕ್ಕೆ ಒಳಗಾಗುತ್ತಿದ್ದಾರೆ. ಶೇಕಡ ೭೪.೬೭ರಷ್ಟು ಕಾರ್ಮಿಕರು ಇಟ್ಟಂಗಿ ಅಥವಾ ಕಲ್ಲುಗಳು ಮೇಲೆ ಬಿದ್ದು ಅಪಘಾತಕ್ಕೆ ಒಳಗಾಗುತ್ತಿದ್ದರೆ, ಶೇಕಡ ೫.೩೩ರಷ್ಟು ಕಾರ್ಮಿಕರು ವಾಹನ ಅಪಘಾತಗಳಿಗೆ ಒಳಗಾಗುತ್ತಿರುವುದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ. ಮೇಲಿನ ಅಂಶಗಳನ್ನು ಗಮನಿಸಿದರೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕೆಲಸದ ಸಮಯದಲ್ಲಿ ಅಪಘಾತಕ್ಕೆ ಒಳಗಾಗುತ್ತಿರುವುದು ಸ್ಪಷ್ಟವಾಗುತ್ತದೆ.

**ಅಪಘಾತಕ್ಕೆ ಪರಿಹಾರ ನೀಡಿದವರು**

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯಗಳಲ್ಲಿ ಅಪಘಾತಗಳು ಸಂಭವಿಸಿದಾಗ ಕಾರ್ಮಿಕರು ಪರಿಹಾರ ಪಡೆದಿರುವುದು ತುಂಬವಿರಳ. ಅಲ್ಲದೆ ಕೃಷಿ ಕಾರ್ಮಿಕರು ಅಪಘಾತಕ್ಕೆ ಒಳಗಾದಾಗ ಅವರಿಗೆ ನೀಡಿದ ಪರಿಹಾರದ ಬಗ್ಗೆ ದಾಖಲಿಸುವ ಕಾರ್ಯವನ್ನು ಯಾವ ಸಂಸ್ಥೆಗಳು ಮಾಡಿಲ್ಲದಿರುವುದು ಕಂಡುಬರುತ್ತದೆ. ಆದರೆ ಕಟ್ಟಡ ನಿರ್ಮಾಣ ಕಾರ್ಯಕ್ಕೆ ಬಂದರೆ ಹಾಗಿಲ್ಲ. ರಾಜ್ಯದಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಸಂಘ ಇರುವುದರಿಂದ ಆ ಸಂಸ್ಥೆ ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಅಪಘಾತಕ್ಕೆ ಒಳಗಾದರೆ ಅದಕ್ಕೆ ಪರಿಹಾರ ನೀಡಿದ ದಾಖಲೆಯನ್ನು ಇಟ್ಟಿದೆ. ನಿರ್ಮಾಣ ಕಾರ್ಯದಲ್ಲಿ ಅಪಘಾತದಿಂದ ಮರಣ ಹೊಂದಿದ್ದಕ್ಕೆ/ ಶಾಶ್ವತ ದುರ್ಬಲತೆಯಾಗಿದ್ದಕ್ಕೆ ಒಟ್ಟು ೧೫ ಜನ ಫಲಾನುಭವಿಗಳಿಗೆ ಒಟ್ಟು ೧೪,೭೦.೦೦೦ ರೂಪಾಯಿಗಳನ್ನು ನೀಡಿರುವುದು ಕಂಡುಬರುತ್ತದೆ. ಆದರೆ ಕೊಪ್ಪಳ ಜಿಲ್ಲೆಯ ಕಟ್ಟಡ ನಿರ್ಮಾಣ ಕಾರ್ಮಿಕರ ವಿಷಯಕ್ಕೆ ಸಂಬಂಧಿಸಿದಂತೆ ನೋಡಿದರೆ ಅಪಘಾತಕ್ಕಾಗಿ ಪರಿಹಾರ ಪಡೆದಿರುವವರ ಸಂಖ್ಯೆ ಕಡಿಮೆ ಇರುವುದು ಕಂಡುಬರುತ್ತಿದೆ.

ಕೋಷ್ಟಕ ೭.೨೫ನ್ನು ನೋಡಿದರೆ ಅಪಘಾತಕ್ಕೆ ಹಿಡಾದಾಗ ಕೃಷಿ ಕಾರ್ಮಿಕರು ಪಡೆದ ಪರಿಹಾರದ ಬಗ್ಗೆ ತಿಳಿದುಬರುತ್ತದೆ. ಶೇಕಡ ೩.೩೪ರಷ್ಟು ಕಾರ್ಮಿಕರು ಅಪಘಾತಕ್ಕೆ ಪರಿಹಾರವನ್ನು ಜಮೀನ್ದಾರರಿಂದ ಪಡೆದರೆ, ಶೇಕಡ ೨ರಷ್ಟು ಕಾರ್ಮಿಕರು ಸರಕಾರದಿಂದ, ಶೇಕಡ ೦.೬೬ ಕಾರ್ಮಿಕರು ಸಂಘ ಸಂಸ್ಥೆಗಳಿಂದ ಮತ್ತು ಶೇಕಡ ೯೪ರಷ್ಟು ಕಾರ್ಮಿಕರು ತಮ್ಮ ಸ್ವಂತ ವೆಚ್ಚದಿಂದ ಪರಿಹಾರ ಪಡೆದಿರುವುದು ಕಂಡು ಬರುತ್ತದೆ.

ಕೋಷ್ಟಕ ೭.೨೫ರಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರು ಅಪಘಾತಕ್ಕೆ ಪರಿಹಾರ ಪಡೆದಿರುವುದನ್ನು ಗಮನಿಸಿದರೆ ಶೇಕಡ ೦.೬೭ರಷ್ಟು ಕಾರ್ಮಿಕರು ಅಪಘಾತಕ್ಕೆ ಪರಿಹಾರವನ್ನು ಮೇಸ್ತ್ರಿಗಳಿಂದ ಶೇಕಡ ೧೨ರಷ್ಟು ಕಾರ್ಮಿಕರು ಕಾಂಟ್ರ್ಯಾಕ್ಟರ್‌ಗಳಿಂದ, ಶೇಕಡ ೩.೩೩ರಷ್ಟು ಕಾರ್ಮಿಕರು ಸರಕಾರದಿಂದ, ಶೇಕಡ ೬ರಷ್ಟು ಕಾರ್ಮಿಕರು ಸಂಘ ಸಂಸ್ಥೆಗಳಿಂದ ಮತ್ತು ಶೇಕಡ ೭೮ರಷ್ಟು ಕಾರ್ಮಿಕರು ಸ್ವಂತ ಖರ್ಚಿನಿಂದ ಅಪಘಾತಕ್ಕೆ ಪರಿಹಾರ ಪಡೆದಿರುವುದು ಕಂಡುಬರುತ್ತಿದೆ.

ಕೋಷ್ಟಕ ೭.೨೫ನ್ನು ಗಮನಿಸಿದರೆ ಕೃಷಿ ಕಾರ್ಮಿಕರು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಅಂದರೆ ಕೃಷಿ ಕಾರ್ಮಿಕರು ಶೇಕಡ ೯೪ರಷ್ಟು ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಶೇಕಡ ೭೮ರಷ್ಟು ಕಾರ್ಮಿಕರು ಅಪಘಾತಗಳು ಸಂಭವಿಸಿದಾಗ ತಮ್ಮ ಸ್ವಂತ ಖರ್ಚಿನಿಂದ ಪರಿಹಾರ ಪಡೆದಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೨೫**

**ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಅಪಘಾತಕ್ಕೆ ಪರಿಹಾರ ನೀಡಿದವರು.**

| | ಕೃಷಿಕಾರ್ಮಿಕರು | | | | ಕಟ್ಟಡ ನಿರ್ಮಾಣ ಕಾರ್ಮಿಕರು | | |
|---|---|---|---|---|---|---|---|
| ಕ್ರ. ಸಂ | ಪರಿಹಾರ ನೀಡಿದವರು | ಕಾರ್ಮಿಕರ ಸಂಖ್ಯೆ | ಶೇಕಡ ವಾರು | ಕ್ರ ಸಂ. | ಪರಿಹಾರ ನೀಡಿದವರು | ಕಾರ್ಮಿಕರ ವಾರು | ಶೇಕಡ |
| ೧. | ಜಮೀನುದಾರರು | ೦೫ | ೩.೩೪ | ೧. | ಮೇಸ್ತ್ರೀ | ೦೧ | ೦.೬೭ |
| ೨. | ಸರಕಾರ | ೦೩ | ೨.೦೦ | ೨. | ಕಾಂಟ್ರ್ಯಾಕ್ಟರ್ | ೧೮ | ೧೨.೦೦ |
| ೩. | ಸಂಘಸಂಸ್ಥೆಗಳು | ೦೧ | ೦.೬೬ | ೩. | ಸರಕಾರ | ೦೫ | ೩.೩೩ |
| ೪. | ಸ್ವಂತವೆಚ್ಚ | ೧೪೧ | ೯೪.೦೦ | ೪. | ಸಂಘಸಂಸ್ಥೆಗಳು | ೦೯ | ೦೬.೦೦ |
| | ಒಟ್ಟು | ೧೫೦ | ೧೦೦% | | ಒಟ್ಟು | ೧೫೦ | ೧೦೦% |




**ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಅಪಘಾತ ಪರಿಹಾರ ನೀಡಿದವರು**

**೭. ವೈದ್ಯಕೀಯ ಉಪಕರಣಗಳು**

ಕೃಷಿ ಮತ್ತು ನಿರ್ಮಾಣ ಕಾರ್ಯದಲ್ಲಿ ಸಣ್ಣ ಪುಟ್ಟ ಗಾಯಗಳು ಆಗುವುದು ಸಾಮಾನ್ಯ ಅಂತಹ ಸಂದರ್ಭದಲ್ಲಿ ಪ್ರಥಮ ಚಿಕಿತ್ಸೆ ನೀಡಲು ಕೆಲಸದ ಸ್ಥಳದಲ್ಲಿ ಪ್ರಥಮ ಚಿಕಿತ್ಸೆ ಪೆಟ್ಟಿಗೆ ಇಡಬೇಕಾದುದು ಅವಶ್ಯ. ಆದರೆ ಇಂತಹ ಸೌಲಭ್ಯವು ಕೆಲಸದ ಸ್ಥಳದಲ್ಲಿ ಇಲ್ಲದಿರುವುದು ಕ್ಷೇತ್ರಕಾರ್ಯದ ಸಮಯದಲ್ಲಿ ಕಂಡುಬಂದಿದೆ. ಕೃಷಿ ಕಾರ್ಮಿಕರು ಕೆಲಸದ ಸಮಯದಲ್ಲಿ ಕುರ್ಚಿಗೆ, ಕುಡುಗೋಲು, ಗುದ್ದಲಿ ಮತ್ತು ಕೊಡಲಿಯಿಂದ ರಕ್ತ ಗಾಯಗಳಾದರೆ ಗಾಯಕ್ಕೆ ಕಾಡಿಗೆ ಸೊಪ್ಪು, ನೆಸಿಪುಡಿ ಮತ್ತು ಸುಣ್ಣ ಇತ್ಯಾದಿ ವಸ್ತುಗಳಿಂದ ಪ್ರಥಮ ಚಿಕಿತ್ಸೆ ನೀಡುತ್ತಿರುವುದು ಕಂಡುಬರುತ್ತಿದೆ. ಏಕೆಂದರೆ ಕೃಷಿ ಕಾರ್ಮಿಕಗು ಹೊಲದಲ್ಲಿ ಕೆಲಸ ಮಾಡುತ್ತಿರುವುದರಿಂದ ಪ್ರಥಮ ಚಿಕಿತ್ಸೆಗಾಗಿ ಈ ಪದ್ದತಿಯನ್ನು ಅನುಸರಿಸುತ್ತಾರೆ. ನಂತರ ಆಸ್ಪತ್ರೆಗೆ ಹೋಗುತ್ತಾರೆ.

ಆದರೆ ಕಟ್ಟಡ ಕೆಲಸಗಳು ಪಟ್ಟಣ ಮತ್ತು ಗ್ರಾಮಗಳಲ್ಲಿ ನಡೆಯುತ್ತವೆ. ಹೀಗಾಗಿ ಕೆಲಸದ ಸ್ಥಳದಲ್ಲಿ ಪ್ರಥಮ ಚಿಕಿತ್ಸಾ ಪೆಟ್ಟಿಗೆ ಇಡಬೇಕಾದುದು ಅತೀ ಅವಶ್ಯ. ಆದರೆ ಕೆಲಸದ ಸಮಯದಲ್ಲಿ ಸಣ್ಣ ಪುಟ್ಟ ಗಾಯಗಳಾದರೂ ಪ್ರಥಮ ಚಿಕಿತ್ಸೆ ನೀಡಲು ಇಲ್ಲಿ ಯಾವುದೇ ವೈದ್ಯಕೀಯ ಕಿಟ್ಟು ಅಥವಾ ಪ್ರಥಮ ಚಿಕಿತ್ಸಾ ಪೆಟ್ಟಿಗೆ ಇಟ್ಟುಕೊಂಡಿಲ್ಲದಿರುವುದು ಕ್ಷೇತ್ರಕಾರ್ಯದ ಸಮೀಕ್ಷೆಯ ಸಂದರ್ಭದಲ್ಲಿ ಕಂಡುಬಂದಿದೆ. ಪ್ರಥಮ ಚಿಕಿತ್ಸೆ ನೀಡದೇ ಇರುವುದರಿಂದ ಸಣ್ಣ ಪುಟ್ಟ ಗಾಯಗಳು ನಂಜಾಗುವ ಸಾಧ್ಯತೆ ಹೆಚ್ಚಿದ್ದು ಇದರಿಂದ ಅನಾರೋಗ್ಯಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತಿದೆ.

೮. ಹೆರಿಗೆಭತ್ಯೆ ಸೌಲಭ್ಯ

ಹೆರಿಗೆಭತ್ಯೆ ಸೌಲಭ್ಯ ಕೃಷಿ ಕಾರ್ಮಿಕರಿಗೆ ದೊರೆಯುವುದು ಕನಸಿನ ಮಾತಾಗಿದೆ. ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರಿಗೆ ಹೆರಿಗೆಭತ್ಯೆ ಸೌಲಭ್ಯ ನೀಡಬೇಕು ಎಂದು ಕಾಯ್ದೆ ಜಾರಿಯಾಗಿದೆ. ಆದರೆ ಅದು ಕಾಯ್ದೆಯಾಗಿಯೇ ಉಳಿದಿದೆ. ಆದರೆ ಕಟ್ಟಡ ನಿರ್ಮಾಣ ಕಾರ್ಮಿಕರ ವಿಷಯ ಬೇರೆಯಾಗಿರುತ್ತದೆ. ರಾಜ್ಯದಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರ ಮತ್ತು ಇತರ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳ ಸ್ಥಾಪನೆಯಾಗಿರುವುದರಿಂದ ಈ ಮಂಡಳಿಗೆ ಸದಸ್ಯರಾಗಿ ನೋಂದಣಿಯಾಗಿ ಒಂದು ವರ್ಷ ಪೂರೈಸಿದ ಮಹಿಳಾ ಕಾರ್ಮಿಕರೇ ಹೆರಿಗೆಭತ್ಯೆ ಸೌಲಭ್ಯ ಪಡೆಯಲು ಅರ್ಹತೆಯನ್ನು ಪಡೆಯುತ್ತಾರೆ. ಈ ಮಂಡಳಿಯ ನಿಯಮದ ಪ್ರಕಾರ ಎರಡು ಬಾರಿ ಮಾತ್ರ ಕಾರ್ಮಿಕ ಮಹಿಳೆ ತಲಾ ರೂ. ೬೦೦೦ಗಳ ಹೆರಿಗೆಭತ್ಯೆ ಸೌಲಭ್ಯವನ್ನು ಪಡೆಯಬಹುದಾಗಿದೆ ರಾಜ್ಯದಲ್ಲಿ ಒಟ್ಟು ೧೪ ಜನ ಮಹಿಳಾ ಕಾರ್ಮಿಕರಿಗೆ ಒಟ್ಟು ರೂ. ೬೨.೦೦೦ಗಳನ್ನು ಹೆರಿಗೆಭತ್ಯೆಯಾಗಿ ನೀಡಿರುವುದು ತಿಳಿದುಬರುತ್ತಿದೆ. ಆದರೆ ಕೊಪ್ಪಳ ಜಿಲ್ಲೆಯ ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು ಹೆರಿಗೆಭತ್ಯೆ ಸೌಲಭ್ಯ ಪಡೆಯದೇ ಇರುವುದು ಕಂಡುಬರುತ್ತದೆ. ಏಕೆಂದರೆ ಜಿಲ್ಲೆಯಲ್ಲಿನ ಮಹಿಳಾ ಕಾರ್ಮಿಕರು ಕಟ್ಟಡ ನಿರ್ಮಾಣ ಕಾರ್ಮಿಕರ ಮಂಡಳಿ ಅಥವಾ ಸಂಘಕ್ಕೆ ನೋಂದಣಿಯಾಗಿರುವುದಿಲ್ಲ. ಹೀಗಾಗಿ ಇವರು ಈ ಸಾಮಾಜಿಕ ಭದ್ರತಾ ಸೌಲಭ್ಯದಿಂದ ವಂಚಿತರಾಗಿರುತ್ತಾರೆ. ಆದರೆ ರಾಜ್ಯ ಸರಕಾರ ಜಾರಿಗೆ ತಂದ ಜನನಿ ಸುರಕ್ಷ ಯೋಜನೆಯಿಂದ ಪ್ರಯೋಜನ ಪಡೆಯುತ್ತಿರುವುದು ಕಂಡುಬರುತ್ತಿದೆ.

೯. ಸಾಮಾಜಿಕ ಭದ್ರತಾ ಸೌಲಭ್ಯಗಳು

**ಕೋಷ್ಟಕ ೬.೨೬**

**ಸಾಮಾಜಿಕ ಭದ್ರತಾ ಸೌಲಭ್ಯ ಪಡೆದ ಕಾರ್ಮಿಕರ ವಿವರ**

| ಕ್ರ.ಸಂ | ಸಾಮಾಜಿಕ ಭದ್ರತಾ ಸೌಲಭ್ಯಗಳು | ಕಾರ್ಮಿಕರ ಸಂಖ್ಯೆ | ಶೇಕಡವಾರು | |
|---|---|---|---|---|
| ೧. | ಹೆರಿಗೆ ಭತ್ಯೆ ಸೌಲಭ್ಯ | ೩೧ | ೧೦.೩೩ | ೨೧.೦೦ |
| ೨. | ವಿಧವಾ ವೇತನ | ೧೯ | ೦೬.೩೩ | |
| ೩. | ವೃದಾಪ್ಯ ವೇತನ | ೧೨ | ೦೪.೦೦ | |
| ೪. | ವಿಮಾ ಸೌಲಭ್ಯ | ೦೧ | ೦೦.೩೪ | |
| ೫. | ಯಾವುದೇ ಸೌಲಭ್ಯವನ್ನು ಪಡೆಯದವರು | ೨೩೭ | ೭೯.೦೦ | |
| | ಒಟ್ಟು | ೩೦೦ | ೧೦೦ | |




ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು
ಪಡೆದ ಸಾಮಾಜಿಕ ಭದ್ರತಾ ಸೌಲಭ್ಯಗಳ ಪ್ರಮಾಣ

ಜಿಲ್ಲೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಪಡೆದ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಗಮನಿಸಿದರೆ ಅದರ ಪ್ರಮಾಣ ಕೇವಲ ಶೇಕಡ ೨೧ರಷ್ಟು ಇರುವುದು ಕಂಡುಬರುತ್ತದೆ. ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ೩೦೦ ಜನ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೧೦.೩೩ರಷ್ಟು ಕಾರ್ಮಿಕರು ಹೆರಿಗೆ ಭತ್ಯೆ ಸೌಲಭ್ಯವನ್ನು ಪಡೆದಿದ್ದರೆ ಶೇಕಡ ೬.೩೩ರಷ್ಟು ಕಾರ್ಮಿಕರು ವಿಧವಾ ವೇತನವನ್ನು ಶೇಕಡ ೪ರಷ್ಟು ಕಾರ್ಮಿಕರು ವೃದ್ಧಾಪ್ಯ ವೇತನವನ್ನು ಮತ್ತು ಶೇಕಡ ೦.೩೪ರಷ್ಟು ಕಾರ್ಮಿಕರು ವಿಮಾ ಸೌಲಭ್ಯವನ್ನು ಪಡೆಯುತ್ತಿರುವುದು ಕಂಡುಬರುತ್ತಿದೆ. ಅಂದರೆ ಜಿಲ್ಲೆಯಲ್ಲಿ ಶೇಕಡ ೨೧ರಷ್ಟು ಕಾರ್ಮಿಕರು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುತ್ತಿದ್ದರೆ, ಶೇಕಡ ೭೯ರಷ್ಟು ಕಾರ್ಮಿಕರು ಯಾವುದೇ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುತ್ತಿಲ್ಲದಿರುವುದು ಕಂಡುಬರುತ್ತದೆ. ಹೀಗಾಗಿ ಜಿಲ್ಲೆಯಲ್ಲಿ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಪಡೆಯುತ್ತಿರುವ ಮಹಿಳಾ ಕಾರ್ಮಿಕರ ಪ್ರಮಾಣ ಕಡಿಮೆ ಇರುವುದು ತಿಳಿದುಬರುತ್ತದೆ. ಅಸಂಘಟಿತ ವಲಯದ ಕಾರ್ಮಿಕರಿಗೆ/ ಮಹಿಳಾ ಅಭಾವದಿಂದಾಗಿ ಆ ಸೌಲಭ್ಯಗಳು ಕಾರ್ಮಿಕರಿಗೆ ತಲುಪುತ್ತಿಲ್ಲದಿರುವುದು ಕಂಡುಬರುತ್ತಿದೆ.

೧೦. ಅಸಂಘಟನೆ

ಕೋಷ್ಟಕ ೬.೨೭

ಸಂಘಟಿತರಾದ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣ

| ಸಂಘಟನೆಯ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|
| ಸಂಘಟನೆ | ೧೭ | ೫.೬೭ |
| ಅಸಂಘಟಿತ | ೨೮೩ | ೯೪.೩೩ |
| ಒಟ್ಟು | ೩೦೦ | ೧೦೦ |

ಕೊಪ್ಪಳ ಜಿಲ್ಲೆಯಲ್ಲಿ ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ೩೦೦ ಜನ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ಅಸಂಘಟಿತರಾಗಿರುವುದು ಕಂಡುಬರುತ್ತದೆ. ಒಟ್ಟು ಕಾರ್ಮಿಕರಲ್ಲಿ ಶೇಕಡ ೫.೬೭ರಷ್ಟು ಕಾರ್ಮಿಕರು ಮಾತ್ರ ಸಂಘಟಿತರಾಗಿದ್ದರೆ ಉಳಿದ ಶೇಕಡ ೯೪.೩೩ರಷ್ಟು ಕಾರ್ಮಿಕರು ಅಸಂಘಟಿತರಾಗಿರುವುದು ತಿಳಿದುಬರುತ್ತದೆ. ಆದರೆ ಪುರುಷ ಕಾರ್ಮಿಕರ ಸಂಘಟನೆಯನ್ನು ನೋಡಿದರೆ ಅವರು ಅಧಿಕ ಸಂಖ್ಯೆಯಲ್ಲಿ ಸಂಘಟಿತರಾಗಿರುವುದು ಕಂಡುಬರುತ್ತಿದೆ. ಪುರುಷ ಕೃಷಿ ಕಾರ್ಮಿಕರನ್ನು ಹೊರತುಪಡಿಸಿ ಪುರುಷ ಕಟ್ಟಡ ನಿರ್ಮಾಣ ಕಾರ್ಮಿಕರು, ಹಮಾಲಿ ಕಾರ್ಮಿಕರು, ಆಟೋ ಮೋಬೈಲ್ ಕಾರ್ಮಿಕರು, ಕರಕುಶಲ ಕಾರ್ಮಿಕರು, ಮತ್ತು ಇತರ ಕಾರ್ಮಿಕರು ಕಾರ್ಮಿಕ ಮಂಡಳಿ ಮತ್ತು ಸಂಘಟನೆಗಳ ಮೂಲಕ ಸಂಘಟಿತರಾಗಿದ್ದಾರೆ.

ರಾಜ್ಯದಲ್ಲಿ ೨೦೦೬ರಲ್ಲಿ ಕಟ್ಟಡ ನಿರ್ಮಾಣ ಮತ್ತು ಇತರ ನಿರ್ಮಾಣ ಕಾರ್ಮಿಕರ ಮಂಡಳಿ ಸ್ಥಾಪನೆಯಾದಾಗಿನಿಂದ ಜಿಲ್ಲೆಯಲ್ಲಿನ ಕಟ್ಟಡ ನಿರ್ಮಾಣ ಪುರುಷ ಕಾರ್ಮಿಕರು ಈ ಕಾರ್ಮಿಕ ಮಂಡಳಿಗೆ ನೋಂದಾಯಿತರಾಗಿ ಸದಸ್ಯತ್ವ ಪಡೆಯುವ ಮೂಲಕ ಸಂಘಟಿತರಾಗಿದ್ದಾರೆ. ಆದರೆ ಇಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಮಾತ್ರ ಅಸಂಘಟಿತರಾಗಿ ಉಳಿದಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ. ಅವು ಗಳನ್ನು ಈ ಕೆಳಗಿನಂತೆ ನೋಡಬಹುದು.

**ಕೋಷ್ಟಕ ೬.೨೮**

**ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅಸಂಘಟಿತರಾಗಿ ಉಳಿದಿರುವುದಕ್ಕೆ ಕಾರಣಗಳು**

| ಕ್ರ.ಸಂ | ಕಾರಣಗಳು | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಸಂಘಟನೆ ಬಗ್ಗೆ ಆಸಕ್ತಿ ಇಲ್ಲ | ೬ | ೨ |
| ೨. | ಕಾರ್ಮಿಕ ಸಂಘಗಳು ಮಹಿಳಾ ಕಾರ್ಮಿಕರನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳದಿರುವುದು | ೨೧೮ | ೭೨.೬೭ |
| ೩. | ಸಂಘಟನೆಗೆ ಸೇರಲು ಮನೆಯವರ ವಿರೋಧ | ೩೪ | ೧೧.೩೩ |
| ೪. | ಕಾರ್ಮಿಕ ಸಂಘಗಳ ಬಗ್ಗೆ ಮಾಹಿತಿ ಇಲ್ಲದಿರುವುದು | ೪೨ | ೧೪.೦೦ |
| | ಒಟ್ಟು | ೩೦೦ | ೧೦೦ |

ಜಿಲ್ಲೆಯಲ್ಲಿ ಶೇಕಡ ೯೪.೩೩ರಷ್ಟು ಮಹಿಳಾ ಕಾರ್ಮಿಕರು ಯಾವುದೆ ಕಾರ್ಮಿಕ ಸಂಘಟನೆಗೆ ಸೇರದೆ ಅಸಂಘಟಿತರಾಗಿ ಉಳಿದಿರುವುದು ಕಂಡುಬರುತ್ತಿದೆ. ಅವರನ್ನು ಪ್ರಶ್ನಿಸಿದಾಗ ಅವರ ಅಸಂಘಟನೆಗೆ ಅನೇಕ ಕಾರಣಗಳಿರುವುದು ತಿಳಿದುಬರುತ್ತಿದೆ. ಶೇಕಡ ೨ರಷ್ಟು ಕಾರ್ಮಿಕರು ಸಂಘಟನೆ ಬಗ್ಗೆ ಆಸಕ್ತಿ

ಇಲ್ಲದಿರುವುದೇ ಅಸಂಘಟನೆಗೆ ಕಾರಣ ಎಂದರೆ, ಶೇಕಡ ೭೨.೬೭ರಷ್ಟು ಕಾರ್ಮಿಕರು ಕಾರ್ಮಿಕರ ಸಂಘಟನೆಗಳು ನಮ್ಮನ್ನು ಸದಸ್ಯರನ್ನಾಗಿ ಸೇರಿಸಿಕೊಳ್ಳದಿರುವುದೇ ಕಾರಣ ಎಂದು, ಶೇಕಡ ೧೧.೩೩ರಷ್ಟು ಕಾರ್ಮಿಕರು ಕಾರ್ಮಿಕ ಸಂಘಟನೆಗೆ ಸೇರಲು ಕುಟುಂಬದಲ್ಲಿ ವಿರೋಧ ಇರುವುದು ಕಾರಣ ಎಂದು ಮತ್ತು ಶೇಕಡ ೧೪ರಷ್ಟು ಕಾರ್ಮಿಕರು ಕಾರ್ಮಿಕ ಸಂಘಟನೆಗಳ ಬಗ್ಗೆ ಮಾಹಿತಿ ಇಲ್ಲದಿರುವುದೇ ಅಸಂಘಟನೆಗೆ ಕಾರಣ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಧಿಕ ಸಂಖ್ಯೆಯ ಶೇಕಡ ೭೨.೬೭ರಷ್ಟು ಕಾರ್ಮಿಕರು ಕಾರ್ಮಿಕ ಸಂಘಟನೆಗಳು ತಮ್ಮ ಕಾರ್ಮಿಕ ಸಂಘದ ಸದಸ್ಯರನ್ನಾಗಿ ಸೇರಿಸಿ ನೋಂದಾಯಿಸಿಕೊಳ್ಳುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಒಂದು ಅಭಿಪ್ರಾಯವನ್ನು ಗಮನಿಸಿದರೆ ಕಾರ್ಮಿಕ ಸಂಘಟನೆಯ ಮುಖಂಡರು ಮಹಿಳಾ ಕಾರ್ಮಿಕರನ್ನು ತಮ್ಮ ಕಾರ್ಮಿಕ ಸಂಘದ ಸದಸ್ಯತ್ವಕ್ಕೆ ನೋಂದಣಿ ಮಾಡಿಸಿಕೊಳ್ಳದೆ ಕೇವಲ ಹೋರಾಟದ ಉದ್ದೇಶಕ್ಕಾಗಿ ಮಹಿಳಾ ಕಾರ್ಮಿಕರನ್ನು ಸಂಘಟಿಸುತ್ತಿರುವುದು ಸ್ಪಷ್ಟವಾಗುತ್ತಿದೆ. ಇದು ಕಾರ್ಮಿಕ ಸಂಘಟನೆಗಳು ಮಾಡುತ್ತಿರುವ ಒಂದು ದೊಡ್ಡ ಅಪರಾಧ ಎಂದರೆ ತಪ್ಪಾಗಲಾರದು.

ಅಧಿಕ ಸಂಖ್ಯೆಯ ಕಾರ್ಮಿಕರು ಅನಕ್ಷರಸ್ಥರಾಗಿರುವುದರಿಂದ ಅವರಿಗೆ ಕಾರ್ಮಿಕ ಸಂಘಟನೆಗಳ ಇರುವಿಕೆ ಬಗ್ಗೆ ಅರಿವು ಇರುವುದಿಲ್ಲ. ಅಲ್ಲದೆ ಕುಟುಂಬದಲ್ಲಿನ ಪುರುಷ ಕಾರ್ಮಿಕರು ಸಂಘಟನೆ ಬಗ್ಗೆ ಮಾಹಿತಿಯನ್ನು ಮಹಿಳಾ ಕಾರ್ಮಿಕರಿಗೆ ನೀಡುವುದಿಲ್ಲ. ಇದರಿಂದಾಗಿ ಅವರು ಕಾರ್ಮಿಕ ಸಂಘಟನೆ ಸೇರುವ ಅವಕಾಶದಿಂದ ವಂಚಿತರಾಗುತ್ತಾರೆ. ಮಹಿಳೆಯರ ಜಗತ್ತು ಕುಟುಂಬ, ಗಂಡ, ಮಕ್ಕಳು ಮತ್ತು ಮನೆಗೆ ಸಿಮೀತವಾಗಿರುವದರಿಂದ ಅವಳನ್ನು ಕುಟುಂಬದ ಹೊರಗಿನ ಜಗತ್ತಿಗೆ ತೊಡಗಿಸುವುದು ಕಷ್ಟಕರವಾಗುತ್ತದೆ. ಸಂಘಟನೆ ಎಂಬುದು ಕುಟುಂಬದ ಹೊರಗೆ ನಡೆಯುವ ಹೋರಾಟವಾಗಿರುವುದರಿಂದ ಕುಟುಂಬದಲ್ಲಿ ಗಂಡ ಅಥವಾ ಅತ್ತೆ ಮಾವಂದಿರ ವಿರೋಧ ಇದ್ದೇ ಇರುತ್ತದೆ. ಇದರಿಂದಾಗಿ ಮಹಿಳಾ ಕಾರ್ಮಿಕರು ಕಾರ್ಮಿಕ ಸಂಘಟನೆಗೆ ಸೇರದೆ ಅಸಂಘಟಿತರಾಗಿ ಉಳಿಯುತ್ತಾರೆ. ಇದರಿಂದಾಗಿ ಅಸಂಘಟಿತ ವಲಯದಲ್ಲಿ ಅವರ ಪ್ರಮಾಣ ಅಧಿಕವಾಗಿರುತ್ತದೆ.

**೬.೩.೬. ಕುಟುಂಬದ ಆದಾಯ ಮತ್ತು ಜೀವನ ಮಟ್ಟ**

ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಜೀವನಮಟ್ಟವನ್ನು ಗಮನಿಸಿದರೆ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವುದು ಕಂಡುಬರುತ್ತಿದ್ದು ಅವರು ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿರುವುದು ತಿಳಿದುಬರುತ್ತಿದೆ. ಕೊಪ್ಪಳ ಜಿಲ್ಲೆಯ ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ಕೃಷಿ ಮತ್ತು ನಿರ್ಮಾಣ ಕಾರ್ಮಿಕರ ಮಾದರಿ ಸಮೀಕ್ಷೆಯಲ್ಲಿ ಕಾರ್ಮಿಕರು ಅಧಿಕ ಸಂಖ್ಯೆಯಲ್ಲಿ ಕಡಿಮೆ ಕೂಲಿ ಪಡೆಯುತ್ತಿರುವುದು ತಿಳಿದು ಬರುತ್ತದೆ. ಹೀಗಾಗಿ ಇವರು ಪಡೆಯುವ ಆದಾಯ ಸಹ ಕಡಿಮೆ ಇರುವುದು ಕಂಡುಬರುತ್ತಿದೆ.

ಇವರ ಜೀವನಮಟ್ಟವನ್ನು ನೋಡಿದರೆ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ ಮತ್ತು ಶಿಕ್ಷಣದಿಂದ ವಂಚಿತರಾಗಿರುವುದು ತಿಳಿದುಬರುತ್ತಿದೆ. ಅಲ್ಲದೆ ಸರಕಾರ ನೀಡುವ ಸೌಲಭ್ಯಗಳ ಪ್ರಯೋಜನವನ್ನು ಪಡೆಯಲಾರದ ಸ್ಥಿತಿಯಲ್ಲಿರುವುದು ತಿಳಿದುಬರುತ್ತಿದೆ. ಅವರ ಒಂದು ಜೀವನ ಮಟ್ಟವನ್ನು ಈ ಕೆಳಗಿನ ಅಂಶಗಳಿಂದ ತಿಳಿದುಕೊಳ್ಳಬಹುದು.

೧. ಕಡಿಮೆ ಆದಾಯ

ಕೋಷ್ಟಕ ೬.೨೯

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಆದಾಯ(ರೂಪಾಯಿಗಳಲ್ಲಿ)

| ಕೃಷಿ ಕಾರ್ಮಿಕರು | | ಕಟ್ಟಡ ನಿರ್ಮಾಣ ಕಾರ್ಮಿಕರು | |
|---|---|---|---|
| ಲಿಂಗ | ಆದಾಯ (ತಿಂಗಳಿಗೆ) | ಲಿಂಗ | ಆದಾಯ (ತಿಂಗಳಿಗೆ) |
| ಮಹಿಳೆ | ೧೦೦೦ | ಮಹಿಳೆ | ೧೩೦೦ |
| ಪುರುಷ | ೨೧೦೦ | ಪುರುಷ | ೨೮೦೦ |
| ಒಟ್ಟು | ೩೧೦೦ | ಒಟ್ಟು | ೪೧೦೦ |



ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು

ಕೋಷ್ಟಕ ೬.೨೯ನ್ನು ನೋಡಿದರೆ ಕೊಪ್ಪಳ ಜಿಲ್ಲೆಯಲ್ಲಿ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಪಡೆಯುವ ತಿಂಗಳ ಆದಾಯ ಕಡಿಮೆ ಇರುವುದು ತಿಳಿದುಬರುತ್ತಿದೆ. ಮಹಿಳಾ ಕೃಷಿ ಕಾರ್ಮಿಕರು ತಿಂಗಳಿಗೆ ೧೦೦೦ ರೂಪಾಯಿಗಳ ಆದಾಯ ಪಡೆಯುತ್ತಿದ್ದರೆ, ಪುರುಷ ಕಾರ್ಮಿಕರು ತಿಂಗಳಿಗೆ ೨೧೦೦ ರೂಪಾಯಿಗಳ ಆದಾಯ ಪಡೆಯುತ್ತಿರುವುದು ಕಂಡುಬರುತ್ತಿದೆ. ಕಟ್ಟಡ ನಿರ್ಮಾಣ

ಕಾರ್ಮಿಕರ ಆದಾಯವನ್ನು ನೋಡಿದರ ಪುರುಷರ ಆದಾಯ ತಿಂಗಳಿಗೆ ೨೮೦೦ ರೂಪಾಯಿಗಳಿದ್ದರೆ ಮಹಿಳಾ ಕಾರ್ಮಿಕರ ಆದಾಯ ತಿಂಗಳಿಗೆ ೧೩೦೦ ರೂಪಾಯಿಗಳಿರುವುದು ಕಂಡುಬರುತ್ತಿದೆ. ಕೃಷಿ ಕಾರ್ಮಿಕರ ಒಟ್ಟು ಆದಾಯ ೩೧೦೦ ರೂಪಾಯಿಗಳಾದರೆ ಕಟ್ಟಡ ನಿರ್ಮಾಣ ಕಾರ್ಮಿಕರ ಆದಾಯ ೪೧೦೦ ರೂಪಾಯಿಗಳು ಆಗಿರುವುದು ತಿಳಿದುಬರುತ್ತದೆ. ಈ ಕಾರ್ಮಿಕರು ಪಡೆಯುತ್ತಿರುವ ಕೂಲಿ ಅಥವಾ ಆದಾಯ ಹಾಗೂ ಗಗನಕ್ಕೆ ಏರುತ್ತಿರುವ ಬೆಲೆಗಳನ್ನು ನೋಡಿದರೆ ಇವರು ಜೀವನ ನಡೆಸುವುದೇ ಕಷ್ಟಕರ ಸ್ಥಿತಿಯಲ್ಲಿ ಎಂಬುಂದು ಸ್ಪಷ್ಟವಾಗುತ್ತದೆ.

**೨. ಭೂ ರಹಿತರು**

**ಕೋಷ್ಟಕ ೬.೩೦**

**ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಹೊಂದಿದ ಜಮೀನಿನ ವಿವರ**

| ವಿವರ | ಕಾರ್ಮಿಕರು | ಶೇಕಡವಾರು |
|---|---|---|
| ಹೌದು | ೭೧ | ೨೩.೬೭ |
| ಇಲ್ಲ | ೨೨೯ | ೭೬.೩೩ |
| ಒಟ್ಟು | ೩೦೦ | ೧೦೦ |

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಅಧಿ ಸಂಖ್ಯೆಯ ಕಾರ್ಮಿಕರು ಭೂರಹಿತರಾಗಿರುವುದು ಕಂಡುಬರುತ್ತದೆ. ಇದರಿಂದ ಉಪಜೀವನಕ್ಕಾಗಿ ಕೂಲಿಯನ್ನೇ ಅವಲಂಬಿಸಬೇಕಾದ ಪರಿಸ್ಥಿತಿ ಇವರದಾಗಿದೆ. ಕೋಷ್ಟಕ ೬.೩೦ನ್ನು ನೋಡಿದ ಒಟ್ಟು ೩೦೦ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೨೩.೭೬ರಷ್ಟು ಕಾರ್ಮಿಕರು ಮಾತ್ರ ಜಮೀನನ್ನು ಹೊಂದಿದ್ದರೆ ಶೇಕಡ ೭೬.೩೩ರಷ್ಟು ಕಾರ್ಮಿಕರು ಭೂರಹಿತರಾಗಿರುವುದು ಕಂಡುಬರುತ್ತಿದೆ. ಈ ಭೂರಹಿತರಲ್ಲಿ ಬಹುತೇಕರು ಚಿಕ್ಕ ಅತಿ ಚಿಕ್ಕ ರೈತರಾಗಿರುವುದು ಕಂಡುಬರುತ್ತದೆ.

**೩. ವಸತಿಯ ಸ್ವರೂಪ**

ಕೊಪ್ಪಳ ಜಿಲ್ಲೆಯ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ವಸತಿಯ ಸ್ಥಿತಿಗತಿಯನ್ನು ಅವಲೋಕಿಸಿದರೆ ಅಧಿಕ ಸಂಖ್ಯೆಯ ಕಾರ್ಮಿಕರು ವಸತಿ ರಹಿತರಿದ್ದು ಗುಡಿಸಲು ಮತ್ತು ಜೋಪಡಿಗಳಲ್ಲಿ ವಾಸ ಮಾಡುತ್ತಿರುವುದು ಕಂಡುಬರುತ್ತದೆ.

ಕೋಷ್ಟಕ ೬.೩೧

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ವಸತಿಯ ಸ್ವರೂಪ

| ಕ್ರ.ಸಂ | ವಸತಿಯ ಸ್ವರೂಪ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಗುಡಿಸಲು | ೬೫ | ೨೧.೬೭ |
| ೨. | ಹಂಚಿನ ಮನೆ | ೮೨ | ೨೭.೩೩ |
| ೩. | ಶೀಟು ತಗಡಿನ ಮನೆ | ೧೨೫ | ೪೧.೬೭ |
| ೪. | ಮಾಳಿಗೆ ಮನೆ | ೨೪ | ೦೮.೦೦ |
| ೫. | ಆರ್.ಸಿ.ಸಿ.ಮನೆ | ೦೪ | ೦೧.೩೩ |
| | ಒಟ್ಟು | ೩೦೦ | ೧೦೦% |




ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ವಸತಿಯ ಸ್ವರೂಪ ಶೇಕಡವಾರು ಪ್ರಮಾಣ

ಕೋಷ್ಟಕ ೬.೩೧ನ್ನು ನೋಡಿದರೆ ಶೇಕಡ ೨೧.೬೭ರಷ್ಟು ಕಾರ್ಮಿಕರು ಗುಡಿಸಲು ಮನೆಗಳಲ್ಲಿ, ಶೇಕಡ ೨೭.೩೩ರಷ್ಟು ಕಾರ್ಮಿಕರು ಹಂಚಿನ ಮನೆಗಳಲ್ಲಿ, ಶೇಕಡ ೪೧.೬೭ರಷ್ಟು ಕಾರ್ಮಿಕರು ಎ.ಸಿ.ಸಿ. ಸೀಟು ಅಥವಾ ತಗಡಿನ ಮನೆಗಳಲ್ಲಿ (ಶೆಡ್ಡ್) ಶೇಕಡ ೮ರಷ್ಟು ಕಾರ್ಮಿಕರು ಮಾಳಿಗೆ ಮನೆಗಳಲ್ಲಿ ಮತ್ತು ಶೇಕಡ ೧.೩೩ರಷ್ಟು ಕಾರ್ಮಿಕರು ಆರ್.ಸಿ.ಸಿ ಮನೆಗಳಲ್ಲಿ ವಾಸ ಮಾಡುತ್ತಿರುವುದು ಕಂಡುಬರುತ್ತಿದೆ. ಈ ಅಂಕಿ ಸಂಖ್ಯೆಗಳನ್ನು ಗಮನಿಸಿದರೆ ಅಧಿಕ ಸಂಖ್ಯೆಯ ಕಾರ್ಮಿಕರು ಕಳಪೆ ಗುಣಮಟ್ಟದ ವಸತಿಗಳಲ್ಲಿ ವಾಸ ಮಾಡುತ್ತಿರುವುದು ತಿಳಿದುಬರುತ್ತದೆ. ಇಂತಹ ಮನೆಗಳಲ್ಲಿ ವಾಸಿಸುತ್ತಿರುವ ಕಾರ್ಮಿಕರು ಬೇಸಿಗೆ ಯಲ್ಲಿ ಬಿಸಿಲಿನಿಂದ ಚಳಿಗಾಲದಲ್ಲಿ ಚಳಿಯಿಂದ ಮತ್ತು ಮಳೆಗಾಲದಲ್ಲಿ ಮಳೆಯಿಂದ ತೊಂದರೆಗೆ ಒಳಗಾಗುತ್ತಿರುವುದು ಕಂಡುಬರುತ್ತಿದೆ. ೨೦೦೯ರ ಸೆಪ್ಟೆಂಬರ್ ತಿಂಗಳಲ್ಲಿ ಸುರಿದ ಭಾರಿ ಮಳೆ ಮತ್ತು

ನೆರೆಹಾವಳಿಗೆ ಬಲಿಯಾಗಿ ಮನೆಯನ್ನು ಕಳೆದುಕೊಂಡು ನಿರಾಶ್ರಿತರಾಗಿರುವವರಲ್ಲಿ ಬಹುತೇಕರು ಈ ಕೃಷಿ ಮತ್ತು ನಿರ್ಮಾಣ ಕಾರ್ಮಿಕರೆಂಬುದು ತಿಳಿದುಬರುತ್ತಿದೆ.

೪. ಬಡತನದ ರೇಖೆಯ ಕೆಳಗೆ ಜೀವಿಸುವವರು

೧೯೪೫ರಲ್ಲಿ ವಿಶ್ವಸಂಸ್ಥೆಯು ಜಗತ್ತಿನಲ್ಲಿರುವ ಬಡತನ ಮತ್ತು ಬಡವರನ್ನು ಗುರುತಿಸಲು ಅಧ್ಯಯನವನ್ನು ಕೈಗೊಂಡಿತು. ಆ ಅಧ್ಯಯನದ ಆಧಾರದ ಮೇಲೆ ಬಡವರೆಂದರೆ ಯಾರು? ಬಡತನದ ರೇಖೆಯ ಕೆಳಗೆ ಜೀವಿಸುವವರು ಯಾರು? ಎಂದು ಗುರುತಿಸಿತು. ವಿಶ್ವ ಆಹಾರ ಮತ್ತು ಕೃಷಿ ಸಂಘಟನೆಯ ಮೊದಲ ಮಹಾ ನಿರ್ದೇಶಕ ಲಾರ್ಡ್ ಬೈಯಿಡರ್ ಬಡವರು ಎಂದರೆ ಯಾರು? ಎಂಬುದಕ್ಕೆ ನಿರ್ದಿಷ್ಟ ವಾಖ್ಯಾನ ನೀಡಿದರು. ಅವರ ಪ್ರಕಾರ "ಯಾರು ಒಂದು ದಿನದಲ್ಲಿ ೨೪೦೦ ಕ್ಯಾಲರಿಗಿಂತ ಕಡಿಮೆ (ಪೌಷ್ಠಿಕ ಅಂಶ ಉಳ್ಳ) ಆಹಾರವನ್ನು ಸೇವಿಸುವವರೋ ಅವರು ಬಡವರು ಮತ್ತು ಬಡತನದ ರೇಖೆಯ ಕೆಳಗೆ ಜೀವಿಸುವವರು" ಎಂದು ವಾಖ್ಯಾನ ನೀಡಿದರು. ಇದನ್ನು ಆಧರಿಸಿ ಭಾರತದಲ್ಲಿ ಬಡತನದ ಮಾಪನ, ಬಡವರ ಮಾಪನ ಆರಂಭವಾಯಿತು. ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿ ಪಿ.ಡಿ.ಅಹುಜ, ದಾಂಡೇಕರ್ ಮತ್ತು ರಾಥ್, ಬಿ.ಎಸ್.ಮಿನ್ಹಾಸ್, ಎಂ.ಎಸ್.ಅಹುವಾಲಿಯಾ ಮತ್ತು ಪ್ರಣಬ್ ಬರ್ಧನ್ ಅವರು ಭಾರತದಲ್ಲಿ ಬಡತವನ್ನು ಮಾಪನ ಮಾಡಿದ್ದಾರೆ ಕೆಲವರು ವೆಚ್ಚವನ್ನು ಮಾಪನದ ಆಧಾರವಾಗಿಟ್ಟುಕೊಂಡಿದ್ದರೆ ಕೆಲವರು ಆದಾಯವನ್ನು(ತಿಂಗಳ) ಆಧಾರವನ್ನಾಗಿಟ್ಟುಕೊಂಡು ಬಡತನವನ್ನು ಮಾಪನ ಮಾಡಿದ್ದಾರೆ. ಭಾರತದ ಯೋಜನಾ ಆಯೋಗವು "ನಗರ ಪ್ರದೇಶದಲ್ಲಿ ೨೪೦೦ಕ್ಯಾಲೊರಿಗಿಂತ ಕಡಿಮೆ ಮತ್ತು ಗ್ರಾಮೀಣ ಪ್ರದೇಶದಲ್ಲಿ ೨೩೦೦ ಕ್ಯಾಲೊರಿಗಿಂತಲು ಕಡಿಮೆ ಆಹಾರವನ್ನು ಸೇವಿಸುವವರು ಬಡವರು ಮತ್ತು ಬಡತನದ ರೇಖೆಯ ಕೆಳಗೆ ಜೀವಿಸುವವರು ಎಂದು" ವಾಖ್ಯಾನಿಸಿದೆ.[೨೮] ೨೦೦೧ರ ಜನಗಣತಿಯ ಪ್ರಕಾರ ಭಾರತದಲ್ಲಿ ಶೇಕಡ ೨೬.೧ರಷ್ಟು ಜನರು ಮತ್ತು ರಾಜ್ಯದಲ್ಲಿ ಶೇಕಡ ೧೭.೦ರಷ್ಟು ಜನರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವುದು ಕಂಡುಬರುತ್ತದೆ.

೨೦೦೪ರಲ್ಲಿ ಬಡವರೆಂದರೆ ಯಾರು? ಬಿ.ಪಿ.ಎಲ್.ಕಾರ್ಡ್ ಪಡೆಯಲು ಯಾರು ಅರ್ಹರು ಎಂಬುದನ್ನು ನಿರ್ಧರಿಸಲು ಭಾರತ ಸರಕಾರ ಕೆಲವೊಂದು ಮಾನದಂಡಗಳನ್ನು ಆಧಾರವಾಗಿಟ್ಟುಕೊಂಡು ಬಡವರನ್ನು ಗುರುತಿಸಿ ಬಿ.ಪಿ.ಎಲ್.ಕಾರ್ಡ್‌ಗಳನ್ನು ನೀಡಿದೆ. ಈ ಕೆಳಗಿನ ಮಾನದಂಡಗಳ ಆಧಾರದ ಮೇಲೆ ಅವರನ್ನು ಬಡವರೆಂದು ಗುರುತಿಸಲಾಗುತ್ತಿದೆ.

* ಬಿ.ಪಿ.ಎಲ್.ರೇಖೆಯ ಮಾನದಂಡಗಳು
* ೭.೫ ಹೆಕ್ಟೇರ್ ಅಥವಾ ಕಡಿಮೆ ಒಣಭೂಮಿ ೩ ಎಕರೆ ನೀರಾವರಿ ಭೂಮಿ ಹೊಂದಿರುವುದು.
* ಸೆಲ್‌ಫೋನ್ ಇದ್ದರೂ, ಸ್ಥಿರ ದೂರವಾಣಿ ಸಂಪರ್ಕ ಹೊಂದದವರು.

* ೧೦೦ ಸಿ.ಸಿ.ಗಿಂತ ಕಡಿಮೆ ಸಾಮರ್ಥ್ಯದ ವಾಹನ ಹೊಂದಿದವರು.

* ಬ್ಯಾಂಕ್ ಸಹಕಾರಿ ಸಂಘಗಳಲ್ಲಿ ಒಂದು ಲಕ್ಷ ರೂಪಾಯಿಗಿಂತ ಹೆಚ್ಚಿನ ಸಾಲ ಪಡೆಯಲಾರದವರು

* ಮಾಸಿಕ ೧೦೦೦೦ ಕ್ಕಿಂತ ಕಡಿಮೆ ವೇತನ ಪಡೆಯುವವರು

* ಆದಾಯ ತೆರಿಗೆ ಪಾವತಿಸಲು ಅರ್ಹತೆ ಇಲ್ಲದವರು

ಮೂಲ : ಪ್ರಜಾವಾಣಿ ೧೨ನೇ ಅಕ್ಟೋಬರ್ ೨೦೦೬

ಮೇಲೆ ತಿಳಿಸಿದ ಎಲ್ಲ ಅರ್ಹತೆ ಹೊಂದಿದವರು ಬಡತನದ ರೇಖೆಯ ಕೆಳಗೆ ಜೀವಿಸುವವರು ಮತ್ತು ಬಿಪಿಎಲ್ ಕಾರ್ಡ್ ಪಡೆಯಲು ಅರ್ಹರು ಎಂದು ಗುರುತಿಸಲಾಗಿದೆ. ರಾಜ್ಯದಲ್ಲಿ ೧.೨೦ ಕೋಟಿ ಪಡಿತರ ಚೀಟಿಗೆ ಅರ್ಹರನ್ನು ಗುರುತಿಸಲಾಗಿದ್ದು ಈ ಪುರೆ ೬೫ ಲಕ್ಷ ಮಂದಿ ಬಿಪಿಎಲ್ ಕಾರ್ಡ್‌ಗೆ ಅರ್ಹರು ಎಂದು ಗುರುತಿಸಲಾಗಿದೆ. ಕೊಪ್ಪಳ ಜಿಲ್ಲೆಯನ್ನು ಗಮನಿಸಿದರೆ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯ ಕುಟುಂಬಗಳು ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದು ಅವರಲ್ಲಿ ಅಧಿಕ ಸಂಖ್ಯೆಯ ಜನರು ಕಾರ್ಮಿಕರಾಗಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೩೨**

**ಬಡತನ ರೇಖೆಯ ಕೆಳಗೆ ಜೀವಿಸುತ್ತಿರುವ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು**

| ಕ್ರ.ಸಂ | ಪಡಿತರ ಚೀಟಿಯ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು | |
|---|---|---|---|---|
| ೧. | ಅಂತ್ಯೋದಯ | ೯೧ | ೩೦.೩೩ | ೮೫.೩೩ |
| ೨. | ಬಿ.ಪಿ.ಎಲ್ | ೧೬೫ | ೫೫.೦೦ | |
| ೩. | ಎಪಿಎಲ್ | ೨೩ | ೦೭.೬೭ | |
| ೪. | ಯಾವುದೂ ಇಲ್ಲ | ೨೧ | ೦೭.೦೦ | |
| | ಒಟ್ಟು | ೩೦೦ | ೧೦೦ | |

ಕೋಷ್ಟಕ ೬.೩೨ರನ್ನು ನೋಡಿದರೆ ಜಿಲ್ಲೆಯಲ್ಲಿ ಶೇಕಡ ೩೦.೩೩ರಷ್ಟು ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅಂತ್ಯೋದಯ ಪಡಿತರ ಚೀಟಿಯನ್ನು, ಶೇಕಡ ೫೫ರಷ್ಟು ಕಾರ್ಮಿಕರು ಬಿಪಿಎಲ್ ಪಡಿತರ ಚೀಟಿಯನ್ನು, ಶೇಕಡ ೭.೬೭ರಷ್ಟು ಕಾರ್ಮಿಕರು ಎಪಿಎಲ್ ಪಡಿತರ ಚೀಟಿಯನ್ನು ಮತ್ತು ಶೇಕಡ ೭ರಷ್ಟು ಕಾರ್ಮಿಕರು ಯಾವುದೇ ಪಡಿತರ ಚೀಟಿ ಸೌಲಭ್ಯವನ್ನು ಪಡೆಯದೆ ಇರುವುದು ಕಂಡುಬರುತ್ತದೆ. ಮೇಲಿನ ಅಂಕಿ ಸಂಖ್ಯೆಯನ್ನು ನೋಡಿದರೆ ಒಟ್ಟು ಶೇಕಡ ೮೫.೩೩ರಷ್ಟು ಮಹಿಳಾ

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವುದು ತಿಳಿದು ಬರುತ್ತದೆ. ಬಡತನ ರೇಖೆಯ ಕೆಳಗೆ ಜೀವಿಸುತ್ತಿರುವ ಈ ಕಾರ್ಮಿಕರು ಮೂಲಭೂತ ಸೌಲಭ್ಯಗಳನ್ನು ಪಡೆಯಲಾರದ ಸ್ಥಿತಿಯಲ್ಲಿ ಜೀವಿಸುತ್ತಿದ್ದಾರೆ ಇದರಿಂದಾಗಿ ತಮ್ಮ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ, ಪೌಷ್ಟಿಕ ಆಹಾರವನ್ನು ನೀಡಲು ವಿಫಲರಾಗುತ್ತಿದ್ದಾರೆ.




**ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿರುವ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಪ್ರಮಾಣ**

### ೬.೩.೭ ಶೈಕ್ಷಣಿಕ ಮತ್ತು ಆರೋಗ್ಯದ ಸ್ಥಿತಿಗತಿ

**ಶೈಕ್ಷಣಿಕ**

ಕೃಷಿ ಕಟ್ಟಡ ನಿರ್ಮಾಣ ಕಾರ್ಮಿಕರು ತಾವು ಅನಕ್ಷರಸ್ಥರು ಮತ್ತು ಕಡಿಮೆ ಶೈಕ್ಷಣಿಕ ಸ್ಥಿತಿಗತಿ ಹೊಂದಿದವರಾಗಿದ್ದರೂ ತಮ್ಮ ಮಕ್ಕಳನ್ನು ಚೆನ್ನಾಗಿ ಓದಿಸುತ್ತಿರುವುದು ಕ್ಷೇತ್ರಕಾರ್ಯದ ಸಮೀಕ್ಷೆಯಿಂದ ತಿಳಿದುಬರುತ್ತದೆ. ಈ ಕಾರ್ಮಿಕರ ಮಕ್ಕಳು ಪದವಿಪೂರ್ವ ಪದವಿ ಮತ್ತು ಸ್ನಾತಕೋತ್ತರ ಪದವಿಗಳಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಈ ಅಂಶವನ್ನು ಗಮನಿಸಿದರೆ ಇವರಿಗೆ ಮಕ್ಕಳಿಗೆ ಶಿಕ್ಷಣ ಕೊಡಿಸುವುದರ ಬಗ್ಗೆ ತಿಳುವಳಿಕೆ ಮೂಡಿರುವುದು ತಿಳಿದುಬರುತ್ತಿದೆ. ಆದರೆ ಹುಡುಗಿಯರನ್ನು ಪದವಿ ಶಿಕ್ಷಣ ಮುಗಿಸುವವರೆಗೂ ವಿದ್ಯಾಭ್ಯಾಸವನ್ನು ಮಾಡಿಸಲು ಹಿಂಜರಿಯುತ್ತಿರುವುದು ಇವರಲ್ಲಿ ಲಿಂಗ ಅಸಮಾನತೆಗೆ ಹಿಡಿದ ಕೈಗನ್ನಡಿಯಾಗಿದೆ.

**ಆರೋಗ್ಯ**

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕೆಲಸದ ಶ್ರಮದಿಂದಾಗಿ ಅನಾರೋಗ್ಯಕ್ಕೆ ಒಳಗಾಗು ತ್ತಿರುವುದು ಕಂಡುಬರುತ್ತದೆ. ಮಹಿಳಾ ಕೃಷಿ ಕಾರ್ಮಿಕರು ಹೆಚ್ಚಾಗಿ ಬಗ್ಗಿಕೊಂಡು ನೀರಿನಲ್ಲಿ ನಿಂತುಕೊಂಡು ಕೆಲಸ ಮಾಡುತ್ತಿರುವವರಿಂದ ಸೊಂಟನೋವು, ಮೈಕೈನೋವು, ತಲೆಸೂಲೆ, ದೂಳಿನಿಂದಾಗಿ ಅಸ್ತಮ, ಬಾರ ಹೊರುವುದರಿಂದಾಗಿ ಬೇಧಿ ಮತ್ತು ಜ್ವರದಿಂದ ನರಳುತ್ತಾರೆ. ಸಸಿ ನೆಡುವ ಸಮಯದಲ್ಲಿ,

ನೀರಿನಲ್ಲಿ ನಿಂತೇ ಕೆಲಸ ಮಾಡಬೇಕಾಗಿರುವುದರಿಂದ ಕಾಲುಗಳು ಸೆಳೆಯುತ್ತವೆ ಮತ್ತು ಶೇಂಗಾ ಕೀಳುವ ಸಂದರ್ಭದಲ್ಲಿ ಕೈಗಳಿಗೆ ಬೊಬ್ಬೆಗಳು ಏಳುತ್ತವೆ. ಇದರಿಂದಾಗಿ ಅವರು ಕೆಲಸಕ್ಕೆ ಗೈರುಹಾಜರಾಗಿ ದುಡಿಯದೆ ಉಪವಾಸ ಮಲಗಿ ಬೇಕಾದ ಪರಿಸ್ಥಿತಿ ಬರುತ್ತದೆ.

ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು ಮಾಡುವ ಕೆಲಸ ಬಗ್ಗಿ-ಎದ್ದು ಮಾಡುವ ಕೆಲಸವಾಗಿರುವುದರಿಂದ ಅವರು ಸೊಂಟನೋವು ಮೈಕೈ ನೋವು, ದೂಳಿನಿಂದಾಗಿ ಆಸ್ತಮ, ಕ್ಯಾನ್ಸರ್ ಮತ್ತು ಕೈ ಮತ್ತು ಕಾಲು ಬೆರಳಿಗೆ ರಂಧ್ರ ಬೀಳುವುದು, ಭಾರವಾದ ವಸ್ತುಗಳಾದ ಇಟ್ಟಂಗಿ ಮತ್ತು ಕಲ್ಲು ಹೊರುವುದರಿಂದಾಗಿ ಬೇಧಿ ಮತ್ತು ಮೂಲವ್ಯಾಧಿ ಇತ್ಯಾದಿ ರೋಗಗಳಿಂದ ನರಳುತ್ತಿರುವುದು ಕ್ಷೇತ್ರ ಕಾರ್ಯದ ಸಮೀಕ್ಷೆಯಿಂದ ತಿಳಿದುಬರುತ್ತದೆ.

ಹೀಗೆ ಅನಾರೋಗ್ಯದಿಂದ ನರಳಿದ ಸಂದರ್ಭದಲ್ಲಿ ಕೃಷಿ ಮತ್ತು ಮಹಿಳಾ ಕಾರ್ಮಿಕರು ಸರಿಯಾದ ಚಿಕಿತ್ಸೆಯನ್ನು ಪಡೆಯದೆ ನರಳುತ್ತಿರುವುದು ತಿಳಿದುಬರುತ್ತದೆ. ಅವರು ಅನಾರೋಗ್ಯವಾದಾಗ ಒಳ್ಳೆಯ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯದೆ ಸರಕಾರಿ ಆಸ್ಪತ್ರೆ ಮತ್ತು ನಾಟಿ ವೈದ್ಯ ಅಥವಾ ಮೂಡನಂಬಿಕೆಯ ಆಚರಣೆಯಿಂದ ತಮ್ಮ ಕಾಯಿಲೆ ವಾಸಿಮಾಡಿಕೊಳ್ಳುವ ಪದ್ಧತಿಗೆ ಒಳಗಾಗಿರುವುದು ಕಂಡುಬರುತ್ತದೆ. ಕೋಷ್ಟಕ ೬.೩೩ನ್ನು ಗಮನಿಸಿದರೆ ಅನಾರೋಗ್ಯಕ್ಕೆ ತುತ್ತಾದಾಗ ಅವರು ಯಾವ ಆಸ್ಪತ್ರೆಯಿಂದ ಚಿಕಿತ್ಸೆ ಪಡೆದರು ಎಂಬುದು ಸ್ಪಷ್ಟವಾಗುತ್ತದೆ. ಶೇಕಡ ೬೪ರಷ್ಟು ಕಾರ್ಮಿಕರು ಸರಕಾರಿ ಆಸ್ಪತ್ರೆಯಿಂದ, ಶೇಕಡ ೧೭.೬೭ರಷ್ಟು ಕಾರ್ಮಿಕರು ಖಾಸಗಿ ಆಸ್ಪತ್ರೆಯಲ್ಲಿ ಶೇಕಡ ೧೧.೩೩ರಷ್ಟು ಕಾರ್ಮಿಕರು ನಾಟಿ ವೈದ್ಯರು ಅಥವಾ ಮೂಢನಂಬಿಕೆಯಿಂದ ಮತ್ತು ಶೇಕಡ ೭ರಷ್ಟು ಕಾರ್ಮಿಕರು ಇತರೆ ಮೂಲಗಳಿಂದ ಚಿಕಿತ್ಸೆ ಪಡೆಯುತ್ತಿರುವುದು ಕಂಡುಬರುತ್ತಿದೆ. ಮೇಲಿನ ಅಂಕಿ ಸಂಖ್ಯೆಯನ್ನು ಗಮನಿಸಿದರೆ ಅಧಿಕ ಸಂಖ್ಯೆಯ ಕಾರ್ಮಿಕರು ಸರಕಾರಿ ಆಸ್ಪತ್ರೆ ಮತ್ತು ನಾಟಿ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿರುವುದು ಕಂಡುಬರುತ್ತದೆ. ಇದು ಅವರ ಕಾರ್ಮಿಕ ದಕ್ಷತೆಯನ್ನು ಕಡಿಮೆ ಮಾಡಿದೆ.

**ಕೋಷ್ಟಕ ೬.೩೩**

**ಅನಾರೋಗ್ಯಕ್ಕೆ ತುತ್ತಾದಾಗ ಚಿಕಿತ್ಸೆ ಪಡೆದ ಆಸ್ಪತ್ರೆ ವಿವರ**

| ಕ್ರ.ಸಂ | ಚಿಕಿತ್ಸೆ ಪಡೆದ ಆಸ್ಪತ್ರೆ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಸರಕಾರಿ | ೧೯೨ | ೦೪.೦೦ |
| ೨. | ಖಾಸಗಿ | ೫೩ | ೧೭.೬೭ |
| ೩. | ನಾಟಿ ವೈದ್ಯ/ಮೂಡನಂಬಿಕೆ | ೩೪ | ೧೧.೩೩ |
| ೪. | ಇತರೆ | ೨೧ | ೦೭.೦೦ |
| | ಒಟ್ಟು | ೩೦೦ | ೧೦೦ |




**ಅನಾರೋಗ್ಯಕ್ಕೆ ತುತ್ತಾದಾಗ ಚಿಕಿತ್ಸೆ ಪಡೆದ ಮಹಿಳಾ ಕಾರ್ಮಿಕರ ಶೇಕಡವಾರು ಪ್ರಮಾಣ**

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಬಹುಪಾಲು ಅನಕ್ಷರಸ್ಥರು ಮತ್ತು ಅಜ್ಞಾನಿಗಳು ಆಗಿರುವುದರಿಂದ ಅವರು ಕಾಯಿಲೆಗೆ ಸರಿಯಾದ ಚಿಕಿತ್ಸೆ ಪಡೆಯದೆ ಮೂಢ ನಂಬಿಕೆ ಮತ್ತು ನಾಟಿ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿರುವುದು ತಿಳಿದುಬರುತ್ತಿದೆ. ಇಂತಹ ಆಧುನಿಕ ಜಗತ್ತಿನಲ್ಲಿಯು ಅವರು ದೈವ್ವ ಭೂತ, ಮಾಟ, ಮಂತ್ರ ಎಂಬ ಆಚರಣೆಗಳನ್ನು ನಂಬಿ ಮಾನಸಿಕ ರೋಗಗಳಿಂದ ನರಳುತ್ತಿರುವುದು ಕ್ಷೇತ್ರ ಕಾರ್ಯದ ಸಮೀಕ್ಷೆಯಿಂದ ತಿಳಿದುಬಂದಿದೆ. 'ದೆವ್ವ' ಎಂಬ ಮಾನಸಿಕ ರೋಗಕ್ಕೆ ತುತ್ತಾಗುವವರಲ್ಲಿ ಅಧಿಕರು ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸದಲ್ಲಿ ನಿರತರಾದ ದಲಿತ ಮಹಿಳೆಯರೇ ಆಗಿದ್ದಾರೆ. ಹೀಗಾಗಿ ಮಾನಸಿಕ ಒತ್ತಡ ಅಥವಾ ರೋಗಕ್ಕೆ ತುತ್ತಾಗುವವರು ಮಹಿಳಾ ಕಾರ್ಮಿಕರೇ ಎಂಬುದು ಸ್ಪಷ್ಟವಾಗುತ್ತದೆ.

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ನಿರತರಾದ ಮಹಿಳೆಯರಲ್ಲಿ ಗರ್ಭಿಣಿ ಸ್ತ್ರೀಯರು ಸರಿಯಾದ ಸಮಯಕ್ಕೆ ಆಹಾರ ಸೇವಿಸದೆ ಪೌಷ್ಟಿಕ ಅಂಶವುಳ್ಳ ಆಹಾರ ಸೇವಿಸದೆ ಅನಿಮಿಯಾ ಅಥವಾ ರಕ್ತಹೀನತೆಯಿಂದ ನರಳುತ್ತಿದ್ದಾರೆ. ಅಲ್ಲದೆ ಹೆರಿಗೆ ಸಮಯದಲ್ಲಿ 'ಎಕ್ಲೂಮಿಸಿ' ಎಂಬ ರೋಗಕ್ಕೆ ತುತ್ತಾಗುತ್ತಿದ್ದಾರೆ ಎಂಬ ಅಂಶವನ್ನು ಜಿಲ್ಲಾ ಆಸ್ಪತ್ರೆಯ ವರದಿ ತಿಳಿಸುತ್ತದೆ. ಹಾಗೂ ಗೀತಾ ಸೇನ್, ಆರಿತ್ಯ ಅಯ್ಯರ್, ಆಶಾ ಹೆರ್‌ಗೆ ಅವರ ಒಂದು ಅಧ್ಯಯವು ಕೊಪ್ಪಳ ಜಿಲ್ಲೆಯ ಮಹಿಳೆಯರು ಸರಕಾರ ನೀಡುವ ವೈದ್ಯಕೀಯ ಸೌಲಭ್ಯವನ್ನು ಅತ್ಯಂತ ಕಡಿಮೆ ಪ್ರಮಾಣದಲ್ಲಿ (ಶೇಕಡ ೧೯.೪) ಪಡೆಯುತ್ತಿದ್ದಾರೆ ಎಂಬ ಮಾಹಿತಿಯನ್ನು ಸ್ಪಷ್ಟ ಪಡಿಸುತ್ತಿದೆ.[೨೨]

ಈ ಕಾರ್ಮಿಕರು ಕುಟುಂಬದ ಹೊರಗಿನ ಕೂಲಿ ಕೆಲಸದ ಜೊತೆಗೆ ಕುಟುಂಬದ ಒಳಗಿನ ಕೆಲಸಗಳನ್ನು ನಿಭಾಯಿಸುತ್ತಿರುವುದರಿಂದ ಹಾಗೂ ಕೆಲಸಗಳ ಮಧ್ಯೆ ಬಿಡುವು ದೊರೆಯುತ್ತಿಲ್ಲವಾದ್ದರಿಂದ ಸರಕಾರ ನೀಡುವ ವೈದ್ಯಕೀಯ ಸೌಲಭ್ಯವನ್ನು ಪಡೆಯಲು ಇವರಿಗೆ ಸಾಧ್ಯವಾಗುತ್ತಿಲ್ಲವಾಗಿದೆ. ಅಲ್ಲದೆ

ಈ ಕಾರ್ಮಿಕರು ವಾಸಿಸುವ ವಾಸಸ್ಥಾನಗಳು ಕೊಳಗೇರಿಗಳಾಗಿರುವುದರಿಂದ ಇವರು ನಾನಾ ರೋಗಕ್ಕೆ ತುತ್ತಾಗುತ್ತಿದ್ದಾರೆ. ಇದರಿಂದಾಗಿ ಇವರ ಆರೋಗ್ಯದ ಜೊತೆಗೆ ಆದಾಯವು ಹಾಳಾಗುತ್ತಿದೆ.

**೬.೩.೮ ಕುಟುಂಬ ಮತ್ತು ಸಮಾಜದಲ್ಲಿ ಮಹಿಳಾ ದುಡಿಮೆಗಾರರ ಸ್ಥಾನಮಾನ**

ನಮ್ಮ ಸಮಾಜವು ಪುರುಷಪ್ರಧಾನ ಸಮಾಜವಾಗಿರುವದರಿಂದ ಸಮಾಜದಲ್ಲಿ ಮಹಿಳೆಯರನ್ನು ಎರಡನೇ ದರ್ಜೆಯ ಪ್ರಜೆಯಾಗಿ ಕಾಣಲಾಗುತ್ತಿದೆ. ಅಲ್ಲದೆ ಕುಟುಂಬವು ಸಮಾಜದಲ್ಲಿನ ಒಂದು ಅಂಗ ಸಂಸ್ಥೆಯಾಗಿರುವುದರಿಂದ ಕುಟುಂಬದಲ್ಲಿ ಮಹಿಳೆ ಪುರುಷಪ್ರಧಾನ ವ್ಯವಸ್ಥೆಯೊಂದಿಗೆ ಹೊಂದಿಕೊಂಡು ಹೋಗಬೇಕಾದುದು ಅನಿವಾರ್ಯವಾಗಿರುತ್ತದೆ. ಹೀಗಾಗಿ ಕುಟುಂಬ ಮತ್ತು ಸಮಾಜದಲ್ಲಿ ಮಹಿಳೆ ಕಡಿಮೆ ಸ್ಥಾನಮಾನವನ್ನು ಹೊಂದಿರುವುದು ಕಂಡುಬರುತ್ತದೆ.

**ಕುಟುಂಬ**

ಮಹಿಳೆ ಗಂಡನಿಗೆ ಸರಿಸಮಾನವಾಗಿ ಕೂಲಿ ದುಡಿದು ಕುಟುಂಬಕ್ಕೆ ಆದಾಯ ತಂದರೂ ಕುಟುಂಬ ದಲ್ಲಿ ಅವಳಿಗೆ ಉನ್ನತ ಸ್ಥಾನ ದೊರೆಯುತ್ತಿಲ್ಲ. ಕೆಲವೇ ಕೆಲವು ಮಹಿಳೆಯರು ಕುಟುಂಬದಲ್ಲಿ ದಿನದ ವೆಚ್ಚ, ಮಕ್ಕಳ ಶಿಕ್ಷಣ ಮತ್ತು ಮದುವೆ, ಹಾಗೂ ಉದ್ಯೋಗದ ಆಯ್ಕೆಯಲ್ಲಿ ನಿರ್ಣಯ ತೆಗೆದು ಕೊಳ್ಳುವ ಹಕ್ಕನ್ನು ಪಡೆದುಕೊಂಡಿದ್ದಾರೆ. ಆದರೆ ಕುಟುಂಬದಲ್ಲಿನ ಇಂತಹ ವಿಷಯಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನಿರ್ಣಯ ತೆಗೆದುಕೊಳ್ಳುವರು ಗಂಡ ಮತ್ತು ಅತ್ತೆ, ಮಾವನವರಾಗಿರುತ್ತಾರೆ. ಅಲ್ಲದೆ ಕುಟುಂಬ ಕಲ್ಯಾಣ ಯೋಜನೆಯನ್ನು ಅಳವಡಿಸಿಕೊಳ್ಳಲು ನಿರ್ಣಯಿಸುವವರು ಸಹ ಗಂಡಸರಾಗಿದ್ದಾರೆ. ಕುಟುಂಬ ಯೋಜನೆಗೆ ಒಳಗಾಗುವವಳು ಹೆಂಗಸಾಗಿದ್ದರೆ ಅದನ್ನು ನಿರ್ಣಯಿಸುವವರು ಗಂಡನಾಗಿರುತ್ತಾನೆ. =ஶ]C ŷÔóÒ "| 'ಕುಟುಂಬ ಯೋಜನೆ'ಯಲ್ಲಿ ಅನೇಕ ವಿಧಾನಗಳಿದ್ದರು ಪುರುಷರು ಅವುಗಳನ್ನು ಅಳವಡಿಸಿಕೊಳ್ಳದೇ ಇರುವುದು ಪುರುಷಪ್ರಧಾನತೆಯ ಸಂಕೇತವೆಂಬಂತ್ತಿದೆ. ಕುಟುಂಬದಲ್ಲಿ ಮಹಿಳೆ ಮೂರು ವಿಧದ ದುಡಿಮೆಗೆ ಒಳಗಾಗುತ್ತಾಳೆ. ಪ್ರತಿದಿನ ಆದಾಯದ ದುಡಿಮೆ, ಸಂತಾನೋತ್ಪತ್ತಿ ದುಡಿಮೆ ಮತ್ತು ಕೌಟುಂಬಿಕ ದುಡಿಮೆ ಎಂಬ ಮೂರು ವಿಧದ ದುಡಿಮೆಯಲ್ಲಿ ತೊಡಗುತ್ತಾಳೆ. ಆದರೆ ಪುರುಷರು ಮಾತ್ರ ಕೇವಲ ಉತ್ಪಾದನಾ ದುಡಿಮೆಯಲ್ಲಿ ತೊಡಗಿರುತ್ತಾರೆ. ಕೂಲಿ ದುಡಿದು ಅವಳು ಗಳಿಸುವ ಆದಾಯ ಸಹ ಅವಳ ಕೈ ಸೇರುವುದಿಲ್ಲ. ಶೇಕಡ ೮೯ರಷ್ಟು ಮಹಿಳೆಯರು ತಮ್ಮ ಕೂಲಿಯನ್ನು ಗಂಡ, ತಂದೆ ಮತ್ತು ಅತ್ತೆ, ಮಾವನವರ ಕೈಯಲ್ಲಿ ನೀಡುತ್ತಾರೆ. ಬೆಳಿಗ್ಗೆ ೪ ಅಥವಾ ೫ ಗಂಟೆಯಿಂದ ರಾತ್ರಿ ೧೦.೩೦ ಗಂಟೆವರೆಗೆ ಗೃಹಕೃತ್ಯದಲ್ಲಿ ತೊಡಗುವ ಈ ಮಹಿಳೆ ಕುಟುಂಬದ ವೆಚ್ಚ ಉಳಿತಾಯ ಚಟುವಟಿಕೆಯಲ್ಲಿ ತೊಡಗಿ ಕುಟುಂಬಕ್ಕೆ ಆದಾಯ ತರುತ್ತಾಳೆ.

೧. ಏಳುವ ಸಮಯ

ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ಬೆಳಿಗ್ಗೆ ಬೇಗ ಎದ್ದು ಗೃಹಕೃತ್ಯದಲ್ಲಿ ತೊಡಗುತ್ತಿರುವುದು ಕಂಡುಬರುತ್ತದೆ. ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ಒಟ್ಟು ೩೦೦ ಜನ ಮಹಿಳಾ ಕಾರ್ಮಿಕರಲ್ಲಿ ಶೇಕಡ ೧೨.೩೩ರಷ್ಟು ಕಾರ್ಮಿಕರು ೪ ಗಂಟೆಗೆ ಎದ್ದು ಗೃಹಕೃತ್ಯಗಳಲ್ಲಿ ತೊಡಗುತ್ತಿದ್ದರೆ. ಶೇಕಡ ೭೯.೬೭ರಷ್ಟು ಕಾರ್ಮಿಕರು ೫ ಗಂಟೆಗೆ, ಶೇಕಡ ೭ರಷ್ಟು ಕಾರ್ಮಿಕರು ೬ಗಂಟೆಗೆ ಮತ್ತು ಶೇಕಡ ೧ರಷ್ಟು ಕಾರ್ಮಿಕರು ೮ ಗಂಟೆಗೆ ಎದ್ದು ಗೃಹಕೃತ್ಯಗಳಲ್ಲಿ ತೊಡಗುತ್ತಿರುವುದು ಕಂಡುಬರುತ್ತದೆ. ಅಧಿಕ ಸಂಖ್ಯೆಯ ಶೇಕಡ ೭೯.೬೭ರಷ್ಟು ಮಹಿಳೆಯರು ೫ ಗಂಟೆಗೆ ಎದ್ದು ಗೃಹಕೃತ್ಯದಲ್ಲಿ ತೊಡಗುತ್ತಾರೆ. ಇದನ್ನು ಕೋಷ್ಟಕ ೬.೩೪ರಲ್ಲಿ ನೋಡಬಹುದು.

**ಕೋಷ್ಟಕ ೬.೩೪**

**ಮಹಿಳೆಯರು ಏಳುವ ಸಮಯ**

| ಕ್ರ.ಸಂ. | ಏಳುವ ಸಮಯ ಬೆಳಗಿನ ಜಾವ | ಕಾರ್ಮಿಕರ ಸಂಖ್ಯೆ | ಶೇಕಡ ಪ್ರಮಾಣ |
|---|---|---|---|
| ೧. | ೪ ಗಂಟೆ | ೩೭ | ೧೨.೩೩ |
| ೨. | ೫ ಗಂಟೆ | ೨೩೯ | ೭೯.೬೭ |
| ೩. | ೬ ಗಂಟೆ | ೨೧ | ೭.೦೦ |
| ೪. | ೭ ಗಂಟೆ | ೦೩ | ೧.೦೦ |
| ಒಟ್ಟು | | ೩೦೦ | ೧೦೦ |




ಮಹಿಳಾ ಕಾರ್ಮಿಕರು ಏಳುವ ಸಮಯದ ಪ್ರಮಾಣ

೨. ಗೃಹಕೃತ್ಯ

ಕೂಲಿ ದುಡಿಯುವುದರ ಜೊತೆಗೆ ಮಹಿಳಾ ಕಾರ್ಮಿಕರು ಕುಟುಂಬದಲ್ಲಿ ಗೃಹಕೃತ್ಯ ಕೆಲಸಗಳಲ್ಲಿ ತೊಡಗುತ್ತಾರೆ. ಕಸಗುಡಿಸುವುದು, ಮುಸುರೆ ತಿಕ್ಕುವುದು, ನೀರು ತರುವುದು, ಅಡಿಗೆ ಮಾಡುವುದು, ಬಡಿಸುವುದು ಮತ್ತು ಅತಿಥಿ ಅಭ್ಯಾಗತರನ್ನು ನೋಡಿಕೊಳ್ಳುವುದು ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಆದರೆ ಈ ಕೆಲಸಕ್ಕೆ ಮಕ್ಕಳು, ಗಂಡ ಅತ್ತೆ, ಮಾವನವರು ಸಹಾಯ ಮಾಡುವ ಪ್ರಮಾಣ ಅತ್ಯಂತ ಕಡಿಮೆ. ಹೀಗಾಗಿ ಮಹಿಳೆಯರೆ ಎಲ್ಲ ಗೃಹಕೃತ್ಯಗಳನ್ನು ಮಾಡಬೇಕಾಗುತ್ತದೆ. ಕೋಷ್ಟಕ ೬.೩೪ರಲ್ಲಿ ತೋರಿಸಿರುವಂತೆ ಮಹಿಳೆಗೆ ಗೃಹಕೃತ್ಯದಲ್ಲಿ ಮಕ್ಕಳು ಶೇಕಡ ೨೨.೩೩ರಷ್ಟು, ಗಂಡ ಶೇಕಡ ೭.೬೭ರಷ್ಟು ಅತ್ತೆ ಮಾವನವರು ಶೇಕಡ ೪.೩೩ರಷ್ಟು ಸಹಾಯ ಮಾಡುತ್ತಿದ್ದರೆ ಸ್ವಾತ ತಾವೇ ೬೫.೬೭ರಷ್ಟು ಮಾಡುತ್ತಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೩೫

ಗೃಹಕೃತ್ಯದಲ್ಲಿ ಮಹಿಳೆಗೆ ಸಹಾಯ ಮಾಡುವವರು

| ಕ್ರ.ಸಂ | ಸಹಾಯ ಮಾಡುವವರು | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಮಕ್ಕಳು | ೬೭ | ೨೨.೩೩ |
| ೨. | ಗಂಡ | ೨೩ | ೭.೬೭ |
| ೩. | ಅತ್ತೆ/ಸಹೋದರಿ | ೧೩ | ೪.೩೩ |
| ೪. | ಸ್ವಂತ ತಾವೇ | ೧೯೭ | ೬೫.೬೭ |
| | ಒಟ್ಟು | ೩೦೦ | ೧೦೦% |

೩. ಮಕ್ಕಳ ಲಾಲನೆ ಪಾಲನೆ

ಕುಟುಂಬದಲ್ಲಿ ಮಕ್ಕಳ ಲಾಲನೆ ಪಾಲನೆ ಮಾಡುವುದು ಮಹಿಳೆಯರ ಆಧ್ಯಾ ಕರ್ತವ್ಯವಾಗಿದೆ. ಆದರು ಕುಟುಂಬದ ಇತರ ಸದಸ್ಯರು ಮಕ್ಕಳ ಲಾಲನೆ ಪಾಲನೆಯಲ್ಲಿ ತೊಡಗಿರುತ್ತಾರೆ. ಆ ಮೂಲಕ ದುಡಿಯುವ ಮಹಿಳೆಗೆ ಸಹಾಯ ಮಾಡುತ್ತಾರೆ. ಮಕ್ಕಳು ಚಿಕ್ಕವಿದ್ದ ಸಂದರ್ಭದಲ್ಲಿ ಮಗುವನ್ನು ಎತ್ತುಕೊಂಡೆ ಕೆಲಸಕ್ಕೆ ಹೋಗುತ್ತಿರುವುದು ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರಲ್ಲಿ ಸಾಮಾನ್ಯವಾಗದೆ.

ಕೋಷ್ಟಕ ೭.೩೫ರಲ್ಲಿ ತೋರಿಸಿದಂತೆ ಮಹಿಳಾ ಕಾರ್ಮಿಕರಿಗೆ ಮಕ್ಕಳ ಲಾಲನೆ ಪಾಲನೆಯಲ್ಲಿ ಮಕ್ಕಳು ಶೇಕಡ ೧೪.೩೩ರಷ್ಟು, ಗಂಡ ಶೇಕಡ ೬.೩೩ರಷ್ಟು, ಅತ್ತೆ ಮಾವ ಶೇಕಡ ೬೫.೬೭ರಷ್ಟು ಸಹಾಯ ಮಾಡಿದರೆ ಸ್ವಂತ ಮಹಿಳೆಯೇ ೧೩.೬೭ರಷ್ಟು ಮಾಡುತ್ತಿರುವುದು ಕಂಡುಬರುತ್ತದೆ.

ಕೋಷ್ಟಕ ೬.೩೬

ಮಹಿಳೆಗೆ ಮಕ್ಕಳ ಲಾಲನೆ ಪಾಲನೆಯಲ್ಲಿ ಸಹಾಯ ಮಾಡುವವರು ಪ್ರಮಾಣ

| ಕ್ರ.ಸಂ | ಮಕ್ಕಳ ಲಾಲನೆ ಪಾಲನೆಯಲ್ಲಿ ಸಹಾಯ ಮಾಡುವವರು | ಕಾರ್ಮಿಕರ ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧. | ಮಕ್ಕಳು | ೪೩ | ೧೪.೩೩ |
| ೨. | ಗಂಡ | ೧೯ | ೬.೩೩ |
| ೩. | ಅತ್ತೆ-ಮಾವ | ೧೯೭ | ೬೫.೬೭ |
| ೪. | ಸ್ವಂತ ಮಹಿಳೆ | ೪೧ | ೧೩.೬೭ |
| | ಒಟ್ಟು | ೩೦೦ | ೧೦೦% |

ಕೋಷ್ಟಕ ೬.೩೬ರಲ್ಲಿ ತೋರಿಸಿರುವಂತೆ ಶೇಕಡ ೪.೧ರಷ್ಟು ಮಹಿಳಾ ಕಾರ್ಮಿಕರು ಮಕ್ಕಳನ್ನು ಎತ್ತಿಕೊಂಡು ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತಿದೆ. ಶೇಕಡ ೫೯ರಷ್ಟು ಮಹಿಳಾ ಕಾರ್ಮಿಕರು ಮಕ್ಕಳನ್ನು ಮನೆಯಲ್ಲಿ ಬಿಟ್ಟು ಹೋಗುತ್ತಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೩೭

ಮಕ್ಕಳನ್ನು ಎತ್ತಿಕೊಂಡು ಕೆಲಸಕ್ಕೆ ಹೋಗುವ ಮಹಿಳಾ ಕಾರ್ಮಿಕರ ಪ್ರಮಾಣ

| ಮಕ್ಕಳನ್ನು ಎತ್ತಿಕೊಂಡು ಕೆಲಸಕ್ಕೆ ಹೋಗುವವರ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|
| ಹೌದು | ೧೨೩ | ೪೧.೦೦ |
| ಇಲ್ಲ | ೧೭೭ | ೫೯.೦೦ |
| ಒಟ್ಟು | ೩೦೦ | ೧೦೦% |

### ೪. ವೆಚ್ಚ ಉಳಿತಾಯದ ಕಾರ್ಯಗಳು

ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ತಮ್ಮ ಕೂಲಿ ಮುಗಿದ ನಂತರ ಕುಟುಂಬದ ವೆಚ್ಚ ಉಳಿತಾಯದ ಕಾರ್ಯಗಳಲ್ಲಿ ತೊಡಗುತ್ತಾರೆ. ಮುಖ್ಯವಾಗಿ ಮಹಿಳಾ ಕೃಷಿ ಕಾರ್ಮಿಕರು ತಮ್ಮ ಕೂಲಿಕೆಲಸದ ಮುಗಿದ ನಂತರ ಮನೆಗೆ ಉರುವಲು ಕಟ್ಟಿಗೆ ಮೇವು, ಕುಳ್ಳುಗಳನ್ನು ಆಯ್ದುಕೊಂಡು ಬರುವುದು ಸಾಮಾನ್ಯವಾಗಿದೆ. ಈ ಚಟುವಟಿಕೆಗಳು ಪರೋಕ್ಷವಾಗಿ ಕುಟುಂಬಕ್ಕೆ ಆದಾಯವನ್ನು ಒದಗಿಸುತ್ತವೆ. ಅಲ್ಲದೆ ಕುಟುಂಬ ಮಾಡಬಹುದಾದ ವೆಚ್ಚವನ್ನು ಉಳಿಸುತ್ತವೆ ಕೋಷ್ಟಕ ೩.೩೧ ಗಮನಿಸಿದರೆ ಶೇಕಡ ೫೧ರಷ್ಟು ಮಹಿಳಾ ಕಾರ್ಮಿಕರು ಕೆಲಸ ಮುಗಿದ ನಂತರ ಮನೆಗೆ ಉರುವಲು ಸೌದೆ, ಮೇವುಗಳನ್ನು ತೆಗೆದುಕೊಂಡು ಹೋಗುತ್ತಿರುವುದು ಕಂಡುಬರುತ್ತಿದೆ.

ಕೋಷ್ಟಕ ೬.೩೮

ವೆಚ್ಚ ಉಳಿತಾಯದ ಚಟುವಟಿಕೆಗಳ ಪ್ರಮಾಣ

| ವೆಚ್ಚ ಉಳಿತಾಯದ ವಿವರ | ಕಾರ್ಮಿಕರ ಸಂಖ್ಯೆ | ಶೇಕಡ ಪ್ರಮಾಣ |
|---|---|---|
| ಹೌದು | ೧೫೩ | ೫೧.೦೦ |
| ಇಲ್ಲ | ೧೪೭ | ೪೯.೦೦ |
| ಒಟ್ಟು | ೩೦೦ | ೧೦೦ |

೫. ಮಹಿಳಾ ಕಾರ್ಮಿಕರ ಕೂಲಿಯ ಒಡೆತನ

ಮಹಿಳೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿದು ಕೂಲಿ ಪಡೆಯುತ್ತಿದ್ದರೂ ಕೂಲಿಯ ಒಡೆತನ ಅವಳದಾಗಿರುವುದಿಲ್ಲ. ಈ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬ ವ್ಯವಸ್ಥೆ ಸಿಲುಕಿರುವದರಿಂದ ಮಹಿಳೆ ದುಡಿದ ಕೂಲಿಯು ಕುಟುಂಬದ ಯಜಮಾನ ಅಥವಾ ಒಡೆಯನ ಕೈ ಸೇರುತ್ತದೆ. ಸ್ವಂತ ಕೂಲಿ ದುಡಿದು ಕೂಲಿ ಪಡೆದ ಮಹಿಳೆಯ ಕೈ ಸೇರುವ ಪ್ರಮಾಣ ಬಹಳ ಕಡಿಮೆ. ಕೋಷ್ಟಕ ೬.೩೮ನ್ನು ಗಮನಿಸಿದರೆ ಮಹಿಳೆ ದುಡಿದ ಕೂಲಿ ಯಾರ ಒಡೆತನದಲ್ಲಿರುತ್ತದೆಂಬುದು ಸ್ಪಷ್ಟವಾಗುತ್ತದೆ. ಶೇಕಡ ೫೬ರಷ್ಟು ಮಹಿಳೆಯರು ತಮ್ಮ ಕೂಲಿಯನ್ನು ಗಂಡನ ಕೈಯಲ್ಲಿ, ಶೇಕಡ ೧೭.೩೩ರಷ್ಟು ಮಹಿಳೆಯರು ತಮ್ಮ ಕೂಲಿಯನ್ನು ತಂದೆಯ ಕೈಯಲ್ಲಿ, ಶೇಕಡ ೧೫.೬೭ರಷ್ಟು ಮಹಿಳೆಯರು ತಮ್ಮ ಕೂಲಿಯನ್ನು ಅತ್ತೆ-ಮಾವನವರ ಕೈಯಲ್ಲಿ ಮತ್ತು ಶೇಕಡ ೧೧ರಷ್ಟು ಮಹಿಳೆಯರು ತಮ್ಮ ಕೂಲಿಯನ್ನು ತಮ್ಮ ಬಳಿಯಲ್ಲಿ ಇಟ್ಟುಕೊಳ್ಳುತ್ತಿರುವುದು ತಿಳಿದುಬರುತ್ತದೆ.

ಕೋಷ್ಟಕ ೬.೩೯

ಮಹಿಳಾ ಕೂಲಿಯ ಒಡೆತನದ ಪ್ರಮಾಣ

| ಕೂಲಿಯ ಒಡೆತನ | ಕಾರ್ಮಿಕರ ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|
| ಗಂಡ | ೧೬೮ | ೫೬.೦೦ |
| ತಂದೆ | ೫೨ | ೧೭.೩೩ |
| ಅತ್ತೆ-ಮಾವ | ೪೭ | ೧೫.೬೭ |
| ಸ್ವಂತಹ ಮಹಿಳೆಯರಲ್ಲಿ | ೩೩ | ೧೧.೦೦ |
| ಒಟ್ಟು | ೩೦೦ | ೧೦೦ |




ಕಾರ್ಮಿಕ ಮಹಿಳೆಯ ಕೂಲಿ ಒಡೆತನದ ಪ್ರಮಾಣ

**೬. ಬೆಳಗಿನ ಊಟ ಅಥವಾ ಉಪಾಹಾರ ಮಾಡದೆ ಕೆಲಸಕ್ಕೆ ಹೋಗುವ ಸ್ಥಿತಿ**

ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ಬೆಳಗಿನ ಊಟ ಅಥವಾ ಉಪಾಹಾರ ಮಾಡದೆ ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತಿದೆ. ಮಹಿಳೆ ಬೆಳಗ್ಗೆ ಎದ್ದು ಗೃಹಕೃತ್ಯದಲ್ಲಿ ತೊಡಗುತ್ತಿರುವುದರಿಂದ ಉಪಾಹಾರ ಅಥವಾ ಊಟ ಮಾಡುವುದಕ್ಕೆ ಸಮಯವೇ ಸಿಗುವುದಿಲ್ಲ. ಹೀಗಾಗಿ ಈ ಮಹಿಳಾ ಕಾರ್ಮಿಕರು ಉಪಾಹಾರ ಅಥವಾ ಊಟ ಮಾಡದೆ ಕೆಲಸಕ್ಕೆ ಹೋಗುತ್ತಾರೆ.

ಕೋಷ್ಟಕ ೬.೪೦ನ್ನು ಗಮನಿಸಿದರೆ ಶೇಕಡ ೪೦.೩೩ ಮಹಿಳಾ ಕಾರ್ಮಿಕರು ಬೆಳಗಿನ ಊಟ ಅಥವಾ ಉಪಹಾರ ಮಾಡಿ ಕೆಲಸಕ್ಕೆ ಹೋಗುತ್ತಿರುವುದು ಕಂಡುಬಂದರೆ, ಶೇಕಡ ೨೩.೬೭ ರಷ್ಟು ಮಹಿಳಾ ಕಾರ್ಮಿಕರು ಊಟ ಮಾಡದೆ ಕೆಲಸಕ್ಕೆ ಹೋಗುತ್ತಿದ್ದರೆ, ಶೇಕಡ ೭.೩೩ರಷ್ಟು ಕಾರ್ಮಿಕರು ಕೆಲಸಕ್ಕೆ ಹೊರಡುವ ದಾರಿಯಲ್ಲಿ ಆಹಾರ ಸೇವಿಸುತ್ತಿದ್ದರೆ, ಕೃಷಿ ಕಾರ್ಮಿಕರು ದಾರಿಯಲ್ಲಿಯೇ ಆಹಾರ ತಿನ್ನುತ್ತಾ ಹೋಗುವುದು ಕಂಡುಬರುತ್ತದೆ. ಶೇಕಡ ೨೮.೬೭ರಷ್ಟು ಕಾರ್ಮಿಕರು ಕೆಲಸದ ಸ್ಥಳದಲ್ಲಿ ಊಟ ಅಥವಾ ಉಪಾಹಾರ ಸೇರಿಸುತ್ತಿರುವುದು ಕಂಡುಬರುತ್ತಿದೆ. ಒಟ್ಟು ಕಾರ್ಮಿಕರಲ್ಲಿ ಶೇಕಡ ೫೯.೬೭ರಷ್ಟು ಕಾರ್ಮಿಕರು ಮನೆಯಲ್ಲಿ ಊಟ ಅಥವಾ ಉಪಹಾರ ಮಾಡದೆ ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತಿದೆ.

**ಕೋಷ್ಟಕ ೬.೪೦**

**ಬೆಳಗಿನ ಊಟ ಅಥವಾ ಉಪಹಾರ ಮಾಡಿ ಕೆಲಸಕ್ಕೆ ಹೊರಡುವ ಕಾರ್ಮಿಕರ ಪ್ರಮಾಣ**

| ಕ್ರ.ಸಂ | ಉಪಾಹಾರ/ಊಟ ಸೇವಿಸುವವರ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು ಪ್ರಮಾಣ |
|---|---|---|---|
| ೧. | ಊಟ/ಉಪಾಹಾರ ಮಾಡುತ್ತೇವೆ | ೧೨೧ | ೪೦.೩೩ |
| ೨. | ಊಟ/ಉಪಾಹಾರ ಮಾಡುವವರಿಲ್ಲ | ೭೧ | ೨೩.೬೭ |
| ೩. | ದಾರಿಯಲ್ಲಿ ಸೇವಿಸುತ್ತೇವೆ | ೨೨ | ೭.೩೩ |
| ೪. | ಕೆಲಸದ ಸ್ಥಳದಲ್ಲಿ ಮಾಡುತ್ತೇವೆ | ೮೬ | ೨೮.೬೭ |
| | ಒಟ್ಟು | ೩೦೦ | ೧೦೦ |

೬. ರಾತ್ರಿ ಊಟ ಮಾಡುವ ಸಮಯ

ಮಹಿಳಾ ಕಾರ್ಮಿಕರು ಕುಟುಂಬದಲ್ಲಿ ಗೃಹಕೃತ್ಯ ಮತ್ತು ಕೂಲಿಕೆಲಸದಲ್ಲಿ ತೊಡಗಿ ಆದಾಯ ಗಳಿಸಿದರೂ ಸರಿಯಾದ ಸಮಯಕ್ಕೆ ಆಹಾರ ಸೇವಿಸದೆ ಇರುವುದು ಕಂಡುಬರುತ್ತಿದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಂಡತಿ ಗಂಡನ ಊಟ ಆದ ನಂತರ ಊಟ ಮಾಡಬೇಕೆಂಬ ಪದ್ಧತಿ ಇರುವುದರಿಂದ ಗಂಡ ಬರುವವರೆಗೂ ಕಾದು ಕುಳಿತಿರಬೇಕಾಗುತ್ತದೆ. ಒಂದು ವೇಳೆ ಗಂಡ ಬೇಗ ಬಂದರೂ ಕುಟುಂಬದ ಸದಸ್ಯರ ಊಟ ಆದ ನಂತರ ಅಳಿದುಳಿದ ಆಹಾರ ಸೇವಿಸಬೇಕಾಗುತ್ತದೆ. ಕೆಲ ಬಡ ಕುಟುಂಬಗಳಲ್ಲಿ ಗಂಡ ಮತ್ತು ಮಕ್ಕಳು ಊಟ ಮಾಡಿದ ನಂತರ ಊಟ ಮಾಡಲು ಏನೂ ಉಳಿದಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಬರೀ ನೀರನ್ನು ಕುಡಿದು ಮಲಗುವಂತಹ ಪರಿಸ್ಥಿತಿ ಮಹಿಳಾ ಕಾರ್ಮಿಕರದಾಗಿದೆ. ಮಹಿಳೆಯರ ಹಸಿವಿನ ನಿಗ್ರಹ ಧೋರಣೆಗೆ ಪುರುಷಪ್ರಧಾನ ವ್ಯವಸ್ಥೆ ಮತ್ತು ಪುರುಷ ಶಾಹಿ ಧೋರಣೆಯೇ ಕಾರಣವಾಗಿದೆ.

ಕೋಷ್ಟಕ ೬.೪೧

ಮಹಿಳಾ ಕಾರ್ಮಿಕರ ರಾತ್ರಿ ಊಟದ ವಿವರ

| ಕ್ರ.ಸಂ | ರಾತ್ರಿ ಊಟದ ವಿವರ | ಒಟ್ಟು ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಎಲ್ಲರಿಗಿಂತ ಮೊದಲು | ೦೩ | ೧.೦೦ |
| ೨. | ಮಕ್ಕಳ ಊಟದ ನಂತರ | ೧೯ | ೬.೩೩ |
| ೩. | ಗಂಡನ ಊಟದ ನಂತರ | ೫೧ | ೧೭.೦೦ |
| ೪. | ಕುಟುಂಬದ ಸದಸ್ಯರ ಊಟದ ನಂತರ | ೧೭೮ | ೫೯.೩೩ |
| ೫. | ಕುಟುಂಬದ ಸದಸ್ಯರ ಜೊತೆಗೆ | ೪೪ | ೧೪.೬೭ |
| ೬. | ರಾತ್ರಿ ಊಟ ಮಾಡದೇ ಇರುವುದು | ೦೫ | ೧.೬೭ |
| | ಒಟ್ಟು | ೩೦೦ | ೧೦೦ |

ಮಾದರಿ ಸಮೀಕ್ಷೆಗಾಗಿ ೩೦೦ ಜನ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಆಯ್ಕೆ ಮಾಡಿಕೊಂಡು ಸಂದರ್ಶಿಸಿದಾಗ ಮೇಲೆ ತಿಳಿಸಿದ ಅಂಕಿ ಅಂಶಗಳು ಕಂಡುಬಂದವು. ಕೋಷ್ಟಕ ೬.೪೧ರಲ್ಲಿ ತೋರಿಸಿದಂತೆ ಶೇಕಡ ೧ರಷ್ಟು ಮಹಿಳಾ ಕಾರ್ಮಿಕರು ಕುಟುಂಬದ ಇತರ ಸದಸ್ಯರಿಗಿಂತ ಪೂರ್ವ ರಾತ್ರಿ ಊಟ ಮಾಡುತ್ತಿದ್ದರೆ, ಶೇಕಡ ೬.೩೩ರಷ್ಟು ಮಹಿಳಾ ಕಾರ್ಮಿಕರು ಮಕ್ಕಳ ಊಟದ ನಂತರ, ಶೇಕಡ ೧೭ರಷ್ಟು ಮಹಿಳಾ ಕಾರ್ಮಿಕರು ಗಂಡನ ಊಟದ ನಂತರ, ಶೇಕಡ ೫೯.೩೩ರಷ್ಟು

ಕಾರ್ಮಿಕರು ಕುಟುಂಬದ ಸದಸ್ಯರ ಊಟದ ನಂತರ, ಶೇಕಡ ೧೪.೬೦ರಷ್ಟು ಕಾರ್ಮಿಕರು ಕುಟುಂಬದ ಸದಸ್ಯರ ಜೊತೆಯಲ್ಲಿ ರಾತ್ರಿ ಊಟ ಮಾಡುತ್ತಿರುವುದು ಕಂಡುಬಂದರೆ, ಶೇಕಡ ೧.೬೦ರಷ್ಟು ಮಹಿಳಾ ಕಾರ್ಮಿಕರು ರಾತ್ರಿ ಊಟ ಮಾಡದೆ ಹಾಗೆ ಮಲಗುತ್ತಿರುವುದು ಕಂಡುಬರುತ್ತಿದೆ.




ಮಹಿಳಾ ಕಾರ್ಮಿಕರ ರಾತ್ರಿ ಊಟದ ವಿವರ

**ಸಮಾಜ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಶೇಕಡ ೫೦ರಷ್ಟು ಜನ ಹಿಂದುಳಿದ ಜಾತಿಗೆ ಸೇರಿದ ಪರಿಶಿಷ್ಟಜಾತಿ ಮತ್ತು ಪಂಗಡಕ್ಕೆ ಸೇರಿದವರಾಗಿದ್ದಾರೆ. ಹೀಗಾಗಿ ಇವರನ್ನು ಸಮಾಜದಲ್ಲಿ ಕೀಳಾಗಿ ಕಾಣಲಾಗುತ್ತದೆ. ಹಿಂದುಳಿದ ವರ್ಗ ಮತ್ತು ಇತರ ಜಾತಿಯ ಮಹಿಳೆಯರು ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿಯುತ್ತಿದ್ದರೂ ಸಮಾಜದಲ್ಲಿ ಅವರ ಸ್ಥಾನ ಕಡಿಮೆಯಾಗಿರುತ್ತದೆ. ಬಡತನದಿಂದ ನರಳುತ್ತಿರುವ ಈ ಕಾರ್ಮಿಕರಿಗೆ ಸಮಾಜದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನ ಸಹ ಕಡಿಮೆ ಇರುತ್ತದೆ.

ಗ್ರಾಮೀಣ ಭಾಗದಲ್ಲಿ ಮತ್ತು ನಗರ ಪ್ರದೇಶಗಳಲ್ಲಿ ಈ ಕಾರ್ಮಿಕರನ್ನು ಅಸ್ಪೃಶ್ಯರಂತೆ ಕಾಣಲಾಗುತ್ತಿದೆ. ಕೆಲವು ಸಂದರ್ಭದಲ್ಲಿ ಮಹಿಳಾ ಕೃಷಿ ಕಾರ್ಮಿಕರು ಮೇಲ್ಜಾತಿಯವರಿಂದ ಜಾತಿನಿಂದನೆಗೂ ಒಳಗಾತ್ತಿದ್ದಾರೆ. ಮಹಿಳೆಯರ ಸಬಲೀಕರಣದಲ್ಲಿ ಸ್ತ್ರೀಶಕ್ತಿ ಮತ್ತು ಸ್ವಸಹಾಯ ಗುಂಪುಗಳು ಪ್ರಮುಖ ಪಾತ್ರ ವಹಿಸುತ್ತವೆ. ಆದರೆ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ಅನಕ್ಷರಸ್ಥರು ಮತ್ತು ಕಡಿಮೆ ಜಾತಿಗೆ ಸೇರಿದವರಾಗಿರುವುದರಿಂದ ಅವರನ್ನು ಸ್ವಸಹಾಯ ಗುಂಪಿನ ಸದಸ್ಯರನ್ನಾಗಿ ಸೇರಿಸಿ ಕೊಳ್ಳುತ್ತಿಲ್ಲ. ಒಂದು ವೇಳೆ ಅವರೇ ಸ್ವಸಹಾಯ ಗುಂಪನ್ನು ರಚಿಸಿಕೊಂಡಿದ್ದರೂ ಅವರ ಉಳಿತಾಯ ಪ್ರಮಾಣ ಕಡಿಮೆ ಇರುತ್ತದೆ. ಇದರಿಂದಾಗಿ ಅವರು ಬ್ಯಾಂಕಿನಿಂದ ಸಾಲಸೌಲಭ್ಯ ಪಡೆಯುವದರಿಂದ ವಂಚಿತರಾಗುತ್ತಾರೆ. ಸ್ವಸಹಾಯ ಗುಂಪಿನಿಂದ ಆದಾಯ ಗಳಿಸುವ ಉತ್ಪನ್ನಕಾರಕ ವಸ್ತುಗಳನ್ನು

ಉತ್ಪಾದಿಸುವ ಕೌಶಲ್ಯ ಇವರಿಗೆ ಇಲ್ಲದಿರುವುದರಿಂದ ಕಡಿಮೆ ಆದಾಯವನ್ನು ಪಡೆಯುತ್ತಾರೆ. ಇದರಿಂದಾಗಿ ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಪಡೆಯುತ್ತಾರೆ.

ಸಮಾಜದಲ್ಲಿ ಪ್ರಭುತ್ವ ಸಂಪಾದಿಸಿದ ಮೇಲು ಜಾತಿಯವರು ಕೆಳಜಾತಿಯ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರನ್ನು ರಾಜಕೀಯವಾಗಿ ದುರ್ಬಳಕೆ ಮಾಡಿಕೊಳ್ಳುತ್ತಿರುವುದು ಕಂಡುಬರುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಗೆ ಮೀಸಲಾತಿ ಮತ್ತು ಜಾತಿವಾರು ಮೀಸಲಾತಿ ಜಾರಿಗೆ ಬಂದಿರುವುದರಿಂದ ಈ ಮಹಿಳೆಯರಿಗೆ ಬೆಂಬಲ ನೀಡಿ ಸ್ಥಳೀಯ ಚುನಾವಣೆಯಲ್ಲಿ ಗೆಲ್ಲಿಸಿ ಅವರ ಪರವಾಗಿ ಅಧಿಕಾರ ಚಲಾಯಿಸುತ್ತಾರೆ. ಒಂದು ವೇಳೆ ಆರ್ಥಿಕವಾಗಿ ಸಬಲರಿದ್ದ ಕಾರ್ಮಿಕ ಮಹಿಳೆ ಸ್ವಸಾಮರ್ಥ್ಯದಿಂದ ಚುನಾವಣೆಯಲ್ಲಿ ವಿಜೇತಳಾದರೂ ಅವಳ ಪರವಾಗಿ ಅವಳ ಗಂಡ ಅಥವಾ ಮಗ ಅಧಿಕಾರ ಚಲಾಯಿಸುತ್ತಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಪಿತೃಪ್ರಧಾನ ವ್ಯವಸ್ಥೆ ಪ್ರಬಲವಾಗಿರುವುದರಿಂದ ಮಹಿಳೆಯ ಎಲ್ಲ ರಂಗದಲ್ಲಿ ಪ್ರವೇಶಿಸಿದರೂ ಅವಳನ್ನು ಪುರುಷರ ಅಧೀನದಲ್ಲಿರುವಂತೆ ಮಾಡುತ್ತದೆ. ಹೀಗಾಗಿ ಅವಳು ಸಮಾಜದಲ್ಲಿ ಎರಡನೇ ದರ್ಜೆಯ ಪ್ರಜೆಯಾಗಿ ಬಾಳಬೇಕಾಗುತ್ತದೆ.

**೯. ಸ್ತ್ರೀಶಕ್ತಿ ಮತ್ತು ಸ್ವಸಹಾಯ ಗುಂಪಿನ ಸದಸ್ಯತ್ವ**

ಮಹಿಳಾ ಸಬಲೀಕರಣದ ಮೂಲ ಮಂತ್ರವಾದ ಸ್ವಸಹಾಯ ಗುಂಪಿನ ಸದಸ್ಯತ್ವವನ್ನು ಪಡೆದಿರುವುದರಲ್ಲಿ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ಕಡಿಮೆ ಪ್ರಮಾಣದಲ್ಲಿ ಇರುವುದು ಕಂಡು ಬರುತ್ತದೆ. ಕೋಷ್ಟಕ ೬.೪೨ನ್ನು ನೋಡಿದರೆ ಶೇಕಡ ೬೬ರಷ್ಟು ಕಾರ್ಮಿಕರು ಸ್ವಸಹಾಯ ಗುಂಪಿನ ಸದಸ್ಯರಾಗಿಲ್ಲದಿದ್ದದ್ದು ಕಂಡುಬರುತ್ತಿದೆ. ಒಟ್ಟು ಕಾರ್ಮಿಕರಲ್ಲಿ ಶೇಕಡ ೩೦.೬೭ರಷ್ಟು ಕಾರ್ಮಿಕರು ಸ್ವಸಹಾಯ ಗುಂಪಿನ ಸದಸ್ಯರಾಗಿದ್ದರೆ ಕೇವಲ ಶೇಕಡ ೩.೩೩ರಷ್ಟು ಕಾರ್ಮಿಕರು ಸ್ವಸಹಾಯ ಗುಂಪಿನ ಅಧ್ಯಕ್ಷರಾಗಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೪೨**

**ಮಹಿಳಾ ಕಾರ್ಮಿಕರ ಸ್ವಸಹಾಯ ಗುಂಪಿನ ಸದಸ್ಯತ್ವದ ಪ್ರಮಾಣ**

| ಕ್ರ.ಸಂ | ಸದಸ್ಯತ್ವದ ವಿವರ | ಕಾರ್ಮಿಕರ ಸಂಖ್ಯೆ | ಶೇಕಡ ಪ್ರಮಾಣ |
|---|---|---|---|
| ೧. | ಸದಸ್ಯರಾಗಿದ್ದಾರೆ | ೯೨ | ೩೦.೬೭ |
| ೨. | ಅಧ್ಯಕ್ಷ ಉಪಾಧ್ಯಕ್ಷ | ೧೦ | ೦೩.೩೩ |
| ೩. | ಸದಸ್ಯರಾಗಿಲ್ಲ | ೧೯೮ | ೬೬.೦೦ |
| | ಒಟ್ಟು ಸದಸ್ಯರು | ೩೦೦ | ೧೦೦.೦೦ |

೨. ಸ್ವಾಸಹಾಯ ಗುಂಪಿನಿಂದ ಸಾಲ ಸೌಲಭ್ಯ

ಮಹಿಳಾ ಕಾರ್ಮಿಕರ ಉಳಿತಾಯದ ಸಾಮರ್ಥ್ಯ ಕಡಿಮೆ ಇರುವುದರಿಂದ ಅವರ ಗುಂಪಿನ ಸಾಲ ಪಡೆಯುವ ಸಾಮರ್ಥ್ಯವು ಸಹ ಕಡಿಮೆ ಇರುತ್ತದೆ. ಒಟ್ಟು ಸ್ವಸಹಾಯ ಗುಂಪಿನ ಸದಸ್ಯರಾದ ಕಾರ್ಮಿಕರಲ್ಲಿ ಗುಂಪಿನಿಂದ ಮತ್ತು ಬ್ಯಾಂಕಿನಿಂದ ಸಾಲಸೌಲಭ್ಯ ಪಡೆದ ಪ್ರಮಾಣ ಕಡಿಮೆ ಇದೆ. ಕೋಷ್ಟಕ ೬.೪೩ನ್ನು ಗಮನಿಸಿದರೆ ಸ್ವಸಹಾಯ ಗುಂಪಿನ ಸದಸ್ಯರಾದ ಒಟ್ಟು ೧೦೨ ಕಾರ್ಮಿಕರಲ್ಲಿ ಶೇಕಡ ೩೩.೩೩ರಷ್ಟು ಸದಸ್ಯರು ಮಾತ್ರ ಸ್ವಸಹಾಯ ಗುಂಪಿನಿಂದ ಸಾಲಸೌಲಭ್ಯ ಪಡೆದಿದ್ದಾರೆ. ಉಳಿದ ಶೇಕಡ ೬೬.೬೭ರಷ್ಟು ಕಾರ್ಮಿಕರು ಯಾವುದೇ ರೀತಿಯ ಸಾಲ ಸೌಲಭ್ಯ ಪಡೆಯದಿಲ್ಲದಿರುವುದು ಕಂಡುಬರುತ್ತದೆ.

**ಕೋಷ್ಟಕ ೬.೪೩**

**ಸ್ವಸಹಾಯ ಗುಂಪಿನಿಂದ ಸಾಲ ಸೌಲಭ್ಯ ಪಡೆದ ಕಾರ್ಮಿಕರ ಪ್ರಮಾಣ**

| ಕ್ರ.ಸಂ. | ಸಾಲ ಸೌಲಭ್ಯ ಪಡೆದ ವಿವರ | ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|
| ೧. | ಹೌದು | ೩೪ | ೩೩.೩೩ |
| ೨. | ಇಲ್ಲ | ೬೮ | ೬೬.೬೭ |
| | ಒಟ್ಟು ಸ್ವಸಹಾಯ ಗುಂಪಿನ ಸದಸ್ಯರು | ೧೦೨ | ೧೦೦ |

ಸ್ವಸಹಾಯ ಗುಂಪಿನ ಸದಸ್ಯತ್ವ ಪಡೆದ ಮಹಿಳಾ ಕಾರ್ಮಿಕರ ಸಂಖ್ಯೆ ಕಡಿಮೆ ಇದೆ. ಅಲ್ಲದೆ ಅವರು ಸದಸ್ಯರಾಗಿದ್ದವರು ಪಡೆದ ಸಾಲ ಸೌಲಭ್ಯದ ಪ್ರಮಾಣ ಸಹ ಕಡಿಮೆ ಇದೆ. ಈ ಗುಂಪಿನ ಸದಸ್ಯರಿಗೆ ಯಾವುದೇ ರೀತಿಯ ಕೌಶಲ್ಯ ಇಲ್ಲದಿರುವುದರಿಂದ ಆದಾಯ ತರುವ ಉತ್ಪನ್ನಗಳನ್ನು ಇವರು ಉತ್ಪಾದಿಸುತ್ತಿಲ್ಲ. ಕೆಲವು ಮಹಿಳೆಯರು ಸ್ವಸಹಾಯ ಗುಂಪಿನಿಂದ ಅಗರಬತ್ತಿ ಮತ್ತು ಸಂಡಿಗೆಯನ್ನು ತಯಾರಿಸುತ್ತಿದ್ದರೂ ಮಾರುಕಟ್ಟೆಗೆ ಸರಿಯಾದ ರೀತಿಯಲ್ಲಿ ಮಾರಾಟ ಮಾಡದೆ ನಷ್ಟ ಅನುಭವಿಸುತ್ತಿದ್ದಾರೆ. ಇದರಿಂದಾಗಿ ಇವರು ಆರ್ಥಿಕವಾಗಿ ದುರ್ಬಲರಾಗುತ್ತಿದ್ದಾರೆ.

ಸಮಾಜದಲ್ಲಿ ವ್ಯಕ್ತಿಯ ಸ್ಥಾನಮಾನ ಆರ್ಥಿಕ ಸ್ಥಾನ, ಅಂತಸ್ತಿನಿಂದ ನಿರ್ಧರಿತವಾಗುವದರಿಂದ ಆರ್ಥಿಕವಾಗಿ ಸಬಲರಾದವರು ಉನ್ನತ ಸ್ಥಾನಮಾನವನ್ನು ಪಡೆದರೆ ಆರ್ಥಿಕವಾಗಿ ದುರ್ಬಲರಾದವರು ಕಡಿಮೆ ಸ್ಥಾನಮಾನವನ್ನು ಪಡೆಯುತ್ತಾರೆ. ಸಾಮಾನ್ಯವಾಗಿ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ಆರ್ಥಿಕವಾಗಿ ದುರ್ಬಲರಾಗಿರುವುದರಿಂದ ಸಹಜವಾಗಿ ಅವರು ಕಡಿಮೆ ಸಾಮಾಜಿಕ ಸ್ಥಾನಮಾನಕ್ಕೆ ಒಳಗಾಗುತ್ತಾರೆ. ಆದ್ದರಿಂದಾಗಿ ಸಮಾಜದಲ್ಲಿ ಮಹಿಳೆಯರ ಸ್ಥಾನ ಕಡಿಮೆಯಾಗುತ್ತದೆ.

### ೬.೩.೯. ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರ ಸಮಸ್ಯೆಗಳು

ಬಹುತೇಕ ಕೃಷಿ ಕಾರ್ಮಿಕರೇ ಕಟ್ಟಡ ನಿರ್ಮಾಣ ಕಾರ್ಮಿಕರಾಗಿ ದುಡಿಯುತ್ತಿರುವುದರಿಂದ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಸಮಸ್ಯೆಗಳು ಒಂದೇ ರೀತಿಯಾಗಿರುತ್ತವೆ. ಆದರೆ ಕೆಲಸದ ಸ್ವರೂಪದಲ್ಲಿ ಮತ್ತು ಕೂಲಿಯಲ್ಲಿ ಮಾತ್ರ ಕೆಲವೊಂದು ವ್ಯತ್ಯಾಸಗಳು ಕಂಡುಬರುತ್ತವೆ. ಅಲ್ಲದೆ ಈ ಎರಡು ವೃತ್ತಿಗಳು ಅಥವಾ ಉದ್ಯೋಗಗಳು ಅಸಂಘಟಿತ ವಲಯದಲ್ಲಿ ಬರುತ್ತಿರುವುದರಿಂದ ಅಸಂಘಟಿತವಲಯದ ಕಾರ್ಮಿಕರ ಸಮಸ್ಯೆಗಳೇ ಈ ಕಾರ್ಮಿಕರ ಸಮಸ್ಯೆಗಳಾಗಿರುತ್ತವೆ. ಆದರು ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ನಿರ್ಮಾಣ ಕಾರ್ಮಿಕರು ಕೆಲವೊಂದು ನಿರ್ದಿಷ್ಟ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬರುತ್ತದೆ. ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ನೋಡಬಹುದು.

**೧. ಕೆಲಸದ ಲಿಂಗ ತಾರತಮ್ಯ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕೆಲಸದಲ್ಲಿ ಲಿಂಗ ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಕೃಷಿ ಕೆಲಸವನ್ನೇ ತೆಗೆದುಕೊಂಡರೆ ಕಳೆ ತೆಗೆಯುವುದು, ಕೊಯ್ಯುವುದು, ಹೊರುವುದು ಮತ್ತು ರಾಶಿ ಮಾಡುವುದು ಇತ್ಯಾದಿ ಕೆಲಸಗಳನ್ನು ಗಮನಿಸಿದರೂ ಪುರುಷರು ಮಾಡುವ ಕೆಲಸ ಹಗುರದಾಯಕ ಮತ್ತು ಕಡಿಮೆ ಸಮಯದಲ್ಲಿ ಮುಗಿಯುವುದು ಕಂಡುಬರುತ್ತದೆ. ಕಟ್ಟಡ ನಿರ್ಮಾಣ ಕಾರ್ಯದಲ್ಲಿಯೂ ಇದೇ ರೀತಿ ಕೆಲಸದಲ್ಲಿ ಲಿಂಗ ತಾರತಮ್ಯ ಕಂಡುಬರುತ್ತದೆ. ಪುರುಷರು ಕೈ ಕೌಶಲ್ಯವಿರುವ ಕಡಿಮೆ ತ್ರಾಸದ ಕೆಲಸಗಳನ್ನು ಮಾಡುತ್ತಿದ್ದರೆ. ಮಹಿಳೆಯರು ಕೌಶಲ್ಯರಹಿತ ಹಾಗೂ ಭಾರವಾದ ಕೆಲಸಗಳನ್ನು ಮಾಡುತ್ತಾರೆ. ಇದರಿಂದಾಗಿ ಪುರುಷ ಕಾರ್ಮಿಕ ಶ್ರೇಷ್ಠ ಮತ್ತು ಮಹಿಳಾ ಕಾರ್ಮಿಕರು ನಿಕೃಷ್ಟರು ಎಂಬ ಭಾವನೆಯನ್ನು ಬೆಳೆಸುತ್ತವೆ.

**೨. ಕೂಲಿ ತಾರತಮ್ಯ ಮತ್ತು ಕಡಿಮೆ ಕೂಲಿ**

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕೂಲಿ ತಾರತಮ್ಯದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕೊಪ್ಪಳ ಜಿಲ್ಲೆಯ ಕೃಷಿ ಮತ್ತು ಕಟ್ಟಡ ನಿರ್ಮಾಣದ ಕಾರ್ಮಿಕರ ಕೂಲಿಯನ್ನು ಗಮನಿಸಿದರೆ ಅಜಗಜಾಂತರ ವ್ಯತ್ಯಾಸವಿರುವುದು ಕಂಡುಬರುತ್ತಿದೆ. ಮಹಿಳೆ ಮತ್ತು ಪುರುಷರು ಮಾಡುವ ಕೆಲಸ ಒಂದೇ ಆದರೂ ಅವರು ಪಡೆಯುವ ಕೂಲಿ ಮಾತ್ರ ವ್ಯತ್ಯಾಸದಿಂದ ಕೂಡಿರುತ್ತದೆ. ಕೃಷಿ ಕೆಲಸಕ್ಕೆ ಮಹಿಳೆಯರಿಗೆ ದಿನಕ್ಕೆ ೩೫ರಿಂದ ೫೦ ರೂಪಾಯಿಗಳವರೆಗೆ ನೀಡಿದರೆ ಪುರುಷರಿಗೆ ೯೦ರಿಂದ ೧೨೦ ರೂಪಾಯಿಗಳನ್ನು ನೀಡುತ್ತಿರುವುದು ಕಂಡುಬರುತ್ತಿದೆ. ಕಟ್ಟಡ ನಿರ್ಮಾಣ ಕೆಲಸಕ್ಕೆ ಮಹಿಳಾ ಕಾರ್ಮಿಕರಿಗೆ ೬೫ರಿಂದ ೭೦ ರೂಪಾಯಿಗಳವರೆಗೆ ನೀಡಿದರೆ ಪುರುಷರಿಗೆ ೧೦೦ರಿಂದ ೧೫೦ ರೂಪಾಯಿಗಳವರೆಗೂ ಕೂಲಿ ನೀಡುತ್ತಿರುವುದು ಕಂಡುಬರುತ್ತದೆ. ಈ ಅಂಶವನ್ನು ಗಮನಿಸಿದರೆ ಪುರುಷರು ಮಹಿಳೆಯ

ಎರಡರಷ್ಟು ಕೂಲಿಯನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಇಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನ ಎಂಬ ಕಾಯ್ದೆಗೆ ಯಾವುದೇ ಮನ್ನಣೆ ಇಲ್ಲದ್ದಾಗಿದೆ.

**೩. ಅನಾರೋಗ್ಯಕರ ಕೆಲಸದ ಸ್ಥಿತಿ ಮತ್ತು ಕೆಲಸದ ಪರಿಸರ**

ಕೆಲವೊಂದು ಸಂದರ್ಭದಲ್ಲಿ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅನಾರೋಗ್ಯಕರ ವಾತಾವರಣದಲ್ಲಿ ಕೆಲಸ ಮಾಡಬೇಕಾದ ಸಂದರ್ಭಕ್ಕೆ ಒಳಗಾಗುತ್ತಿದ್ದಾರೆ. ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ವಾಸಿಸುವ ವಾಸಸ್ಥಾನಗಳು ಬಹುತೇಕ ಕೊಳಗೇರಿಗಳಾಗಿರುತ್ತವೆ. ಕೆಲವು ಕಾರ್ಮಿಕರು ಮಾತ್ರ ಒಳ್ಳೆಯ ಪ್ರದೇಶಗಳಲ್ಲಿ ವಾಸ ಮಾಡುತ್ತಾರೆ. ಇದರಿಂದಾಗಿ ಅನಾರೋಗ್ಯಕ್ಕೆ ತುತ್ತಾಗುತ್ತಾರೆ. ಕೃಷಿ ಕೆಲಸದಲ್ಲಿ ರಾಶಿ ಮಾಡುವ ಅವಧಿಯಲ್ಲಿ ದೂಳು ಮತ್ತು ಉಸಿರುಕಟ್ಟುವ ಪರಿಸರದಲ್ಲಿ ಕೆಲಸ ಮಾಡಬೇಕಾಗುತ್ತದೆ. ಕಟ್ಟಡ ನಿರ್ಮಾಣ ಕೆಲಸದಲ್ಲಿ ದೂಳು ಮತ್ತು ಬಹುಮಹಡಿಗಳಲ್ಲಿ ಕಟ್ಟಿಗೆ ಚಟ್ಟಿನ ಮೇಲೆ ಕೆಲಸ ಮಾಡಬೇಕಾಗುತ್ತದೆ. ಇದು ಜೀವಕ್ಕೆ ಅಪಾಯದ ಕೆಲಸ. ಅಲ್ಲದೆ ದೂಳಿನಿಂದ ಆರೋಗ್ಯಕ್ಕೆ ಹಾನಿ ಉಂಟಾಗುತ್ತದೆ. ಈ ಅಂಶಗಳನ್ನು ಗಮನಿಸಿದರೆ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅನಾರೋಗ್ಯಕರ ಪರಿಸರ ಮತ್ತು ಕೆಲಸದ ಸ್ಥಿತಿಯಲ್ಲಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

**೪. ಎರಡೂ ವಿಧದ ಕೆಲಸದ ಭಾರ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಎರಡು ವಿಧದ ಕೆಲಸದ ಬಾರವನ್ನು ಹೊರುತ್ತಿದ್ದಾರೆ. ಈ ಮಹಿಳಾ ಕಾರ್ಮಿಕರು ಕುಟುಂಬಕ್ಕೆ ಆದಾಯ ತರುವ ಕೂಲಿ ಕೆಲಸದ ಜೊತೆಗೆ ಕೌಟುಂಬಿಕ ಕೆಲಸ ಮತ್ತು ಸಂತಾನೋತ್ಪತ್ತಿ ಕೆಲಸಗಳನ್ನು ಮಾಡುತ್ತಿದ್ದಾರೆ. ಗೃಹಕೃತ್ಯ ಮತ್ತು ಮಕ್ಕಳ ಪಾಲನೆ ಪೋಷಣೆಯಲ್ಲಿ ಕುಟುಂಬದ ಇತರೇ ಸದಸ್ಯರ ನೆರವು ಇದೆ. ಆದರು ಅದರ ಪ್ರಮಾಣ ಕಡಿಮೆ. ಹೀಗಾಗಿ ಅಧಿಕವಾಗಿ ಉಳಿದ ಎರಡು ವಿಧದ ಕೆಲಸದ ಭಾರವನ್ನು ಮಹಿಳೆಯರೇ ಹೊರಬೇಕಾಗುತ್ತದೆ. ಇದಕ್ಕೆ ಪುರುಷಶಾಹಿಯ ಪ್ರಭಾವವೇ ಕಾರಣವಾಗಿದೆ. ಇದರಿಂದಾಗಿ ಗೃಹಕೃತ್ಯ ಮತ್ತು ಮಕ್ಕಳ ಲಾಲನೆ ಪಾಲನೆ ಮಹಿಳೆಯರ ಜವಾಬ್ದಾರಿ ಎಂದು ತಿಳಿಯಲಾಗಿದೆ.

**೫. ಶಿಕ್ಷಣ, ತರಬೇತಿ ಮತ್ತು ಕೌಶಲ್ಯದ ಕೊರತೆ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಬಹುತೇಕರು ಅನಕ್ಷರಸ್ಥರಾಗಿರುವುದರಿಂದ ಹಾಗೂ ಒಂದು ಹಂತದವರೆಗೆ ಶಿಕ್ಷಣವನ್ನು ಪಡೆಯದೇ ಇರುವುದರಿಂದ ಇವರಿಗೆ ಬೇರೆ ಕೆಲಸದ ಬಗ್ಗೆ ತರಬೇತಿ ಮತ್ತು ಕೌಶಲ್ಯವೆಂಬುದು ಇರುವುದಿಲ್ಲ. ಆದ್ದರಿಂದ ಅವರು ಕೃಷಿ ಕೆಲಸವನ್ನು ತೆಗೆದುಕೊಂಡರೆ ಇದಕ್ಕೆ ತರಬೇತಿ ಮತ್ತು ಕೌಶಲ್ಯದ ಅವಶ್ಯಕತೆ ಬೇಕಾಗಿಲ್ಲ. ಕೃಷಿ ಕೆಲಸ ಮಾಡುತ್ತಲೇ ಆ ಕೆಲಸಗಳನ್ನು

ಕಲಿಯುತ್ತಾರೆ. ಹಾಗೇ ಕಟ್ಟಡ ನಿರ್ಮಾಣದ ಕೆಲಸವು ಸಹ ಮೇಷನ್ ಅಥವಾ ಗಾರೆ ಕೆಲಸವನ್ನು ಬಿಟ್ಟರೆ ಇತರ ಎಲ್ಲ ಕೆಲಸಕ್ಕೆ ಕೌಶಲ್ಯ ಬೇಕಾಗಿರುವುದಿಲ್ಲ. ಆದರೆ ಮಹಿಳಾ ಕಾರ್ಮಿಕರಿಗೆ ಗಾರೆ ಕೆಲಸ ಮಾಡಲು ಬಿಡುವುದಿಲ್ಲ. ಹೀಗಾಗಿ ಅವರು ಕೂಲಿಯಾಳುಗಳಾಗಿ ದುಡಿಯುತ್ತಾರೆ. ಆದ್ದರಿಂದ ಅವರು ಕೃಷಿ ಮತ್ತು ನಿರ್ಮಾಣ ಕೆಲಸದಲ್ಲಿ ತೊಡಗುತ್ತಾರೆ.

ಇಂತಹ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಶಿಕ್ಷಣ ನೀಡಿ ಈ ಕೆಲಸಗಳನ್ನು ಹೊರತುಪಡಿಸಿ ಇತರ ಉದ್ಯೋಗದಲ್ಲಿ ತೊಡಗಿ ಅವರಿಗೆ ತರಬೇತಿ ಮತ್ತು ಅವರಲ್ಲಿ ಕೌಶಲ್ಯವನ್ನು ಬೆಳೆಸಬೇಕಾದುದು ಅವಶ್ಯವಿದೆ.

**೬. ಕೆಲಸದ ಅಭದ್ರತೆ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕೆಲಸದ ಅಭದ್ರತೆಯ ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ. ಕೃಷಿ ಕೆಲಸ ನಿಸರ್ಗದ ಮೇಲೆ ಅವಲಂಬಿಸಿರುವುದರಿಂದ ಅಲ್ಲಿ ಕಾರ್ಮಿಕರಿಗೆ ವರ್ಷಪೂರ್ತಿ ಕೆಲಸ ದೊರೆಯುವುದಿಲ್ಲ. ಅಲ್ಲದೆ ಕೃಷಿ ಕೆಲಸಗಳು ವಾರದಲ್ಲಿ ಕೆಲವೇ ದಿನಗಳಲ್ಲಿ ದೊರೆಯುವುದರಿಂದ ಉಳಿದ ದಿನಗಳಲ್ಲಿ ನಿರುದ್ಯೋಗಿಯಾಗಿ ಉಳಿಯಬೇಕಾಗುತ್ತದೆ. ಅಲ್ಲದೆ ಜಮೀನುದಾರರಿಗೆ ಹೆಚ್ಚಿನ ಕೂಲಿಯ ಬೇಡಿಕೆಯನ್ನು ಮಾಡಿದರೆ ಇಲ್ಲಿ ಕೆಲಸ ಕಳೆದುಕೊಳ್ಳದ ಸಾಧ್ಯತೆ ಅಧಿಕವಿರುತ್ತದೆ. ಹೀಗಾಗಿ ಕೆಲಸದ ಅಭದ್ರತೆ ನಡುವೆ ದುಡಿಯಬೇಕಾಗುತ್ತದೆ. ಕಟ್ಟಡ ನಿರ್ಮಾಣ ಕಾರ್ಮಿಕರ ಸಮಸ್ಯೆಯೂ ಇದೇ ಆಗಿದೆ. ಇವರಿಗೆ ವಾರಪೂರ್ತಿ ಕೆಲಸ ದೊರೆಯುವುದಿಲ್ಲ. ವಾರದಲ್ಲಿ ಎರಡು ದಿನ ಅಥವಾ ಮೂರು ದಿನ ನಿರುದ್ಯೋಗಿಗಳಾಗಿ ಉಳಿಯಬೇಕಾಗುತ್ತದೆ. ಅಲ್ಲದೆ ಮಹಿಳಾ ಕಾರ್ಮಿಕರು ಹೆಚ್ಚಿನ ಕೂಲಿ ಕೇಳಿದರೆ, ಮೇಷನ್‌ಗಳಿಗೆ ಎದುರು ಮಾತನಾಡಿದರೆ ಕೆಲಸ ಕಳೆದುಕೊಳ್ಳ ಬೇಕಾಗುತ್ತದೆ. ಹೀಗಾಗಿ ಕಟ್ಟಡ ನಿರ್ಮಾಣ ಕಾರ್ಮಿಕರಿಗೂ ಕೆಲಸದ ಭದ್ರತೆ ಎಂಬುದು ಇರುವುದಿಲ್ಲ.

**೭. ಆರೋಗ್ಯದ ಸಮಸ್ಯೆ**

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಆರೋಗ್ಯದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕೃಷಿ ಕಾರ್ಮಿಕರು ಕೃಷಿ ಕೆಲಸವನ್ನು ದೂಳು, ಘಟ, ನಿಂತ ನೀರು, ಮತ್ತು ಬಗ್ಗಿ ಎದ್ದು ಮಾಡುವುದರಿಂದ ಮಹಿಳಾ ಕಾರ್ಮಿಕರು ಅಸ್ತಮ, ಮಂಡಿನೋವು, ಕ್ಷಯರೋಗ, ಕಾಲು ಸುಲಿಕೆ ಮತ್ತು ಚರ್ಮರೋಗದಿಂದ ನರಳುತ್ತಾರೆ. ಕಟ್ಟಡ ನಿರ್ಮಾಣ ಕೆಲಸ ಸಹ ಭಾರ ಹೊರುವುದು, ದೂಳಿನಲ್ಲಿ ಕೆಲಸ, ಬಗ್ಗಿ ಎದ್ದು ಪುಟ್ಟಿಗಳನ್ನು ಕೊಡುವುದು, ಹಾಕುವುದು, ಸೆಂಟರಿಂಗ್ ಒಡೆಯುವುದು ಇತ್ಯಾದಿ ಸ್ವರೂಪಗಳನ್ನು ಹೊಂದಿರುವುದರಿಂದ ಹಾಗೂ ಹೆಚ್ಚಾಗಿ ಸಿಮೆಂಟಿನ ಜೊತೆಯಲ್ಲಿ ಕೆಲಸ ಮಾಡುವುದರಿಂದ ಈ ಕಾರ್ಮಿಕರು, ಕೈ ಬೆರಳಿಗೆ ತೂತು(ರಂಧ್ರ), ಚರ್ಮರೋಗ, ಆಸ್ತಮ, ಕ್ಷಯ, ಮೈಕೈ ನೋವು, ರಕ್ತಬೇಧಿ

ಇತ್ಯಾದಿ ಕಾಯಿಲೆಗಳಿಂದ ನರಳುತ್ತಾರೆ. ಈ ಕೆಲಸ ಮಾಡಲು ಮೇಸ್ತ್ರಿಗಳು ಕೈ ಕಾಲುಗಳಿಗೆ ಕಾಲುಬಲ ನೀಡುವುದಿಲ್ಲ.

೮. ಅಸಂಘಟನೆ ಅಥವಾ ಯಾವುದೇ ಕಾರ್ಮಿಕ ಸಂಘಟನೆಗೆ ಸೇರದೆ ಇರುವುದು

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಯಾವುದೇ ನಿರ್ದಿಷ್ಟ ಕಾರ್ಮಿಕ ಸಂಘಟನೆಗೆ ಸೇರದೆ ಅಸಂಘಟಿತರಾಗಿ ಉಳಿದಿರುವುದು ಕಂಡುಬರುತ್ತಿದೆ. ಜಿಲ್ಲೆಯಲ್ಲಿ ಕೃಷಿಕಾರ್ಮಿಕರ ಸಂಘ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕ ಸಂಘಗಳು ಇದ್ದು ಪ್ರತಿಯೊಂದು ತಾಲೂಕಿನಲ್ಲಿ ತಮ್ಮ ಶಾಖೆಗಳನ್ನು ತೆರೆದಿದ್ದರೂ ಮಹಿಳಾ ಕಾರ್ಮಿಕರಿಗೆ ಸದಸ್ಯತ್ವವನ್ನು ನೀಡಿರುವುದಿಲ್ಲ. ಆದರೆ ಪುರುಷ ಕಾರ್ಮಿಕರಿಗೆ ಮಾತ್ರ ಸದಸ್ಯತ್ವವನ್ನು ನೀಡಿರುವುದು ಕಂಡುಬರುತ್ತದೆ. ಅಲ್ಲದೆ ಕಾರ್ಮಿಕ ಮುಖಂಡರು ಮುಷ್ಕರ, ಹೋರಾಟದ ಸಂದರ್ಭದಲ್ಲಿ ಮಹಿಳಾ ಕಾರ್ಮಿಕರನ್ನು ಬಳಸಿಕೊಂಡರು ಅವರನ್ನು ತಮ್ಮ ಸಂಘಟನೆಯ ಸದಸ್ಯರನ್ನಾಗಿ ಮಾಡಿಕೊಂಡಿಲ್ಲದಿರುವುದನ್ನು ಗಮನಿಸಿದರೆ ಕಾರ್ಮಿಕ ಸಂಘಟನೆಗಳು ಸಹ ಪುರುಷಶಾಹಿ ದೊರಣೆಯನ್ನು ಅನುಸರಿಸುತ್ತಿರುವುದು ಸ್ಪಷ್ಟವಾಗುತ್ತದೆ. ಹೀಗಾಗಿ ಕಾರ್ಮಿಕ ಸಂಘಟನೆಗಳು ಸದಸ್ಯತ್ವವನ್ನು ನೀಡುವಲ್ಲಿ ತಾರತಮ್ಯವನ್ನು ಮಾಡುತ್ತಿರುವುದು ಮಹಿಳಾ ಕಾರ್ಮಿಕರನ್ನು ಅಸಂಘಟಿತರನ್ನಾಗಿ ಮಾಡಿದೆ.

೯. ನಿರುದ್ಯೋಗ ಸಮಸ್ಯೆ ಅಥವಾ ಯಾಂತ್ರೀಕರಣದ ಪ್ರಭಾವ

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಉದ್ಯಮದಲ್ಲಿನ ಯಾಂತ್ರೀಕರಣದಿಂದಾಗಿ ನಿರುದ್ಯೋಗ ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ. ಯಾವುದೇ ಉದ್ಯೋಗದಲ್ಲಿ ಯಾಂತ್ರ ಅಳವಡಿಸಿ ಕೊಂಡರೆ ಮೊದಲು ಉದ್ಯೋಗ ಕಳೆದುಕೊಳ್ಳುವವಳು ಮಹಿಳೆಯೇ ಆಗಿದ್ದಾಳೆ. ಇಂದು ಕೃಷಿಯಲ್ಲಿ ಬಿತ್ತಲು, ಕಳೆ ಕೀಳಲು, ಫಸಲು ಕೊಯ್ಯಲು ಮತ್ತು ರಾಶಿ ಮಾಡಲು ಯಂತ್ರಗಳನ್ನು ಬಳಸುತ್ತಿರುವುದರಿಂದ ಕೃಷಿಯನ್ನೇ ಉದ್ಯೋಗವಾಗಿ ನಂಬಿದ ಕಾರ್ಮಿಕರು ನಿರುದ್ಯೋಗಿಗಳಾಗಿ ಉಳಿಯುತ್ತಿದ್ದಾರೆ. ಕಳೆದ ೫ರಿಂದ ೧೦ ವರ್ಷಗಳ ಹಿಂದೆ ಜಿಲ್ಲೆಯಲ್ಲಿ ಭತ್ತದ ರಾಶಿ ಮಾಡುವ ಚಟುವಟಿಕೆ ಎರಡರಿಂದ ೩ ತಿಂಗಳ ಕಾಲ ನಡೆಯುತ್ತಿತ್ತು. ಇದರಿಂದ ನಗರದ ಕೃಷಿ ಕಾರ್ಮಿಕರು ಮತ್ತು ಗ್ರಾಮೀಣ ಭಾಗದ ಕೃಷಿ ಕಾರ್ಮಿಕರು ಈ ಕೃಷಿ ಕಾರ್ಯದಲ್ಲಿ ೨ರಿಂದ ೩ ತಿಂಗಳವರೆಗೆ ದುಡಿದು ೨೦೦೦ ರಿಂದ ೩೦೦೦ ರೂಪಾಯಿಗಳವರೆಗೆ ಆದಾಯ ಪಡೆಯುತ್ತಿದ್ದರು. ಅಲ್ಲದೆ ಬೇರೆ ಉದ್ಯೋಗ ಅರಸಿ ಹೋಗದೇ ಕೃಷಿಯನ್ನೇ ಜೀವನಾಧರ ಎಂದು ನಂಬಿದ್ದರು. ಆದರೆ ಇಂದು ಭತ್ತ ಕೊಯ್ಲು ಮಾಡಲು ರಾಶಿ ಯಂತ್ರ ಬಂದದ್ದರಿಂದ ಜಿಲ್ಲೆಯ ಶೇಕಡ ೮೦ರಷ್ಟು ಹೊಲಗದ್ದೆಗಳನ್ನು ಈ ಯಂತ್ರಗಳ ಮೂಲಕ ಭತ್ತ ಕಟಾವು ಮಾಡಿಸುತ್ತಿರುವುದು ಕಂಡುಬರುತ್ತದೆ. ಇದರ ಪರಿಣಾಮವಾಗಿ ಕೃಷಿಯನ್ನೇ ನಂಬಿದ ಕೃಷಿ ಕಾರ್ಮಿಕರು ನಿರುದ್ಯೋಗಿಗಳಾಗಿ ಉಳಿದಿದ್ದಾರೆ. ಅಲ್ಲದೆ ಕೆಲವರು ಕಟ್ಟಡ ನಿರ್ಮಾಣ ಕೆಲಸಕ್ಕೆ ಕಾರ್ಮಿಕರಾಗಿ ವಲಸೆ ಬರುತ್ತಿದ್ದಾರೆ. ಹೀಗಾಗಿ ಕೃಷಿ ಕೆಲಸಕ್ಕೆ ಕೃಷಿ ಕಾರ್ಮಿಕರು ಸಿಗದ ಸಮಸ್ಯೆ ಸೃಷ್ಠಿಯಾಗಿದೆ.

ಕಟ್ಟಡ ನಿರ್ಮಾಣ ಕೆಲಸದಲ್ಲಿ ಸಹ ಮಿಕ್ಸರ್, ಬುಲ್ಡೋಜರ್ ಇತ್ಯಾದಿ ಯಂತ್ರಗಳನ್ನು ಬಳಸುತ್ತಿರುವುದರಿಂದ ಮಹಿಳಾ ಕಾರ್ಮಿಕರು ಕೆಲಸವನ್ನು ಕಳೆದುಕೊಳ್ಳುತ್ತಿದ್ದಾರೆ. ಕೃಷಿ ಕಾರ್ಯದಿಂದ ವಲಸೆ ಬಂದ ಕಾರ್ಮಿಕರು ಕಟ್ಟಡ ನಿರ್ಮಾಣ ಕೆಲಸಕ್ಕೆ ಬರುತ್ತಿರುವುದರಿಂದ ಈ ಕಾರ್ಮಿಕರಿಗೆ ಬೇಡಿಕೆ ಕಡಿಮೆಯಾಗಿ ಕಡಿಮೆ ವೇತನ ಪಡೆಯುತ್ತಾರೆ.

೧೦. ಬೆಲೆ ಏರಿಕೆ ಸಮಸ್ಯೆ

ವರ್ಷದಿಂದ ವರ್ಷಕ್ಕೆ ಅವಶ್ಯಕ ವಸ್ತುಗಳ ಹಾಗೂ ಆಹಾರ ಧಾನ್ಯಗಳ ಬೆಲೆಗಳು ಗಗನಕ್ಕೆ ಏರುತ್ತಿವೆ. ಇದರಿಂದಾಗಿ ಕೂಲಿ ಮಾಡಿ ಬದುಕುವ ಈ ಕಾರ್ಮಿಕರು ಸಮಸ್ಯೆಯನ್ನು ಅನುಭವಿಸುತ್ತಿದ್ದಾರೆ. ಈ ಕಾರ್ಮಿಕರು ಪಡೆಯುವ ಕೂಲಿ ಕಡಿಮೆ ಇದ್ದು ಆಹಾರ ವಸ್ತುಗಳ ಬೆಲೆಗಳು ಹೆಚ್ಚುತ್ತಿರುವುದರಿಂದ ಒಂದು ದಿನಕ್ಕೆ ಬೇಕಾದ ಆಹಾರವನ್ನು ಪಡೆಯಲಾರದ ಸ್ಥಿತಿಯಲ್ಲಿ ಇದ್ದಾರೆ. ಕೊಪ್ಪಳ ಜಿಲ್ಲೆಯ ಕೆಲವು ಕಾರ್ಮಿಕರು ಭೂರಹಿತರು ಆಗಿರುವುದರಿಂದ ತಾವು ದುಡಿದ ಕೂಲಿಯಿಂದಲೇ ಆ ದಿನದ ಆಹಾರ ಪಡೆಯುವ ಸ್ಥಿತಿಯಲ್ಲಿ ಇದ್ದಾರೆ. ಹೀಗಾಗಿ ಬೆಲೆಗಳು ಒಂದೇ ಸಮನೆ ಏರುತ್ತಿರುವುದರಿಂದ ಅವರು ದಿನದಲ್ಲಿ ಒಂದು ಅಥವಾ ಎರಡು ಊಟ ಮಾಡಮ ಸಾಮರ್ಥ್ಯವನ್ನು ಮಾತ್ರ ಪಡೆದಿದ್ದು ಕೂಲಿ ಮಾಡಲಾರದ ದಿನ ಉಪವಾಸ ಮಲಗುವ ಪರಿಸ್ಥಿತಿಯಲ್ಲಿ ಇದ್ದಾರೆ.

೧೧. ದುಶ್ಚಟಕ್ಕೆ ಬಲಿಯಾಗಿದ್ದಾರೆ

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ದುಶ್ಚಟಕ್ಕೆ ಬಲಿಯಾಗಿ ತಮ್ಮ ಹಣ ಹಾಗೂ ಆರೋಗ್ಯವನ್ನು ಕಳೆದುಕೊಳ್ಳುತ್ತಿರುವುದು ಕಂಡುಬರುತ್ತಿದೆ. ಜಿಲ್ಲೆಯಲ್ಲಿನ ೩೦೦ ಜನ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ. ಮಾದರಿ ಸಮೀಕ್ಷೆ ನಡೆಸಿದಾಗ ಶೇಕಡ ೭೯ ರಷ್ಟು ಮಹಿಳಾ ಕಾರ್ಮಿಕರು ತಂಬಾಕು ಸೇವನೆ ಮಾಡುತ್ತಿರುವುದು ಮತ್ತು ಶೇಕಡ ೧೭.೬೭ರಷ್ಟು ಕಾರ್ಮಿಕರು ಮದ್ಯ ಸೇವನೆ ಮಾಡುತ್ತಿರುವುದು ಕಂಡುಬರುತ್ತಿದೆ. ಇದರಿಂದಾಗಿ ಅವರ ಆರೋಗ್ಯ ಹಾಳಾಗುವುದರ ಜೊತೆಗೆ ಆರ್ಥಿಕವಾಗಿ ಸಹ ದುರ್ಬಲರಾಗುತ್ತಾರೆ.

**ಕೋಷ್ಟಕ ೬.೪೪**

**ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ತಂಬಾಕು ಮತ್ತು ಮದ್ಯ ಸೇವನೆ ವಿವರ**

| ತಂಬಾಕು ಮತ್ತು ಮದ್ಯ ಸೇವನೆ ವಿವರ | ತಂಬಾಕು ಸೇವಸುವ ಕಾರ್ಮಿಕ ಸಂಖ್ಯೆ | ಶೇಕಡವಾರು | ಮದ್ಯಸೇವಿಸುವ ಕಾರ್ಮಿಕರ ಸಂಖ್ಯೆ | ಶೇಕಡವಾರು |
|---|---|---|---|---|
| ಹೌದು | ೨೩೭ | ೭೯.೦೦ | ೫೩ | ೧೭.೬೭ |
| ಇಲ್ಲ | ೬೩ | ೨೧.೦೦ | ೨೪೭ | ೮೨.೩೩ |
| ಒಟ್ಟು ಕಾರ್ಮಿಕರ ಸಂಖ್ಯೆ | ೩೦೦ | ೧೦೦ | ೩೦೦ | ೧೦೦ |

## ೧೨. ಪ್ರಯಾಣದ ಸಮಸ್ಯೆ

ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ತಮ್ಮ ಮೂಲಸ್ಥಾನದಿಂದ ಪಕ್ಕದ ಊರುಗಳಿಗೆ ಕೃಷಿ ಮತ್ತು ಕಟ್ಟಡ ನಿರ್ಮಾಣ ಕೆಲಸಕ್ಕೆ ಹೋಗಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಜಮೀನಾದರರು ಅಥವಾ ಮೇಸ್ತ್ರಿಗಳು ವಾಹನ ಸೌಲಭ್ಯ ಒದಗಿಸುತ್ತಾರೆ. ಆದರೂ ಅದರ ಪ್ರಮಾಣ ಕಡಿಮೆ. ಆದರೆ ಅಧಿಕ ಸಂಖ್ಯೆಯ ಮಹಿಳಾ ಕಾರ್ಮಿಕರು ತಮ್ಮ ಹಣದಿಂದಲೇ ಪ್ರಯಾಣ ವೆಚ್ಚವನ್ನು ಬರಿಸಿ ಕೆಲಸದ ಸ್ಥಳಕ್ಕೆ ಹೋಗುತ್ತಿರುವುದು ಸಾಮಾನ್ಯವಾಗಿದೆ. ಇದರಿಂದ ಕಾರ್ಮಿಕರು ಪಡೆಯುವ ಕೂಲಿಯಲ್ಲಿಯೇ ೫ರಿಂದ ೧೦ ರೂಪಾಯಿಗಳವರೆಗೆ ಪ್ರತಿ ದಿನ ಪ್ರಯಾಣಕ್ಕಾಗಿ ವೆಚ್ಚ ಮಾಡಬೇಕಾಗುತ್ತದೆ. ಹೀಗಾಗಿ ಅವರು ಪಡೆಯುವ ವಾಸ್ತವಿಕ ಆದಾಯ ಕಡಿಮೆ ಆಗುತ್ತದೆ. ಇದರಿಂದ ಆರ್ಥಿಕವಾಗಿ ದುರ್ಬಲರಾಗುತ್ತಾರೆ. ಕೆಲವೊಂದು ಬಾರಿ ವಾಹನ ಅಪಘಾತಕ್ಕೆ ಒಳಗಾಗಿ ಪ್ರಾಣವನ್ನು ಕಳೆದುಕೊಳ್ಳುವ ಸಾಧ್ಯತೆ ಹೆಚ್ಚಿರುತ್ತದೆ.

## ೧೩. ಬಡತನದ ಸಮಸ್ಯೆ

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಬಡತನದ ಸಮಸ್ಯೆಯನ್ನು ಅನುಭವಿಸಿಸುತ್ತಿದ್ದಾರೆ. ಬಡತನದ ಭಾರ ಮಹಿಳೆಯರ ಮೇಲೆ ಇರುವುದರಿಂದ ಅದರ ಪೂರ್ಣ ಸಮಸ್ಯೆಯನ್ನು ಅನುಭವಿಸುವವಳು ಮಹಿಳೆಯೇ ಆಗಿದ್ದಾಳೆ. ಇದರಿಂದಾಗಿ ಅವರು ವಾಣಿಜ್ಯ ವ್ಯವಹಾರ ಇತರ ಉದ್ಯೋಗಗಳಲ್ಲಿ ತೊಡಗಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ಅವರು ಅನಿವಾರ್ಯವಾಗಿ ಕೃಷಿ ಮತ್ತು ನಿರ್ಮಾಣದ ಕೆಲಸದಲ್ಲಿ ತೊಡಗಬೇಕಾಗುತ್ತಿದೆ. ಹೀಗಾಗಿ ಅವರು ಬಡತನದ ವಿಷ ವರ್ತುಲದಲ್ಲಿ ಸಿಲುಕ ಬೇಕಾಗುತ್ತದೆ.

## ೧೪. ಮೇಲ್ಜಾತಿಯವರಿಂದ ಶೋಷಣೆ

ಗ್ರಾಮೀಣ ಪ್ರದೇಶಗಳಲ್ಲಿ ಮೇಲ್ಜಾತಿಯ ಜನರು ಬಲಿಷ್ಠರಾಗಿರುತ್ತಾರೆ. ಇಂಥವರಿಂದ ಪರಿಶಿಷ್ಟ ಜಾತಿಯ ಮಹಿಳೆಯರು ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರು ಹಾಗೂ ಹಿಂದುಳಿದ ಜಾತಿಗೆ ಸೇರಿದ ಮಹಿಳೆಯರು ಮೇಲ್ಜಾತಿಯವರಿಂದ ಶೋಷಣೆಗೆ ಒಳಗಾಗುತ್ತಿದ್ದಾರೆ. ಇಂದಿಗೂ ಸಹ ಕೆಲವೊಂದು ಹಳ್ಳಿಗಳಲ್ಲಿ ಮೇಲ್ಜಾತಿಯದರ ಓಣಿಯಲ್ಲಿ ತಿರುಗಾಡುವ ಹಾಗಿಲ್ಲ. ಯಾವುದೇ ಹಬ್ಬ ಹರಿದಿನಗಳಲ್ಲಿ ಅವರು ಕಾಣಿಸಿಕೊಳ್ಳುವ ಹಾಗಿಲ್ಲ. ಮದುವೆ ಮೆರವಣಿಗೆಯಲ್ಲಿ ಎದುರಾಗುವಂತಿಲ್ಲ. ಕೆಳಜಾತಿಯವರು ಮದುವೆಯಾದರೆ ಹೊಸಬಟ್ಟೆ ಧರಿಸುವ ಹಾಗಿಲ್ಲ. ಜಾತಿಯಲ್ಲಿ ಮೇಲ್ಜಾತಿಯವರಿಗಿಂತ ಮೊದಲು ಹರಿಜನ ಮಹಿಳೆಯರಾಗಲಿ, ಕೆಳಜಾತಿಯ ಮಹಿಳೆಯರಾಗಲಿ ನೀರು ತುಂಬವಂತಿಲ್ಲ. ತಮ್ಮ ಮನೆಯ ಕಾರ್ಯಕ್ರಮಗಳನ್ನು ಮಾಡಬೇಕಾದರೂ ಸಹಿತ ಮೇಲ್ಜಾತಿಯವರ ಅನುಮತಿಯನ್ನು ಪಡೆದುಕೊಳ್ಳಬೇಕಾದ ಪರಿಸ್ಥಿತಿ ಇದೆ. ಕೆಲವೊಂದು ಹಳ್ಳಿಯಲ್ಲಿ ಮೇಲ್ಜಾತಿಯವರ ಜಮೀನಿನಲ್ಲಿ ಮೇವು ಕೊಯ್ಯುವ ಹಾಗಿಲ್ಲ.

ಅವರ ಹೊಲದಲ್ಲಿ ದನಗಳನ್ನು ಮೇಯಿಸುವ ಹಾಗಿಲ್ಲ. ಒಂದು ವೇಳೆ ಹಾಗೇನಾದರೂ ಮಾಡಿದರೆ ಅವರಿಗೆ ದಂಡ ಹಾಕುವ ಪದ್ಧತಿ ಜಾರಿಯಲ್ಲಿದೆ. ಇಂದಿಗೂ ಸಹ ಕೊಪ್ಪಳ ಜಿಲ್ಲೆಯ ಹೆರೂರು ಕೆಸರಟ್ಟಿ, ಗೌರಿಪುರ, ಲೇಬಿಗೆರಿ, ಇರಕಲ್‌ಗಡ, ಮುಸಲಾಪುರ ಮುಂತಾದ ಗ್ರಾಮಗಳಲ್ಲಿ ಈ ಪರಿಸ್ಥಿತಿ ಜೀವಂತ ವಾಗಿರುವುದು ಕಂಡುಬರುತ್ತಿದೆ. ಪರಿಣಾಮವಾಗಿ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರನ್ನು ಅಸ್ಪೃಶ್ಯರಂತೆ ಕಾಣಲಾಗುತ್ತಿದೆ.

೧೫. ಸರಕಾರಿ ಯೋಜನೆ ಮತ್ತು ಸ್ಕೀಂಗಳಿಂದ ವಂಚನೆ

ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಸರಕಾರ ಜಾರಿಗೊಳಿಸಿದ ಯೋಜನೆ ಮತ್ತು ಸ್ಕೀಮ್‌ಗಳಿಂದ ವಂಚಿತರಾಗುತ್ತಿದ್ದಾರೆ. ಸರಕಾರ ಬಡವರಿಗಾಗಿ ಮತ್ತು ಅಶಕ್ತರಿಗಾಗಿ ಅನೇಕ ಯೋಜನೆಗಳನ್ನು ಜಾರಿಗೊಳಿಸಿದರೂ ಅದರ ಪ್ರಯೋಜನ ಮೇಲ್ಜಾತಿಯವರು ಹಾಗೂ ಆರ್ಥಿಕವಾಗಿ ಸಬಲರು ಪಡೆದುಕೊಳ್ಳುತ್ತಿದ್ದಾರೆ. ಸರಕಾರ ಬಡ ಕಾರ್ಮಿಕರ ಆರ್ಥಿಕ ಸಬಲತೆಗಾಗಿ IRDP, TRYSEM, PMRY, SGSY, JRY, DPAP ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೊಳಿಸಿದರು ಇದರ ಪ್ರಯೋಜನಾ ಬಡ ಮಹಿಳಾ ಕಾರ್ಮಿಕರಿಗೆ ದೊರೆಯದೆ ಪ್ರಭಾವಿ ವ್ಯಕ್ತಿ ಹಾಗೂ ಗ್ರಾಮ ಪಂಚಾಯ್ತಿ ಸದಸ್ಯರ ಪಾಲಾಗುತ್ತಿವೆ. ಇತ್ತೀಚೆಗೆ ಜಾರಿಗೆ ತಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ನಕಲಿ ಉದ್ಯೋಗಾಕಾಂಕ್ಷಿಗಳ ಪಟ್ಟಿ ನೀಡಿ ಗ್ರಾಮ ಪಂಚಾಯಿತ ಸದಸ್ಯರು ಮತ್ತು ಕಾರ್ಯದರ್ಶಿಗಳು ಲಕ್ಷ ಲಕ್ಷ ಹಣ ಬಾಚುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಗುಲಬರ್ಗ ಜಿಲ್ಲೆಯಲ್ಲಿ ನಡೆದ ಅವ್ಯವಹಾರವೇ ಸಾಕ್ಷಿಯಾಗಿದೆ.

ಬಡಜನರಿಗೆ ವಸತಿ ಸೌಲಭ್ಯ ಕಲ್ಪಿಸುವ ಉದ್ದೇಶದಿಂದ ಸರಕಾರ ಆಶ್ರಯ ಮನೆ, ಅಂಬೇಡ್ಕರ್ ವಸತಿಯೋಜನೆ, ಇಂದಿರಾ ಆವಾಸ್ ಯೋಜನೆ, ಇತ್ಯಾದಿಗಳನ್ನು ಜಾರಿಗೆ ತಂದರೂ ಈ ಯೋಜನೆಯ ಪ್ರಯೋಜನ ಬಡ ಕಾರ್ಮಿಕರಿಗೆ ದೊರೆಯುತ್ತಿಲ್ಲ. ನಗರ ಸಭೆ ಸದಸ್ಯ ಹಾಗೂ ಗ್ರಾಮ ಪಂಚಾಯತ್ ಸದಸ್ಯರ ಬೆಂಬಲಿತರಿಗೆ ಮತ್ತು ಆರ್ಥಿಕವಾಗಿ ಸದೃಢರಾದವರಿಗೆ ದೊರೆಯುತ್ತಿವೆ. ಒಂದು ವೇಳೆ ಬಡ ಮಹಿಳೆಗೆ ಈ ಯೋಜನೆಯಲ್ಲಿ ವಸತಿ ಸೌಲಭ್ಯ ದೊರೆತರೂ ಆ ಯೋಜನೆಯ ಪೂರ್ಣ ಪ್ರಯೋಜನ ಪಡೆಯುವ ಹೊತ್ತಿಗೆ ಅವಳಲ್ಲಿದ್ದ ಹಣ ಖರ್ಚಾಗಿ ಹೋಗುತ್ತದೆ. ಇಂತಹ ಹದಗೆಟ್ಟ ವ್ಯವಸ್ಥೆಯಿಂದಾಗಿ ಅಧಿಕ ಜನ ಕಾರ್ಮಿಕರು ವಸತಿರಹಿತರಾಗಿ ಗುಡಿಸಲು ಮತ್ತು ಜೋಪಡಿಗಳಲ್ಲಿ ವಾಸಿಸುತ್ತಿದ್ದಾರೆ.

ಸರಕಾರ ಮಹಿಳಾ ಸಬಲೀಕರಣಕ್ಕಾಗಿ ಸ್ವಸಹಾಯ, ಸ್ತ್ರೀಶಕ್ತಿ ಗುಂಪುಗಳನ್ನು ಸಂಘಟಿಸಿ ವಾಣಿಜ್ಯ ಬ್ಯಾಂಕುಗಳಿಂದ ಸಾಲಸೌಲಭ್ಯ ನೀಡಿ ಅವರ ಆರ್ಥಿಕ ಅಭಿವೃದ್ಧಿಗೆ ಶ್ರಮಿಸುತ್ತಿದೆ. ಆದರೂ ಬಡ ಮತ್ತು ಕೂಲಿಕಾರ್ಮಿಕರಾದ ಇವರನ್ನು ಮೇಲ್ಜಾತಿಯವರು ಗುಂಪಿಗೆ ಸೇರಿಸಿಕೊಳ್ಳುತ್ತಿಲ್ಲ. ಅಲ್ಲದೇ ಇವರೆ ಸ್ವತಃ ಸ್ವಸಹಾಯ ಗುಂಪುಗಳನ್ನು ರಚಿಸಿಕೊಂಡರೂ ಬ್ಯಾಂಕಿನಿಂದ ಸಾಲ ಸೌಲಭ್ಯ ದೊರೆಯದೆ ತಮ್ಮ

ಉಳಿತಾಯದಲ್ಲಿಯೇ ವ್ಯವಹಾರ ನಡೆಸುತ್ತಿದ್ದಾರೆ. ಸಣ್ಣ ಪ್ರಮಾಣದಲ್ಲಿ ಸ್ವಸಹಾಯ ಗುಂಪಿನಿಂದ ಅಗರಬತ್ತಿ, ಮೇಣದ ಬತ್ತಿ, ಆಹಾರದ ತಿಂಡಿಗಳನ್ನು ತಯಾರಿಸುತ್ತಿದ್ದರೂ ಮಾರಾಟದ ಕೌಶಲ್ಯವಿಲ್ಲದೆ ನಷ್ಟವನ್ನು ಅನುಭವಿಸುತ್ತಿದ್ದಾರೆ.

ಹೀಗೆ ಸರಕಾರ ಜಾರಿಗೆ ತಂದ ಯೋಜನೆ ಮತ್ತು ಸ್ಕೀಂಗಳಿಂದ ವಂಚಿತರಾಗಿ ಈ ಕಾರ್ಮಿಕರು ಬಡತನದಲ್ಲಿಯೇ ಬದುಕನ್ನು ಸಾಗಿಸುತ್ತಿದ್ದಾರೆ. ಇದಕ್ಕೆ ಕೊನೆ ಎಂಬುದು ಇಲ್ಲವೆ? ಎಂಬ ಪ್ರಶ್ನೇ ಅವರನ್ನು ಕಾಡುತ್ತಿದೆ.

**೩.೧೦. ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರ ಹಿತಕ್ಕಾಗಿ ಸರಕಾರವು ಕೈಗೊಂಡ ಕ್ರಮಗಳು**

ಭಾರತವು ಸ್ವಾತಂತ್ರ್ಯಾನಂತರ ದೇಶದ ಬೆನ್ನಲುಬಾದ ಕೃಷಿಯ ಅಭಿವೃದ್ಧಿಗೆ ಗಮನ ಹರಿಸಿತು. ಅಲ್ಲದೆ ಕೃಷಿಯ ಬೆನ್ನಲುಬಾದ ಕೃಷಿಕಾರ್ಮಿಕರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಹಲವಾರು ಕ್ರಮಗಳನ್ನು ಕೈಗೊಂಡಿತು. ದೇಶದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ಕಟ್ಟಡ ಮತ್ತು ಇತರೆ ನಿರ್ಮಾಣ ಉದ್ಯಮಕ್ಕೆ ಅಧಿಕ ಪ್ರಾಶಸ್ತ್ಯ ನೀಡಿತಲ್ಲದೆ ಕಟ್ಟಡ ಮತ್ತು ಇತರೆ ನಿರ್ಮಾಣ ಉದ್ಯಮದಲ್ಲಿ ದುಡಿಯುತ್ತಿದ್ದ ಕಾರ್ಮಿಕರ ರಕ್ಷಣೆಗೆ ಅಥವಾ ಕಲ್ಯಾಣಕ್ಕೆ ಅನೇಕ ಕಾಯ್ದೆ ಕಾನೂನುಗಳನ್ನು ಜಾರಿಗೊಳಿಸಿತು. ಅವುಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ನೋಡಬಹುದು.

**ಅ. ಕೃಷಿ ಕಾರ್ಮಿಕರ ಹಿತಕ್ಕಾಗಿ ಸರಕಾರ ಕೈಗೊಂಡ ಕ್ರಮಗಳು**

ಕೃಷಿಯ ಬೆನ್ನಲುಬಾದ ಮಹಿಳಾ ಕೃಷಿ ಕಾರ್ಮಿಕರು ಅಥವಾ ಕೃಷಿ ಕಾರ್ಮಿಕರ ಹಿತಕ್ಕಾಗಿ ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ.

**೧. ಕನಿಷ್ಟ ಕೂಲಿ ಕಾಯ್ದೆ-೧೯೮೪(Minimum wage Act-1984) :** ಭಾರತ ಸರಕಾರ ಕನಿಷ್ಟ ಕೂಲಿ ಕಾಯ್ದೆಯನ್ನು ೧೯೮೪ರಲ್ಲಿ ಜಾರಿಗೊಳಿಸಿತು. ಈ ಕಾಯ್ದೆಯು ಕೃಷಿ ಕಾರ್ಮಿಕರಿಗೆ ಕೂಡಬೇಕಾದ ಕನಿಷ್ಟ ಕೂಲಿಯನ್ನು ನಿಗದಿಪಡಿಸಲು ರಾಜ್ಯ ಸರಕಾರಕ್ಕೆ ಅಧಿಕಾರ ನೀಡಿದೆ. ಆ ಪ್ರಕಾರ ಎಲ್ಲ ರಾಜ್ಯಗಳಲ್ಲಿ ಕೃಷಿ ಕಾರ್ಮಿಕರಿಗೆ ಕನಿಷ್ಟ ಕೂಲಿಯ ದರಗಳನ್ನು ನಿಗದಿ ಪಡಿಸಲಾಗಿದೆ. ಆದರೆ ಈ ಕಾಯ್ದೆಯ ಅನುಷ್ಠಾನದಲ್ಲಿ ತೊಂದರೆ ಇದ್ದುದರಿಂದ ಸರಿಯಾದ ಪ್ರಮಾಣದಲ್ಲಿ ಜಾರಿಗೆ ಬರುತ್ತಿಲ್ಲ.

**೨. ಜೀತಪದ್ಧತಿಯ ನಿರ್ಮೂಲನಾ ಕಾಯ್ದೆ ೧೯೭೬(Aboltion of Banded Labour):** ಒಕ್ಕಲುತನ ದಲ್ಲಿ ಜೀತಪದ್ಧತಿಯು ಪ್ರಾಚೀನ ಕಾಲದಿಂದಲೂ ಬಂದ ಪದ್ಧತಿಯಾಗಿದೆ. ಈ ಪದ್ಧತಿಯಲ್ಲಿ ಕೃಷಿ ಕಾರ್ಮಿಕರು ಜೀತದ ಆಳುಗಳಾಗಿ ಗುಲಾಮರಾಗಿ ಬಾಳುತ್ತಾರೆ. ಇದು ಅತ್ಯಂತ ಹೇಯವಾದ ಕೃತ್ಯವಾಗಿದ್ದರಿಂದ ಅದನ್ನು ನಿರ್ಮೂಲನ ಮಾಡಲು ಸರಕಾರವು ಕ್ರಮ ಕೈಗೊಂಡಿದೆ. ಈ ಪದ್ಧತಿಯು ಮುಖ್ಯವಾಗಿ ಉತ್ತರ ಪ್ರದೇಶ, ಬಿಹಾರ, ಒರಿಸ್ಸಾ, ಮಹಾರಾಷ್ಟ್ರ, ಕೇರಳ, ಕರ್ನಾಟಕ ರಾಜಸ್ಥಾನ ಮತ್ತು

ಆಂಧ್ರಪ್ರದೇಶಗಳಲ್ಲಿ ರೂಢಿಯಲ್ಲಿತ್ತು. ೧೯೭೬ರಲ್ಲಿ ಈ ಪದ್ಧತಿಯ ನಿರ್ಮೂಲನೆಗಾಗಿ ಜೀತ ಪದ್ಧತಿಯ ನಿರ್ಮೂಲನೆ ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಈ ಪದ್ಧತಿಯು ಜೀತದಾಳುಗಳನ್ನು ಜೀತಪದ್ಧತಿಯಿಂದ ಮುಕ್ತರನ್ನಾಗಿ ಮಾಡುತ್ತದೆಯಲ್ಲದೆ ಅವರಿಗೆ ಸ್ವತಂತ್ರರಾಗಿ ಜೀವಿಸಲು ಅವಕಾಶ ಮಾಡಿಕೊಡುತ್ತದೆ. ಆದರೆ ಈ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಯಲ್ಲಿ ತಂದಿಲ್ಲವಾದ್ದರಿಂದ ಪ್ರಗತಿ ಸಾಧ್ಯವಾಗಿಲ್ಲ. ಇಂದಿಗೂ ಚಿತ್ರದುರ್ಗ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಜೀತಪದ್ಧತಿ ಜಾರಿಯಲ್ಲಿರುವುದು ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ಕಂಡುಬರುತ್ತದೆ. ಕೊಪ್ಪಳ ಜಿಲ್ಲೆಯ ಬಡಕುಟುಂಬಗಳಲ್ಲಿ ಮಕ್ಕಳನ್ನು ಸಂಬಳಕ್ಕೆ ಇಡುವ ಪದ್ಧತಿ ಜಾರಿಯಲ್ಲಿರುವುದು ಕಂಡುಬರುತ್ತದೆ. ಇದು ಜೀತಪದ್ಧತಿಯ ಪರ್ಯಾಯ ಪದ್ಧತಿಯಾಗಿದೆ. ಇಲ್ಲಿ ಸಂಬಳ ದುಡಿಯುವ ಕಾರ್ಮಿಕರು ಸ್ವಾತಂತ್ರ್ಯದಿಂದ ಮುಕ್ತರಾಗಿದ್ದು ಸಂಬಳ ದುಡಿಯಲಿದ್ದ ಯಜಮಾನನ ಮನೆಯ ಎಲ್ಲ ಕೆಲಸಗಳನ್ನು ಮಾಡುವ ಒಪ್ಪಂದಕ್ಕೆ ಒಳಗಾದವರಾಗಿರುತ್ತಾರೆ.

**೩. ಇತರೆ ಕಾಯ್ದೆ ಕ್ರಮಗಳು :** ಸರಕಾರವು ಕಾನೂನಿನ ಮೂಲಕ ಜಮೀನುದಾರಿ ಪದ್ಧತಿಯನ್ನು ನಿರ್ಮೂಲನೆ ಮಾಡಿದೆ. ಅದರೊಂದಿಗೆ ಕೃಷಿ ಕಾರ್ಮಿಕರ ಶೋಷಣೆಯನ್ನು ನಿವಾರಿಸಿದೆ. ಅಲ್ಲದೆ ಗೇಣಿ ಪದ್ಧತಿಯ ಸುಧಾರಣೆ ಮತ್ತು ಉಳುವವನೆ ಭೂಮಿಯ ಒಡೆಯ ಎಂಬ ಕಾಯ್ದೆಯನ್ನು ಜಾರಿಗೊಳಿಸಿ ಗೇಣಿದಾರರ ಮತ್ತು ಕೃಷಿಕಾರ್ಮಿಕರ ಹಿತಾಸಕ್ತಿಯನ್ನು ರಕ್ಷಿಸಲು ಕ್ರಮ ಕೈಗೊಂಡಿದೆ.

**೪. ವಿಶೇಷ ಅಭಿವೃದ್ಧಿ ಯೋಜನೆಗಳು :** ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ(SFDA), ಅತೀ ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿ ಸಂಸ್ಥೆ (NIFAL), ಬರಪ್ರದೇಶ ಯೋಜನೆ (DPAP) ಮುಂತಾದ ವಿಶೇಷ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದು ಸರಕಾರ ಕೃಷಿ ಕಾರ್ಮಿಕರ ಮತ್ತು ಸಣ್ಣ ಹಿಡುವಳಿದಾರರ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸುತ್ತಿದೆ.

**೫. ಸಾಗುವಳಿಗಾಗಿ ಪಾಳು ಭೂಮಿಯ ಉಪಯೋಗ :** ದೇಶದಲ್ಲಿ ಲಭ್ಯವಿದ್ದ ಪಾಳುಭೂಮಿ ಅಥವಾ ಬಂಜರುಭೂಮಿಗಳನ್ನು ಸಾಗುವಳಿಗೆ ತರಲಾಗಿದೆ. ಅಲ್ಲದೆ ಚಿಕ್ಕ ಅತಿಚಿಕ್ಕ ರೈತರಿಗೆ, ಕೃಷಿ ಕಾರ್ಮಿಕರಿಗೆ ಆ ಭೂಮಿಯನ್ನು ವಿತರಿಸುವ ಮೂಲಕ ಅವರ ಅಭಿವೃದ್ಧಿಗೆ ಶ್ರಮಿಸಲಾಗುತ್ತದೆ.

**೬. ಗ್ರಾಮೀಣ ಉದ್ಯೋಗಾವಕಾಶಗಳ ಕಾರ್ಯಕ್ರಮ :** ದೇಶದಲ್ಲಿ ಬಡತನ ನಿರ್ಮೂಲನೆಗಾಗಿ ಮತ್ತು ಕೃಷಿಕಾರ್ಮಿಕರ ಪ್ರಗತಿಗಾಗಿ ವಿವಿಧ ಪಂಚವಾರ್ಷಿಕ ಯೋಜನೆಗಳಲ್ಲಿ ಅನೇಕ ಉದ್ಯೋಗ ಯೋಜನೆಗಳನ್ನು ಜಾರಿಗೊಳಿಸಲಾಯಿತು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಗ್ರಾಮೀಣ ಕೆಲಸ ಕಾರ್ಯಕ್ರಮ, ಉದ್ಯೋಗ ಭರವಸೆ ಯೋಜನೆ, ಕೂಲಿಗಾಗಿ ಕಾಳು ಯೋಜನೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ, ಗ್ರಾಮೀಣ ಭೂರಹಿತ ಉದ್ಯೋಗ ದೃಢೀಕರಣ ಯೋಜನೆ, ಜವಹರ್‌ರೋಜ್‌ಗಾರ್ ಯೋಜನೆ ಮತ್ತು

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆ ಇತ್ಯಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು. ಅಲ್ಲಿ ಕೃಷಿ ಕಾರ್ಮಿಕರಿಗೆ ಉದ್ಯೋಗಾವಕಾಶವನ್ನು ಒದಗಿಸಲಾಯಿತು.

**೭. ೨೦ ಅಂಶಗಳ ಆರ್ಥಿಕ ಕಾರ್ಯಕ್ರಮ :** ಭಾರತದ ಮಾಜಿಪ್ರಧಾನಮಂತ್ರಿ ದಿ.ಶ್ರೀಮತಿ ಇಂದಿರಾ ಗಾಂಧಿಯವರು ಜುಲೈ ೧೯೭೫ರಲ್ಲಿ ೨೦ ಅಂಶಗಳ ಕಾರ್ಯಕ್ರಮವನ್ನು ಘೋಷಿಸಿ ಅದನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲು ಎಲ್ಲ ರಾಜ್ಯಸರಕಾರಗಳಿಗೆ ತಿಳಿಸಿದರು. ಇದರಿಂದಾಗಿ ರಾಜ್ಯ ಸರಕಾರಗಳು ಭೂರಹಿತ ಕೃಷಿ ಕಾರ್ಮಿಕರ ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸಲು ಅನೇಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದವು.

**೮. ನಿವೇಶನ ಸೌಲಭ್ಯ ಮತ್ತು ವಸತಿ ಸೌಲಭ್ಯ :** ಅನೇಕ ರಾಜ್ಯಗಳಲ್ಲಿ ರಾಜ್ಯಸರಕಾರಗಳು ಕೃಷಿ ಕಾರ್ಮಿಕರಿಗೆ ನಿವೇಶನಗಳನ್ನು ನೀಡುವ ಕಾರ್ಯಕ್ರಮವನ್ನು ಜಾರಿಗೊಳಿಸಿ ನಿವೇಶರಹಿತ ಕೃಷಿಕಾರ್ಮಿಕರಿಗೆ ನಿವೇಶನ ಸೌಲಭ್ಯಗಳನ್ನು ಒದಗಿಸಿದವು. ಆಶ್ರಯ ಮನೆ, ಇಂದಿರಾ ಅವಾಸ್ ಮತ್ತು ಅಂಬೇಡ್ಕರ್ ವಸತಿ ಯೋಜನೆಗಳದೆ ಕೃಷಿ ಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ಒದಗಿಸಲಾಯಿತು. ಇದರಿಂದಾಗಿ ಇವರಿಗೆ ವಸತಿ ವ್ಯವಸ್ಥೆ ದೊರೆಯುವಂತಾಯಿತು.

**೯. ಸಾಲಸೌಲಭ್ಯ :** ಸರಕಾರಗಳು ಕೃಷಿ ಕಾರ್ಮಿಕರು ಮತ್ತು ಚಿಕ್ಕ ಅತಿಚಿಕ್ಕ ರೈತರು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಾಲಸೌಲಭ್ಯವನ್ನು ನೀಡುತ್ತಿವೆ. ವಾಣಿಜ್ಯ ಬ್ಯಾಂಕುಗಳ ಮೂಲಕ, ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮ ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ಕೃಷಿ ಕಾರ್ಮಿಕರಿಗೆ ಸಾಲಸೌಲಭ್ಯವನ್ನು ನೀಡಿ ಸ್ವಯಂ ಉದ್ಯೋಗ ಮಾಡಲು ಅವಕಾಶ ನೀಡಲಾಗುತ್ತದೆ. ಮಹಿಳೆಯರಿಗೆ ಸ್ವಸಹಾಯ ಗುಂಪುಗಳ ಮೂಲಕ ಸಾಲಸೌಲಭ್ಯ ನೀಡಲಾಗುತ್ತಿದೆ. ಅಲ್ಲದೆ ಸ್ವಸಹಾಯ ಗುಂಪಿನಲ್ಲಿ ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡಲು ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಿ ಮಹಿಳೆಯರ ಆರ್ಥಿಕ ಸ್ವಾವಲಂಬನೆಗೆ ಶ್ರಮಿಸುತ್ತಿದೆ.

**೧೦. ಕಡಿಮೆ ಬೆಲೆಗೆ ಆಹಾರ ಧಾನ್ಯಗಳ ವಿತರಣೆ :** ಸರಕಾರ ಬಡವರು ಮತ್ತು ಕೃಷಿಕಾರ್ಮಿಕರಿಗೆ ಅಗತ್ಯ ಆಹಾರ ಒದಗಿಸುವ ಉದ್ದೇಶದಿಂದ ಪಡಿತರ ವ್ಯವಸ್ಥೆಯಲ್ಲಿ ನ್ಯಾಯ ಬೆಲೆ ಅಂಗಡಿಗಳ ಮೂಲಕ ಕಡಿಮೆ ಬೆಲೆಗೆ ೩ ರೂಪಾಯಿಗೆ ೧ ಕೇಜಿ ಅಕ್ಕಿ ಅಗತ್ಯ ವಸ್ತುಗಳಾದ ಆಹಾರ ಧಾನ್ಯ, ವಸ್ತ್ರ, ಇಂಧನಗಳನ್ನು ನೀಡಿ ಅವರ ಅಗತ್ಯತೆಗಳನ್ನು ಪೂರೈಸುತ್ತಿದೆ. ಆದರೂ ಈ ವ್ಯವಸ್ಥೆಯಲ್ಲಿ ದೋಷ ಇರುವುದರಿಂದ ನಿಜವಾದ ಬಡಕಾರ್ಮಿಕರಿಗೆ ಸೌಲಭ್ಯ ತಲುಪುತ್ತಿಲ್ಲ.

**೧೧. ಸಣ್ಣ ಮತ್ತು ಗೃಹ ಕೈಗಾರಿಕೆಗಳ ಅಭಿವೃದ್ಧಿ :** ಗ್ರಾಮೀಣ ಭಾಗದ ಮಹಿಳೆಯರ ಆರ್ಥಿಕ ಸ್ಥಿತಿ ಸುಧಾರಿಸಲು ಸರಕಾರ ಸಣ್ಣ ಮತ್ತು ಗೃಹ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಿತು. ಆ ಮೂಲಕ ಮಹಿಳಾ

ಕೃಷಿ ಕಾರ್ಮಿಕರ ಸ್ಥಿತಿಗತಿ ಸುಧಾರಿಸಲು ಶ್ರಮಿಸಿತು. ಗ್ರಾಮೀಣ ಪ್ರದೇಶದಲ್ಲಿ ನೂಲುವುದು, ನೇಯುವುದು, ಕಂಬಾರಿಕೆ, ಕುಂಬಾರಿಕೆ, ಕರಕುಶಲಕಲೆ ಮತ್ತು ಕುಸುರಿ ಕೆಲಸಗಳಿಗೆ ಪ್ರಾಶಸ್ತ್ಯ ನೀಡಿತು ಹಾಗೂ ಈ ವೃತ್ತಿಯಲ್ಲಿ ತೊಡಗಲು ಮುಂದೆ ಬಂದ ಮಹಿಳಾ ಕಾರ್ಮಿಕರ ಸ್ಥಿತಿ ಸುದಾರಿಸಲು ಪ್ರಯತ್ನಿಸಿತು.

೧೨. ಕೃಷಿ ಕಾರ್ಮಿಕರ ಸುಧಾರಣೆಗಾಗಿ ಗ್ರಾಮೀಣ ಶ್ರಮಿಕರ ಬಗೆಗಿನ ರಾಷ್ಟ್ರೀಯ ಆಯೋಗದ ರಚನೆ :

ಕೇಂದ್ರ ಸರಕಾರ ಕೃಷಿ ಕಾರ್ಮಿಕರ ಸ್ಥಿತಿಗತಿಯನ್ನು ಸುಧಾರಿಸಲು ಗ್ರಾಮೀಣ ಶ್ರಮಿಕರ ಬಗೆಗಿನ ರಾಷ್ಟ್ರೀಯ ಆಯೋಗವನ್ನು ರಚಿಸಿತು. ದೇಶದಲ್ಲಿ ಕೃಷಿ ಯಾಂತ್ರೀಕರಣಗೊಂಡು ದೊಡ್ಡ ಜಮೀನ್ದಾರರಿಗೆ ಪ್ರಯೋಜನವಾಗುವಂತೆ ಆಯಿತು. ಮಾರುಕಟ್ಟೆ ಆಧಾರಿತ ಹೆಚ್ಚು ಬಂಡವಾಳ ಮತ್ತು ಕಡಿಮೆ ಶ್ರಮವನ್ನು ಉಳಿಸುವ ಒಂದು ಉದ್ಯಮವಾಗಿ ಬೆಳೆಯಿತು. ಇದರಿಂದಾಗಿ ಚಿಕ್ಕ ಅತಿ ಚಿಕ್ಕ ಹಿಡುವಳಿದಾರರು ಕೃಷಿಕಾರ್ಮಿಕರಾಗಿ ಪರಿವರ್ತನೆ ಹೊಂದಿ ಕೃಷಿ ಕಾರ್ಮಿಕರ ಸಂಖ್ಯೆಯು ಹೆಚ್ಚಿತು. ಇದರ ಪರಿಣಾಮವಾಗಿ ಕೃಷಿಕಾರ್ಮಿಕರು ಅಧಿಕವಾಗಿ ಅವರು ಅನೇಕ ವಿಧದ ಕಷ್ಟ ನಷ್ಟಕ್ಕೆ ಈಡಾದರು. ಈ ಸಂದರ್ಭದಲ್ಲಿ ಇವರ ಪರಿಸ್ಥಿತಿಯನ್ನು ಸುಧಾರಿಸಲು ಕೇಂದ್ರ ಸರಕಾರ "ರಾಷ್ಟ್ರೀಯ ಗ್ರಾಮೀಣ ಶ್ರಮಿಕರ ಆಯೋಗ" ರಚನೆಯಾಗಿ ಕೆಲವೊಂದು ಶಿಫಾರಸ್ಸುಗಳನ್ನು ಮಾಡಿತು.

ರಾಷ್ಟ್ರೀಯ ಗ್ರಾಮೀಣ ಶ್ರಮಿಕರ ಆಯೋಗದ ಶಿಫಾರಸ್ಸುಗಳು

೧. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯ ಸುಧಾರಣೆಗಾಗಿ ಬಹುಮುಖ ಕಾರ್ಯಕ್ರಮ ಕೈಗೊಳ್ಳಬೇಕು. ನೀರಾವರಿ, ನೆರೆ ನಿಯಂತ್ರಣ, ಚರಂಡಿಯ ವ್ಯವಸ್ಥೆ, ಗ್ರಾಮೀಣ ವಿದ್ಯುಚ್ಛಕ್ತಿ, ಒಣಬೇಸಾಯ ಮೊದಲಾದವುಗಳನ್ನು ಕೈಗೊಂಡು ಅವುಗಳ ಮೂಲಕ ಕೃಷಿ ಉತ್ಪಾದನೆಯನ್ನು ಮತ್ತು ಗ್ರಾಮೀಣ ಭಾಗದಲ್ಲಿ ಉದ್ಯೋಗಾವಕಾಶವನ್ನು ಹೆಚ್ಚಿಸಬೇಕು.

೨. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳನ್ನು ನಿರ್ಮಿಸುವ ಹೊಸ ಹೊಸ ಯೋಜನೆಗಳನ್ನು ಕೈಗೊಳ್ಳಬೇಕು. ಅದೇ ವೇಳೆಗೆ ಕನಿಷ್ಟ ಕೂಲಿದರಗಳನ್ನು ಹಾಗೂ ಸಾಮಾಜಿಕ ಭದ್ರತೆಯ ಯೋಜನೆಗಳನ್ನು ಜಾರಿಗೊಳಿಸಬೇಕು.

೩. ಕೃಷಿ ಕಾರ್ಮಿಕರಿಗೆ ಮನೆ ಕಟ್ಟಿಕೊಳ್ಳಲು ನಿವೇಶನಗಳನ್ನು ಮತ್ತು ಕಟ್ಟಿದ ಮನೆಗಳನ್ನು ಉಚಿತವಾಗಿ ಇಲ್ಲವೆ ಅತೀ ಕಡಿಮೆ ಬೆಲೆಗೆ ಒದಗಿಸಬೇಕು. ಅಲ್ಲದೆ ಅವರು ಕೃಷಿ ಆಧಾರಿತ ಚಟುವಟಿಕೆಗಳಾದ ದನ ಕರು, ಕೋಳಿ ಸಾಕುವಿಕೆ, ಹೈನುಗಾರಿಕೆ ಇತ್ಯಾದಿ ಚಟುವಟಿಕೆಗಳನ್ನು ಕೈಗೊಳ್ಳಲು ಅವರಿಗೆ ಉತ್ತೇಜನ ನೀಡಬೇಕು.

೪. ಕೇಂದ್ರ ಸರಕಾರವು ಕೃಷಿ ಕಾರ್ಮಿಕರ ರಕ್ಷಣೆಗಾಗಿ ಪ್ರತ್ಯೇಕವಾದ ಕಾನೂನನ್ನು ಪಾಸು ಮಾಡಬೇಕು.

೫. ಕೇಂದ್ರ ಮತ್ತು ರಾಜ್ಯ ಸರಕಾರಗಳು ಕೇಂದ್ರ ಮತ್ತೆ ರಾಜ್ಯಮಟ್ಟದಲ್ಲಿ ಪ್ರತ್ಯೇಕ ಗ್ರಾಮೀಣ ಕಾರ್ಮಿಕ ಇಲಾಖೆಯನ್ನು ಪ್ರಾಂರಭಿಸಬೇಕು.

೬. ಗ್ರಾಮೀಣ ಕಾರ್ಮಿಕರು ಕೈಗಾರಿಕಾ ಕಾರ್ಮಿಕರಂತೆ ಕಾರ್ಮಿಕ ಸಂಘಗಳನ್ನು ರಚಿಸಿಕೊಳ್ಳುವಂತೆ ಅವರಿಗೆ ಉತ್ತೇಜನ ಮತ್ತು ಮಾರ್ಗದರ್ಶನ ನೀಡಬೇಕು.

೭. ಗ್ರಾಮೀಣ ಕೃಷಿ ಮಹಿಳಾ ಕಾರ್ಮಿಕರಿಗಾಗಿ ಕೃಷಿ ಕಾರ್ಮಿಕರ ಕಲ್ಯಾಣ ನಿಧಿಯನ್ನು ರಚಿಸಬೇಕೆಂದೂ ಅದನ್ನು ಗ್ರಾಮೀಣ ಕೃಷಿ ಮಹಿಳಾ ಕಾರ್ಮಿಕರ ಹೆರಿಗೆ, ನಿವೃತ್ತಿ ವೇತನ ಮೊದಲಾದವುಗಳಿಗೆ ಉಪಯೋಗಿಸಬೇಕು. ಈ ನಿಧಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಸಮ ಪ್ರಮಾಣದಲ್ಲಿ ವಂತಿಗೆಯನ್ನು ಸಲ್ಲಿಸಬೇಕೆಂದು ಶಿಫಾರಸ್ಸು ಮಾಡಿತು.[೨೮]

ಕೇಂದ್ರ ಮತ್ತು ರಾಜ್ಯ ಸರಕಾರಗಳು ಮೇಲೆ ತಿಳಿಸಿದ ಕಾಯ್ದೆ, ಕಾರ್ಯಕ್ರಮ ಮತ್ತು ಶಿಫಾರಸ್ಸುಗಳನ್ನು ಜಾರಿಗೊಳಿಸಿದರೂ ಅವುಗಳನ್ನು ಅನುಷ್ಠಾನಕ್ಕೆ ತರುವಲ್ಲಿನ ದೋಷಗಳಿಂದಾಗಿ ಮತ್ತು ಮಧ್ಯಮವರ್ಗಗಳ ಹಾವಳಿಯಿಂದಾಗಿ ಆ ಯೋಜನೆ ಮತ್ತು ಕಾರ್ಯಕ್ರಮಗಳು ವಿಫಲವಾಗುತ್ತಿವೆ. ಇದರಿಂದಾಗಿ ಕೃಷಿ ಕಾರ್ಮಿಕರು ಅನೇಕ ವಿಧದ ಸಮಸ್ಯೆ ಮತ್ತು ತೊಂದರೆಗೆ ಒಳಗಾಗುತ್ತಿದ್ದಾರೆ.

**೧೩. ಕಟ್ಟಡ ನಿರ್ಮಾಣ ಕಾರ್ಮಿಕರ ಹಿತಕ್ಕಾಗಿ ಸರಕಾರ ಕೈಗೊಂಡ ಕ್ರಮಗಳು :** ಸರಕಾರ ಹಲವಾರು ಸೌಲಭ್ಯಗಳಿಂದ ಮತ್ತು ಸಾಮಾಜಿಕ ಸುರಕ್ಷತೆಗಳಿಂದ ವಂಚಿತರಾಗಿರುವ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಸ್ಥಿತಿಗತಿಯನ್ನು ಸುಧಾರಿಸುವ ಉದ್ದೇಶದಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಾಯ್ದೆ ೧೯೯೬ ಮತ್ತು ಕರ್ನಾಟಕ ನಿಯಮಗಳು ೨೦೦೬ ಹಾಗೂ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ ೧೯೯೬ ಮತ್ತು ನಿಯಮಗಳ ೧೯೯೮ನ್ನು ಜಾರಿಗೊಳಿಸಿದೆ. ಈ ಕಾಯ್ದೆಗಳ ಮಹತ್ವವನ್ನು ಈ ಕೆಳಗಿನಂತೆ ನೋಡಬಹುದು.

೧. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ(ಉದ್ಯೋಗ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ ೧೯೯೬ ಮತ್ತು ಕರ್ನಾಟಕ ನಿಯಮಗಳು ೨೦೦೬

೨. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ-೧೯೯೬ ಮತ್ತು ನಿಯಮಗಳು ೧೯೯೮

**೧. ಕಟ್ಟಡ ಕಾರ್ಮಿಕರ ಕಾಯ್ದೆ ಮತ್ತು ನಿಯಮಗಳು**

ಕಟ್ಟಡ ನಿರ್ಮಾಣ ಮತ್ತು ಇತರ ನಿರ್ಮಾಣ ಕಾರ್ಮಿಕ ಕಾಯ್ದೆಯಿಂದ ನಿರ್ಮಾಣ ಕಾರ್ಮಿಕರಿಗಾಗುವ ಸೌಲಭ್ಯಗಳು

**೧. ಕಾಯ್ದೆಯ ಅನ್ವಯಿಕತೆ :** ಹಿಂದಿನ ೧೨ ತಿಂಗಳ ಅವಧಿಯಲ್ಲಿ ೧೦ ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಯದಲ್ಲಿ ಕಟ್ಟಡ ಕಾರ್ಮಿಕರನ್ನು ಕೆಲಸಕ್ಕೆ ನೇಮಿಸಿಕೊಂಡಂತಹ ಸಂಸ್ಥೆಗೆ ಈ ಕಾಯ್ದೆ ಅನ್ವಯಿಸುತ್ತದೆ ಮತ್ತು ಗುತ್ತಿಗೆದಾರರಿಗೆ ಸೇರಿದ ಸಂಸ್ಥೆಗೂ ಈ ಕಾಯ್ದೆ ಅನ್ವಯವಾಗುತ್ತದೆ. ಸ್ವಂತ ಮನೆ ಕಟ್ಟುವ ವ್ಯಕ್ತಿಯು ೧೦ ಲಕ್ಷ ರೂಪಾಯಿಗಿಂತ ಹೆಚ್ಚಿಗೆ ಆ ಕಟ್ಟಡಕ್ಕೆ ವೆಚ್ಚ ಮಾಡಿದ್ದಲ್ಲಿ ಆತನಿಗೆ ಈ ಕಾಯ್ದೆ ಅನ್ವಯಿಸುತ್ತದೆ. ರಸ್ತೆಗಳು, ಬೀದಿಗಳು, ರೈಲುಗಳು, ಟ್ರಾಮವೇಜ್, ವಿಮಾನ ನಿಲ್ದಾಣಗಳು, ನೀರಾವರಿ, ಒಳಚರಂಡಿ, ಎಂಬಾರ್ತಮೆಂಟ್ ಮತ್ತು ನಾವಿಗೇಷನ್ ಕಾಮಗಾರಿಗಳು, ಕಾಲುವೆ ಮತ್ತು ಜಲಾಶಯ ನಿರ್ಮಾಣ ಕಾರ್ಯಗಳು ಈ ಕಾಯ್ದೆಯ ನಿಯಮಕ್ಕೆ ಒಳಗಾಗುತ್ತವೆ.

ಈ ಕಾಯ್ದೆಯ ಪ್ರಕಾರ ಕಟ್ಟಡ ಕಾರ್ಮಿಕರೆಂದರೆ ಕಟ್ಟಡ ಮತ್ತು ಇತರ ನಿರ್ಮಾಣದ ಕೆಲಸದಲ್ಲಿ ನೇಮಿಸಲಾದ ಕುಶಲ, ಅತಿಕುಶಲ ಮ್ಯಾನುಯಲ್, ಸೂಪರ್‌ವೈಜರಿ, ತಾಂತ್ರಿಕ ಅಥವಾ ಲಿಪಿತ ವ್ಯಕ್ತಿಗಳು, ವ್ಯವಸ್ಥಾಪಕ ಅಥವಾ ಆಡಳಿತಾತ್ಮಕ ಹುದ್ದೆಯಲ್ಲಿ ಇರುವವರು ಸೇರುತ್ತಾರೆ. ಆದರೆ ತಿಂಗಳಿಗೆ ೧೬೦೦ ರೂಪಾಯಿಗಿಂತ ಅಧಿಕ ಆದಾಯ ಅಥವಾ ಸಂಬಳ ಪಡೆಯುವ ಸುಪರವೈಜರ್‌ಗೆ ಈ ಕಾಯ್ದೆ ಅನ್ವಯಿಸುವುದಿಲ್ಲ. ಅವರು ಕಟ್ಟಿದ ಕಟ್ಟಡ ನಿರ್ಮಾಣ ಕಾರ್ಮಿಕರ ವ್ಯಾಪ್ತಿಗೆ ಬರುವುದಿಲ್ಲ.

**೨. ಸಂಸ್ಥೆಯ ನೋಂದಣಿ :** ಈ ಕಾಯ್ದೆ ಅನ್ವಯಿಸುವ ದಿನಾಂಕದಿಂದ ೬೦ ದಿನಗಳ ಒಳಗೆ ಪ್ರತಿಯೊಬ್ಬ ನಿಯೋಜಕರು ಅಥವಾ ಕಾರ್ಮಿಕರು ಅವರ ಸಂಸ್ಥೆಯನ್ನು ನೋಂದಣಿ ಅಧಿಕಾರಿ ಬಳಿಗೆ ನೋಂದಾಯಿಸಿಕೊಳ್ಳಬೇಕು. ಇದಕ್ಕಾಗಿ ಕಾರ್ಮಿಕ ಇಲಾಖೆಯ ಎಲ್ಲ ಕಾರ್ಮಿಕ ಅಧಿಕಾರಿಗಳನ್ನು ನೋಂದಣಿ ಅಧಿಕಾರಿ ಎಂದು ನೇಮಿಸಲಾಗಿರುತ್ತದೆ. ಸಂಸ್ಥೆಯ ನೋಂದಣಿಗಾಗಿ ಶುಲ್ಕವನ್ನು ಡಿ.ಡಿ. ಮುಖಾಂತರ ನೋಂದಣಿ ಅಧಿಕಾರಿ ಹೆಸರಿನಲ್ಲಿ ಪಾವತಿಸಿ ಸಂಸ್ಥೆಯನ್ನು ನೋಂದಾಯಿಸಬೇಕು.

| ಕಾರ್ಮಿಕರ ಸಂಖ್ಯೆ | ಶುಲ್ಕ |
|---|---|
| ೧. ೧೦೦ರ ವರೆಗೆ | ರೂ.೧೦೦೦% |
| ೨. ೧೦೧ ರಿಂದ ೫೦೦ರವರೆಗೆ | ರೂ.೨.೫೦೦% |
| ೩. ೫೦೦ ಕ್ಕಿಂತ ಹೆಚ್ಚಿಗೆ | ರೂ. ೫೦೦೦% |

**೩. ಸುರಕ್ಷತೆ ಮತ್ತು ಆರೋಗ್ಯ :** ನಿಮಯ ೫೦ರಿಂದ ೨೪೧ರಲ್ಲಿ ಅಗತ್ಯಪಡಿಸಿರುವಂತೆ ಸುರಕ್ಷತೆಯ ಪ್ರಾಧಾನಗಳನ್ನು ಪ್ರತಿ ನಿಯೋಜಕರು ಪಾಲಿಸಬೇಕು ಮತ್ತು ನಿಯಮ ೨೪೨ರಿಂದ ೨೫೧ರಲ್ಲಿ ಅಗತ್ಯ ಪಡಿಸಿರುವಂತೆ ವೈದ್ಯಕೀಯ ವಿಷಯಕ್ಕೆ ಸಂಬಂಧಿಸಿರುವ ಪ್ರಾವಧಾನಗಳನ್ನು ಪ್ರತಿ ನಿಯೋಜಕರು ಪಾಲಿಸಿರಬೇಕಾಗುತ್ತದೆ.

೪. **ಕೆಲಸದ ವೇಳೆ :** ಒಂದು ವಾರ ಅವಧಿಯಲ್ಲಿ ೪೮ ಗಂಟೆಗಿಂತ ಅಥವಾ ಒಂದು ದಿನದಲ್ಲಿ ೯ ಗಂಟೆಗಿಂತ ಹೆಚ್ಚಿನ ಅವಧಿಗೆ ಕಾರ್ಮಿಕರನ್ನು ದುಡಿಸಬಾರದು. ಸತತವಾಗಿ ೫ ಗಂಟೆಯವರೆಗೆ ಕೆಲಸ ಮಾಡಿದ ನಂತರ ಕಾರ್ಮಿಕರಿಗೆ ಅರ್ಧಗಂಟೆಯ ವಿರಾಮ ನೀಡಬೇಕು. ಒಂದು ದಿನದಲ್ಲಿ ವಿರಾಮದ ಅವಧಿ ಸೇರಿ ಕಾರ್ಮಿಕರ ಒಟ್ಟು ಕೆಲಸದ ಅವಧಿಯನ್ನು ೧೨ ಗಂಟೆ ನಂತರ ವಿಸ್ತರಿಸ ಕೂಡದು. ಒಂದು ದಿನದಲ್ಲಿ ೯ ಗಂಟೆಗಿಂತ ಅಥವಾ ಒಂದು ವಾರದಲ್ಲಿ ೪೮ ಗಂಟೆಗಿಂತ ಹೆಚ್ಚಿನ ಅವಧಿಗೆ ಕಾರ್ಮಿಕರನ್ನು ದುಡಿಸಿಕೊಂಡಲ್ಲಿ ಅಂಥವರಿಗೆ ದ್ವಿಗುಣ ವೇತನವನ್ನು OT (ಓವರ್ ಟೈಂ ವೇತನ) ರೂಪದಲ್ಲಿ ಪಾವತಿ ಮಾಡಬೇಕು. ಮಹಿಳಾ ಕಾರ್ಮಿಕರನ್ನು ರಾತ್ರಿ ಅಂದರೆ ರಾತ್ರಿ ೭ ಗಂಟೆಯಿಂದ ಬೆಳಗಿನ ೬ ಗಂಟೆಗಳ ವರೆಗಿನ ಅವಧಿಯಲ್ಲಿ ದುಡಿಸಿಕೊಳ್ಳುವ ಅಗತ್ಯವಿದ್ದರೆ ಅದಕ್ಕಾಗಿ ಸರಕಾರದ ವಿಶೇಷ ಅನುಮತಿಯನ್ನು ನಿಯೋಜಕರು ಪಡೆಯಬೇಕು ಎಂದು ಕಟ್ಟಡ ನಿರ್ಮಾಣ ಕಾರ್ಮಿಕರ ಕಾಯ್ದೆ ತಿಳಿಸುತ್ತದೆ.

೫. **ವಿಶ್ರಾಂತಿಯ ದಿನ :** ವಾರದಲ್ಲಿ ಒಂದು ದಿನ ಅಂದರೆ ಸಾಮಾನ್ಯವಾಗಿ ಭಾನುವಾರದಂದು ಕಾರ್ಮಿಕರಿಗೆ ಸಂಬಳ ಸಹಿತ ವಿಶ್ರಾಂತಿ ನೀಡಬೇಕೆಂದು ಕಾಯ್ದೆಯ ನಿಯಮ ೨೫೪(೪) ತಿಳಿಸುತ್ತದೆ. ವಿಶ್ರಾಂತಿಯ ದಿನದಂದು ಕೆಲಸ ಮಾಡಿಸಿದಲ್ಲಿ ಅಂತ ಕಾರ್ಮಿಕರಿಗೆ ಆ ದಿನದ ಕೆಲಸಕ್ಕೆ ದ್ವಿಗುಣ ವೇತನ ಮತ್ತು ೫ ದಿನಗಳ ಒಳಗಾಗಿ ಒಂದು ವೇತನ ಸಮೇತ ವಿಶ್ರಾಂತಿ ದಿನ ನೀಡಬೇಕೆಂದು ನಿಯಮ ೨೫೪(೪) ತಿಳಿಸುತ್ತದೆ.

೬. **ನೋಟಿಸು ಪ್ರದರ್ಶಿಸುವುದು :** ಕಾರ್ಮಿಕರ ವೇತನ ದರಗಳು, ಕೆಲಸದ ಗಂಟೆಗಳು, ವೇತನದ ಅವಧಿ, ವೇತನದ ಬಟವಾಡೆಯ ದಿನಾಂಕ, ಸ್ಥಳ, ಸಮಯ, ನಿರೀಕ್ಷಕರ ಹೆಸರು ಮತ್ತು ವಿಳಾಸ, ಇವುಗಳ ವಿವರಗಳನ್ನು ಬಹುಸಂಖ್ಯಾತ ಕಾರ್ಮಿಕರಿಗೆ ತಿಳಿಯುವ ಭಾಷೆಯಲ್ಲಿ ಬರೆಯಿಸಿ, ಸಂಸ್ಥೆಯಲ್ಲಿ ಎಲ್ಲರಿಗೂ ಕಾಣುವ ಜಾಗದಲ್ಲಿ ನಿಯೋಜಕರು ಪ್ರದರ್ಶಿಸಬೇಕೆಂದು ಈ ಕಾಯ್ದೆ ತಿಳಿಸುತ್ತದೆ.

**೭. ಕಾರ್ಮಿಕರ ಕಲ್ಯಾಣದ ವಿಷಯಗಳು**

೧. **ಶೌಚಾಲಯ :** ೫೦ಕ್ಕಿಂತ ಹೆಚ್ಚಿಗೆ ಕಾರ್ಮಿಕರು ದುಡಿಯುತ್ತಿರುವ ಸಂಸ್ಥೆಗಳಲ್ಲಿ ಪುರುಷ ಮತ್ತು ಮಹಿಳಾ ಕಾರ್ಮಿಕರಿಗೆ ಪ್ರತ್ಯೇಕವಾದ ಶೌಚಾಲಯವನ್ನು ಒದಗಿಸಬೇಕು ಎಂದು ಕಲಂ ೩೩ ನಿಯಮ ೨೬೧ ತಿಳಿಸುತ್ತದೆ.

೨. **ಕುಡಿಯುವ ನೀರು :** ಕಾಮಗಾರಿಯ ಸ್ಥಳದಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು ಎಂದು ಕಾಯ್ದೆಯ ಕಲಂ ೩೨ ತಿಳಿಸುತ್ತದೆ.

೩. **ಭೋಜನಾ ಗೃಹ :** ಈ ಕಾಯ್ದೆಯ ಕಲಂ ೩೭ ನಿಯಮ ೩೬೨ರ ಪ್ರಕಾರ ೨೫೦ಕ್ಕಿಂತ ಕಡಿಮೆ ಇಲ್ಲದಂತೆ ಕಾರ್ಮಿಕರು ಕೆಲಸ ಮಾಡುತ್ತಿರುವ ಕಾಮಗಾರಿಯ ಸ್ಥಳದಲ್ಲಿ ಭೋಜನ ಗೃಹವನ್ನು ನಿಯೋಜಕರು ಒದಗಿಸಬೇಕೆಂದು ನಿಯಮ ತಿಳಿಸುತ್ತದೆ.

೪. **ವಾಸದ ವ್ಯವಸ್ಥೆ :** ಕಾಮಗಾರಿಕೆಯ ಸ್ಥಳದಲ್ಲಿ ಅಥವಾ ಅದಕ್ಕೆ ಸಮೀಪದಲ್ಲಿ ಎಲ್ಲ ಕಾರ್ಮಿಕರಿಗೆ ಉಚಿತವಾಗಿ ವಾಸದ ಸೌಕರ್ಯವನ್ನು ಕಾಮಗಾರಿ ಪೂರ್ತಿಯಾಗುವ ತನಕ ಒದಗಿಸಬೇಕೆಂದು ಕಲಂ ೩೪ ತಿಳಿಸುತ್ತದೆ.

೫. **ಶಿಶು ವಿಹಾರ :** ೫೦ಕ್ಕಿಂತ ಜಾಸ್ತಿ ಮಹಿಳಾ ಕಾರ್ಮಿಕರು ದುಡಿಯುವ ಕಾಮಗಾರಿಯ ಸ್ಥಳದಲ್ಲಿ ೬ ವರ್ಷ ಕೆಳಗಿನ ಮಕ್ಕಳ ಸಲುವಾಗಿ ಶಿಶುವಿಹಾರದ ವ್ಯವಸ್ಥೆ ಮಾಡಬೇಕಾಗುತ್ತದೆ.

೬. **ಪ್ರಥಮ ಚಿಕಿತ್ಸೆ :** ಕಾಮಗಾರಿ ನಡೆದ ಸ್ಥಳದಲ್ಲಿ ನಿಯೋಜಕರು ಪ್ರಥಮ ಚಿಕಿತ್ರೆಯ ಸೌಲಭ್ಯಗಳನ್ನು ಒದಗಿಸಬೇಕು. ಯಾವ ಕಾರ್ಮಿಕನಿಗೆ ಕಿವಿ ಕೇಳುವುದಿಲ್ಲ. ದೋಷ ಪೂರ್ಣ ದೃಷ್ಟಿ ಇರುವುದೋ ಅಥವಾ ಮೂರ್ಛೆ ಹೋಗುವ ಪ್ರವೃತ್ತಿ ಇರುವುದೋ ಅಂಥವರನ್ನು ಅಪಾಯವಿರುವಂಥ ಕಾರ್ಯದಲ್ಲಿ ದುಡಿಸಿಕೊಳ್ಳುವಂತಿಲ್ಲ ಎಂದು ಕಾಯ್ದೆ ತಿಳಿಸುತ್ತದೆ.

**೭. ವೇತನ ಬಟವಾಡೆಯ ದಿನ**

೧. ಯಾವುದೇ ಕಾಮಗಾರಿಯಲ್ಲಿ ಒಂದು ಸಾವಿರಕ್ಕಿಂತ ಕಡಿಮೆ ಕಾರ್ಮಿಕರು ದುಡಿಯುತ್ತಿದ್ದಲ್ಲಿ ಅಂಥವರ ವೇತನವನ್ನು ವೇತನದ ಅವಧಿ ಮುಗಿದ ೭ ದಿನಗಳ ಒಳಗೆ ಮತ್ತು ಒಂದು ಸಾವಿರಕ್ಕಿಂತ ಹೆಚ್ಚಿಗೆ ಇರುವ ಕಾರ್ಮಿಕರ ವೇತನ ಅವಧಿ ಮುಗಿದ ೧೦ ದಿನಗಳ ಒಳಗೆ ಬಟವಾಡೆ ಮಾಡಬೇಕಾಗುತ್ತದೆ.

೨. ಉದ್ಯೋಗ ಸಮಾಪ್ತಿಯಾದ ಎರಡು ದಿನಗಳ ಒಳಗೆ ಅಂಥ ಕಾರ್ಮಿಕರು ದುಡಿದ ವೇತನವನ್ನು ಬಟವಾಡೆ ಮಾಡಬೇಕಾಗುತ್ತದೆ.

೩. ಎಲ್ಲ ವೇತನ ಬಟವಾಡೆಯನ್ನು ಕೆಲಸದ ದಿನದಂದೇ ಮತ್ತು ಕೆಲಸದ ಅವಧಿಯಲ್ಲಿಯೇ ಮತ್ತು ಕಾಮಗಾರಿಯ ಸ್ಥಳದಲ್ಲಿಯೇ ಮಾಡಬೇಕಾಗುತ್ತದೆ.

೪. ಕಾಮಗಾರಿ ಪೂರ್ಣಗೊಂಡ ೪೮ ಗಂಟೆಗಳಲ್ಲಿ ಕಾರ್ಮಿಕರ ವೇತನ ಬಟವಾಡೆ ಮಾಡಬೇಕು.

ಮೇಲೆ ತಿಳಿಸಿದ ದಿನಗಳಂದೇ ಆ ಕಾರ್ಮಿಕರ ವೇತನವನ್ನು ಪಾವತಿಸಬೇಕೆಂದು ಕಟ್ಟಡ ನಿರ್ಮಾಣ ಕಾರ್ಮಿಕರ ಕಾಯ್ದೆ ತಿಳಿಸುತ್ತದೆ.

೮. **ಕಟ್ಟಡ ಕಾರ್ಮಿಕರ ನೋಂದಣಿ :** ಕಟ್ಟಡ ನಿರ್ಮಾಣ ಕಾಯ್ದೆಯ ಪ್ರಕಾರ ೧೮ರಿಂದ ೬೦ ವರ್ಷ ವಯೋಮಾನದ ವರ್ಷದ ೧೨ ತಿಂಗಳ ಅವಧಿಯಲ್ಲಿ ೯೦ ದಿನ ಕಟ್ಟಡ ಕಾರ್ಮಿಕರಾಗಿ ಕೆಲಸ ಮಾಡಿದ ಕಾರ್ಮಿಕರು ನೋಂದಣಿಗೆ ಅರ್ಹರಾಗಿರುತ್ತಾರೆ. ಇಂತವರು ನಮೂನೆ-೫ರಲ್ಲಿ ಅರ್ಜಿ ತುಂಬಿ ೨೫ ರೂಪಾಯಿ ನೋಂದಣಿ ಶುಲ್ಕ ವಯಸ್ಸಿನ ದೃಢೀಕರಣ ಪತ್ರ, ಉದ್ಯೋಗ ಮಾಡುತ್ತಿರುವ ಕುರಿತು

ದೃಢೀಕರಣ ಪತ್ರ ಮತ್ತು ಮೂರು ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನೀಡಿ ಅರ್ಜಿಯನ್ನು ನೋಂದಣಿ ಅಧಿಕಾರಿ ಅವರ ಸಮ್ಮುಖದಲ್ಲಿ ಸಲ್ಲಿಸಬೇಕು. ನಂತರ ನೋಂದಣಿ ಅಧಿಕಾರಿ ಅರ್ಜಿಯನ್ನು ನೋಂದಾಯಿಸಿಕೊಂಡು ಅರ್ಜಿದಾರ ಫಲಾನುಭವಿಗಳಿಗೆ ಗುರುತಿನ ಚೀಟಿಯನ್ನು ನೀಡುತ್ತಾರೆ. ನಂತರ ಫಲಾನುಭವಿಗಳು ಪ್ರತಿ ತಿಂಗಳು ೧೦ ರೂಪಾಯಿಗಳನ್ನು ಚಂದಾ ಹಣವಾಗಿ ನೋಂದಣಿ ಅಧಿಕಾರಿಗಳಿಗೆ ಪಾವತಿಸಬೇಕು. ಒಂದು ವರ್ಷದವರೆಗೆ ಸತತವಾಗಿ ಚಂದಾ ಹಣವನ್ನು ಪಾವತಿ ಮಾಡದ ಫಲಾನುಭವಿಗಳ ನೋಂದಣಿ ರದ್ದಾಗುತ್ತದೆ. ಫಲಾನುಭವಿಗಳೆಂದು ನೋಂದಾವಣೆಯಾದ ಕಟ್ಟಡ ಕಾರ್ಮಿಕರು ಅನೇಕ ವಿಧದ ಸೌಲಭ್ಯಗಳನ್ನು ಪಡೆಯುತ್ತಾರೆ.

**ಫಲಾನುಭವಿಗಳಿಗೆ ದೊರಕುವ ಸೌಲಭ್ಯಗಳು**

ಫಲಾನುಭವಿಗಳೆಂದು ನೋಂದಣಿಯಾದ ಕಟ್ಟಡ ಕಾರ್ಮಿಕರು ಈ ಕೆಳಗೆ ಸೂಚಿಸಿದ ಸೌಲಭ್ಯಗಳನನು ಪಡೆದುಕೊಳ್ಳುತ್ತಾರೆ.

**೧. ಫಲಾನುಭವಿ ಎಂದು ನೋಂದಣಿ ಆದ ತಕ್ಷಣ ದೊರಕುವ ಸೌಲಭ್ಯಗಳು**

೧. ನೋಂದಾಯಿತ ಕಟ್ಟಡ ಕಾರ್ಮಿಕರು ಮರಣ ಹೊಂದಿದರೆ ಅಂತ್ಯಕ್ರಿಯೆಗಾಗಿ ರೂ. ೪೦೦೦% ಧನಸಹಾಯ.

೨. ಕಟ್ಟಡ ಕಾರ್ಮಿಕರು ಸರಕಾರಿ ಆಸ್ಪತ್ರೆ/ಸರಕಾರದಿಂದ ಮಾನ್ಯತೆ ಪಡೆದ ಅಂದರೆ ಕರ್ನಾಟಕ ಸರ್ಕಾರಿ ನೌಕರ ನಿಯಮಗಳು, ೧೯೬೩ರ ಷೆಡ್ಯೂಲ್ ೧ರಲ್ಲಿ ನಿಗದಿಪಡಿಸಿರುವ ಖಾಸಗಿ ಆಸ್ಪತ್ರೆ ಗಳಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆಯುತ್ತಿದ್ದರೆ, ಮೊದಲ ೫ ದಿನಗಳಿಗೆ ರೂಪ. ೪೦೦% ರಂತೆ ಹಾಗೂ ಉಳಿದ ದಿನಗಳಿಗೆ ಪ್ರತಿ ದಿನಕ್ಕೆ ೫೦ರಂತೆ ಗರಿಷ್ಠ ರೂ.೨೦೦೦ ವೈದ್ಯಕೀಯ ಚಿಕಿತ್ಸೆಗೆ ಧನಸಹಾಯ.

೩. ಕೆಲಸ ಮಾಡುತ್ತಿದ್ದಾಗ ಅಪಘಾತವಾಗಿ ಮರಣ ಹೊಂದಿದರೆ ಅಥವಾ ಶಾಶ್ವತ ಅಂಗವಿಕಲರಾದರೆ ರೂ. ೧,೦೦.೦೦೦ಗಳ ಪರಿಹಾರ ಧನ.

೪. ಹೃದ್ರೋಗ, ಕಿಡ್ನಿ, ಜೋಡಣೆ ಮತ್ತು ಕ್ಯಾನ್ಸರ್ ಶಸ್ತ್ರಚಿಕಿತ್ಸೆಗಾಗಿ ಸರಕಾರಿ ಆಸ್ಪತ್ರೆ/ಸರ್ಕಾರದಿಂದ ಮಾನ್ಯತೆ ಪಡೆದ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದಿದ್ದರೆ ರೂ.೫೦.೦೦೦ ಧನಸಹಾಯ.

**೨. ಒಂದು ವರ್ಷ ನೋಂದಾಯಿತರಾದವರಿಗೆ ದೊರಕುವ ಸೌಲಭ್ಯಗಳು**

೫. ಮಹಿಳಾ ಕಟ್ಟಡ ಕಾರ್ಮಿಕರಿಗೆ ಹೆರಿಗೆ ಸೌಲಭ್ಯ ರೂ. ೬೦೦೦ ಕೇವಲ ಎರಡು ಹೆರಿಗೆಗೆ ಮಾತ್ರ.

೬. ಕಟ್ಟಡ ಕಾರ್ಮಿಕರ ಅವಲಂಬಿತ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಹಾಯಧನ್ನ, ಎರಡು ಮಕ್ಕಳಿಗೆ ಮಾತ್ರ.

| | | | |
|---|---|---|---|
| ಎಸ್.ಎಸ್.ಎಲ್.ಸಿ. | ಧನಸಹಾಯ | ರೂ. | ೩೦೦೦ |
| ಪಿ.ಯು.ಸಿ | ಧನಸಹಾಯ | ರೂ. | ೩೦೦೦ |
| ಐ.ಟಿ.ಐ ಡಿಪ್ಲೊಮಾ | ಧನಸಹಾಯ | ರೂ. | ೩೬೦೦ |
| ಪದವಿ | ಧನಸಹಾಯ | ರೂ. | ೩೦೦೦ |
| ಸ್ನಾತಕೋತ್ತರ ಪದವಿ | ಧನಸಹಾಯ | ರೂ. | ೬೦೦೦ |
| ವೈದ್ಯಕೀಯ ತಾಂತ್ರಿಕ ಪದವಿ | ಧನಸಹಾಯ | ರೂ. | ೧೦೦೦೦ |

೭. ನೋಂದಾಯಿತ ಕಟ್ಟಡ ಕಾರ್ಮಿಕರ ಮೊದಲ ಮದುವೆಗೆ ಹಾಗೂ ಅವಲಂಬಿತ ಮಕ್ಕಳ ಮದುವೆಗೆ ರೂ. ೫೦೦೦ಗಳ ಧನಸಹಾಯ ಎರಡು ಅವಲಂಬಿತ ಮಕ್ಕಳಿಗೆ ಮಾತ್ರ.

೩. ಎರಡು ವರ್ಷ ನೋಂದಾಯಿತರಾದ ಕಟ್ಟಡ ಕಾರ್ಮಿಕರಿಗೆ ದೊರಕುವ ಸೌಲಭ್ಯಗಳು

೮. ಕಟ್ಟಡ ನಿರ್ಮಾಣ ಕೆಲಸದ ಉಪಕರಣ ಖರೀದಿಸಲು ರೂ. ೫೦೦೦ಗಳ ಸಾಲ ಸೌಲಭ್ಯವನ್ನು ನೀಡಲಾಗುತ್ತದೆ.

೪. ಐದು ವರ್ಷ ನೋಂದಾಯಿತರಾದ ಕಟ್ಟಡ ಕಾರ್ಮಿಕರಿಗೆ ದೊರಕುವ ಸೌಲಭ್ಯಗಳು

೯. ೫೦ ವರ್ಷ ಆದ ಮಹಿಳಾ ಕಾರ್ಮಿಕರಿಗೆ ಹಾಗೂ ೫೫ ವರ್ಷದ ಪುರುಷ ಕಾರ್ಮಿಕರಿಗೆ ತಿಂಗಳಿಗೆ ರೂ. ೩೦೦ರಂತೆ ಪಿಂಚಣಿ ಹಾಗೂ ೫ ವರ್ಷಗಳಿಗಿಂತ ಹೆಚ್ಚಿನ ಸೇವೆಗೆ ಪ್ರತಿವರ್ಷ ಹೆಚ್ಚುವರಿಯಾಗಿ ರೂ. ೧೦ರ ಪಿಂಚಣಿಯನ್ನು ಪಡೆಯಲು ಅರ್ಹರಿರುತ್ತಾರೆ.

೧೦. ಕುಷ್ಠರೋಗ, ಕ್ಯಾನ್ಸರ್, ಪಾರ್ಶ್ವವಾಯು ಇತ್ಯಾದಿ ಕಾಯಿಲೆಗಳಿಂದ ಶಾಶ್ವತ ಅಂಗವಿಕಲತೆ ಹೊಂದಿದರೆ. ಪ್ರತಿತಿಗಳು ರೂ. ೩೦೦ ಅಂಗವಿಕಲತೆ ಪಿಂಚಣಿ ಹಾಗೂ ಅಂಗವಿಕಲತೆಯ ಪ್ರಮಾಣವನ್ನು ಆಧರಿಸಿ ರೂ. ೫೦೦೦ಗಳ ಎಕ್ಸ್‌ಗ್ರೇಷಿಯ ಪೇಮೆಂಟ್ ಅನ್ನು ನೀಡಲಾಗುತ್ತದೆ.

೧೧. ಮನೆ ಕಟ್ಟಲು ಅಥವಾ ಖರೀದಿಸಲು ರೂ. ೫೦.೦೦೦ಗಳವರೆಗೆ ಸಾಲಸೌಲಭ್ಯವನ್ನು ನೀಡಲಾಗುತ್ತದೆ.

೧೯೯೬ರ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಾಯ್ದೆ ಪ್ರಕಾರ ಮೇಲೆ ವಿವರಿಸಿದ ಎಲ್ಲ ಸೌಲಭ್ಯಗಳನ್ನು ನೋಂದಾಯಿತ ಕಟ್ಟಡ ನಿರ್ಮಾಣ ಕಾರ್ಮಿಕರು ಪಡೆದುಕೊಳ್ಳುತ್ತಾರೆ.

೨. ಸುಂಕ ಕಾಯ್ದೆ ೧೯೯೬ ಮತ್ತು ನಿಯಮಗಳು ೧೯೯೮ : ಸುಂಕ ಕಾಯ್ದೆಯ ಪ್ರಕಾರ ಕಟ್ಟಡ ನಿರ್ಮಾಣ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ನಿರ್ಮಾಣ ಕಾಮಗಾರಿಯ ನಿಯೋಜಕರು

ಅಥವಾ ಗುತ್ತಿಗೆದಾರರು ನಿರ್ಮಾಣ ವೆಚ್ಚದ ಶೇಕಡ ಒಂದರಷ್ಟು ಹಣವನ್ನು ಸುಂಕವಾಗಿ ನೀಡಬೇಕಾಗುತ್ತದೆ. ಈ ಸುಂಕದ ನಿಧಿಯಿಂದ ಕಟ್ಟಡ ನಿರ್ಮಾಣ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಕಟ್ಟಡ ನಿರ್ಮಾಣ ಕಾರ್ಮಿಕರಿಗೆ ಕಲ್ಯಾಣ ಸೌಲಭ್ಯಗಳನ್ನು ಅಥವಾ ಭದ್ರತಾ ಸೌಲಭ್ಯಗಳನ್ನು ನೀಡುತ್ತದೆ.[೨೯]

೩. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗಳ ಸ್ಥಾಪನೆ : ಕೇಂದ್ರ ಸರಕಾರ ೧೯೯೬ರ ಕಟ್ಟಡ ನಿರ್ಮಾಣ ಮತ್ತು ಇತರ ನಿರ್ಮಾಣ ಕಾಯ್ದೆ ಅಡಿಯಲ್ಲಿ ದೇಶದ ಅನೇಕ ರಾಜ್ಯಗಳಲ್ಲಿ ಕಟ್ಟಡ ಕಾರ್ಮಿಕರ ಕಲ್ಯಾಣಕ್ಕಾಗಿ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಯನ್ನು ಸ್ಥಾಪಿಸಿದೆ. ಆ ಮೂಲಕ ನೋಂದಾಯಿತ ಕಾರ್ಮಿಕರಿಗೆ ಅನೇಕ ವಿಧದ ಸೌಲಭ್ಯಗಳನ್ನು ನೀಡುತ್ತಿದೆ. ಹೀಗೆ ದೇಶದಲ್ಲಿ ಬಿಹಾರ, ಮಹಾರಾಷ್ಟ್ರ, ಕೇರಳ, ಗುಜರಾತ್ ಮತ್ತು ಆಂಧ್ರಪ್ರದೇಶ ಇತ್ಯಾದಿ ರಾಜ್ಯಗಳಲ್ಲಿ ಮೇಲಿನ ಉದ್ದೇಶಕ್ಕಾಗಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯನ್ನು ಸ್ಥಾಪಿಸಿ ಕಾರ್ಮಿಕರನ್ನು ಸಂಘಟಿತರನ್ನಾಗಿ ಮಾಡುತ್ತಿದೆ ಹಾಗೂ ಅನೇಕ ಸೌಲಭ್ಯಗಳನ್ನು ನೀಡಲಾಗುತ್ತಿದೆ.

ಕರ್ನಾಟಕದಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕರ ಕಲ್ಯಾಣವನ್ನು ಸಾಧಿಸುವ ಉದ್ದೇಶದಿಂದ ೨೦೦೭ ಜನವರಿಯಿಂದ "ಕರ್ನಾಟಕ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ" ಕಾರ್ಯಾರಂಭ ಮಾಡಿತು. ಅದು ಈ ಹಿಂದೆ ತಿಳಿಸಿದ ೧೧ ವಿಧದ ಕಾರ್ಮಿಕ ಕಲ್ಯಾಣ ಕಾರ್ಯಕ್ರಮವನ್ನು ಕೈಗೊಂಡಿದೆ. ಕರ್ನಾಟಕದಲ್ಲಿ ನೋಂದಣಿಯಾದ ಒಟ್ಟು ೭೭,೮೧೨ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರಲ್ಲಿ ಕೇವಲ ೩೦೪ ಜನ ಕಾರ್ಮಿಕರು ಮಾತ್ರ ಮೇಲೆ ತಿಳಿಸದ ಸೌಲಭ್ಯಗಳನ್ನು ಪಡೆದಿರುವುದು ಕಂಡುಬರುತ್ತಿದೆ. ಅಂದರೆ ಅಧಿಕ ಸಂಖ್ಯೆಯ ಕಾರ್ಮಿಕರು ಸಾಮಾಜಿಕ ಭದ್ರತಾ ಸೌಲಭ್ಯಗಳಿಂದ ವಂಚಿತರಾಗಿರುವುದು ಸ್ಪಷ್ಟವಾಗಿ ತಿಳಿದುಬರುತ್ತಿದೆ.

**೪. ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳು :** ಕೇಂದ್ರ ಸರಕಾರ ಅಸಂಘಟಿತ ವಲಯದ ಕಾರ್ಮಿಕರ ಕಲ್ಯಾಣಕ್ಕಾಗಿಯೇ ಪ್ರತ್ಯೇಕ ಕಾಯ್ದೆಗಳನ್ನು ಮಾಡಿದೆ. ಅಸಂಘಟಿತ ವಲಯದ ಕಾರ್ಮಿಕರ ಕಾಯ್ದೆ-೨೦೦೪, ೨೦೦೫, ೨೦೦೭ ಮತ್ತು ೨೦೦೯ನ್ನು ಜಾರಿಗೊಳಿಸಿ ಈ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡುತ್ತಿದೆ. ಈ ಕಾರ್ಮಿಕರಲ್ಲಿ ೬೦ ವರ್ಷ ವಯಸ್ಸಿನವರಿಗೆ ವೃದ್ಧಾಪ್ಯ ವೇತನ, ವಿಧವೆಯರಿಗೆ ವಿಧವಾ ವೇತನ ಮತ್ತು ಮಹಿಳೆಯರಿಗಾ ಜನನಿ ಸುರಕ್ಷೆ ಯೋಜನೆಗಳನ್ನು ಜಾರಿಗೊಳಿಸಿದೆ.

ಹೀಗೆ ಸರಕಾರ ಉಪಕಾರ್ಮಿಕರ ಬಡತನ ನೀಗಿಸುವುದಕ್ಕಾಗಿ ಅನೇಕ ಉದ್ಯೋಗ ಯೋಜನೆಗಳನ್ನು, ಬಡತನ ನಿವಾರಣ ಕ್ರಮಗಳನ್ನು ಜಾರಿಗೊಳಿಸಿದರು. ಆ ಯೋಜನೆಗಳ ಅನುಷ್ಠಾನದಲ್ಲಿನ ದೋಷಗಳಿಂದಾಗಿ

ತಲುಪಬೇಕಾದ ಬಡ ಫಲಾನುಭವಿಗಳಿಗೆ ತಲುಪದೆ ಉಳ್ಳವರ, ರಾಜಕೀಯ ಬೆಂಬಲಿತ ಜನರ ಹಾಗೂ ಸ್ವಜನ ಪಕ್ಷ ಪಾತಿಗಳ ಪಾಲಾಗುತ್ತಿವೆ. ಒಂದು ವೇಳೆ ಮಹಿಳಾ ಕಾರ್ಮಿಕರಿಗೆ ಸ್ವಯಂ ಉದ್ಯೋಗ ಯೋಜನೆ ಸಾಲಸೌಲಭ್ಯ ದೊರೆತರು ಆ ಹಣ ಆ ಉದ್ದೇಶಕ್ಕಾಗಿ ವಿನಿಯೋಗವಾಗದೆ ಗಂಡನ ಕೈ ಸೇರುತ್ತದೆ. ಕಟ್ಟಡ ನಿರ್ಮಾಣ ಕಾರ್ಮಿಕರ ಕಲ್ಯಾಣಕ್ಕಾಗಿ ಸರಕಾರ ರಾಜ್ಯ ಮಟ್ಟದಲ್ಲಿ ಕಟ್ಟಡ ನಿರ್ಮಾಣ ಕಾರ್ಮಿಕ ಮಂಡಳಿಯನ್ನು ಸ್ಥಾಪಿಸಿ ಆ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುತ್ತಿದೆ. ಆದರೆ ಆ ಸಂಸ್ಥೆಗೆ ನೋಂದಾಯಿತರಾದ ಮಹಿಳಾ ಕಾರ್ಮಿಕರ ಪ್ರಮಾಣ ಅತ್ಯಂತ ಕಡಿಮೆ ಇರುವುದರಿಂದ ಆ ಮಂಡಳಿಯಿಂದ ಸೌಲಭ್ಯ ಪಡೆಯುವ ಪ್ರಮಾಣವು ಕಡಿಮೆಯಾಗುತ್ತದೆ. ಅಲ್ಲದೆ ಜಿಲ್ಲೆಯಲ್ಲ CITUC, INTUC ಇತ್ಯಾದಿ ಕಾರ್ಮಿಕ ಸಂಘಟನೆಗಳಿದಿದ್ದರೂ ಮಹಿಳಾ ಕಾರ್ಮಿಕರನ್ನು ತಮ್ಮ ಸಂಘಟನೆಗೆ ಸೇರಿಸಿಕೊಂಡಿರುವುದಿಲ್ಲ. ಹೀಗಾಗಿ ಮಹಿಳಾ ಕಾರ್ಮಿಕರು ಅಸಂಘಟಿತರಾಗಿ ಉಳಿದು ನಾನಾ ವಿಧದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಪ್ರತಿ ದಿನ ಕೆಲಸಕ್ಕಾಗಿ ಮೇಸ್ತ್ರಿಗಳ, ಜಮೀನುದಾರ ಮತ್ತು ಕಾಂಟ್ರ್ಯಾಕ್ಟರ್ ಕಾಲಿಗೆ ಬಿದ್ದು ಕೆಲಸಕ್ಕಾಗಿ ಬೇಡುತ್ತಿದ್ದಾರೆ. ಇಂತಹ ದೈನ್ಯದ ಸ್ಥಿತಿಯಿಂದಾಗಿ ಜಮೀನ್ದಾರ ಮತ್ತು ಮೇಸ್ತ್ರಿ, ಗುತ್ತಿಗೆದಾರರಿಂದ ಶೋಷಣೆಗೆ ಒಳಗಾಗುತ್ತಾರೆ. ಇದನ್ನು ತಪ್ಪಿಸಲು ಸರಕಾರ ಮತ್ತು ಕಾರ್ಮಿಕ ಸಂಘಟನೆಗಳು ಕೂಡಿ ಈ ಕಾರ್ಮಿಕ ಪರ, ಹೋರಾಟ ಮಾಡಬೇಕಾದುದು ಅವಶ್ಯವಿದೆ.

**ಅಡಿಟಿಪ್ಪಣಿಗಳು**

೧. w.w.w.koppal.nic.in

೨. ಸೂರ್ಯನಾಥ ಯು.ಕಾಮಥ್, ೨೦೦೧, **ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ**, ಪು.೧೧೭-೧೧೮

೩. w.w.w.koppal.nic.in. Koppal District Profil ಮತ್ತು ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೮-೦೯, ಪು.೭೮ ಮತ್ತು ಸಂಯೋಜಕರು, ಟಿ.ಆರ್.ಚಂದ್ರಶೇಖರ್, ೧೯೯೧, ಜಿಲ್ಲಾ ಅಭಿವೃದ್ಧಿ ಅಧ್ಯಯನ, ಕೊಪ್ಪಳ, ಪು.೨೩-೨೪

೪. w.w.w.koppal.nic.in. March-2008

೫. ೨೦೦೧ರ ಜನಗಣತಿಯ ವರದಿ, ಪು.೫-೬

೬. ಕೊಪ್ಪಳ ಜಿಲ್ಲೆಯ ಅಂಕಿ ಸಂಖ್ಯೆಗಳ ನೋಟ ೨೦೦೮-೦೯, ಪು.೭-೭೧

೭. ಅದೇ, ಪು.೭

೮. ಸೆನ್ಸಸ್ ಆಫ್ ಇಂಡಿಯಾ, ೨೦೦೧, ಡಿಸ್ಟ್ರಿಕ್ಟ್ ಸೆನ್ಸಸ್ ಆಪರೇಷನ್ ಕರ್ನಾಟಕ, ಪು.ಸಂ.೫

೯. ಕೊಪ್ಪಳ ಜಿಲ್ಲೆಯ ಅಂಕಿ ಸಂಖ್ಯೆಗಳ ನೋಟ ೨೦೦೮-೦೯, ಪು.೯-೧೦

೧೦. ಸೇನ್ಸಸ್ ಆಫ್ ಇಂಡಿಯಾ-೨೦೦೧, ಡಿಸ್ಟ್ರಿಕ್ಟ್ ಪಾಪುಲೇಷನ್ ಬುಕ್‌ಲೇಟ್, ಡೈರೆಕ್ಟರೇಟ್ ಆಫ್ ಸೇನ್ಸಸ್ ಆಪರೇಷನ್, ಕರ್ನಾಟಕ, ಪು.೫

೧೧. ಅದೇ, ಪು.೭ ರಿಂದ ೨೪

൧൨. ಜಿಂಗನ್ ಎಂ.ಎಲ್., ೨೦೦೯, *ದ ಎಕನಾಮಿಕ್ಸ್ ಆಫ್ ಡೆವಲಪ್‌ಮೆಂಟ್ ಆ್ಯಂಡ್ ಪ್ಲಾನಿಂಗ್,* **ಎಕನಾಮಿಕ ಡೆವಲಪಮೆಂಟ್,** ಪು.೨೨(i)

೧೩. ಶಾಂತಪ್ಪ ಬಿ., ಸಂಯೋಜಕರು, **ಕರ್ನಾಟಕ ಮಾನವ ಅಭಿವೃದ್ಧಿ** ವರದಿ-೨೦೦೫, ಪು.೩೬೦

೧೪. **ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ,** ೨೦೦೮-೦೯, ಪು.೧೨

೧೫. ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫, ಪು.೧೯೪

೧೬. ಅದೇ, ಪು.೧೯೪

೧೭. ಅದೇ, ಪು.೧೯೪

೧೮. ರಿಜಿಸ್ಟರ್ ಜನರಲ್ ಆಫ್ ಇಂಡಿಯಾ ಜನಗಣತಿ ೨೦೦೧, **ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫**

೧೯. w.w.w.sewa.org, ಪು.೪

೨೦. **ಟುವರ್ಡ್ ಈಕ್ವಾಲಿಟಿ ವರದಿ-೧೯೭೪,** ಪು.೧೭೫

೨೧. w.w.w.sewa.org, ಪು.೪

೨೨. **ಜನಗಣತಿ-೨೦೦೧, ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ,** ೨೦೦೮-೧೦, ಪು.೧೨

೨೩. ಕರ್ನಾಟಕ ಸರಕಾರ, **ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಂಡಳಿ ಪ್ರಗತಿ ವರದಿ**

೨೪. ಅದೇ,

೨೫. ಸುಂದರಂ ಕೆ.ಪಿ.ಎಂ. ಮತ್ತು ರುದ್ರದತ್ತ, ೨೦೦೧, **ಭಾರತದ ಅರ್ಥವ್ಯವಸ್ಥೆ,** ಪು.೧೯೩-೧೯೮

೨೬. ಪ್ರಜಾವಾಣಿ ಅಕ್ಟೋಬರ್ ೧೨, ೨೦೦೬

೨೭. ಗೀತಾಸೇನ್, ಆದಿತಿ ಅಯ್ಯರ್ ಮತ್ತು ಅರಾಗಿರಗೇ, **ಜಂಡರ್ ಆ್ಯಂಡ್ ಹೆಲ್ತ್ ಇನ್ ಈಕ್ವಿಟಿಸ್ ಇನ್ ಕೊಪ್ಪಳ ಡಿಸ್ಟ್ರಿಕ್ಟ್** ಇ.ಪಿ.ಡಬ್ಲ್ಯೂ, ಫೆಬ್ರವರಿ ೨೦೦೭, ಪು.೬೮೪

೨೮. ಸುಂದರಂ ಕೆ.ಪಿ.ಎಂ. ಮತ್ತು ರುದ್ರದತ್ತ, ೨೦೦೧, **ಭಾರತದ ಅರ್ಥವ್ಯವಸ್ಥೆ,** ಪು.ಸಂ.೬೨೦-೬೨೭

೨೯. ಕರ್ನಾಟಕ ಸರಕಾರ, ೨೦೦೭, **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಕೈಪಿಡಿ,** ಪು.೧೭ರಿಂದ ೩೦

# ಅಧ್ಯಾಯ ಏಳು

# ಉಪಸಂಹಾರ

೭.೧ ಅಧ್ಯಯನದ ಫಲಿತಗಳು

೭.೨ ಅಧ್ಯಯನದ ಕೆಲವೊಂದು ಸಲಹೆಗಳು

# ಏಳು

# ಉಪಸಂಹಾರ

ಕೊಪ್ಪಳ ಜಿಲ್ಲೆಯಲ್ಲಿ ಅಸಂಘಟಿತ ವಲಯದ ವೃತ್ತಿಗಳಾದ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರನ್ನು ಆಧರಿಸಿ ಅಧ್ಯಯನವನ್ನು ಕೈಗೊಂಡಾಗ ಅವರ ಆರ್ಥಿಕ ಸ್ಥಿತಿಗತಿ, ಕೆಲಸದಲ್ಲಿನ ಸಮಸ್ಯೆಗಳು, ಕುಟುಂಬ ಮತ್ತು ಸಮಾಜದಲ್ಲಿ ಅವರ ಸ್ಥಾನ ಇತ್ಯಾದಿ ಅಂಶಗಳು ತಿಳಿದುಬಂದವು. ಅಸಂಘಟಿತ ವಲಯದ ದುಡಿಮೆಗಾರರ ಪ್ರಧಾನ ಲಕ್ಷಣಗಳಾದ ಅನಕ್ಷರತೆ, ಅರೆಕೌಶಲ್ಯ, ಅಕುಶಲತೆ, ಬಡತನ, ಕಡಿಮೆ ಜೀವನ ಮಟ್ಟ, ವೇತನ ತಾರತಮ್ಯ, ಕೆಲಸದ ತಾರತಮ್ಯ, ಕೆಲಸದ ಅಭದ್ರತೆ, ಅಸಂಘಟನೆ ಮತ್ತು ಕುಟುಂಬ ಮತ್ತು ಸಮಾಜದಲ್ಲಿ ಕಡಿಮೆ ಸ್ಥಾನಮಾನ ಹೊಂದಿರುವುದು ಇತ್ಯಾದಿ ಲಕ್ಷಣಗಳು ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರಲ್ಲಿ ಕಂಡುಬಂದಿವೆ.

ಕೇಂದ್ರ ಮತ್ತು ರಾಜ್ಯ ಸರಕಾರಗಳು ಅಸಂಘಟಿತ ವಲಯದಲ್ಲಿ ದುಡಿಮೆಯು ಕಾರ್ಮಿಕರ ಕಲ್ಯಾಣಕ್ಕಾಗಿ, ಬಡವರನ್ನು ಒಡೆತನದಿಂದ ದೂರ ಮಾಡುವುದಕ್ಕಾಗಿ ಗ್ರಾಮೀಣ ಮತ್ತು ನಗರ ಪ್ರದೇಶದ ಬಡಕಾರ್ಮಿಕರಿಗೆ ಅನೇಕ ಯೋಜನೆ, ಕಾರ್ಯಕ್ರಮಗಳನ್ನು ಜಾರಿಗೊಳಿಸಿದರೂ ಆ ಯೋಜನೆಗಳ ಪ್ರತಿಫಲ ಸರಿಯಾಗಿ ದೊರಕದೆ ಸಮಸ್ಯೆಗಳನ್ನು ಅನುಭವಿಸುತ್ತಿರುವುದು ಕಂಡು ಬರುತ್ತಿದೆ. ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಈ ಮಹಿಳಾ ದುಡಿಮೆಗಾರರ ಆರ್ಥಿಕ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಈ ಕೆಳಗೆ ತಿಳಿಸಿದ ಅಂಶಗಳು ಫಲಿತಗಳ ರೂಪದಲ್ಲಿ ಕಂಡು ಬಂದಿವೆ.

## ೧. ಅಧ್ಯಯನದ ಫಲಿತಗಳು

೧. ಮಹಿಳಾ ದುಡಿಮೆಗಾರರ ಮೇಲೆ ಮತ್ತು ಅವಳ ಆರ್ಥಿಕತೆಯ ಮೇಲೆ ಸಾಮಾಜಿಕ ಅಂಶಗಳು ಪ್ರಭಾವ ಬೀರುತ್ತಿವೆ.

೨. ಆರ್ಥಿಕ ಪರಿಕಲ್ಪನೆಗಳ ನಿರ್ವಚನ ಪುರುಷಶಾಹಿ ಧೋರಣೆಗೆ ಒಳಗಾಗಿವೆ.

೩. ಅಭಿವೃದ್ಧಿ ಸಿದ್ಧಾಂತಗಳ ಮುಖ್ಯ ಉದ್ದೇಶ ಆರ್ಥಿಕ ಬೆಳವಣಿಗೆಗೆ ಸಂಬಂಧಿಸಿದ ಸಿದ್ಧಾಂತ ರೂಪಿಸುವುದಾಗಿದೇ ಹೊರತು, ಲಿಂಗ ಸಮಾನತೆ ಮತ್ತು ಮಹಿಳಾ ಅಭಿವೃದ್ಧಿಗೆ ಸಿದ್ಧಾಂತ ರೂಪಿಸುವುದಾಗಿಲ್ಲದಿರುವುದು ಕಂಡುಬರುತ್ತಿದೆ.

೪. ಮಹಿಳಾ ದುಡಿಮೆಗಾರರು ಮೂರುವಿಧದ ದುಡಿಮೆಯಲ್ಲಿ ದುಡಿಯುತ್ತಿದ್ದಾರೆ.

೫. ಅನಾರೋಗ್ಯಕರ ಕೆಲಸದ ಸ್ಥಿತಿಯಲ್ಲಿ ದುಡಿಯುತ್ತಿದ್ದಾರೆ.

೬. ಕಡಿಮೆ ಜೀವನ ಮಟ್ಟವನ್ನು ಹೊಂದಿದವರಾಗಿದ್ದಾರೆ.

೭. ಕುಟುಂಬ ಮತ್ತು ಸಮಾಜದಲ್ಲಿ ಕಡಿಮೆ ಸ್ಥಾನ ಪಡೆದವರಾಗಿದ್ದಾರೆ.

೮. ಅಸಂಘಟಿತರಾಗಿದ್ದಾರೆ.

೯. ಸರಕಾರದ ಯೋಜನೆ ಮತ್ತು ಕಾರ್ಯಕ್ರಮಗಳಿಂದ ವಂಚಿತರಾಗಿದ್ದಾರೆ.

೧. ಮಹಿಳಾ ದುಡಿಮೆಗಾರರ ಮೇಲೆ ಅವಳ ಆರ್ಥಿಕತೆಯ ಮೇಲೆ ಸಾಮಾಜಿಕ ಅಂಶಗಳಾದ ವಿವಾಹ, ಕುಟುಂಬ, ಧರ್ಮ ಮತ್ತು ಶಿಕ್ಷಣ ವ್ಯವಸ್ಥೆಗಳು ಪ್ರಭಾವ ಬೀರುತ್ತಿವೆ. ವಿವಾಹ ಮತ್ತು ಕುಟುಂಬಗಳು ಮಹಿಳೆಯನ್ನು ನಾಲ್ಕು ಗೋಡೆಗಳ ಮಧ್ಯೆ ಪುರುಷಪ್ರಧಾನ ವ್ಯವಸ್ಥೆಯನ್ನು ಒಪ್ಪಿಕೊಂಡು ಬದುಕನ್ನು ಸಾಗಿಸಲು ತಿಳಿಸುತ್ತವೆ. ಬಸಿರು, ಬಾಣಂತಿತನ, ಮಕ್ಕಳ ಲಾಲನೆ ಪಾಲನೆ ಎಂಬ ಜೈವಿಕ ಕಾರಣ ಒಡ್ಡಿ ಅವಳ ಚಲನಶೀಲತೆಯನ್ನು ನಿಯಂತ್ರಿಸಿದೆ ಹಾಗೂ ಕುಟುಂಬದ ಆಚೆಗಿನ ದುಡಿಮೆಗೆ ಅವಳು ತೊಡಗುವುದನ್ನು ನಿರ್ಬಂಧಿಸಿದೆ. ಆದರೆ ಬಡತನದ ಅನಿವಾರ್ಯತೆಯಿಂದ ಕೂಲಿ ಕೆಲಸಕ್ಕೆ ಹೋಗಿ ಕುಟುಂಬ ಆದಾಯವನ್ನು ತಂದರೂ ಅದರ ಒಡೆತನ ಅವಳದಾಗಿರದೆ ಕುಟುಂಬದಲ್ಲಿ ಗಂಡ ಅಥವಾ ಕುಟುಂಬದ ಯಜಮಾನರ ಕೈ ಸೇರುತ್ತಿದೆ. ತನ್ನ ಮೂಲಭೂತ ಅವಶ್ಯಕತೆಗಳಿಗೂ ಅವಳು ಗಂಡನನ್ನು ಅವಲಂಬಿಸಬೇಕಾದ ಸ್ಥಿತಿ ಕಂಡುಬರುತ್ತಿದೆ. ಧರ್ಮ ರೂಢಿ, ಸಂಪ್ರದಾಯ ಮತ್ತು ಆಚರಣೆಗಳ ಹೆಸರಿನಲ್ಲಿ ಮಹಿಳೆ ಪುರುಷರ ಅಧೀನದಲ್ಲಿ ಇರುವಂತೆ ಮಾಡಿದೆ. ಅದಕ್ಕಾಗಿ ಬಾಲ್ಯವಿವಾಹ, ವಿಧವಾ ಪದ್ಧತಿ ಮತ್ತು ಪರದಾ ಪದ್ಧತಿ ಎಂಬ ಆಚರಣೆಗಳನ್ನು ಜಾರಿಗೊಳಿಸಿ ಮಹಿಳೆಯರನ್ನು ಶೋಷಣೆಗೆ ಒಳಪಡಿಸಿದೆ. ಗಂಡು ಸಂತಾನವೇ ಶ್ರೇಷ್ಠ, ತಂದೆಯ ಚಿತೆಗೆ ಮಗ ಕೊಳ್ಳಿ ಇಟ್ಟರೆ ತಂದೆಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ಹೀಗಾಗಿ ಆಸ್ತಿಯ ಒಡೆತನ ಗಂಡು ಸಂತಾನಕ್ಕೆ ಗಂಡು ಮಕ್ಕಳಿಗೆ ಸೇರಬೇಕು ಎಂಬ ನೀತಿ ನಿಯಮವನ್ನು ಮಾಡಿ ಧರ್ಮ ಮಹಿಳೆಯರನ್ನು ಆಸ್ತಿ ಹಕ್ಕಿನಿಂದ ದೂರ ಇರಿಸಿತು. ಇಂದು ಸರಕಾರ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಗೆ ಪಾಲನ್ನು ನೀಡಬೇಕೆಂದು ಶಾಸನ ಮಾಡಿದರೂ ಅದು ಆಚರಣೆಯಲ್ಲಿ ಹಿಂದೆ ಉಳಿದಿರುವದು ಕಂಡುಬರುತ್ತದೆ. ಶಿಕ್ಷಣ ವ್ಯಕ್ತಿಯನ್ನು ಉನ್ನತ ಹಂತಕ್ಕೆ ಸಾಗಿಸುವ ಒಂದು ಸಾಧನ. ಆದರೆ ಅಂತಹ

ಸಾಧನವನ್ನು ನೀಡುವಲ್ಲಿ ಹೆಣ್ಣು ಮಗುವಿಗೆ ತಾರತಮ್ಯವನ್ನು ಮಾಡಲಾಗುತ್ತಿದೆ. ಕುಟುಂಬ ವ್ಯವಸ್ಥೆಯಲ್ಲಿ ಗಂಡುಮಕ್ಕಳ ಶಿಕ್ಷಣಕ್ಕೆ ಪ್ರಾಶಸ್ತ್ಯ ನೀಡಿ ಹೆಣ್ಣು ಮಗುವಿನ ಶಿಕ್ಷಣವನ್ನು ಕಡೆಗಣಿಸುತ್ತಿರುವುದು ಕಂಡುಬರುತ್ತಿದೆ. ಶಿಕ್ಷಣದಿಂದ ವಂಚಿತರಾದ ಇಂತಹ ಹೆಣ್ಣು ಮಕ್ಕಳು ವೃತ್ತಿತರಬೇತಿ ಮತ್ತು ಕೌಶಲ್ಯವನ್ನು ಕಲಿಯದೇ ಕೃಷಿ ಮತ್ತು ನಿರ್ಮಾಣ ಕಾರ್ಯ ಅಥವಾ ಇತರ ಅಕುಶಲ ಕೆಲಸಗಳಲ್ಲಿ ಕಡಿಮೆ ಬೆಲೆಗೆ ತಮ್ಮ ಶ್ರಮವನ್ನು ಮಾರಿಕೊಂಡು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಅನಕ್ಷರಸ್ಥ ಮಹಿಳೆಯರ ಸಂಖ್ಯೆ ಅಸಂಘಟಿತ ವಲಯದಲ್ಲಿ ಅಧಿಕ ವಿರುವುದೇ ಇದಕ್ಕೆ ಸಾಕ್ಷಿ. ಹೀಗೆ ಸಾಮಾಜಿಕ ಅಂಶಗಳು ಮಹಿಳಾ ಆರ್ಥಿಕತೆಯ ಮೇಲೆ ಪ್ರಭಾವ ಬೀರುತ್ತಿರುವುದು ಸ್ಪಷ್ಟವಾಗುತ್ತಿದೆ.

೨. ಆರ್ಥಿಕ ಪರಿಕಲ್ಪನೆಗಳ ವಾಖ್ಯಾನ ಮತ್ತು ನಿರ್ವಚನ ಪುರುಷಶಾಹಿ ಧೋರಣೆಗೆ ಒಳಗಾಗಿರುವುದು ಕಂಡುಬರುತ್ತಿದೆ. ಅರ್ಥಶಾಸ್ತ್ರದ ಆರ್ಥಿಕ ಪರಿಕಲ್ಪನೆಗಳಾದ ಉತ್ಪಾದನೆ, ಉಪಭೋಗ, ವಿನಿಮಯ, ವಿತರಣೆ ಮತ್ತು ದುಡಿಮೆ ಎಂಬ ಪರಿಕಲ್ಪನೆಗಳು ಪುರುಷಶಾಹಿ ಹಿನ್ನೆಲೆಯಿಂದ ನಿರ್ವಚಿತಗೊಂಡಿರುವುದು ಸ್ಪಷ್ಟವಾಗುತ್ತದೆ. 'ಉತ್ಪಾದನೆ' ಎಂದರೆ ಅರ್ಥಶಾಸ್ತ್ರದಲ್ಲಿ 'ಕಚ್ಚಾವಸ್ತುಗಳನ್ನು ಸಿದ್ಧವಸ್ತುಗಳನ್ನಾಗಿ ತಯಾರಿಸುವುದು ಮತ್ತು ಅವುಗಳಲ್ಲಿ ವಿನಿಮಯ ಮೌಲ್ಯವನ್ನು ತುಂಬುವದನ್ನು ಉತ್ಪಾದನೆ ಎಂದು ಪರಿಗಣಿಸಲಾಗುತ್ತದೆ'. ಆದರೆ ಮಹಿಳೆ ಉತ್ಪಾದಿಸುವ ಅನೇಕ ವಸ್ತುಗಳಿಗೆ ವಿನಿಮಯ ಮೌಲ್ಯಕ್ಕಿಂತ ಉಪಭೋಗಿ ಮೌಲ್ಯ ಅಥವಾ ಉಪಯುಕ್ತತೆ ಮೌಲ್ಯ ಅಧಿಕವಿರುತ್ತದೆ. ಹೀಗೆ ವಿನಿಮಯ ಮೌಲ್ಯ ಕಡಿಮೆ ಇರುವ ವಸ್ತುಗಳನ್ನು 'ಉತ್ಪಾದನೆ' ವ್ಯಾಪ್ತಿಯಿಂದಲೇ ಕೈಬಿಡಲಾಗುತ್ತದೆ. ಹಾಗಾಗಿ ಮಹಿಳೆ ಉತ್ಪಾದಿಸಿದ ವಸ್ತು ಅಥವಾ ಸರಕು ಉಪಭೋಗಿ ಸರಕಾಗಿ ಬಿಡುತ್ತದೆ. ಉದಾಹರಣೆಗೆ ರೊಟ್ಟಿ, ಚಪಾತಿ, ಸಿಹಿತಿಂಡಿ ಇತ್ಯಾದಿ. ಆದರೆ ಇವೇ ವಸ್ತುವನ್ನು ಪುರುಷನೊಬ್ಬ ವ್ಯಾಪಾರದ ದೃಷ್ಟಿಯಿಂದ ಉತ್ಪಾದಿಸಿ ಮಾರಾಟ ಮಾಡಿದರೆ ಅದು 'ಉತ್ಪಾದನೆ' ಎಂದು ಪರಿಗಣಿಸಿ ಒಂದು ಉದ್ಯಮವಾಗಿ(ಬೇಕರಿ ಉದ್ಯಮ) ಬೆಳೆಯುತ್ತದೆ. ಉಪಭೋಗವನ್ನು ತೆಗೆದುಕೊಂಡರೆ ಒಂದು ಸರಕಿನಲ್ಲಿರು ತುಷ್ಟಿಗುಣವನ್ನು ನಾಶ ಮಾಡುವುದನ್ನು ಉಪಭೋಗ ಎಂದು ಅರ್ಥಶಾಸ್ತ್ರದಲ್ಲಿ ಪರಿಭಾವಿಸಲಾಗಿದೆ. ಹಾಗೇ ಮುಂದುವರೆದು ಬೆಲೆ ಕೊಟ್ಟು ಸರಕು ಸೇವೆಗಳನ್ನು ಖರೀದಿಸಿ ಉಪಯೋಗಿಸುವುದನ್ನು ಅನುಭೋಗ ಎಂದು ಕರೆಯ ಲಾಗುತ್ತದೆ. ಬೆಲೆ ಕೊಟ್ಟು ಸರಕು ಸೇವೆಗಳನ್ನು ಕೊಂಡುಕೊಳ್ಳುವುದು ಕೇವಲ ಪುರುಷನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ನಿರ್ಮಿಸಿದ ಪರಿಕಲ್ಪನೆ ಎಂಬುದನ್ನು ತಿಳಿಸುತ್ತದೆ. ಏಕೆಂದರೆ ಮಾರುಕಟ್ಟೆ ಪುರುಷನ ಜಗತ್ತಾದರೆ 'ಮನೆ' ಮಹಿಳೆಯ ಜಗತ್ತಾಗಿದೆ. ಅಲ್ಲದೆ ಕುಟುಂಬದಲ್ಲಿ ಮೂಲಭೂತ ಅವಶ್ಯಕತೆಗಳಾದ ಆಹಾರ, ಬಟ್ಟೆ ಮತ್ತು ವಸತಿಗಳನ್ನು ಅನುಭೋಗಿಸುವಲ್ಲಿ ಮಹಿಳೆಯರು ಹಿಂದುಳಿದಿರುವುದು ಕಂಡು ಬರುತ್ತಿದೆ. ಕ್ಷೇತ್ರ ಕಾರ್ಯದ

ಸಮೀಕ್ಷೆಯಂತೆ ಶೇಕಡ ೨೩.೬೭ರಷ್ಟು ಮಹಿಳೆಯರು ಬೆಳಗಿನ ಉಪಹಾರ ಮಾಡದೆ ಕೆಲಸಕ್ಕೆ ಹೋಗುತ್ತಿದ್ದರೆ. ಶೇಕಡ ೫೯.೩೩ರಷ್ಟು ಮಹಿಳೆಯರು ಕುಟುಂಬದ ಸದಸ್ಯರ ಊಟದ ನಂತರ ಅಳಿದುಳಿದ ಆಹಾರ ಸೇವಿಸುತ್ತಿರುವುದು ಕಂಡುಬರುತ್ತಿದೆ. ಇದು ಮಹಿಳೆಯರ ಅನುಭೋಗಕ್ಕೆ ಇರುವ ಕೈಗನ್ನಡಿಯಾಗಿದೆ. ಹಂಚಿಕೆ ಎಂದರೆ ಉತ್ಪಾದನಾಂಗಗಳಿಗೆ ಪ್ರತಿಫಲವನ್ನು ಹಂಚುವುದೇ ಆಗಿದೆ. ಇಲ್ಲಿ ಉತ್ಪಾದನಾಂಗಗಳ, ಒಡೆಯ ಪುರುಷ ಎಂದು ಭಾವಿಸಲಾಗಿದೆ. ಭೂಮಿ, ಶ್ರಮ ಬಂಡವಾಳ ಮತ್ತು ಸಂಘಟನೆ ಎಂಬ ಉತ್ಪಾದನಾಂಗಗಳ ಒಡೆಯ ಪುರುಷನಾಗಿದ್ದು ಅವನೇ ಪ್ರತಿಫಲ ಪಡೆಯುವವ ನಾಗುತ್ತಾನೆ. 'ಶ್ರಮಿಕ'ರಾಗಿ ಮಹಿಳೆ ಪುರುಷನಿಗೆ ಸಮಾನವಾಗಿ ದುಡಿದರೂ ಪುರುಷನ ಶ್ರಮಕ್ಕಿಂತ ಕಡಿಮೆ ಕೂಲಿ ಪಡೆಯುತ್ತಿರುವುದು ಸ್ಪಷ್ಟವಾಗುತ್ತದೆ. ಅಸಂಘಟಿತ ವಲಯದ ಪ್ರತಿಯೊಂದು ವೃತ್ತಿಯಲ್ಲೂ ಮಹಿಳೆ ಪುರುಷರಿಗಿಂತ ಕಡಿಮೆ ಕೂಲಿಯನ್ನು ಪಡೆಯುತ್ತಿದ್ದಾಳೆ. ಇದಕ್ಕೆ ಮುಖ್ಯ ಕಾರಣ ಆರ್ಥಿಕ ಪರಿಕಲ್ಪನೆಗಳ ಪುರುಷಶಾಹಿ ನಿರ್ವಚನವೆಂಬುದು ಸ್ಪಷ್ಟವಾಗಿ ತೋರುತ್ತಿದೆ.

೩. ಅಭಿವೃದ್ಧಿ ಸಿದ್ಧಾಂತಗಳ ಮುಖ್ಯ ಉದ್ದೇಶ ಆರ್ಥಿಕ ಬೆಳವಣಿಗೆಗೆ ಸಂಬಂಧಿಸಿದ ಸಿದ್ಧಾಂತವನ್ನು ರೂಪಿಸುವುದೇ ಆಗಿದೆ. ಸಂಪ್ರದಾಯ ಪಂಥದ ಅಭಿವೃದ್ಧಿ ಸಿದ್ಧಾಂತಗಳು ಆ್ಯಡಂಸ್ಮಿತ್, ಡೇವಿಡ್ ರಿಕಾರ್ಡೋ, ಮಾಲ್ಥಸ್, ಜೆ.ಎಸ್.ಮಿಲ್ ಮತ್ತು ಕಾರ್ಲ್‌ಮಾರ್ಕ್ಸ್ ಅವರ ಸಿದ್ಧಾಂತಗಳು ಕೃಷಿ ಪ್ರಗತಿ ಮತ್ತು ಶ್ರಮ ಶಕ್ತಿಗೆ ಹೆಚ್ಚು ಒತ್ತು ನೀಡಿದರೆ, ಆಧುನಿಕ ಅಭಿವೃದ್ಧಿ ಸಿದ್ಧಾಂತಗಳಾದ ಶುಂಪೀಟರ್, ರಾಸ್ಟೋರವರ ಜೂನ್ ರಾಬಿನ್‌ಸನ್ ನರ್ಕ್ಸ್ ಅವರ ಸಿದ್ಧಾಂತಗಳು ಆರ್ಥಿಕ ಬೆಳವಣಿಗೆಗೆ ಪ್ರಾಮುಖ್ಯತೆ ನೀಡಿವೆ ಮತ್ತು ಗುನ್ನಾರ್ ಮಿರ್ಡಾಲ್ ಅವರ ಹಾಗೂ ಅರ್ಥರ್ ಲೂಯಿಸ್ ಅವರ ಸಿದ್ಧಾಂತಗಳು ಬಡರಾಷ್ಟ್ರಗಳ ಬಡತನಕ್ಕೆ ಕಾರಣವಾದ ಅಂಶಗಳು ಮತ್ತು ಪರಿಹಾರದ ಬಗ್ಗೆ ಮಾಹಿತಿಯನ್ನು ನೀಡುತ್ತಿವೆ. ಹೀಗಾಗಿ ಈ ಆರ್ಥಿಕ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಲಿಂಗಸಮಾನತೆ ಮತ್ತು ಮಹಿಳೆ ಅಭಿವೃದ್ಧಿಯ ಪ್ರಸ್ತಾಪವಿಲ್ಲವಾಗಿದೆ. ಆದರೆ ಇತ್ತೀಚೆಗೆ ಅಮರ್ತ್ಯಸೇನ್ ಅವರ ಚಿಂತನೆಯ ಪರಿಣಾಮ ದಿಂದಾಗಿ ಲಿಂಗ ಅಭಿವೃದ್ಧಿ ಸೂಚ್ಯಂಕ(GDI) ಲಿಂಗಸಂಬಂಧಿ ಮಾನವ ಅಭಿವೃದ್ಧಿ ವರದಿ ಮತ್ತು ಲಿಂಗಸಂಬಂಧಿ ಬಜೆಟ್ ನಿರ್ಮಾಣವಾಗುತ್ತಿರುವುದು ಕಂಡುಬರುತ್ತಿದೆ.

೪. ಕಾರ್ಮಿಕ ಪೇಟೆಯಲ್ಲಿ ಮಹಿಳಾ ಕಾರ್ಮಿಕರಿಗೆ ಅಥವಾ ಮಹಿಳಾ ಶ್ರಮಕ್ಕೆ ಬೇಡಿಕೆ ಕಡಿಮೆ ಆದರೆ ಕಾರ್ಮಿಕ ಪೇಟೆಯಲ್ಲಿ ಮಹಿಳಾ ಕಾರ್ಮಿಕರ ಪೂರೈಕೆ ಅಧಿಕವಾಗಿದೆ. ಹೀಗಾಗಿ ಕಡಿಮೆ ಶ್ರಮದ ಬೇಡಿಕೆ ಮತ್ತು ಅಧಿಕ ಮಹಿಳೆಯರ ಪೂರೈಕೆಯಿಂದಾಗಿ ಮಹಿಳಾ ಶ್ರಮಕ್ಕೆ ಕಡಿಮೆ ಬೆಲೆ ನಿರ್ಧಾರವಾಗುತ್ತದೆ. ಅಲ್ಲದೆ ಮಹಿಳೆಯರು ಮದುವೆ, ಹೆರಿಗೆ, ಮಕ್ಕಳ ಲಾಲನೆ ಪಾಲನೆಗಾಗಿ ಶ್ರಮ

ಮಾರುಕಟ್ಟೆಯಿಂದ ದೂರವಾಗಬೇಕಾಗುತ್ತಿರುವುದರಿಂದಾಗಿ ಅಥವಾ ಕೆಲಸಕ್ಕೆ ನಿರಂತರವಾಗಿ ಬರದೇ ಇರುವಂತ ಪರಿಸ್ಥಿತಿ ಇರುವುದರಿಂದಾಗಿ ಮಹಿಳಾ ಶ್ರಮಿಕರು ಕಡಿಮೆ ಕೂಲಿಗೆ ದುಡಿಯಬೇಕು ಎಂಬುದನ್ನು ಶ್ರಮ ಮಾರುಕಟ್ಟೆ ಸ್ಪಷ್ಟಪಡಿಸುತ್ತದೆ.

೫. ಮೂರು ವಿಧದ ದುಡಿಮೆಯಲ್ಲಿ ಮಹಿಳೆ ತೊಡಗಿರುವುದು ಕಂಡುಬರುತ್ತಿದೆ. ಮಹಿಳೆಯ ದುಡಿಮೆಯ ಜಗತ್ತು ಕುಟುಂಬವೇ ಆಗಿರುವುದರಿಂದ ಅವಳು ಸಂತಾನೋತ್ಪತ್ತಿ, ದುಡಿಮೆ, ಸಂಗೋಪನಾ ದುಡಿಮೆ ಮತ್ತು ಉತ್ಪಾದನಾ ದುಡಿಮೆಯಲ್ಲಿ ತೊಡಗಿರುವುದು ಕಂಡುಬರುತ್ತಿದೆ. ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಯದಲ್ಲಿ ದುಡಿಯುವ ಮಹಿಳಾ ಕಾರ್ಮಿಕರು ಕೂಲಿ ಗಳಿಸುವುದರ ಜೊತೆ ಗೃಹಕೃತ್ಯ, ಮಕ್ಕಳ ಲಾಲನೆ, ಪೋಷಣೆ, ಗಂಡನ ಲೈಂಗಿಕ ಬಯಕೆಯನ್ನು ಈಡೇರಿಸುವಂತಹ ಸಂತಾನೋತ್ಪತ್ತಿ ದುಡಿಮೆಯಲ್ಲಿ ನಿರತರಾಗಿರುತ್ತಾರೆ. ಆದರೆ ಪುರುಷ ಮಾತ್ರ ಸಂಪಾದನಾ ದುಡಿಮೆ ಮಾಡಿ ಗೃಹಕೃತ್ಯದಿಂದ ಮತ್ತು ಮಕ್ಕಳ ಲಾಲನೆ ಪಾಲನೆಯಿಂದ ನುಣುಚಿಕೊಳ್ಳುತ್ತಾನೆ. ಹೀಗಾಗಿ ಆ ಕೆಲಸಗಳನ್ನು ನಿಭಾಯಿಸುವವಳು ಮಹಿಳೆಯೇ ಆಗುತ್ತಾಳೆ.

೬. ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಅನಾರೋಗ್ಯಕರ ಕೆಲಸದ ಸ್ಥಿತಿಯಲ್ಲಿ ದುಡಿಯುತ್ತಿದ್ದಾರೆ. ಕಡಿಮೆ ವೇತನ, ಅಥವಾ ಕೂಲಿ, ಕೆಲಸದ ಅಭದ್ರತೆ, ಪುರುಷ ಕಾರ್ಮಿಕರ ಶೋಷಣೆ, ಕೆಲಸದಲ್ಲಿ ಅಸಮಾನತೆ ಹಾಗೂ ರಾತ್ರಿ ಪಾಳಿ ಕೆಲಸ, ೮ ಗಂಟೆಗಳಿಗಿಂತ ಅಧಿಕದ ಸಮಯವರೆಗೂ ಕೆಲಸ ಮಾಡುತ್ತಿರುವುದು ಕಂಡುಬರುತ್ತಿದೆ. ಶೇಕಡ ೭೮ರಷ್ಟು ಮಹಿಳಾ ಕೃಷಿಕಾರ್ಮಿಕರು ೮ ಗಂಟೆಗಿಂತ ಅಧಿಕ ಸಮಯದವರೆಗೆ ಮತ್ತು ಶೇಕಡ ೩೦ರಷ್ಟು ಮಹಿಳಾ ಕಟ್ಟಡ ನಿರ್ಮಾಣ ಕಾರ್ಮಿಕರು ೧೦ ಗಂಟೆಗಳವರೆಗೆ ಕೆಲಸ ಮಾಡುತ್ತಿರುವುದು ಕಂಡುಬರುತ್ತಿದೆ.

೭. ಕೊಪ್ಪಳ ಜಿಲ್ಲೆಯ ಮಹಿಳಾ ಕೃಷಿ ಮತ್ತು ಕಟ್ಟಡ ನಿರ್ಮಾಣ ಕಾರ್ಮಿಕರು ಕಡಿಮೆ ಜೀವನ ಮಟ್ಟವನ್ನು ಹೊಂದಿರುವುದು ಕಂಡುಬರುತ್ತದೆ. ಈ ವೃತ್ತಿಗಳಲ್ಲಿ ತೊಡಗಿದ ಶೇಕಡ ೮೫.೩ರಷ್ಟು ಕಾರ್ಮಿಕ ಕುಟುಂಬಗಳು ಬಡತನ ರೇಖೆಯೊಳಗೆ ಜೀವಿಸುತ್ತಿರುವುದು ಕಂಡುಬರುತ್ತಿದೆ ಇದರಿಂದಾಗಿ ಆ ಕುಟುಂಬಗಳು, ಶಿಕ್ಷಣ, ವಸತಿ ಮತ್ತು ಉತ್ತಮ ಉದ್ಯೋಗ ಪಡೆಯುವುದರಿಂದ ವಂಚಿತವಾಗಿ ಮತ್ತೆ ಬಡತನಕ್ಕೆ ಸಿಲುಕುತ್ತದೆ. ಈ ಕಾರ್ಮಿಕ ಕುಟುಂಬಗಳು ಬಡತನದಿಂದಾಗಿ ಮತ್ತೆ ಬಡತನಕ್ಕೆ ಸಿಲುಕುವ ಪರಿಯು ಗುನ್ನರ್ ಮಿರ್ಡಾಲ್ ಅವರ ಹಿಮ್ಮುಖ ಸಂಚಲನ ಪರಿಣಾಮ"ವನ್ನು ಪ್ರತಿಬಿಂಬಿಸುವಂತಿದೆ.

೮. ಮಹಿಳಾ ಕಾರ್ಮಿಕರು ಕುಟುಂಬ ಮತ್ತು ಸಮಾಜದಲ್ಲಿ ಕಡಿಮೆ ಸ್ಥಾನಮಾನವನ್ನು ಹೊಂದಿದವರಾಗಿದ್ದಾರೆ. ಕುಟುಂಬದಲ್ಲಿ ಪ್ರಮುಖ ನಿರ್ಣಯಗಳಾದ ಮಕ್ಕಳ ಶಿಕ್ಷಣ, ವಿವಾಹ, ಉದ್ಯೋಗ ಮತ್ತು ಆಸ್ತಿ

